ವೇದಾಂತಭಾರತೀಗ್ರಂಥಮಾಲಾ-ಪಂಚದಶಪುಷ್ಪಮ್

# ಪಂಚದಶೀ ಪ್ರವಚನ

(ಶ್ರೀ ವಿದ್ಯಾರಣ್ಯವಿರಚಿತ ಪಂಚದಶಿಯ ವಿವರಣಾತ್ಮಕ ಅನುವಾದ)



ವಿದ್ವಾನ್ ಎನ್.ರಂಗನಾಥಶರ್ಮಾ



ವೇದಾಂತಭಾರತೀ

(ವೇದ-ವೇದಾಂತ ಅಧ್ಯಯನ ಮತ್ತು ಸಂಶೋಧನ ಸಂಸ್ಥೆ)

ಚಂದ್ರಮೌಳಿ ರಸ್ತೆ, ಕೃಷ್ಣರಾಜನಗರ - 571 602

ಮೈಸೂರು ಜಿಲ್ಲೆ. ✆ : 0821-662471

ॐ

ವೇದಾಂತಭಾರತೀಗ್ರಂಥಮಾಲಾ–ಪಂಚದಶಪುಷ್ಪಮ್

# ಪಂಚದಶೀ ಪ್ರವಚನ

(ಶ್ರೀ ವಿದ್ಯಾರಣ್ಯವಿರಚಿತ ಪಂಚದಶಿಯ ವಿವರಣಾತ್ಮಕ ಅನುವಾದ)

ವಿದ್ವಾನ್ ಎನ್.ರಂಗನಾಥಶರ್ಮಾ




ವೇದಾಂತಭಾರತೀ

(ವೇದ–ವೇದಾಂತ ಅಧ್ಯಯನ ಮತ್ತು ಸಂಶೋಧನ ಸಂಸ್ಥೆ)

ಚಂದ್ರಮೌಳಿ ರಸ್ತೆ, ಕೃಷ್ಣರಾಜನಗರ - 571 602

ಮೈಸೂರು ಜಿಲ್ಲೆ. ✆ : 0821–662471

# ಶ್ರೀವಿದ್ಯಾರಣ್ಯಸ್ತುತಿಃ

ಶಂಕರಭಗವತ್ಪಾದ್ಯೈಃ ಶ್ರೌತೇ ಯಸ್ಮಿನ್ ಪದಂ ನಿದಧೇ ।
ತತ್ಪಥ ಸಂಯಾತ್ರೇಽಹಂ ವಿದ್ಯಾರಣ್ಯಾಯ ತೇ ನಮೋ ವಿದಧೇ ॥ ೧

ಕೃತ್ಯಂ ಮಹದೀಡ್ಯಂ ಶ್ರೀಶಂಕರಗುರುರಾಟ್ ಪುರಾ ಕೃತವಾನ್ ।
ಶಿಷ್ಟಂ ಪುನರವತೀರ್ಣೋ ವಿದ್ಯಾರಣ್ಯಾಖ್ಯಯಾ ವ್ಯತನೋತ್ ॥ ೨

ಸಮ್ಯಗ್ ರಾಜ್ಯಾಧಿಕಾರೇಽಪಿ ಶಕ್ತಂ ಬ್ರಹ್ಮವಿದಾಂ ವರಮ್ ।
ವಂದೇಽಹಂ ವಿಶದಪ್ರಜ್ಞಂ ವಿದ್ಯಾರಣ್ಯಯತೀಶ್ವರಮ್ ॥ ೩

ತುರುಷ್ಕಸೇನಾದೌರ್ಜನ್ಯಂ ಜನ್ಯೈರೇವ ಚಿಕಿತ್ಸಿತುಮ್ ।
ವಿದ್ಯಾನಗರಸಾಮ್ರಾಜ್ಯಂ ಪ್ರಾಜ್ಯಂ ಸೃಷ್ಟವತೇ ನಮಃ ॥ ೪

ನ ಕ್ವಾಪಿ ಶ್ರುತಪೂರ್ವಮದ್ಭುತಮಿದಂ ಯತ್ಕೋಽಪಿ ವಿಪ್ರೋ ಧನೈಃ
ಹೀನಶ್ಚೈಕಕಏವ ನಿಶ್ಚಿತಮತಿಃ ಸಂಕಲ್ಪ್ಯ ಕೃತ್ಯಂ ಮಹತ್ ।
ಸಂಪಾದ್ಯಾಖಿಲಸಾಹ್ಯಸಂಪದಮಹೋ! ಅಸ್ಥಾಪಯ ದ್ದುರ್ದಮಂ
ಸಾಮ್ರಾಜ್ಯಂ ಭುವಿ ಧರ್ಮರಕ್ಷಣಧಿಯಾ ನ ಸ್ವಾರ್ಥಲೇಶೇಪ್ಸಯಾ ॥ ೫

ಬ್ರಹ್ಮಕ್ಷತ್ರ ಸಮಿದ್ಧಬುದ್ಧಿವಿಭವಪ್ರೋದ್ಭೂತತೇಜೋಬಲಾತ್
ಉದ್ವೇಲೋಗ್ರತುರುಷ್ಕಸೈನ್ಯಜಲಧಿಂ ಸಂಸ್ತಭ್ಯ ದೂರಾಚ್ಚಿರಮ್ ।
ವೇದಂ ಶಾಸ್ತ್ರಮಥೋದ್ದಧಾರ ಸಕಲಾ ಯೋ ಭಾರತೀಯಾಃ ಕಲಾಃ
ವಿದ್ಯಾರಣ್ಯಯತೀಶ್ವರಂ ನಮತ ಭೋಸ್ತಂ ನೂತನಂ ಶಂಕರಮ್ ॥ ೬

ಆಚಾರ್ಯಃ ಶಂಕರೋ ಜ್ಞಾನೇ ರಾಜನೀತೌ ಬೃಹಸ್ಪತಿಃ ।
ವಸಿಷ್ಠಃ ಕರ್ಮಕಾಂಡೇಷು ವಿದ್ಯಾರಣ್ಯೋ ಮಹಾಮುನಿಃ ॥ ೭

-ಎನ್. ರಂಗನಾಥಶರ್ಮಾ







॥ श्री शृङ्गेरी श्रीजगद्गुरुमहासंस्थानम् ॥

श्रीमत्परमहंसपरिव्राजकाचार्यवर्य पदवाक्यप्रमाणपारावारपारीण
यमनियमासनप्राणायामप्रत्याहारधारणाध्यानसमाध्यष्टाङ्गयोगानुष्ठाननिष्ठ
तपश्चक्रवर्त्यनाद्यविच्छिन्न श्रीशङ्कराचार्यगुरुपरंपराप्राप्त षड्दर्शनस्थापनाचार्य
व्याख्यानसिंहासनाधीश्वर सकलनिगमागमसारहृदय सांख्यत्रयप्रतिपादक
वैदिकमार्गप्रवर्तक सर्वतंत्रस्वतंत्रादिराजधानी विद्यानगरमहाराजधानी
कर्णाटकसिंहासनप्रतिष्ठापनाचार्य श्रीमद्राजाधिराजगुरुभूमण्डलाचार्य
ऋष्यश्रृङ्गपुरवराधीश्वर तुङ्गभद्रातीरवासि श्रीमद्विद्याशङ्करपादपद्माराधक
श्रीजगद्गुरु श्रीमदभिनवविद्यातीर्थस्वामिगुरुकरकमलसञ्जात

॥ श्री जगद्गुरु शृङ्गेरी श्रीमद्भारतीतीर्थमहास्वामिभिः ॥



निखिलास्तिकमहाजनविषये नारायणस्मरणपुरस्सरं विरचिता आशिषस्समुल्लसन्तु ।

सनातनधर्मोद्धाराय कृतावताराः श्रीमच्छङ्करभगवत्पादाचार्याः धर्मप्रचाराय भारतस्य चतसृषु दिक्षु चत्वार्याम्नायपीठानि प्रतिष्ठापयामासुः । तेषु दक्षिणाम्नाय शृङ्गगिरि शारदापीठे इतः षट्छताधिकवर्षेभ्यः प्राक् व्यराजन्त जगद्वन्द्याः श्रीविद्यारण्यस्वामिनः । विजयनगरसाम्राज्य–प्रतिष्ठापकास्ते सर्वेष्वपि शास्त्रेषु अप्रतिमशेमुषीजुषस्सन्तः नैकान् ग्रन्थान् लोकोपकाराय व्यररचन् ।

तेषु वेदान्तपञ्चदशीनामा ग्रन्थः भगवत्पादोपदिष्टं वेदान्ततत्त्वं करतलामलकवत् प्रतिपादयन् अध्यात्मतत्त्वजिज्ञासूनां अवश्योपादेयस्सन् विद्योतते । ग्रन्थस्यास्य अप्पय्यदीक्षित-ब्रह्मानन्दसरस्वत्यादि-विपश्चिदपश्चिमैरपि सादरमुल्लेखः अस्य प्रामाणिकतां प्रस्फुटयति । ललितया शैल्या गभीरमपि तत्त्वं सर्वानवगमयन्नयं ग्रन्थः कस्य वा सचेतसो मोदं न जनयेत् । अत एवायं ग्रन्थः गैर्वाणीगन्धविधुराणामपि सुखाव-बोधाय देशभाषासु अनूदितोऽस्ति ।

अधुना ग्रन्थस्यास्य कर्णाटकभाषानुवादः विद्वत्तल्लजैः श्रीयन्. रङ्गनाथशर्मभिः विहितः स च वेदान्तभारत्या प्रकाश्यत इति महदिदं प्रमोदस्थानम् । वयं च अनुवादमिममवलोक्य भृशं प्रसन्नाः स्मः । ग्रन्थस्यास्य साहाय्येन लोकाः वेदान्तपञ्चदशीं अनायासेनैवावबोद्धुं पारयन्तीत्यभि-प्रेमः ।

श्रीशारदाचन्द्रमौलीश्वरयोरसीमया कृपया ग्रन्थोऽयं आस्तिकजन-करपल्लवान्यलंकरोतु अनुवादकाः प्रकाशकाश्च श्रेयोभाजनानि भूयासुरित्याशास्महे ।

इति नारायणस्मरणम्

शृङ्गगिरिः
स्वभानुनभस्य पूर्णिमा सौम्यवासरः
१०.०९.२००३



॥ श्रीचतुर्भुजपट्टाभिरामोविजयते ॥







श्रीमत्परमहंसपरिव्राजकाचार्यवर्य पदवाक्यप्रमाणपारावारपारीण
यमनियमासनप्राणायामप्रत्याहारधारणाध्यानसमाध्यष्टाङ्गयोगानुष्ठाननिष्ठ
तपश्चक्रवर्त्यनाद्यविच्छिन्नगुरुपरंपराप्राप्त षड्दर्शनस्थापनाचार्य
व्याख्यानसिंहासनाधीश्वर सकलनिगमागमसारहृदय
सांख्यत्रयप्रतिपादक वैदिकमार्गप्रवर्तक सर्वतंत्रस्वतंत्रादिराजधानी
श्रीमद्विद्यानगरमहाराजधानी कर्णाटकसिंहासनप्रतिष्ठापनाचार्य
श्रीमद्राजाधिराजगुरुभूमण्डलाचार्य श्रीमच्छङ्कराचार्यशिष्यपरम्पराप्राप्त
कावेरीहेमावतीतीरवासि श्रीनरसिंहपुरवराधीश्वर
श्रीचतुर्भुजपट्टाभिरामस्वामिश्रीनीलकण्ठेश्वरस्वामिपादपद्माराधक
यडतोरे [कृष्णराजनगर] श्रीयोगानन्देश्वरसरस्वतीमठाधीश्वर
श्रीमद्रामब्रह्मानन्दसरस्वतीस्वामिदिव्यपादपद्माराधक
श्रीमद्गणपतिभारतीस्वामिशिष्यैः

## श्रीमच्शङ्करभारतीस्वामिभिः

निखिलास्तिकमहाजनविषये नारयणस्मरणपुरस्सरं विरचिता आशिषस्समुल्लसन्तु ।

श्रीमच्शङ्करभगवत्पादाः आत्मविद्योपदेशेन सर्वान् लोकान् समुद्धर्तु–कामा अनुपमं भाष्यं प्रकरणग्रन्थान् स्तोत्ररत्नानि च विरचय्य लोकोपकारं विदधिरे । पथि चास्मिन् क्रममाणा बहवो महात्मानः आस्तिकानामुपकृतये वेदान्तकृतीः रचयामासुः ।

दक्षिणाम्नायशारदापीठाधीश्वरत्वेन विराजिता यतिपुङ्गवाः श्रीविद्यारण्य–महास्वामिनोऽपि बहून् ग्रन्थान् ग्रथित्वा, ग्रन्थयित्वा च वेदभाष्यं, लोकोपकारमकुर्वन्, प्रत्यतिष्ठिपंश्च दुष्टान् निग्राह्य कर्णाटकसिंहासनं विजयनगरसाम्राज्यापरनामधेयम् । येन च सर्वेषां हृदयसिंहासनेऽद्यापि ते विराजन्ते ।

एतैः विरचितेषु ग्रन्थेषु जीवन्मुक्तिविवेकः पञ्चदशी च वेदान्तप्रपञ्चे विशिष्टं स्थानमलङ्कुरुतः । ज्ञानिनो विद्यारण्यमहास्वामिनः पञ्चदश्यां वेदान्ततत्त्वमवगमयितुं समाश्रिता रमणीया शैली नान्यत्र दृष्टिपथमायाति । प्रत्ता दृष्टान्तास्तथा अपूर्वा ये च प्रतिपादितं विषयं हृद्गतं कर्तुं सर्वथा अलम्भविष्णवो भवन्ति । प्रायः सर्वे वेदान्तिनः ये हि पञ्चदश्याः समुदयानन्तरं ग्रन्थान् प्रणिन्युः ते स्वीयेषु ग्रन्थेषु इमां पञ्चदशीं प्रमाणत्वेन उदाजह्रुः । तेन न पुनर्वक्तव्यं भवति ग्रन्थस्यास्य महत्तायाम् ।

विशेषतो विद्यारण्यमहास्वामिषु आहितश्रद्धाः महामहोपाध्याय–पदवीभाजः प्रख्याता विद्वांसः श्री एन्. रङ्गनाथशर्माणः कृतिरत्न–मिदमन्ववदन् कनडगिरा । नूनमनेनानुवादेन कन्नडजना उपकृताः । अस्माकमत्यन्तप्रिया विद्वांसः श्री रङ्गनाथशर्माणः श्रेयोभाजो भवन्त्विति आराध्यदेवतां प्रार्थयामहे । मोदामहे च वैयाकरणैः वेदान्ताभिज्ञैश्च श्रीशर्मभिः कन्नडभाषया अनूदितां पञ्चदशीं वेदान्तभारती प्रकाश–यिष्यतीति । ग्रन्थस्यास्याध्ययनेन कन्नडभाषाविदः समस्तवेदान्ताभ्यासिनः श्रेयोभाजो भवन्त्वित्याशास्महे ।

स्वभानु सं ॥ कार्तिकशुक्लपञ्चमी।
गुरुवासरः । दिनाङ्कः : ३०.१०.०३

इति नारायणस्मरणम्



स्थलम् : श्रीमारुतिमन्दिरम् ।
मारुतिवीथिः, बेलगांव् ।

## ಪ್ರಕಾಶಕರ ನುಡಿ

**ಶ್ರೀಶಂಕರಭಗವತ್ಪಾದರ** ಅನಂತರ ಭಾರತೀಯ ದರ್ಶನಾಕಾಶದಲ್ಲಿ ಬೆಳಗಿದ ಇನ್ನೊಂದು ದಿವ್ಯತಾರೆ ವಿಶ್ವವಂದ್ಯರೂ ವಿಭೂತಿಪುರುಷರೂ ಆದ **ವಿದ್ಯಾರಣ್ಯರು.** ದಕ್ಷತೆ-ಬುದ್ಧಿವೈಭವ- ತಪಸ್ಸು- ಜ್ಞಾನ- ವೈರಾಗ್ಯಗಳಿಂದ ಅವರ ಅಕ್ಷರ ಶರೀರ ಇಂದಿಗೂ ಬೆಳಗುತ್ತಿದೆ.

''**ಇದಂಬ್ರಾಹ್ಮಮಿದಂ ಕ್ಷಾತ್ರಮ್**'' ಎಂಬಂತೆ ಅವರ ಅಸಾಧಾರಣ ಪ್ರತಿಭೆ ವ್ಯವಹಾರದಿಂದ ಹಿಡಿದು ಪರಮಾರ್ಥದವರೆಗೆ ಸಾಗಿದೆ. ವೈದಿಕ ಧರ್ಮಕ್ಕೆ ಗ್ಲಾನಿಯುಂಟಾದಾಗ, ಲೋಕಸಂಗ್ರಹಕ್ಕಾಗಿ ಶ್ರೀಮತಿಯ ಗರ್ಭದಿಂದ ಭಗವಂತನ ಪುನರವತಾರವಾಯಿತು.

ಸಹಸ್ರಪರಮುಳೂ- ಶತಮೂಲಳೂ- ಶತಾಂಕುರಳೂ ಆದ ದೂರ್ವಾದೇವಿಯು ಗಣ್ಣಿನಿಂದ ಗಣ್ಣಿಗೆ ಚಿಗುರಿ ತಿಸಿಲೊಡೆದು, ಹರಹರಿದ ಹಾಗೆ ವೇದದಿಂದ ಆರಂಭಿಸಿ, ವೇದಾಂತದವರೆಗೆ ಅವರ ಲೇಖನಿಯಿಂದ ವೈದಿಕ ವಾಙ್ಮಯದ ಶುದ್ಧ ಸಂಪ್ರದಾಯ ಕೊನರಿದೆ.

ಇಂತಹ ಪ್ರಾತಃಸ್ಮರಣೀಯರ ಗ್ರಂಥ ರತ್ನಗಳಲ್ಲಿ **ಪಂಚದಶಿಯು** ತನ್ನದೇ ಆದ ವಿಶೇಷವನ್ನು ಹೊಂದಿದೆ. ''ಸಾಂಸಾರಿಕ ಪ್ರಪಂಚದ ದುಃಖ ದುಮ್ಮಾನಗಳೆಂಬ ಅಂಧಕಾರವನ್ನು ಕಳೆದುಕೊಳ್ಳಬೇಕೆಂದು ಬಯಸುವ **ವಿವೇಕಿಗಳೆಲ್ಲರೂ ಚಿದ್ದೀಪದ ಯೋಗಾನಂದದೊಂದಿಗೆ ಬ್ರಹ್ಮಾನಂದವನ್ನು ಹೊಂದಲಿ**'' ಎಂಬುದು ಪಂಚದಶಿಯ **ಒಳ ತಿರುಳು.** ಇಂಥ ತಿರುಳಿನ ಹೂರಣವನ್ನು ತಮ್ಮ ಅಸಾಧಾರಣ ಪಾಂಡಿತ್ಯದಿಂದ ಪ್ರವಚನ ರೂಪದಲ್ಲಿ ಕನ್ನಡಕ್ಕಿತ್ತವರು **ಮಹಾಮಹೋಪಾಧ್ಯಾಯರೂ** ನಾಡಿನ ಹಿರಿಯ ವಿದ್ವಾಂಸರೂ ಆದ **ಎನ್. ರಂಗನಾಥ ಶರ್ಮರು.** ಶಾಸ್ತ್ರೀಯ ಚೌಕಟ್ಟಿನಲ್ಲಿ ಯುಕ್ತಿ -ಯುಕ್ತವಾದ ದೃಷ್ಟಾಂತಗಳಲ್ಲಿ ನೆನೆಸಿ, ಅಪಾರವಾದ ಲೋಕಾನುಭವದೊಂದಿಗೆ ಆ ತತ್ತ್ವಗಳ ಸಾರವನ್ನು ಈ ಪ್ರವಚನ ಮಾಲೆಯಲ್ಲಿ ಪೋಣಿಸಿದ್ದಾರೆ.

ಈ ಇಳಿವಯಸ್ಸಿನಲ್ಲೂ ದೇಹಾರೋಗ್ಯವನ್ನು ಲೆಕ್ಕಿಸದೆ ಅನವರತವೂ **ಲೇಖನ ಯಜ್ಞದಲ್ಲಿ** ಶರ್ಮರು ತಮ್ಮನ್ನು ತಾವು ತೊಡಗಿಸಿಕೊಂಡಿದ್ದಾರೆ.

ವೇದಾಂತಭಾರತಿಯ ಮೇಲೆ ಅವರಿಟ್ಟ ವಿಶ್ವಾಸ-ಅಭಿಮಾನ-ವಾತ್ಸಲ್ಯಕ್ಕೆ ನಾವು ಚಿರಋಣಿಗಳು.

ಭವ-ಬಂಧನವನ್ನು ಕಳಚುವ **ದಿವ್ಯೌಷಧ** ರೂಪವಾದ ಈ ತತ್ತ್ವಾಮೃತವನ್ನು ಸಾಧ್ಯವಾದಷ್ಟು ಮಟ್ಟಿಗೆ ಸಹೃದಯ ವಾಚಕವೃಂದ ಸವಿಯಲೆಂದು ವಿಜ್ಞಾಪಿಸುತ್ತೇನೆ. ಪೂಜ್ಯ ಶರ್ಮರ ಚರಣಯುಗ್ಮಗಳಲ್ಲಿ ನಮನಗೈಯುವುದರ ಮೂಲಕ ಹೃತ್ಪೂರ್ವಕ ಕೃತಜ್ಞತೆಗಳನ್ನು ಸಮರ್ಪಿಸುತ್ತೇನೆ.

**ದಕ್ಷಿಣಾಮ್ನಾಯ ಶೃಂಗೇರಿ ಶ್ರೀಶಾರದಾಪೀಠವನ್ನಲಂಕರಿಸಿರುವ ಜಗದ್ಗುರುಗಳಾದ ಪರಮಪೂಜ್ಯ ಶ್ರೀಶ್ರೀ ಶ್ರೀ ಭಾರತೀತೀರ್ಥ** ಮಹಾಸ್ವಾಮಿಗಳವರು ಈ ಪ್ರವಚನಮಾಲೆಗೆ ಶ್ರೀಮುಖವನ್ನಿತ್ತು ನಮ್ಮನ್ನು ಪರಿಪೂರ್ಣವಾಗಿ ಆಶೀರ್ವದಿಸಿರುತ್ತಾರೆ. ಈ ಪ್ರವಚನಮಾಲೆಗೆ ಪರಮಪೂಜ್ಯರ ದಿವ್ಯಾನುಗ್ರಹವು ಜಪಮಾಲೆಯ ಮುಕುಟಮಣಿಯಂತೆ ಶೋಭಿಸುತ್ತಿದೆ. ವೇದಾಂತಭಾರತಿಯ ಮಹಾಸಂರಕ್ಷಕರಾದ ಪರಮಪೂಜ್ಯ ಜಗದ್ಗುರುಗಳ ಅಡಿದಾವರೆಗಳಲ್ಲಿ ಶಿರಸಾಷ್ಟಾಂಗಪ್ರಣಾಮಗಳನ್ನು ಅರ್ಪಿಸುತ್ತೇನೆ.

ವೇದಾಂತಭಾರತಿಯ ಕಾರ್ಯಕಲಾಪಗಳಿಗೆಲ್ಲ ಬೆನ್ನುಲುಬಾಗಿ ನಿಂತು ಮಾರ್ಗದರ್ಶನವನ್ನು ನೀಡಿ ಅನುಗ್ರಹಿಸುತ್ತಿರುವವರು, **ಯಡತೊರೆ ಶ್ರೀ ಯೋಗಾನಂದೇಶ್ವರ ಸರಸ್ವತೀ ಮಠದ ಪೀಠಾಧೀಶರಾದ ಪರಮಪೂಜ್ಯ ಶ್ರೀ ಶ್ರೀ ಶಂಕರಭಾರತೀ ಸ್ವಾಮಿಗಳವರು.** ಪರಮಪೂಜ್ಯರ ಚರಣಾರವಿಂದಗಳಿಗೆ ಭಕ್ತಿಪುರಸ್ಸರ ಪ್ರಣಾಮಗಳನ್ನು ಸಮರ್ಪಿಸುತ್ತೇನೆ.

ಈ ಗ್ರಂಥದ ಪ್ರಕಟಣೆಗಾಗಿ ಮೈಸೂರು ಜಿಲ್ಲೆಯ ಹೆಗ್ಗಡದೇವನಕೋಟೆ ತಾಲ್ಲೂಕಿನ ಕಿತ್ತೂರು ಗ್ರಾಮದವರಾದ **ಕೆ.ವಿ.ಲಲಿತಾಂಬಾ** ಅವರು ತಮ್ಮ ಮಾತೃಶ್ರೀ ದಿ|| ಶ್ರೀಮತೀ ಸೀತಾಲಕ್ಷ್ಮಮ್ಮ ಮತ್ತು ತೀರ್ಥರೂಪರಾದ ದಿ|| ಶ್ರೀ ಕೆ.ವಿ. ವೆಂಕಟನಾರಾಯಣ ಹಾಗೂ ಹಿರಿಯ ಸಹೋದರಿ ದಿ|| ಕೆ.ವಿ. ಮಂಗಳಾಂಬಾ ಅವರ ಸವಿನೆನಪಿಗಾಗಿ ಉದಾರ ಮನಸ್ಸಿನಿಂದ ದ್ರವ್ಯಸಹಾಯವನ್ನು ಮಾಡಿ ಸಹಕರಿಸಿರುತ್ತಾರೆ. ಅವರ ಮೇಲೆ **ಪರಮಪೂಜ್ಯ ವಿದ್ಯಾರಣ್ಯ ಮುನಿಗಳ ಕೃಪಾದೃಷ್ಟಿ** ಸದಾಇರಲೆಂದು ಆಶಿಸುತ್ತಾ ಹೃತ್ಪೂರ್ವಕ ಧನ್ಯವಾದಗಳನ್ನು ಸಮರ್ಪಿಸುತ್ತೇನೆ.

ಈ ಗ್ರಂಥವನ್ನು ಪ್ರಕಟಿಸುವಾಗ ಕರಡುಪ್ರತಿಗಳನ್ನು ತಿದ್ದಿ, ಅಕ್ಷರವಿನ್ಯಾಸದಲ್ಲಿ ಆದ ಲೋಪದೋಷಗಳನ್ನು ಸರಿಪಡಿಸುವಲ್ಲಿ ಸಹಕರಿಸಿದ ಪೂಜ್ಯಶರ್ಮರ ಶಿಷ್ಯರಾದ **ಶ್ರೀಮತೀ ಮತ್ತು ಶ್ರೀ ಜಿ. ಮಹಾಬಲೇಶ್ವರ ಭಟ್ಟರವರಿಗೂ** ಅನಂತ ಧನ್ಯವಾದಗಳು. ಅಕ್ಷರ ಜೋಡಣೆಯಲ್ಲಿ ಸಹಕರಿಸಿದ **ಶ್ರೀ ಸೀತಾರಾಮ ಹೆಗಡೆ,** ಅಕ್ಷಯಪ್ರಕಾಶನ, ಹನುಮಂತನಗರ, ಬೆಂಗಳೂರುರವರಿಗೂ, ಶ್ರೀಮತಿ ಶಕುಂತಲಾ ಶಂಕರ ಭಟ್ಟ ಹಾಗೂ ಸುಂದರವಾಗಿ ಈ ಗ್ರಂಥವನ್ನು ಮುದ್ರಿಸಿಕೊಟ್ಟ ಶಂಕರಪುರಂನ ಶ್ರೀ ರಾಮಕೃಷ್ಣ ಮುದ್ರಣಾಲಯದ ಮಾಲೀಕರಾದ ಶ್ರೀ ಬಾಲು ಮತ್ತು ಶ್ರೀ ರವಿ ಯವರಿಗೂ ಅಭಿನಂದನೆಗಳು.

| | |
|---|---|
| ಸ್ವಭಾನು ಸಂ॥ದ ದತ್ತಜಯಂತಿ, | ಡಾ॥ ಶ್ರೀಧರ ಭಟ್ಟ ಐನಕೈ |
| ಮಾರ್ಗಶೀರ್ಷ ಶುಕ್ಲ ಪೂರ್ಣಿಮಾ | ನಿರ್ದೇಶಕರು |
| ಸೋಮವಾರ : ೮-೧೨-೨೦೦೩ | ವೇದಾಂತಭಾರತೀ |

# ಪ್ರಸ್ತಾವನೆ

ಪೂಜ್ಯ ಶ್ರೀ ವಿದ್ಯಾರಣ್ಯ ಮಹಾಸ್ವಾಮಿಗಳ ಪಂಚದಶೀಗ್ರಂಥವು ಅದ್ವೈತ ವೇದಾಂತವನ್ನು ಪ್ರತಿಪಾದಿಸುವ ಕೃತಿಗಳಲ್ಲಿ ಒಂದು ಪ್ರಮುಖ ಸ್ಥಾನವನ್ನು ಅಲಂಕರಿಸಿದೆ. ವೇದಾಂತದ ಪ್ರಮೇಯಗಳೆಲ್ಲವನ್ನೂ ಸಂಗ್ರಹಿಸಿ ಸಂದೇಹ ಉಳಿಯದಂತೆ ಸರಳ ಭಾಷೆಯಲ್ಲಿ ನಿರೂಪಿಸಿರುವುದು ಈ ಗ್ರಂಥದ ವೈಶಿಷ್ಟ್ಯ. ಶಾಸ್ತ್ರೀಯ ವಿಷಯವನ್ನು ಎಷ್ಟು ಸರಳ ರೂಪವಾಗಿ ವಿವರಿಸಿದರೂ ಪಂಚದಶಿಯು ಶ್ಲೋಕರೂಪವಾಗಿರುವುದರಿಂದ ಅಭ್ಯಾಸಿಗಳಿಗೆ ಕೆಲವು ಸ್ಥಳಗಳಲ್ಲಿ ವಿವರಣೆ ಬೇಕಾಗುತ್ತದೆ. ಏಕೆಂದರೆ, ಶ್ಲೋಕದಲ್ಲಿ ಶಬ್ದಗಳಿಗೆ ಒಂದು ಪರಿಮಿತಿಯುಂಟು.

ಶ್ರೀ ವಿದ್ಯಾರಣ್ಯಸ್ವಾಮಿಗಳು ಕರ್ಕಶವಾದ ತರ್ಕವನ್ನು ಇಲ್ಲಿ ಬಳಸಿಲ್ಲ. ಆದರೆ ಮನನಕ್ಕೆ ಬೇಕಾದ ಕೆಲವು ಸಂದೇಹಗಳನ್ನೂ, ಪೂರ್ವಪಕ್ಷಗಳನ್ನೂ ಎತ್ತಿ ಲಲಿತವಾದ ಭಾಷೆಯಲ್ಲಿಯೇ ಸಮಾಧಾನವನ್ನು ಹೇಳುತ್ತಾರೆ. ಶ್ರುತಿಸ್ಮೃತಿಗಳ ಪ್ರಮಾಣಗಳನ್ನು ಉದಾಹರಿಸುತ್ತಾರೆ. ಹಾಸ್ಯಮಿಶ್ರವಾದ ಶೈಲಿ ಇವರದು. ಓದುಗರಿಗೆ ಎಲ್ಲಿಯೂ ಬೇಸರವಾಗುವುದಿಲ್ಲ. ಮನಸ್ಸಿಗೆ ನಾಟುವ ದೃಷ್ಟಾಂತಗಳಿಂದ ನಮ್ಮ ಸಂದೇಹಗಳನ್ನು ಬಗೆಹರಿಸುತ್ತಾರೆ. ಇವರ ಬೋಧನಾಕ್ರಮವು ಹೃದಯಕ್ಕೆ ಮುಟ್ಟುತ್ತದೆ. ಬುದ್ಧಿಯನ್ನು ವಶೀಕರಿಸುತ್ತದೆ. ಅದ್ವೈತಾನುಭವದ ಪರಮಾನಂದವನ್ನು ಸ್ವತಃ ಅನುಭವಿಸಿದವರು ಮತ್ತು ಶ್ರದ್ಧಾಳುಗಳಾದವರು ಅದನ್ನು ಅನುಭವಿಸಿ ಧನ್ಯರಾಗುವಂತೆ ಮಾಡತಕ್ಕವರು ಶ್ರೀ ವಿದ್ಯಾರಣ್ಯಸ್ವಾಮಿಗಳು. ಶ್ರೀ ಶಂಕರಭಗವತ್ಪಾದರ ಅನಂತರ ರಚಿತವಾದ ಸ್ವತಂತ್ರಕೃತಿಗಳಲ್ಲಿ ಪಂಚದಶಿಗೆ ಮೊದಲನೆಯ ಸ್ಥಾನವು ಸಲ್ಲುತ್ತದೆ.

ಶ್ರೀವಿದ್ಯಾರಣ್ಯರು ವಿಜಯನಗರ ಸಾಮ್ರಾಜ್ಯವನ್ನು ಸ್ಥಾಪಿಸಿದ ಕೀರ್ತಿಶಾಲಿಗಳು. ಲೌಕಿಕ ವೈದಿಕ ವ್ಯವಹಾರಗಳಲ್ಲಿ ಪರಸ್ಪರ ವಿರೋಧ ವಿಲ್ಲವೆಂದೂ ಧರ್ಮಕ್ಕೆ ಆಘಾತವುಂಟಾದಾಗ ಜ್ಞಾನಿಯು ಲೋಕಸಂಗ್ರಹಕ್ಕಾಗಿ ರಾಜಕೀಯ ವ್ಯವಹಾರದಲ್ಲಿ ಸಹ ಪ್ರವೇಶಿಸಬಹುದೆಂದೂ ಪ್ರವೇಶಿಸ ಬೇಕೆಂದೂ ತಮ್ಮ ಆಚರಣೆಯಿಂದ ತೋರಿಸಿ ಕೊಟ್ಟ ಮಹನೀಯರು. ಪಂಚದಶೀ ಗ್ರಂಥದಲ್ಲಿ ಸಹ **''ಜ್ಞಾನಿನಾ ಚರಿತುಂ ಶಕ್ಯಂ ಸಮ್ಯಗ್ರಾಜ್ಯಾದಿ ಲೌಕಿಕಮ್''** ಎಂದು ನುಡಿದಿದ್ದಾರೆ(೯-೧೧೪) ಆದರೆ ಯಾವನಿಗೆ ಮನೋನಿಗ್ರಹವಿಲ್ಲವೋ,

ಯಾವಾತನು ಇಂದ್ರಿಯಗಳನ್ನು ಜಯಿಸಿಲ್ಲವೋ ತೃಷ್ಣೆಯನ್ನು ತೊರೆದಿಲ್ಲವೋ ಅಂತಹ ಶುಷ್ಕವೇದಾಂತಿಗೆ ಅನ್ವಯಿಸುವ ಮಾತಲ್ಲ ಇದು. ಶ್ರೀ ಶಂಕರಭಗವತ್ಪಾದರು ''**ಬ್ರಹ್ಮಕ್ಷತ್ರೇ ಹಿ ಪರಿಪಾಲಿತೇ ಜಗತ್ ಪರಿಪಾಲಯಿತುಮಲಮ್**'' ಎಂದು ಹೇಳಿದ್ದಾರೆ.(ಗೀ.ಭಾ.೪-೧) ಬ್ರಹ್ಮಕ್ಷಾತ್ರಗಳೆರಡೂ ಪರಸ್ಪರ ಪೂರಕಗಳು.

ಶ್ರೀವಿದ್ಯಾರಣ್ಯರ ಕಾಲದಲ್ಲಿ ಮಹಮ್ಮದೀಯರ ಆಕ್ರಮಣದಿಂದ ಭರತಖಂಡದ ಉತ್ತರಭಾಗವು ತತ್ತರಿಸಿ ಹೋಗಿತ್ತು. ಆ ಬರ್ಬರ ಜನರಿಂದಾದ ಹಾವಳಿಯನ್ನು ಇತಿಹಾಸವು ದಾಖಲಿಸಿದೆ. ಆಗ ಕ್ಷಾತ್ರಬಲವು ನಾಮಾವಶೇಷವಾಗಿತ್ತು. ಧರ್ಮವಿರೋಧಿಗಳ ದಂಡು ದಕ್ಷಿಣ ಭಾರತಕ್ಕೂ ಹುಚ್ಚುಹೊಳೆಯಂತೆ ನುಗ್ಗತೊಡಗಿದಾಗ, ಕ್ಷಾತ್ರವು ನಿಸ್ತೇಜವಾದ್ದರಿಂದ, ಧರ್ಮರಕ್ಷಣೆಗಾಗಿ ಶ್ರೀವಿದ್ಯಾರಣ್ಯರು ಎದ್ದು ನಿಂತರು. ಇತಿಹಾಸ ಪ್ರಸಿದ್ಧವಾದ ವಿಜಯನಗರ ಸಾಮ್ರಾಜ್ಯವನ್ನು ಸ್ಥಾಪಿಸಿ ಕ್ಷಾತ್ರವನ್ನು ಹುರಿದುಂಬಿಸಿ ಮುಸಲ್ಮಾನ ದಂಡಿನ ಹುಚ್ಚುಹೊಳೆಗೆ ಪ್ರಬಲವಾದ ಅಡ್ಡಗೋಡೆಯನ್ನು ನಿರ್ಮಿಸಿದರು. ಬ್ರಹ್ಮಕ್ಷತ್ರಗಳೆರಡರ ಸಮನ್ವಯದ ಫಲವಿದು. ಐತಿಹಾಸಿಕವಾದ ವಿಜಯನಗರ ಸಾಮ್ರಾಜ್ಯವನ್ನು ಸ್ಥಾಪಿಸಿ, ಕರ್ಣಾಟಕಸಿಂಹಾಸನಸ್ಥಾಪನಾಚಾರ್ಯರೆಂದು ವಿಖ್ಯಾತರಾದ ಶ್ರೀವಿದ್ಯಾರಣ್ಯ ಸ್ವಾಮಿಗಳ ಜೀವನ ಚರಿತೆಯೇ ನಮಗೆ ಸರಿಯಾಗಿ ತಿಳಿದಿಲ್ಲದಿರುವುದು ಒಂದು ವಿಪರ್ಯಾಸ, ಶೋಚನೀಯವಾದ ಸಂಗತಿ. ಶಿಲಾಶಾಸನ, ತಾಮ್ರ ಶಾಸನ, ಕಾವ್ಯ, ಕಥೆಗಳಿಂದ ಕೆಲವು ವಿಷಯಗಳು ತಿಳಿದು ಬಂದರೂ, ಅವುಗಳಿಗೆ ಪರಸ್ಪರ ಹೊಂದಾಣಿಕೆ ಇಲ್ಲವಾದ್ದರಿಂದ ಅವರ ಚರಿತೆ ಅಸ್ಫುಟವಾಗಿಯೇ ಉಳಿದಿದೆ. ಶ್ರೀ ವಿದ್ಯಾರಣ್ಯರಿಗೆ ಸಂಬಂಧಿಸಿದ ಹತ್ತಾರು ಗ್ರಂಥಗಳನ್ನೋದಿ ವಿಮರ್ಶೆಗೆ ಒಳಪಡಿಸಿದಾಗ, ಸತ್ಯವೆಂದು ತೋರಿದ ಕೆಲವು ಅಂಶಗಳನ್ನು ಗ್ರಹಿಸಿ, ಅವರ ಚರಿತೆಯನ್ನು ಸಂಕ್ಷೇಪವಾಗಿ ಇಲ್ಲಿ ನಿರೂಪಿಸಿದೆ.

### ಶ್ರೀವಿದ್ಯಾರಣ್ಯರ ಜೀವನಚರಿತೆ

ಶ್ರೀ ವಿದ್ಯಾರಣ್ಯರು ಸಂನ್ಯಾಸಿಗಳು. ಪೂರ್ವಾಶ್ರಮದಲ್ಲಿ ಅವರಿಗೆ ಮಾಧವ, ಮಾಧವ ಭಟ್ಟ, ಮಾಧವಾಚಾರ್ಯ ಎಂದು ವ್ಯವಹಾರ ನಾಮಗಳಿದ್ದವು. ಇವರ ತಂದೆಯ ಹೆಸರು ಮಾಯಣ. ತಾಯಿ ಶ್ರೀಮತೀ. ಸಾಯಣ, ಭೋಗನಾಥ ಎಂಬಿಬ್ಬರು ಮಾಧವರ ಕಿರಿಯ ಸಹೋದರರು. ಇವರು ಭಾರದ್ವಾಜ ಗೋತ್ರದವರೆಂದೂ ಕೃಷ್ಣ ಯಜುರ್ವೇದದ ಬೋಧಾಯನಸೂತ್ರದವರೆಂದೂ

ಕೆಳಗಿನ ಶ್ಲೋಕಗಳಿಂದ ತಿಳಿದು ಬರುತ್ತದೆ.

**ಶ್ರೀಮತೀ ಜನನೀ ಯಸ್ಯ ಸುಕೀರ್ತಿರ್ಮಾಯಣಃ ಪಿತಾ।**
**ಸಾಯಣೋ ಭೋಗನಾಥಶ್ಚ ಮನೋಬುದ್ಧೀ ಸಹೋದರೌ ॥**
**ಯಸ್ಯ ಬೊಧಾಯನಂ ಸೂತ್ರಂ ಶಾಖಾ ಯಸ್ಯ ಚ ಯಾಜುಷೀ।**
**ಭಾರದ್ವಾಜಂ ಯಸ್ಯ ಗೋತ್ರಂ ಸರ್ವಜ್ಞಃ ಸ ಹಿ ಮಾಧವಃ ॥**

-ಪರಾಶರ ಮಾಧವೀಯ

ಮಾಧವರಿಗೆ ಸಿಂಗಲೆ (ಸಿಂಗಾಂಬಿಕೆ) ಎಂಬ ತಂಗಿ ಇದ್ದಾಳೆಂದೂ ಗೊತ್ತಾಗಿದೆ. ಇವರೆಲ್ಲರೂ ಕನ್ನಡನಾಡಿನವರೆಂಬುದು ಬಹುಮಟ್ಟಿಗೆ ನಿಶ್ಚಿತವಾದದ್ದು. ಮಾಧವರು ಕೃಷ್ಣಯಜುರ್ವೇದೀಯ ಬೋಧಾಯನ ಸೂತ್ರದವರಾದ್ದರಿಂದ ಹವ್ಯಕ ಪಂಗಡದವರೆಂದು ಸಹ ಕೆಲವರು ಊಹಿಸುತ್ತಾರೆ. ಹವ್ಯಕರಲ್ಲದ ಬೋಧಾಯನ ಸೂತ್ರದವರೂ ಇರುವುದರಿಂದ ಇದು ಬರಿಯ ಊಹೆಯಾಗಿದೆ. ಮಾಧವಾಚಾರ್ಯರು ಕ್ರಿ.ಶ. ೧೨೯೬ರಲ್ಲಿ ಜನಿಸಿದರೆಂದೂ ಕ್ರಿ.ಶ.೧೩೮೬ರಲ್ಲಿ ನಿರ್ಯಾಣ ಹೊಂದಿದರೆಂದೂ ಇತಿಹಾಸ ಶೋಧಕರ ಹೇಳಿಕೆಗಳಿಂದ ನಿಶ್ಚಯಿಸಬಹುದಾಗಿದೆ. ಇದು ಸತ್ಯವಾದಲ್ಲಿ ಒಟ್ಟು ೯೦ ವರ್ಷ ಅವರ ಜೀವಿತಕಾಲವೆಂದು ಸಿದ್ಧವಾಗುತ್ತದೆ. ಈ ವಿಷಯದಲ್ಲಿರುವ ನಾನಾ ಕಲ್ಪನೆಗಳಿಗಿಂತ ಈ ಕಾಲ ನಿರ್ಣಯವು ವಿಶ್ವಸನೀಯವಾಗಿದೆ. ಕ್ರಿ.ಶ. ೧೩೭೭ರ ಹೊತ್ತಿಗೆ ಮಾಧವಾಚಾರ್ಯರು ಸಂನ್ಯಾಸವನ್ನು ಸ್ವೀಕರಿಸಿದ್ದರೆಂದು ಶಾಸನಗಳಿಂದ ತಿಳಿದು ಬರುತ್ತದೆ. ಅವರ ಸಂನ್ಯಾಸ ಜೀವನವು ಸುಮಾರು ೧೧-೧೨ ವರ್ಷಗಳ ವರೆಗಿರಬಹುದು.

**ವಿದ್ಯಾಭ್ಯಾಸ**

ಮಾಧವರೂ ಸಾಯಣರೂ ಬಾಲ್ಯವಿದ್ಯಾಭ್ಯಾಸವನ್ನು ತಂದೆಯಾದ ಮಾಯಣ ಭಟ್ಟರ ಸಂನಿಧಿಯಲ್ಲಿಯೇ ಮುಗಿಸಿ, ಪ್ರೌಢವಿದ್ಯಾಭ್ಯಾಸವನ್ನು ಅನ್ಯ ಗುರುಗಳಿಂದ ಮಾಡಿದರೆಂದು ತಿಳಿದು ಬರುತ್ತದೆ. ಕಿರಿಯ ತಮ್ಮನಾದ ಭೋಗನಾಥನು ಇನ್ನೂ ಬಾಲ್ಯದಲ್ಲಿದ್ದುದರಿಂದ ಆತನು ಈ ಇಬ್ಬರು ಸೋದರರ ಸಹಪಾಠಿಯಾಗಿರಲಿಲ್ಲ. ಮಾಧವ ಸಾಯಣರಿಗೆ ಈ ನಾಲ್ವರು ಗುರುಗಳಾಗಿದ್ದರೆಂಬುದಕ್ಕೆ ಆಧಾರ ಉಂಟು.

೧. ಶ್ರೀ ವಿದ್ಯಾತೀರ್ಥರು

೨. ಶ್ರೀ ಭಾರತೀತೀರ್ಥರು (ಶ್ರೀ ಭಾರತೀ ಕೃಷ್ಣತೀರ್ಥರು)

೩. ಶ್ರೀ ಶಂಕರಾನಂದರು
೪. ಶ್ರೀ ಶ್ರೀಕಂಠನಾಥರು

ಇವರಲ್ಲಿ ಮೊದಲನೆಯ ಮೂವರು ಯತೀಶ್ವರರು. ಶ್ರೀವಿದ್ಯಾತೀರ್ಥರು ಶೃಂಗೇರಿ ಮಠಾಧೀಶರಾಗಿದ್ದರು. ಇವರ ಶಿಷ್ಯರಾದ ಶ್ರೀಭಾರತೀತೀರ್ಥರೂ ತಮ್ಮ ಗುರುಗಳು ಮುಕ್ತರಾದ ಮೇಲೆ ಶೃಂಗೇರಿ ಪೀಠವನ್ನು ಅಲಂಕರಿಸಿದರು. ಮಾಧವಾಚಾರ್ಯರು ಶ್ರೀ ಭಾರತೀತೀರ್ಥರಿಂದ ಸಂನ್ಯಾಸ ದೀಕ್ಷೆಯನ್ನು ಪಡೆದು, ಅನಂತರ ಶೃಂಗೇರಿ ಜಗದ್ಗುರು ಪೀಠವನ್ನೇರಿದರು. ಶ್ರೀಶಂಕರಾನಂದರು ಸಂನ್ಯಾಸಿಗಳು. ಇವರು ಶ್ರೀ ವಿದ್ಯಾತೀರ್ಥರ ಶಿಷ್ಯರೂ ಘನವಿದ್ವಾಂಸರೂ ಆಗಿದ್ದರು. ವಿದ್ಯಾರಣ್ಯರಿಗೆ ಇವರಲ್ಲಿ ವಿಶೇಷವಾದ ಭಕ್ತಿ ಇತ್ತು. ಶ್ರೀ ಶ್ರೀಕಂಠನಾಥರು ಸಂನ್ಯಾಸಿಗಳೋ ಅಲ್ಲವೋ ಸ್ಪಷ್ಟವಾಗಿ ತಿಳಿದು ಬರುವುದಿಲ್ಲ. ಮಹಾತ್ಮರೂ ಜ್ಞಾನಿಗಳೂ ಆಗಿದ್ದರೆಂಬುದು ನಿಶ್ಚಿತ. ''**ಸೋಽಸ್ಮಾನ್ ಮುಖ್ಯಗುರುಃ ಪಾತು ವಿದ್ಯಾತೀರ್ಥ ಮಹೇಶ್ವರಃ**'' ಎಂದು ಮಾಧವಾಚಾರ್ಯರು ಅನುಭೂತಿ ಪ್ರಕಾಶದಲ್ಲಿ ಶ್ರೀವಿದ್ಯಾತೀರ್ಥರನ್ನು ಸ್ತುತಿಸಿದ್ದಾರೆ. ಮಾಧವರು ಶ್ರೀ ಭಾರತೀತೀರ್ಥರಿಂದ ಸಂನ್ಯಾಸದೀಕ್ಷೆಯನ್ನು ಪಡೆದು ವಿದ್ಯಾರಣ್ಯರೆಂಬ ದೀಕ್ಷಾನಾಮ ದಿಂದ ಭೂಷಿತರಾದರು. ಶ್ರೀ ವಿದ್ಯಾತೀರ್ಥರು ವಿದ್ಯಾರಣ್ಯಸ್ವಾಮಿಗಳಿಗೆ ಪರಮ ಗುರುಗಳಾದರು. 'ಮುಖ್ಯಗುರುಃ' ಎಂಬ ಶಬ್ದದಿಂದ ಇದು ಸೂಚಿತವಾಗಿದೆ. ಅವರನ್ನು 'ಮಹೇಶ್ವರ' ಎಂದು ವಿಶೇಷಿಸಿದ್ದರಿಂದ ಶ್ರೀವಿದ್ಯಾತೀರ್ಥರ ತಪೋಮಹಿಮೆಯೂ ಸರ್ವಜ್ಞತ್ವವೂ ವ್ಯಕ್ತವಾಗುತ್ತದೆ. ಶ್ರೀಕಂಠನಾಥರು ಮಾಧವಸಾಯಣರಿಗೆತರ್ಕವ್ಯಾಕರಣಾದಿ ಶಾಸ್ತ್ರಗಳನ್ನೂ, ಶ್ರೀವಿದ್ಯಾತೀರ್ಥರೂ, ಶ್ರೀ ಭಾರತೀತೀರ್ಥರೂ, ಶ್ರೀಶಂಕರಾನಂದರೂ ವೇದಾಂತದರ್ಶವನ್ನೂ ಬೋಧಿಸಿರಬಹುದು.

ಮಾಧವಾಚಾರ್ಯರು ಸಂನ್ಯಾಸ ಸ್ವಿಕಾರಕ್ಕೆ ಮೊದಲು ಗೃಹಸ್ಥರಾಗಿದ್ದರೆ? ಎಂಬ ಒಂದು ಪ್ರಶ್ನೆ ಇದೆ. ಕುಮಾರಿಲಭಟ್ಟರ ತಂತ್ರವಾರ್ತಿಕಕ್ಕೆ 'ನ್ಯಾಯಸುಧಾ' ಎಂಬ ಒಂದು ವ್ಯಾಖ್ಯಾನ ಉಂಟು. ಅದರ ಪುಷ್ಪಿಕೆಯಲ್ಲಿ ''**ಪ್ರತಿವಸಂತಸೋಮಯಾಜಿ-ಭಟ್ಟ ಮಾಧವಾತ್ಮಜ-ಭಟ್ಟ ಸೋಮೇ-ಶ್ವರ ವಿರಚಿತಾಯಾಂ ತಂತ್ರವಾರ್ತಿಕಟೀಕಾಯಾಮ್**'' ಎಂದಿದೆ. ವ್ಯಾಖ್ಯಾನಕಾರನಾದ ಭಟ್ಟ ಸೋಮೇಶ್ವರನು ಮಾಧವಾಚಾರ್ಯರ ಪುತ್ರನೆಂದು

ಹೇಳಿರುವುದರಿಂದ ಮಾಧವರು ಮೊದಲು ಗೃಹಸ್ಥರಾಗಿದ್ದರೆಂದು ನಿಶ್ಚಯಿಸಬಹುದು. ಇನ್ನಿಬ್ಬರು ಸೋದರರಾದ ಸಾಯಣ, ಭೋಗನಾಥರು ಗೃಹಸ್ಥರಾಗಿದ್ದರೆಂಬ ವಿಷಯದಲ್ಲಿ ಯಾವ ಶಂಕೆಯೂ ಇಲ್ಲ.

**ಸಾಧನೆ**

ಲೌಕಿಕ-ವೈದಿಕ ಕಾರ್ಯಗಳೆರಡರಲ್ಲಿಯೂ ಮಹಾಪುರುಷರಾದ ವಿದ್ಯಾರಣ್ಯರ ಸಾಧನೆಗಳು ವಿಪುಲವಾದವು, ಸಾರವತ್ತಾದವು, ಮಹತ್ತರವಾದವು, ಅಸಾಧಾರಣವಾದವು. ಇದು ತಥ್ಯ ಕಥನವೇ ಹೊರತು ಅತಿಶಯೋಕ್ತಿಯಲ್ಲ. ಆ ಕಾಲದಲ್ಲುಂಟಾದ ರಾಜಕೀಯ ಕ್ಷೋಭೆಯು ಅಡಗಿದ ಹೊರತು ರಾಷ್ಟ್ರಕ್ಕೆ ಶಾಂತಿ ಇಲ್ಲ. ಶಾಂತಿಯಿಲ್ಲದೆ ಯಾವ ವ್ಯಕ್ತಿಯಾಗಲಿ ಸಮಾಜವಾಗಲಿ ಪ್ರಗತಿಯನ್ನು ಸಾಧಿಸಲು ಶಕ್ಯವಿಲ್ಲ. ಧಾರ್ಮಿಕ, ಆಧ್ಯಾತ್ಮಿಕ ಮಾರ್ಗಗಳಂತೂ ಗುರುತು ಕಾಣದಂತೆ ಅಳಿಸಿ ಹೋಗುತ್ತವೆಯೆಂಬುದನ್ನು ಸ್ಪಷ್ಟವಾಗಿ ಅರಿತು ಕಾರ್ಯಪ್ರವೃತ್ತರಾದ ಧೀರ ವೈದಿಕ ವಿದ್ವಾಂಸರು ಶ್ರೀವಿದ್ಯಾರಣ್ಯರು. ಲೌಕಿಕ ಕಾರ್ಯದಲ್ಲಿ ಅವರ ಸಾಧನೆ ಏನೆಂಬುದನ್ನು ಸಂಕ್ಷೇಪವಾಗಿ ಇಲ್ಲಿ ನೋಡೋಣ.

**ಆ ಕಾಲದ ದೇಶಸ್ಥಿತಿ**

ಕ್ರಿ.ಶ. ೧೨ನೆಯ ಶತಮಾನದಲ್ಲಿಯೇ ಈ ರಾಷ್ಟ್ರದ ಉತ್ತರ ಭಾಗದಲ್ಲಿ ಮಹಮ್ಮದೀಯ ಕಿರಾತರ ಕಾಳರಾಹುಚ್ಛಾಯೆ ಮುಸುಕಿತ್ತು. ದೇಶದ ಐಶ್ವರ್ಯವನ್ನು ಕೊಳ್ಳೆಹೊಡೆದು, ದೇವಾಲಯಗಳನ್ನು ಹಾಳುಗೆಡವಿ, ಹಿಂದೂಗಳನ್ನು ಬಲಾತ್ಕಾರದಿಂದ ಮತಾಂತರಗೊಳಿಸಿ, ಭಾರತೀಯರ ವಿದ್ಯಾಸಂಸ್ಕೃತಿಗಳನ್ನು ತೊಡೆದು ಹಾಕುವ ದೊಡ್ಡ ಉದ್ಯೋಗವನ್ನು ಅವರು ನಡೆಸಿದ್ದರು. ಆಮೇಲೆ ಅವರ ಕ್ರೂರದೃಷ್ಟಿ ದಕ್ಷಿಣಾಪಥದಕಡೆಗೆ ತಿರುಗಿತು. ಕ್ರಿ.ಶ. ೧೨೯೪ರಲ್ಲಿ ಅಲ್ಲಾಉದ್ದೀನಖಿಲ್ಜಿಯು ದಕ್ಷಿಣದ ದಂಡಯಾತ್ರೆಯನ್ನು ನಡೆಸಿದ. ಮಧುರೆ, ಕಾಂಚೀ - ಮೊದಲಾದವನ್ನು ಗೆದ್ದು, ತಿರುಚನಾಪಳ್ಳಿಯವರೆಗೆ ತನ್ನ ರಾಜ್ಯವನ್ನು ವಿಸ್ತರಿಸಿದನು. ಆಮೇಲೆ ಮಲ್ಲಿಕ್‌ಕಾಫರನ ಆಕ್ರಮಣ. ಕ್ರಿ.ಶ. ೧೩೨೦ರಲ್ಲಿ ದೆಹಲಿಯ ಸಿಂಹಾಸನವು ತುಘಲಕ್ ವಂಶದವರಿಗೆ ಸಂದಿತು. ಮಹಮ್ಮದ್ ಬಿನ್ ತೊಘಲಕನು ಹೊಯ್ಸಳ, ಪಾಂಡ್ಯ, ಕಂಪಿಲಿ ರಾಜ್ಯಗಳನ್ನು ವಶಪಡಿಸಿಕೊಂಡು ನಡೆಸಿದ ಕ್ರೂರಕೃತ್ಯಗಳು ಇತಿಹಾಸದಲ್ಲಿ ಕರಾಳವಾಗಿ ಕಂಗೊಳಿಸಿವೆ. ಮುಸಲ್ಮಾನರು ಮಾಡಿದ ಹಾವಳಿಗಳನ್ನು ಶಿಲಾಶಾಸನಗಳೂ ಗಂಗಾದೇವಿಯ ಮಧುರಾವಿಜಯವೂ ಶ್ರೀ ವೇದಾಂತದೇಶಿಕರ ಅಭೀತಿಸ್ತವವೂ ಸ್ಪಷ್ಟವಾಗಿ

ತಿಳಿಸುತ್ತವೆ. ಮಹಮ್ಮದ್ ಬಿನ್ ತೊಗಲಖನ ಸಮಕಾಲಿಕನಾಗಿದ್ದ ಇಬನ್ ಬತೂತಾ (Iban Batuta) ಎಂಬ ಮಹಮ್ಮದೀಯ ಇತಿಹಾಸಕಾರನೇ ಈ ಘೋರ ಕೃತ್ಯಗಳನ್ನು ತನ್ನ 'ಸಫರ್‌ನಾಮಾ' ದಲ್ಲಿ ಹೀಗೆ ವರ್ಣಿಸಿದ್ದಾನೆ - ''ಹಿಂದೂ ರಾಜರನ್ನು ಸೆರೆ ಹಿಡಿದು ಜೀವಂತವಾಗಿರುವಾಗಲೇ ಚರ್ಮವನ್ನು ಸುಲಿಸುತ್ತಿದ್ದರು. ಅವರ ತಲೆಗಳನ್ನು ಕಡಿದು ಕೋಟೆಯ ಗೋಡೆಗಳಿಗೆ ತೂಗು ಹಾಕುತ್ತಿದ್ದರು. ಶತ್ರುಗಳ ಮಾಂಸವನ್ನು ಹುರಿದು ಅವರ ಹೆಂಡಿರು ಮಕ್ಕಳಿಗೆ ಬಲಾತ್ಕಾರವಾಗಿ ತಿನ್ನಿಸುತ್ತಿದ್ದರು. ದೇವಾಲಯಗಳನ್ನು ಕೆಡವಿ ವಿಗ್ರಹಗಳನ್ನು ಒಡೆದು ಚೂರು ಮಾಡುತ್ತಿದ್ದರು. ಅಮೂಲ್ಯವಾದ ಆಭರಣಗಳನ್ನು ದೋಚುತ್ತಿದ್ದರು. ಹಿಂದೂ ಸ್ತ್ರೀಪುರುಷರನ್ನು ಬಲಾತ್ಕಾರದಿಂದ ಜಾತಿಗೆಡಿಸಿ ಮುಸಲ್ಮಾನರನ್ನಾಗಿ ಮಾಡುತ್ತಿದ್ದರು. ಇವೆಲ್ಲವೂ ಸುಲ್ತಾನನ ಸೈನ್ಯಗಳ ನಿತ್ಯ ಕಾರ್ಯಗಳಾಗಿದ್ದವು.'' ಅಂದಿನ ಪರಿಸ್ಥಿತಿಯನ್ನು ಊಹಿಸಿಕೊಳ್ಳಲು ಇಷ್ಟು ಸಾಕು. 'ವಿಲಸ' ಎಂಬ ಗ್ರಾಮದಲ್ಲಿ ದೊರೆತ ಶಾಸನವೊಂದರಲ್ಲಿರುವ ಶ್ಲೋಕ ಇದು.

> ಧನದಾರಾದಿಕೇ ನೃಣಾಂ ಕಸ್ಮಿಂಶ್ಚಿದಪಿ ವಸ್ತುನಿ ।
> ಸ್ವಾಯತ್ತತಾಮತಿರ್ನಾಸೀತ್ ಭುವಿ ತಸ್ಯಾಂ ಮಹಾಪದಿ ॥

''ಆ ಮಹಾವಿಪತ್ತಿನ ಕಾಲದಲ್ಲಿ ಹಣ, ಹೆಂಡತಿಯರ ವಿಷಯದಲ್ಲಾಗಲಿ, ಇನ್ನಾವ ವಸ್ತುವಿನಲ್ಲಾಗಲಿ ಜನರಿಗೆ ' ಇದು ನನ್ನದು' ಎಂದು ಹೇಳಿಕೊಳ್ಳುವ ಧೈರ್ಯವಿರಲಿಲ್ಲ''. ಕ್ಷತ್ರಿಯ ತೇಜಸ್ಸು ಅಳಿದು ಹೋಗಿತ್ತು. ಬ್ರಹ್ಮತೇಜಸ್ಸಿಗೆ ಮಂಕು ಬಡಿದಿತ್ತು. ಹೀಗೆ ಧರ್ಮಗ್ಲಾನಿಯಾದಾಗ ಅಧರ್ಮದ ಅಭ್ಯುತ್ಥಾನವಾದಾಗ, ಸಾಧುಜನರ ಪರಿತ್ರಾಣಕ್ಕಾಗಿ ಶ್ರೀವಿದ್ಯಾರಣ್ಯ ಸ್ವಾಮಿಗಳ ಅವತಾರವಾಯಿತು. ಭಾರತಭೂಮಿಯು ಬಂಜೆಯಲ್ಲ ಎಂಬುದು ವ್ಯಕ್ತವಾಯಿತು.

ಮುಸಲ್ಮಾನರ ಬರ್ಬರವಾದ ಪುಂಡಾಟಿಕೆಯನ್ನು ಕ್ಷತ್ರಿಯ ತೇಜಸ್ಸಿನಿಂದ ಉದ್ದಂಡವೂ ಪ್ರಚಂಡವೂ ಆದ ದಂಡಿನಿಂದಲೇ ನಿಗ್ರಹಿಸಬೇಕೆಂದು ನಿಶ್ಚಯಿಸಿ, ಸೂಕ್ಷ್ಮಮತಿಗಳಾದ ವಿದ್ಯಾರಣ್ಯರು ಪ್ರಬಲವಾದ ವಿಜಯನಗರ ಸಾಮ್ರಾಜ್ಯವನ್ನು ಸ್ಥಾಪಿಸಿದರು. ಆ ಮಹಾಕಾರ್ಯಕ್ಕೆ ನೆರವಾಗಲು ಹಕ್ಕಬುಕ್ಕರೆಂಬ ಕಾರ್ಯದಕ್ಷರಾದ ಸೋದರರೂ ದೈವಯೋಗದಿಂದ ಲಭಿಸಿದರು. ಈ ಹಕ್ಕಬುಕ್ಕರು ಯಾರು, ಎಲ್ಲಿಂದ ಬಂದರು? - ಎಂಬ ವಿಷಯದಲ್ಲಿ ಒಮ್ಮತವಿಲ್ಲ. ಇವರು

ರಾಜವಂಶೀಯರಾಗಿ ಸಂಗ್ರಾಮ ವಿದ್ಯೆಯಲ್ಲಿ ಪಳಗಿದ ವೀರಯೋಧರೆಂಬುದು ನಿಶ್ಚಿತ. ಇವರು ವಿನಯಸಂಪನ್ನರೂ ಧರ್ಮನಿಷ್ಠರೂ ರಾಷ್ಟ್ರಾಭಿಮಾನಿಗಳೂ ವೈದಿಕಧರ್ಮದಲ್ಲಿ ಅಭಿರುಚಿಯುಳ್ಳವರೂ ಆಗಿದ್ದರೆಂಬುದು ಮುಂದಿನ ಅವರ ನಡವಳಿಕೆಗಳಿಂದ ಸ್ಪಷ್ಟವಾಗಿ ತಿಳಿದುಬರುತ್ತದೆ. ಹಕ್ಕ, ಬುಕ್ಕ, ಸಾಯಣ, ಮಾಯಣ - ಇತ್ಯಾದಿ ಶಬ್ದಗಳ ಅರ್ಥವೇನು? ಅವು ಯಾವ ಮೂಲದವು? ಎಂಬುದು ನಮಗೆ ತಿಳಿದಿಲ್ಲ.

**ವಿಜಯನಗರ ಸಾಮ್ರಾಜ್ಯ**

ವಿದ್ಯಾರಣ್ಯರ ಮಹಾಪ್ರಯತ್ನವು ಫಲಿಸಿ ಕ್ರಿ.ಶ.೧೩೩೬ ರಲ್ಲಿ ವಿಜಯನಗರ ಸಾಮ್ರಾಜ್ಯವು ಸ್ಥಾಪಿತವಾಯಿತೆಂದು ಹಂಪೆಯ ಒಂದು ದೇವಸ್ಥಾನದಲ್ಲಿರುವ ಶಾಸನವು ತಿಳಿಸುತ್ತದೆ. ಅದರಲ್ಲಿ ಹೇಳಿರುವ ಪ್ರಕಾರ, ಶಾಲಿವಾಹನ ಶಕ೧೨೫೮ಕ್ಕೆ ಸರಿಯಾದ ಧಾತುಸಂವತ್ಸರದ ವೈಶಾಖಶುದ್ಧಸಪ್ತಮೀ ಬುಧವಾರ ಗುರುಸಹಿತವಾದ ಶುಭಲಗ್ನದಲ್ಲಿ ಯತಿಶ್ರೇಷ್ಠರಾದ ವಿದ್ಯಾರಣ್ಯರು ವಿಜಯನಗರವನ್ನು ನಿರ್ಮಿಸಿದರು (ಸಪ್ತಮ್ಯಾಂ ಶ್ರೀ ವಿಜಯನಗರಂ ನಿರ್ಮಮೇ ನಿರ್ಮವೇಂದ್ರಃ - ಎಂದು ಶ್ಲೋಕದ ಕಡೆಯ ಸಾಲು) ಹಕ್ಕನು ಹರಿಹರರಾಯನೆಂಬ ಹೆಸರಿನಿಂದ ಮಹಾರಾಜನಾಗಿ ಪಟ್ಟಾಭಿಷಿಕ್ತನಾದನು. ಆಮೇಲೆ ಆರೇಳು ವರ್ಷಗಳಲ್ಲಿ ಅವನು ಮೃತನಾದ್ದರಿಂದ ಬುಕ್ಕನು ಸಾಮ್ರಾಜ್ಯದ ಸಿಂಹಾಸನವನ್ನೇರಿದನು. ಬುಕ್ಕರಾಜನು ಅತ್ಯಂತದಕ್ಷನೂ ಪ್ರತಾಪಶಾಲಿಯೂ ಆದ್ದರಿಂದ ಸಾಮ್ರಾಜ್ಯವು ವಿಸ್ತರಿಸಿತು. ಮುಸಲ್ಮಾನರ ಸೊಲ್ಲು ಅಡಗಿತು. ಎಲ್ಲ ಕಡೆಗೆ ಶಾಂತಿ ಏರ್ಪಟ್ಟಿತು. ವಿಜಯನಗರ ಸಾಮ್ರಾಜ್ಯವು ದಕ್ಷಿಣದೇಶವನ್ನು ವ್ಯಾಪಿಸಿತು. ಕರ್ಣಾಟಕದೇಶವಲ್ಲದೆ ತಮಿಳುನಾಡು ಕೇರಳ ರಾಜ್ಯಗಳೂ ವಿಜಯನಗರದ ಸಾಮ್ರಾಜ್ಯದಲ್ಲಿ ಸೇರಿಹೋದವು. ವಿಜಯನಗರದ ರಾಜರು ಸಿಂಹಳದ್ವೀಪವನ್ನು (ಈಗಿನ ಲಂಕಾದ್ವೀಪ) ವಶಪಡಿಸಿಕೊಂಡರು. ಅವರ ಸಾಮ್ರಾಜ್ಯದಲ್ಲಿ ದುಷ್ಟ ಮಹಮ್ಮದೀಯ ಸೈನ್ಯಕ್ಕೆ ಹೆಜ್ಜೆಯಿಡಲು ಸಾಧ್ಯವಾಗಲಿಲ್ಲ.

ಹೀಗೆ ವಿಜಯನಗರ ಸಾಮ್ರಾಜ್ಯರಥವು ಸುಮಾರು ೨೩೦ ವರ್ಷಗಳವರೆಗೆ ಉತ್ತುಂಗ ವೈಭವದಿಂದಲೇ ಮೆರೆದು, ಕ್ರಿ.ಶ. ೧೫೬೫ರಲ್ಲಿ ನಡೆದ ತಾಳಿಕೋಟೆ ಯುದ್ಧದಲ್ಲಿ ಕಾಲಚಕ್ರದ ಹೊಡೆತಕ್ಕೆ ಸಿಕ್ಕಿ ಸೋತು ಮುಗ್ಗರಿಸಿತು. ನಮ್ಮ ರಾಷ್ಟ್ರದ ಇತಿಹಾಸದಲ್ಲಿ ಇಷ್ಟು ದೀರ್ಘಕಾಲವಾದರೂ ವೈಭವದಿಂದ ಬಾಳಿ ಬದುಕಿದ ಇನ್ನೊಂದು ಸಾಮ್ರಾಜ್ಯದ ಹೆಸರು ದೊರೆಯುವುದಿಲ್ಲ. ಈ ಸಾಮ್ರಾಜ್ಯವು ಅಷ್ಟು

ದೀರ್ಘಕಾಲವಾದರೂ ತಲೆಯೆತ್ತಿ ಬಾಳುವುದಕ್ಕೆ ವಿದ್ಯಾರಣ್ಯರ ತಪಃಶಕ್ತಿಯೂ ಅವರು ಹಾಕಿಕೊಟ್ಟ ರಾಜನೀತಿಯೂ ಕಾರಣವೆನ್ನಬಹುದು.

**ಸರ್ವಮತ ಸಮನ್ವಯ**

ವಿಜಯನಗರದ ಅರಸರು ವಿದ್ಯಾರಣ್ಯರ ಮಾರ್ಗದರ್ಶನದ ಅಡಿಯಲ್ಲಿಯೇ ನಡೆದರು. ಅದ್ವೈತ, ದ್ವೈತ, ವಿಶಿಷ್ಟಾದ್ವೈತ, ವೀರಶೈವ, ಬೌದ್ಧ ಜೈನಾದಿಮತಗಳನ್ನು ಸಮಭಾವದಿಂದ ಕಂಡರೇ ಹೊರತು ಯಾರನ್ನೂ ದ್ವೇಷಭಾವದಿಂದ ಕಾಣಲಿಲ್ಲ. ಪಕ್ಷಪಾತವನ್ನು ಮಾಡಲಿಲ್ಲ. ಮತಾಂತರಗೊಂಡ ಮುಸಲ್ಮಾನರೂ, ಕ್ರೈಸ್ತರೂ ಅವರ ರಾಜ್ಯದ ಪ್ರಜೆಗಳಾಗಿದ್ದರು. ವಿಜಯನಗರದ ಅರಸರ ಸಮಭಾವವನ್ನು ಇತಿಹಾಸವು ನಿರೂಪಿಸಿದೆ.

ಕನ್ನಡನಾಡಿನೊಡನೆ, ಆಂಧ್ರ, ತಮಿಳುನಾಡು, ಕೇರಳ ದೇಶಗಳು ವಿಜಯನಗರದ ಆಳ್ವಿಕೆಗೆ ಒಳಪಟ್ಟಿದ್ದರೂ ಭಾಷಾನಿಮಿತ್ತಕವಾದ ಕಲಹವೂ ನಡೆಯಲಿಲ್ಲ. ಅದು ನಿಜವಾದ ಸೆಕ್ಯುಲರ್ ಸಾಮ್ರಾಜ್ಯವಾಗಿತ್ತು. ಅದಕ್ಕೆ ಕಾರಣವು ವಿದ್ಯಾರಣ್ಯರು ತೋರಿಸಿದ ರಾಜನೀತಿಯಾಗಿತ್ತು.

ಇನ್ನು ವೈದಿಕಮಾರ್ಗದಲ್ಲಿ ವಿದ್ಯಾರಣ್ಯರ ಸಾಧನೆಯೇನೆಂಬುದನ್ನು ನೋಡಬಹುದು. ಮಾಧವರೂ ಸಾಯಣರೂ ವೈದುಷ್ಯದಲ್ಲಿ, ಉತ್ಸಾಹದಲ್ಲಿ, ಕರ್ತೃತ್ವ ಶಕ್ತಿಯಲ್ಲಿ ಸಮಾನರಾಗಿದ್ದು ಏಕ ವ್ಯಕ್ತಿಯಂತೆ ಒಟ್ಟಾಗಿ ದುಡಿದರು. ಸಾಯಣರಿಗೆ ತಮ್ಮ ಅಣ್ಣನಲ್ಲಿ ವಿಶೇಷವಾದ ಪ್ರೀತಿ ಗೌರವಾದರಗಳಿದ್ದುದರಿಂದ ಕೆಲವು ಗ್ರಂಥಗಳನ್ನು ಮಾಧವರ ಹೆಸರಿನಲ್ಲಿಯೇ ಅವರು ರಚಿಸಿದ್ದುಂಟು. ಅಲ್ಲದೆ ಮಾಧವ ಎಂಬ ಹೆಸರಿನ ಮೂವರು ವ್ಯಕ್ತಿಗಳಿದ್ದಾರೆಂದು ಗೊತ್ತಾಗಿದೆ. ವಿದ್ಯಾರಣ್ಯ ಮಾಧವರು, ಸಾಯಣರ ಮಗ ಮಾಧವ ಭಟ್ಟ, ಇಮ್ಮಡಿ ಹರಿಹರರಾಯನ ಮಂತ್ರಿಯಾಗಿದ್ದ ಮಾಧವ ಮಂತ್ರಿ - ಇವರೆಲ್ಲರೂ ವಿದ್ವಾಂಸರೂ, ಗ್ರಂಥಕರ್ತರೂ ಆದ್ದರಿಂದ ನಿಜವಾಗಿ ವಿದ್ಯಾರಣ್ಯರ ಕೃತಿಗಳು ಯಾವುವು ಎಂದು ವಿವೇಚಿಸುವುದು ಕ್ಲಿಷ್ಟವಾಗಿದೆ.

ಪಂಚದಶೀ, ಜೀವನ್ಮುಕ್ತಿವಿವೇಕ, ಅನುಭೂತಿಪ್ರಕಾಶ, ವಿವರಣಪ್ರಮೇಯ ಸಂಗ್ರಹ, ಬೃಹದಾರಣ್ಯಕವಾರ್ತಿಕಸಾರ, ನೃಸಿಂಹ ಉತ್ತರತಾಪನೀಯ ಉಪನಿಷದ್ದೀಪಿಕಾ, ಪರಾಶರಮಾಧವೀಯ, ವ್ಯವಹಾರ ಮಾಧವೀಯ, ಕಾಲಮಾಧವೀಯ - ಇವಿಷ್ಟು ವಿದ್ಯಾರಣ್ಯ ರಚಿತವಾದವೆಂಬುದು ನಿಶ್ಚಿತ. ವೈಯಾಸಿಕ ನ್ಯಾಯಮಾಲಾ - ಬಹುಶಃ ವಿದ್ಯಾರಣ್ಯರಿಂದ ರಚಿತವಾದದ್ದು.

ಜೈಮಿನೀಯಾನ್ಯಾಯಮಾಲಾ - ಬಹುಶಃ ಸಾಯಣಾಚಾರ್ಯ ರಚಿತ. ಕಾಲ ಮಾಧವೀಯ, ವ್ಯವಹಾರ ಮಾಧವೀಯಗಳು ಮಾಧವ ಮಂತ್ರಿ ರಚಿತಗಳೆಂದೂ ಕೆಲವರು ಹೇಳುತ್ತಾರೆ. ವಿಖ್ಯಾತವಾದ ಸರ್ವದರ್ಶನಸಂಗ್ರಹವು ಸಾಯಣ ಪುತ್ರರಾದ ಮಾಧವಭಟ್ಟರಿಂದ ನಿರ್ಮಿತವಾಗಿದೆಯೆಂದು ಕೆಲವರು ವಾದಿಸಿದ್ದಾರೆ. ಮಾಧವೀಯಧಾತುವೃತ್ತಿಯನ್ನು ರಚಿಸಿದವರು ಸಾಯಣರ ಮಗ ಮಾಧವ ಭಟ್ಟರೆಂದು ಕೆಲವರ ಅಭಿಪ್ರಾಯವಿದೆ.

ಸಾಯಣಾಚಾರ್ಯರು ಸುಭಾಷಿತಸುಧಾನಿಧಿ, ಯಜ್ಞತಂತ್ರಸುಧಾನಿಧಿ - ಮುಂತಾದ ಹಲವಾರು ಗ್ರಂಥಗಳನ್ನು ರಚಿಸಿದರು. ಇವೆಲ್ಲದಕ್ಕಿಂತ ಬುಕ್ಕರಾಜನ ಆದೇಶದಂತೆ, ವಿದ್ಯಾರಣ್ಯರ ಪ್ರೇರಣೆಯಿಂದ ಸಾಯಣಾಚಾರ್ಯರು ನಿರ್ಮಿಸಿದ ವೇದಾರ್ಥ ಪ್ರಕಾಶವೆಂಬ ಚತುರ್ವೇದಭಾಷ್ಯವು ಅವರಿಗೆ ಶಾಶ್ವತವಾದ ಕೀರ್ತಿಯನ್ನು ತಂದ ಅಸಾಧಾರಣವಾದ ಮಹಾಕೃತಿ. ವೇದವ್ಯಾಸರು ಚತುರ್ವೇದಗಳನ್ನು ವಿಂಗಡಿಸಿದರೆ, ಸಾಯಣಾಚಾರ್ಯರು ಚತುರ್ವೇದಗಳಿಗೆ ಭಾಷ್ಯವನ್ನು ರಚಿಸಿದ ದ್ವಿತೀಯ ವೇದವ್ಯಾಸರು. ವೇದಭಾಷ್ಯರಚನೆಗೆ ಇತರ ಕೆಲವು ಪಂಡಿತರು ಸಾಯಣರಿಗೆ ಸಹಾಯ ಮಾಡಿದರೆಂದು ತಿಳಿದು ಬರುತ್ತದೆ. ಇವರ ಕಿರಿಯ ಸೋದರ ಭೋಗನಾಥರು ಅಲಂಕಾರ ಸುಧಾ ನಿಧಿಯನ್ನು ಅನೇಕ ಕಾವ್ಯಗಳನ್ನೂ ರಚಿಸಿದ್ದಾರೆ. ಇದು ಕೇವಲ ದಿಗ್ ದರ್ಶನ. ವಿದ್ಯಾರಣ್ಯರ ಸಲಹೆಯಂತೆ ವೇದಶಾಸ್ತ್ರ ಪಾರಂಗತರಿಗೆ ಅಮೂಲ್ಯವಾದ ರಾಜಾಶ್ರಯವು ದೊರಕಿತು. ತರ್ಕ, ವ್ಯಾಕರಣ, ಜ್ಯೌತಿಷ, ಧರ್ಮಶಾಸ್ತ್ರ ಆಯುರ್ವೇದ, ಸಂಗೀತ, ಶಿಲ್ಪಾದಿ ವಿಷಯಗಳ ಮೇಲೆ ನಾನಾ ಗ್ರಂಥಗಳು ರಚಿತವಾದವು. ಮುಂದಿನ ಅರಸರೂ ವಿದ್ಯಾಪಕ್ಷಪಾತಿಗಳಾದ್ದರಿಂದ ವಿಜಯನಗರ ಸಾಮ್ರಾಜ್ಯವಿರುವವರೆಗೂ ಸಾರಸ್ವತ ಸೇವೆಯು ಪರಂಪರೆಯಾಗಿ ಮುಂದುವರೆಯಿತು.

ಮಹಾವೀರನಾದ ಬುಕ್ಕರಾಯನು ವಿಸ್ತರಿಸಿದ ಸಾಮ್ರಾಜ್ಯವು ಧರ್ಮ ಸಾಮ್ರಾಜ್ಯವೆಂದು ಹೆಸರುಗಳಿಸಿತ್ತು. ಸಾಮಂತರಾಜರು ಅವನಿಗೆ ವಿಧೇಯರಾಗಿ ಧರ್ಮದಿಂದ ಪ್ರಜೆಗಳನ್ನು ಪಾಲಿಸುತ್ತಿದ್ದರು. ಕೃಷ್ಣಾನದಿಯ ದಕ್ಷಿಣ ಭಾಗದಲ್ಲಿ ಹಿಂದೂ ಧರ್ಮವು ಈತಿ ಬಾಧೆಯಿಲ್ಲದೆ ನೆಮ್ಮದಿಯಿಂದ ಬಾಳಿತು. ವೀರಶೈವ, ಜೈನ, ಬೌದ್ಧಾದಿಗಳು ಹಿಂದೂಗಳೆಂದೇ ಪರಿಗಣಿತರಾಗಿದ್ದರು. ಅವರಲ್ಲಿ ಅಂತಃಕಲಹವಾಗದಂತೆ ಬುಕ್ಕರಾಯನು ರಾಜನೈಪುಣ್ಯದಿಂದ ರಾಜ್ಯವಾಳಿದನು.

ವಿದ್ಯಾರಣ್ಯರ ಅನುಗ್ರಹಕ್ಕೆ ಪಾತ್ರನಾಗಿ ಮಧ್ಯಮ ಪಾಂಡವನಾದ ಅರ್ಜುನನೆಂದು ಖ್ಯಾತಿಗಳಿಸಿದ್ದ ಬುಕ್ಕರಾಯನು ಕ್ರಿ.ಶ. ೧೩೭೭ರಲ್ಲಿ ಸ್ವರ್ಗಸ್ಥನಾದನು. ಅನಂತರ ಆತನ ಹಿರಿಯ ಮಗನು ಪಟ್ಟಾಭಿಷಿಕ್ತನಾಗಿ ಇಮ್ಮಡಿಹರಿಹರರಾಯನೆಂದು ವಿಖ್ಯಾತನಾದನು. ಈತನೂ ತಂದೆಯಂತೆ ಮಹಾಶೂರನೂ, ಧರ್ಮನಿಷ್ಠನೂ ಆಗಿದ್ದನು. ವಿದ್ಯಾರಣ್ಯರು ಸ್ವಲ್ಪ ಕಾಲ ಆತನಿಗೆ ಗುರುಗಳೂ ಸಚಿವರೂ ಆಗಿದ್ದು ಆಮೇಲೆ ತಮ್ಮ ಸ್ಥಾನವನ್ನು ಶ್ರೀಸಾಯಣಾಚಾರ್ಯರಿಗೆ ವಹಿಸಿ ಶೃಂಗೇರಿಗೆ ಹೊರಟುಹೋದರು.

ವಿದ್ಯಾರಣ್ಯರಿಗೆ ಗುರುಗಳೂ ಶೃಂಗೇರಿಪೀಠಾಧೀಶ್ವರರೂ ಆಗಿದ್ದ ಶ್ರೀ ಭಾರತೀತೀರ್ಥರು ಮುಕ್ತರಾದ ಮೇಲೆ, ಶ್ರೀ ವಿದ್ಯಾರಣ್ಯ ಸ್ವಾಮಿಗಳು ಶೃಂಗೇರಿ ಜಗದ್ಗುರು ಪೀಠಾಧ್ಯಕ್ಷರಾದರು. ಅವರ ಪ್ರಿಯಶಿಷ್ಯನಾದ ಇಮ್ಮಡಿ ಹರಿಹರರಾಯನು ಆಗಾಗ ಶೃಂಗೇರಿಗೆ ಬಂದು ಅವರ ಆದೇಶಗಳನ್ನು ಪಾಲಿಸುತ್ತಿದ್ದನು.

### ಶ್ರೀವಿದ್ಯಾರಣ್ಯಮಹಾಸ್ವಾಮಿಗಳ ನಿರ್ಯಾಣ

''ಕ್ರಿ.ಶ. ೧೩೮೬ಕ್ಕೆ ಸರಿಯಾದ ಶಾಲಿವಾಹನ ಶಕ ೧೩೦೯ನೆಯ ಕ್ಷಯ ಸಂವತ್ಸರ ಜ್ಯೇಷ್ಠ ಬಹುಳ ತ್ರಯೋದಶೀ ಶನಿವಾರ, ಪಂಪಾಕ್ಷೇತ್ರದಲ್ಲಿ ಯಾವ ಮಹಾಪುರುಷರು ವಿಜಯನಗರ ಸಾಮ್ರಾಜ್ಯಕ್ಕೆ ಮೂಲಸ್ತಂಭವಾಗಿದ್ದರೋ, ಯಾರ ಸಂನ್ಯಾಸವು ಲೋಕದ ದುಃಖದಲ್ಲಿ ಉಪೇಕ್ಷೆಯಾಗದೆ ಲೋಕಹಿತ ಸಾಧನೆಗೇ ದೀಕ್ಷೆಯಾಯಿತೋ, ಯಾರ ಚರಿತ್ರವು ಆರ್ಯವಂಶೀಯರ ದೇಶಾಭಿಮಾನ ಧರ್ಮಾಭಿಮಾನಗಳಿಗೆ ಆದರ್ಶಪ್ರಾಯವಾಗಿರುವುದೋ, ಆ ಪುಣ್ಯಶ್ಲೋಕರಾದ ವಿದ್ಯಾರಣ್ಯರವರು ತಮ್ಮ ಜೀರ್ಣಕಳೇಬರವನ್ನು ವಿಸರ್ಜಿಸಿ ಪರವಸ್ತುವಿನಲ್ಲಿ ಲೀನರಾದರು. ಅವರ ಸಮಾಧಿಯನ್ನು ಹಂಪೆಯ ಶ್ರೀ ವಿರೂಪಾಕ್ಷ ದೇವಾಲಯದ ಹಿಂಭಾಗದಲ್ಲಿ ಈಗಲೂ ನೋಡಬಹುದು. ಅವರ ಜ್ಞಾಪಕಾರ್ಥವಾಗಿ (ಇಮ್ಮಡಿ) ಹರಿಹರನು ವಿದ್ಯಾರಣ್ಯಪುರವನ್ನು ಕಟ್ಟಿಸಿ, ಅದರ ಒಂದುನೂರು ವೃತ್ತಿಗಳನ್ನು ಶೃಂಗೇರಿಯ ಮಹಾಜನರಿಗೆ ದಾನ ಮಾಡಿದನು.''

''ಹೀಗೆ ಯಾರು ಬಹುಮುಖವಾದ ದೇಶಾಭ್ಯುದಯ ಸಮಾರಂಭಕ್ಕೆ ಪ್ರೇರಕರಾಗಿಯೂ ಪ್ರೋತ್ಸಾಹದಾಯಕರಾಗಿಯೂ ಪ್ರಥಮ ಪುರೋಹಿತ-ರಾಗಿಯೂ ಇದ್ದರೋ ಅವರ ಹೆಸರು ಆರುನೂರು ವರ್ಷಗಳಾದರೂ

ದೇಶೀಯರ ವಾಙ್ಮನಸಗಳಲ್ಲಿ ಪ್ರಕಾಶಿಸುತ್ತಿರುವುದು ಅವರ ಮಹಿಮೆಯ ಸತ್ತ್ವಗುಣವನ್ನು ತೋರಿಸುತ್ತದೆ. ವಿದ್ಯಾರಣ್ಯರ ವಿಷಯದಲ್ಲಿ ಅನೇಕ ಕಥೆಗಳೂ ಉಪಾಖ್ಯಾನಗಳೂ ಹಾಡುಗಳೂ ಗಾದೆಗಳೂ ವಿರಚಿತವಾಗಿ ದೇಶೀಯರ ಉಪಕಾರ ಸ್ಮರಣೆಗೆ ಗುರುತುಗಳಾಗಿ ಈಗಲೂ ಪ್ರಚಾರದಲ್ಲಿವೆ. ಯಾವ ಸಮಾಜವು ತನಗೆ ಕಾಲವಿಪರ್ಯಯದಿಂದುಂಟಾದ ವಿಪತ್ತುಗಳನ್ನು ಪರಿಹರಿಸಲು ತಕ್ಕ ಮಹನೀಯರನ್ನು ತನಗೆ ತಾನೇ ಒದಗಿಸಿಕೊಳ್ಳಬಲ್ಲುದೋ ಆ ಸಮಾಜದಲ್ಲಿ ನೈಸರ್ಗಿಕವಾದ ಸತ್ತ್ವಶಕ್ತಿ ಇರುವುದೆಂಬುದು ಸ್ವತಃ ಸಿದ್ಧವಾಗಿದೆ. ಒಂದಾವೃತ್ತಿ ಶಂಕರಾಚಾರ್ಯರಂತಹ ಅಥವಾ ವಿದ್ಯಾರಣ್ಯರಂತಹ ಸಮಾಜವ್ಯವಸ್ಥಾಪಕರಿಗೆ ಜನ್ಮವಿತ್ತ ದೇಶವು, ಅವಶ್ಯಕತೆ ಬಿದ್ದರೆ ಇನ್ನೊಂದಾವೃತ್ತಿಯೂ ಮತ್ತೊಂದಾವೃತ್ತಿಯೂ ತನಗೆ ತಾನೇ ಒದಗಿಸಿಕೊಳ್ಳಬಲ್ಲದೆಂಬುದರಲ್ಲಿ ಸಂಶಯವಿಲ್ಲ.''

-ಡಾ|| ಡಿ.ವಿ.ಜಿ.ಯವರ 'ಶ್ರೀವಿದ್ಯಾರಣ್ಯರು ಮತ್ತು ಅವರ ಕಾಲ' ಎಂಬ ಗ್ರಂಥದಿಂದ ಉದ್ಧೃತ.

ಕ್ರಿ.ಶ. ೧೪೦೪ರಲ್ಲಿ ಇಮ್ಮಡಿ ಹರಿಹರರಾಯನು ಸ್ವರ್ಗಸ್ಥನಾದನು. ಅವನ ಮಗನಾದ ವಿರೂಪಾಕ್ಷರಾಯನು ಸಿಂಹಾಸನವನ್ನೇರಿದನು. ಆತನು ಶ್ರೀರಂಗ ಕ್ಷೇತ್ರದಲ್ಲಿರುವ ಶ್ರೀ ರಂಗನಾಥ ದೇವಾಲಯಕ್ಕೆ ಭೇಟಿಕೊಟ್ಟು ಅಲ್ಲಿದ್ದ ಶ್ರೀವಿದ್ಯಾರಣ್ಯರ ಪ್ರತಿಮೆಯನ್ನು ಸಂದರ್ಶಿಸಿ, ದೇವಸ್ಥಾನದ ಗೋಡೆಯ ಮೇಲೆ ಒಂದು ಶಾಸನವನ್ನು ಕೆತ್ತಿಸಿದನು. ಅದರಲ್ಲಿರುವ ಈ ವಾಕ್ಯವು ಸ್ಮರಣೀಯವಾದದ್ದು - **''ಅಪರಮಿವ ಶಂಕರಾಚಾರ್ಯಂ, ಪರಮಹಂಸಪರಿವ್ರಾಜಕಾಚಾರ್ಯಂ, ಆಚಾರ್ಯಮಾತ್ಮನೋ ವಿದ್ಯಾರಣ್ಯಯತೀಂದ್ರಂ, ಆಸಾದ್ಯ ಭಕ್ತ್ಯಾ ಸಾಷ್ಟಾಂಗಮವಂದಿಷ್ಟ''**

-ಶ್ರೀವಿದ್ಯಾರಣ್ಯರು ಲೌಕಿಕ ಕ್ಷೇತ್ರದಲ್ಲಿ ದೇಶಸ್ವಾತಂತ್ರ್ಯದ ಪ್ರಥಮ ಹೋರಾಟಗಾರರು. ಅಧ್ಯಾತ್ಮಕ್ಷೇತ್ರದಲ್ಲಿ ದ್ವಿತೀಯ ಶಂಕರಾಚಾರ್ಯರು.

**ಪಂಚದಶೀಗ್ರಂಥದ ಕರ್ತೃತ್ವ**

ಶ್ರೀವಿದ್ಯಾರಣ್ಯಮುನಿಗಳು ಪಂಚದಶಿಯನ್ನು ರಚಿಸಿದ್ದಾರೆಂಬುದು ಸುಪ್ರಸಿದ್ಧವಾಗಿದೆ. ಆದರೆ ಈ ಗ್ರಂಥವು ಏಕಕರ್ತೃಕವಲ್ಲವೆಂದೂ ಶ್ರೀವಿದ್ಯಾರಣ್ಯರೂ ಅವರ ಗುರುಗಳಾದ ಶ್ರೀ ಭಾರತೀತೀರ್ಥರೂ ಸೇರಿ ಇದನ್ನು ರಚಿಸಿದ್ದಾರೆಂದೂ ಆದ್ದರಿಂದ ಇದು ಉಭಯಕರ್ತೃಕವೆಂದೂ

ಒಂದು ಪ್ರವಾದವು ಇತಿಹಾಸ ಸಂಶೋಧಕರಲ್ಲಿ ಬೇರೂರಿಕೊಂಡಿದೆ. ಈ ನಿರ್ಣಯಕ್ಕೆ ಬರಲು ಅವರು ಹೇಳುವ ಕಾರಣಗಳಿವು -

೧. ಪಂಚದಶೀ ವ್ಯಾಖ್ಯಾನಕಾರನಾದ ರಾಮಕೃಷ್ಣಪಂಡಿತನು ವ್ಯಾಖ್ಯಾನದ ಆರಂಭದಲ್ಲಿ -

**ನತ್ವಾ ಶ್ರೀಭಾರತೀತೀರ್ಥವಿದ್ಯಾರಣ್ಯಮುನೀಶ್ವರೌ ।**

**ಪ್ರತ್ಯಕ್ ತತ್ತ್ವವಿವೇಕಸ್ಯ ಕ್ರಿಯತೇ ಪದದೀಪಿಕಾ ॥**

ಎಂದು ಇಬ್ಬರು ಗುರುಗಳನ್ನು ವಂದಿಸಿದ್ದಾನೆ. ಹೀಗೆಯೇ ಉಳಿದ ಎಲ್ಲ ಪ್ರಕರಣಗಳ ಆದಿಯಲ್ಲಿಯೂ ಬರೆದು, ಕಡೆಯಲ್ಲಿ ''**ಶ್ರೀಮತ್ ಪರಮಹಂಸ ಪರಿವ್ರಾಜಕಾಚಾರ್ಯ ಶ್ರೀಭಾರತೀತೀರ್ಥವಿದ್ಯಾರಣ್ಯ ಕಿಂಕರೇಣ ಶ್ರೀ ರಾಮಕೃಷ್ಣಾಖ್ಯೇನ ವಿದುಷಾ ವಿರಚಿತಾ ...**'' ಎಂದು ಸಮಾಪ್ತಿವಾಕ್ಯವನ್ನು ಬರೆಯುತ್ತಾನೆ. ಈ ಇಬ್ಬರು ಗುರುಗಳನ್ನೂ ಸ್ಮರಿಸಿರುವುದರಿಂದ ಈ ಗ್ರಂಥವು ಉಭಯಕರ್ತೃಕವೆಂದು ಸೂಚಿತವಾಗುತ್ತದೆ.

೨. ದೀಪಪಂಚಕದಲ್ಲಿರುವ ತೃಪ್ತಿದೀಪದ ಆದಿಯಲ್ಲಿ ರಾಮಕೃಷ್ಣ ಪಂಡಿತನು ''**ತೃಪ್ತಿದೀಪಾಖ್ಯಂ ಪ್ರಕರಣಮಾರಭಮಾಣಃ ಶ್ರೀ ಭಾರತೀತೀರ್ಥಗುರುಃ ತಸ್ಯ ಶ್ರುತಿವ್ಯಾಖ್ಯಾನರೂಪತ್ವಾತ್ ತದ್ವ್ಯಾ-ಖ್ಯೇಯಾಂ ಶ್ರುತಿಮಾದೌ ಪಠತಿ**'' ಎಂದು ತನ್ನ ಅವತರಣಿಕೆಯನ್ನು ರಚಿಸಿದ್ದಾನೆ. ಇಲ್ಲಿ ಭಾರತೀತೀರ್ಥರ ಕರ್ತೃತ್ವವು ಸ್ಪಷ್ಟವಾಗಿದೆ. ಬಹುಶಃ ಈ ದೀಪಪಂಚಕವನ್ನು ಅವರೇ ರಚಿಸಿರಬೇಕು. ಯಾವುದೋ ಕಾರಣದಿಂದ ಭಾರತೀತೀರ್ಥರು ಅಲ್ಲಿಗೆ ನಿಲ್ಲಿಸಿದ್ದಾರೆ. ಶಿಷ್ಯರಾದ ಶ್ರೀ ವಿದ್ಯಾರಣ್ಯರು ಪ್ರತ್ಯಕ್‌ತತ್ತ್ವವಿವೇಕ ಪಂಚಕ, ಆನಂದ ಪಂಚಕಗಳೆರಡನ್ನು ಬರೆದು ಪಂಚದಶಿಯನ್ನು ಪೂರ್ತಿಮಾಡಿದ್ದಾರೆ. ಒಬ್ಬ ಘನವಿದ್ವಾಂಸರ ಬಳಿ ಪರಂಪರೆಯಿಂದ ಬಂದ ಹಸ್ತಪ್ರತಿಯಲ್ಲಿ ದೀಪಪಂಚಕವೇ ಗ್ರಂಥದ ಆದಿಯಲ್ಲಿದೆ. ಈಗ ದೊರೆಯುವ ಪಂಚದಶೀ ಗ್ರಂಥಗಳಲ್ಲಿ ದೀಪಪಂಚಕವು ಮಧ್ಯೆದಲ್ಲಿದೆ. ಅದು ಆದಿಯಲ್ಲಿರುವುದೇ ಸೂಕ್ತ- ಎಂದು ಕೆಲವು ವಿದ್ವಾಂಸರು ಹೇಳಿದ್ದಾರೆ. ತೃಪ್ತಿದೀಪವೊಂದನ್ನೇ ಭಾರತೀತೀರ್ಥರು ಬರೆದಿದ್ದಾರೆಂದೂ ಕೆಲವರ ಅಭಿಪ್ರಾಯ.

ಇದಿಷ್ಟು ಸಂಶೋಧಕರ ಅಭಿಪ್ರಾಯ. ಊಹೆಗೆ ನಿಲುಗಡೆ ಇಲ್ಲವಾದ್ದರಿಂದ, ಪಂಚದಶಿಯನ್ನು ಪೂರ್ತಿಯಾಗಿ ಶ್ರೀವಿದ್ಯಾರಣ್ಯರೊಬ್ಬರೇ ರಚಿಸಿದ್ದಾರೆಂದು ನನ್ನ ಅಭಿಪ್ರಾಯವಿದೆ.

ರಾಮಕೃಷ್ಣ ಪಂಡಿತನು ತನಗೆ ಗುರುಗಳಾದ ಇಬ್ಬರನ್ನೂ ಸ್ಮರಿಸಿದ್ದಾನೆ. ಈ ಸ್ಮರಣೆಗೂ ಮೂಲಗ್ರಂಥದ ಕರ್ತೃತ್ವಕ್ಕೂ ಯಾವ ಸಂಬಂಧವಿದೆ? ಮಾಘಕಾವ್ಯಕ್ಕೆ ಅವನು ವ್ಯಾಖ್ಯಾನವನ್ನು ಬರೆದಿದ್ದರೂ ಇವರಿಬ್ಬರನ್ನು ಸ್ಮರಿಸಬಹುದು. ಆದ್ದರಿಂದ ಮೊದಲನೆಯ ಕಾರಣವು ಜಳ್ಳು. ಗ್ರಂಥದ ಕಡೆಯಲ್ಲಿರುವ ಪುಷ್ಪಿಕೆಗಳನ್ನು ಗ್ರಂಥಕರ್ತರು ಬರೆಯುವುದಿಲ್ಲ. ಹಸ್ತಪ್ರತಿಗಳನ್ನು ಬರೆದವರೋ ವ್ಯಾಖ್ಯಾನಕಾರರೋ ಸಂಪಾದಕರೋ ಅದನ್ನು ಬರೆದಿರುತ್ತಾರೆ. ಈ ಪುಷ್ಪಿಕೆಗಳೂ ಒಂದೇ ಬಗೆಯಲ್ಲಿಲ್ಲ. ಕೆಲವು ಪುಷ್ಪಿಕೆಗಳಲ್ಲಿ **ಶ್ರೀಭಾರತೀತೀರ್ಥವಿದ್ಯಾರಣ್ಯ ವಿರಚಿತಾಯಾಮ್** ಎಂದೂ, ಕೆಲವೆಡೆ **ಶ್ರೀ ವಿದ್ಯಾರಣ್ಯಮುನಿವಿರಚಿತಾಯಾಮ್** ಎಂದೂ ಇದೆ. ಕೆಲವು ಪುಷ್ಪಿಕೆಗಳಲ್ಲಿ ಯಾರ ಹೆಸರೂ ಇಲ್ಲ. ' ಇತಿ ಪಂಚದಶ್ಯಾಂ' ಎಂದಿಷ್ಟೇ ಇದೆ. ದೀಪಪಂಚಕವನ್ನು ಶ್ರೀಭಾರತೀತೀರ್ಥರು ಬರೆದಿದ್ದಾರೆಂದೂ ಉಳಿದ ಎರಡು ಪಂಚಕಗಳನ್ನೂ ಶ್ರೀವಿದ್ಯಾರಣ್ಯರು ಬರೆದಿದ್ದಾರೆಂದೂ ಈ ವಾದಿಗಳ ಹೇಳಿಕೆ ಇದೆ. ನನ್ನ ಬಳಿ ಇರುವ ನಿರ್ಣಯಸಾಗರದ ಪ್ರತಿಯಲ್ಲಿ ದ್ವೈತವಿವೇಕ, ಮಹಾವಾಕ್ಯವಿವೇಕಗಳೆರಡರ ಕಡೆಯಲ್ಲಿಯೂ "**ಶ್ರೀಭಾರತೀತೀರ್ಥವಿದ್ಯಾರಣ್ಯಮುನಿವರ್ಯಕೃತ**" ಎಂದು ಪುಷ್ಪಿಕೆಗಳಿವೆ. ದೀಪಪಂಚಕದ ಐದು ಪ್ರಕರಣಗಳ ಕಡೆಯಲ್ಲಿಯೂ ವಿಶೇಷತಃ ತೃಪ್ತಿದೀಪದ ಕೊನೆಯಲ್ಲಿಯೂ ವಿದ್ಯಾರಣ್ಯರ ಹೆಸರು ಮಾತ್ರ ಇದೆ. ಭಾರತೀತೀರ್ಥರ ಹೆಸರೇ ಇಲ್ಲ. ಆನಂದ ಪಂಚಕದ ಯೋಗಾನಂದ ಪ್ರಕರಣದ ಕಡೆಯಲ್ಲಿ ಮಾತ್ರ ಶ್ರೀ ಭಾರತೀ ತೀರ್ಥವಿದ್ಯಾರಣ್ಯ - ಎಂದು ಈರ್ವರ ಹೆಸರುಗಳೂ ಇವೆ. ಹೀಗೆ ಅನ್ವಯ ವ್ಯತಿರೇಕವ್ಯಭಿಚಾರ ದೋಷಗಳೆರಡೂ ಇರುವುದರಿಂದ ಪುಷ್ಪಿಕೆಯು ಉಭಯ ಕರ್ತೃಕವೆಂಬುದಕ್ಕೆ ಯಾವ ರೀತಿಯಲ್ಲಿಯೂ ಸಾಧಕವಲ್ಲ.

ದೀಪಪಂಚಕವನ್ನು ಭಾರತೀತೀರ್ಥರು ರಚಿಸಿರುವದಾದರೆ ವ್ಯಾಖ್ಯಾನಕಾರನಾದ ರಾಮಕೃಷ್ಣ ಪಂಡಿತನು ಮೊದಲನೆಯ ಚಿತ್ರದೀಪದಲ್ಲಿ ಭಾರತೀತೀರ್ಥರ ಹೆಸರನ್ನು ಹೇಳದೆ ಎರಡನೆಯ ತೃಪ್ತಿದೀಪದ ಆದಿಯಲ್ಲಿ

ಅವರ ಹೆಸರನ್ನು ಹೇಳಲು ಕಾರಣವೇನು? ವಸ್ತುಸ್ಥಿತಿ ಏನೆಂದರೆ, ಕಾಲಾಮುಖ ಸಂಪ್ರದಾಯದ ಶೈವನಾದ ಕ್ರಿಯಾ ಶಕ್ತಿ ಎಂಬ ವಿದ್ವಾಂಸನು ಎರಡನೆಯ ಹರಿಹರರಾಯನಿಗೆ ಗುರುವಾಗಿದ್ದನು. ಆತನಿಗೆ ವಿದ್ಯಾರಣ್ಯ ಎಂಬ ಬಿರುದಿತ್ತು. ಕ್ರಿಯಾಶಕ್ತಿ ವಿದ್ಯಾರಣ್ಯನೆಂದು ಆತನು ಖ್ಯಾತನಾಗಿದ್ದನು. ಪಂಚದಶಿಯು ವಿದ್ಯಾರಣ್ಯ ವಿರಚಿತವೆಂದರೆ, ಕ್ರಿಯಾಶಕ್ತಿ ವಿದ್ಯಾರಣ್ಯ ವಿರಚಿತವೆಂದು ಮುಂದಿನ ಜನತೆ ತಿಳಿಯಬಹುದು. ಆದ್ದರಿಂದ ಆತನನ್ನು ವ್ಯಾವರ್ತಿಸುವುದಕ್ಕಾಗಿ **'ಭಾರತೀತೀರ್ಥವಿದ್ಯಾರಣ್ಯವಿರಚಿತಾಯಾಂ ಪಂಚದಶ್ಯಾಮ್'** ಎಂಬುದಾಗಿ ಶ್ರೀ ಭಾರತೀತೀರ್ಥ ಶಬ್ದವನ್ನು ವಿದ್ಯಾರಣ್ಯರಿಗೆ ವಿಶೇಷಣವನ್ನಾಗಿ ವ್ಯಾಖ್ಯಾನಕಾರನು ಅಲ್ಲಲ್ಲಿ ಪುಷ್ಪಿಕೆಗಳಲ್ಲಿ ಸೇರಿಸಿದ್ದಾನೆ. ತೃಪ್ತಿದೀಪದ ಆದಿಯಲ್ಲಿ ವ್ಯಾಖ್ಯಾನಕಾರನು 'ಭಾರತೀತೀರ್ಥ ವಿದ್ಯಾರಣ್ಯಗುರುಃ, ಎಂದೇ ಬರೆದಿರಬೇಕು. ಓಲೆಗರಿಯಲ್ಲಿ ಲಿಪಿಕಾರರ ಪ್ರಮಾದದಿಂದ 'ವಿದ್ಯಾರಣ್ಯ' ಶಬ್ದವು ಬಿಟ್ಟುಹೋಗಿದೆ. ಓಲೆಗರಿ ಪ್ರತಿಗಳಲ್ಲಿಯೂ ಶಿಲಾಶಾಸನಗಳಲ್ಲಿಯೂ ಸಹ ಇಂತಹ ಪ್ರಮಾದಗಳು ವಿಪುಲವಾಗಿವೆಯೆಂಬುದು ಸಂಶೋಧಕರಿಗೆ . ತಿಳಿದೇ ಇದೆ. **ಶ್ರೀ ಭಾರತೀತೀರ್ಥ ವಿದ್ಯಾರಣ್ಯ ಗುರುಃ** ಎಂದರೆ 'ಶ್ರೀಭಾರತೀತೀರ್ಥರ ಶಿಷ್ಯ ವಿದ್ಯಾರಣ್ಯ' ಎಂದು ಅರ್ಥ. ರಘುರಾಮ, ಪರಶುರಾಮ, ಬಲರಾಮ - ಎಂಬಲ್ಲಿ ರಘು, ಪರಶು, ಬಲ ಶಬ್ದಗಳು ಹೀಗೆಯೇ ಸಮಾನ ನಾಮಧೇಯದವರನ್ನು ವ್ಯಾವರ್ತಿಸುವ ವಿಶೇಷಣಗಳು. ಕ್ರಿಯಾಶಕ್ತಿಯು ವಿದ್ವಾಂಸನೂ ಪ್ರಭಾವಶಾಲಿಯೂ ಆಗಿದ್ದನು. ಕ್ರಿಯಾಶಕ್ತಿ ವಿದ್ಯಾರಣ್ಯ ಎಂಬವರೇ ವಿಜಯನಗರ ಸಾಮ್ರಾಜ್ಯವನ್ನು ಸ್ಥಾಪಿಸಿದವರೆಂದೂ, ಮಾಧವ ವಿದ್ಯಾರಣ್ಯರಲ್ಲವೆಂದೂ ಒಂದು ವಾದವೇ ಇದೆಯೆಂಬುದನ್ನು ಗಮನಿಸಬೇಕು. ವ್ಯಾಖ್ಯಾನಕಾರನಾದ ರಾಮಕೃಷ್ಣ ಪಂಡಿತನ ಸಮಯದಲ್ಲಿ ಕ್ರಿಯಾಶಕ್ತಿಯ ಪ್ರಾಬಲ್ಯವಿತ್ತು. ಆದ್ದರಿಂದ ಆತನನ್ನು ವ್ಯಾವರ್ತಿಸುವುದಕ್ಕಾಗಿಯೇ ಶ್ರೀವಿದ್ಯಾರಣ್ಯಸ್ವಾಮಿಗಳ ಶಿಷ್ಯನು ಉದ್ದೇಶಪೂರ್ವಕವಾಗಿ ಭಾರತೀತೀರ್ಥ ಶಬ್ದವನ್ನು ತನ್ನ ಗುರುಗಳ ಹೆಸರಿನ ಹಿಂದೆ ಸೇರಿಸಿದ್ದಾನೆಂಬುದರಲ್ಲಿ ಸಂದೇಹವಿಲ್ಲ.

ಒಂದು ಗ್ರಂಥವು ಯಾವುದೋ ಕಾರಣದಿಂದ ಅಪೂರ್ಣವಾದಾಗ ಇನ್ನೊಬ್ಬ ವಿದ್ವಾಂಸನು ಅವಶಿಷ್ಟವನ್ನು ಬರೆದು ಪೂರ್ಣಮಾಡುವುದುಂಟು.

ಅಷ್ಟಾಧ್ಯಾಯಿಗೆ ಜಯಾದಿತ್ಯನು ಕಾಶಿಕಾವೃತ್ತಿಯನ್ನು ಬರೆದಿದ್ದಾನೆ. ಐದು ಅಧ್ಯಾಯಗಳಿಗೆ ಅದು ನಿಂತು ಹೋಯಿತು. ಉಳಿದ ಮೂರು ಅಧ್ಯಾಯಗಳಿಗೆ ವಾಮನನು ವೃತ್ತಿಯನ್ನು ಬರೆದು ಪೂರ್ಣಮಾಡಿದ್ದಾನೆ. ಬಾಣಭಟ್ಟನ ಕಾದಂಬರೀ ಗ್ರಂಥವನ್ನು ಅವನ ಮಗ ಭೂಷಣಭಟ್ಟನು ಪೂರ್ಣಗೊಳಿಸಿದ್ದಾನೆ. ಭೋಜರಾಜನ ರಾಮಾಯಣ ಚಂಪೂವಿನ ಯುದ್ಧಕಾಂಡವನ್ನು ಲಕ್ಷ್ಮಣ ಸೂರಿಯು ಬರೆದಿದ್ದಾನೆ. ಒಂದು ಗ್ರಂಥದ ನಡುವೆ ಇನ್ನೊಬ್ಬರು ಒಂದು ಅಧ್ಯಾಯವನ್ನು ಬರೆದು ತೂರಿಸುತ್ತಾರೆಂಬುದು ಅಸಂಗತ. ಶ್ರೀ ಭಾರತೀತೀರ್ಥರು ಪಂಚದಶೀ ಗ್ರಂಥವನ್ನು ಬರೆಯಲು ಸಹಾಯ ಮಾಡಿದ್ದರೆ, ಅವರ ಸಾಕ್ಷಾತ್ ಶಿಷ್ಯರಾದ ಶ್ರೀವಿದ್ಯಾರಣ್ಯರು ತಮ್ಮ ಗುರುಗಳನ್ನು ಸ್ಮರಿಸದೇ ಇರುತ್ತಿದ್ದರೆ?

ಇನ್ನೊಂದು ವಿಷಯವಿಲ್ಲಿ ಗಮನಾರ್ಹವಾದದ್ದು. ಆನಂದಪಂಚಕವನ್ನು ಶ್ರೀ ವಿದ್ಯಾರಣ್ಯರು ರಚಿಸಿದ್ದಾರೆಂಬುದರಲ್ಲಿ ಯಾವ ವಿವಾದವೂ ಇಲ್ಲ. ೧೫ನೆಯ ವಿದ್ಯಾನಂದ ಪ್ರಕರಣದಲ್ಲಿ ಶ್ರೀವಿದ್ಯಾರಣ್ಯರು-

**ಉಭಯಂ ತೃಪ್ತಿದೀಪೇ ಹಿ ಸಮ್ಯಗಸ್ಮಾಭಿರೀರಿತಂ ।**
**ತ ಏವಾತ್ರಾನುಸಂಧೇಯಾಃ ಶ್ಲೋಕಾ ಬುದ್ಧಿವಿಶುದ್ಧಯೇ॥೩೮**

ಎಂದು ಹೇಳಿ ತೃಪ್ತಿದೀಪದಲ್ಲಿರುವ ೨೫ ಶ್ಲೋಕಗಳನ್ನು ಪುನಃ ಇಲ್ಲಿ ಬರೆದಿದ್ದಾರೆ. ಈ ಶ್ಲೋಕವು ತೃಪ್ತಿದೀಪವನ್ನು ವಿದ್ಯಾರಣ್ಯರೇ ರಚಿಸಿದ್ದಾರೆಂಬುದನ್ನು ಸಾರುತ್ತದೆ.

ಈ ಗ್ರಂಥದಲ್ಲಿ ಮೂರು ಪಂಚಕಗಳಿವೆ. ಇವು ಕ್ರಮವಾಗಿ **ಸತ್, ಚಿತ್, ಆನಂದ**ಗಳ ಸ್ವರೂಪವನ್ನು ವಿವೇಚಿಸುತ್ತವೆ. ತತ್ತ್ವವಿವೇಕಪ್ರಕರಣವು ಸತ್ ಎಂಬುದನ್ನು ಅಸತ್ತಿನಿಂದ ಬೇರ್ಪಡಿಸಿ ವಿವೇಚಿಸಿದೆ. ಆದ್ದರಿಂದ ತತ್ತ್ವವಿವೇಕ ಪ್ರಕರಣವೇ ಗ್ರಂಥಾದಿಯಲ್ಲಿರುವುದು ಯುಕ್ತವಾದದ್ದು. ಒಟ್ಟಿನಲ್ಲಿ ಶ್ರೀವಿದ್ಯಾರಣ್ಯಸ್ವಾಮಿಗಳೊಬ್ಬರೇ ಪಂದಚಶಿಯನ್ನು ಬರೆದಿದ್ದಾರೆಂಬುದು ಸುನಿಶ್ಚಿತ.

ಪಂಚದಶೀಗ್ರಂಥಕ್ಕೆ 'ಬ್ರಹ್ಮಾನಂದ' ಎಂಬ ಇನ್ನೊಂದು ಹೆಸರಿದೆಯೆಂದು ಕೆಲವರ ಹೇಳಿಕೆ ಇದೆ. ಅದೂ ಯುಕ್ತವಾಗಿ ತೋರುವುದಿಲ್ಲ. ಕಡೆಯ ಆನಂದ ಪಂಚಕದ ಆದಿಯಲ್ಲಿ **'ಬ್ರಹ್ಮಾನಂದಂ ಪ್ರವಕ್ಷ್ಯಾಮಿ...'** ಎಂಬ ಶ್ಲೋಕವಿದೆ. ಆದ್ದರಿಂದ ಮೂರನೆಯ ಆನಂದಪಂಚಕವನ್ನು ಬ್ರಹ್ಮಾನಂದಪಂಚಕ ಎಂದು

ಕರೆಯುವುದು ಯುಕ್ತವಾಗಿದೆ. ಪಂಚದಶಿಗೆ ರಾಮಕೃಷ್ಣ ಪಂಡಿತನಲ್ಲದೆ ಸದಾನಂದ, ನಿಶ್ಚಲದಾಸಸ್ವಾಮಿ - ಎಂಬ ವಿದ್ವಾಂಸರೂ ವ್ಯಾಖ್ಯಾನಗಳನ್ನು ಬರೆದಿದ್ದಾರಂತೆ. ಅವನ್ನು ನಾನು ನೋಡಿಲ್ಲ.

**ಗ್ರಂಥಸ್ವರೂಪ**

ಪಂಚದಶೀ ಎಂಬ ಹೆಸರೇ ತಿಳಿಸುವಂತೆ ಇದರಲ್ಲಿ ಹದಿನೈದು ಪ್ರಕರಣಗಳಿವೆ. ಇವನ್ನು ವಿವೇಕಪಂಚಕ, ದೀಪಪಂಚಕ, ಆನಂದ ಪಂಚಕ - ಎಂದು ಮೂರು ವರ್ಗಗಳನ್ನಾಗಿ ವಿಂಗಡಿಸಬಹುದು. ಈ ಮೂರು ಪಂಚಕಗಳೂ ಪ್ರತ್ಯೇಕವಾಗಿ ಒಂದೊಂದು ಗ್ರಂಥವೆಂದು ಗ್ರಂಥಕರ್ತರು ಭಾವಿಸಿದಂತೆ ಕಾಣುತ್ತದೆ.

**೧. ವಿವೇಕ ಪಂಚಕ**

೧. ತತ್ತ್ವ ವಿವೇಕ ಪ್ರಕರಣ

೨. ಪಂಚಭೂತ ವಿವೇಕ ಪ್ರಕರಣ

೩. ಪಂಚಕೋಶ ವಿವೇಕ ಪ್ರಕರಣ

೪. ದ್ವೈತ ವಿವೇಕ ಪ್ರಕರಣ

೫. ಮಹಾವಾಕ್ಯ ವಿವೇಕ ಪ್ರಕರಣ

**೨. ದೀಪಪಂಚಕ**

೬. ಚಿತ್ರದೀಪ ಪ್ರಕರಣ

೭. ತೃಪ್ತಿದೀಪ ಪ್ರಕರಣ

೮. ಕೂಟಸ್ಥದೀಪ ಪ್ರಕರಣ

೯. ಧ್ಯಾನದೀಪ ಪ್ರಕರಣ

೧೦. ನಾಟಕ ದೀಪ ಪ್ರಕರಣ

**೩. ಆನಂದ ಪಂಚಕ**

೧೧. ಯೋಗಾನಂದ ಪ್ರಕರಣ

೧೨. ಆತ್ಮಾನಂದ ಪ್ರಕರಣ

೧೩. ಅದ್ವೈತಾನಂದ ಪ್ರಕರಣ

೧೪. ವಿದ್ಯಾನಂದ ಪ್ರಕರಣ

೧೫. ವಿಷಯಾನಂದ ಪ್ರಕರಣ

**ಒಟ್ಟು ಶ್ಲೋಕಗಳ ಸಂಖ್ಯೆ 1570**

ಪಂಚದಶೀ ಶಬ್ದದ ವ್ಯುತ್ಪತ್ತಿ ಹೇಗೆ? ತ್ರಿಶತೀ, ಸಪ್ತಶತೀ ಶಬ್ದಗಳಂತೆ ವ್ಯುತ್ಪತ್ತಿಯನ್ನು ಹೇಳಲಾಗುವುದಿಲ್ಲ. ಅಲ್ಲಿ ಸಮಾಹಾರ ದ್ವಿಗುವಿನ ಮೇಲೆ **'ದ್ವಿಗೋಃ'** ಎಂಬ ಸೂತ್ರದಿಂದ **ಙೀಪ್** ಪ್ರತ್ಯಯ ಬಂದಿದೆ. ಮುನ್ನೂರು, ಏಳುನೂರು ಎಂದು ಕ್ರಮವಾಗಿ ಆ ಶಬ್ದಗಳ ಅರ್ಥ. ಹಾಗೆ ಪಂಚದಶೀ ಶಬ್ದದ ವ್ಯುತ್ಪತ್ತಿಯನ್ನು ಹೇಳಿದರೆ ಐವತ್ತು ಎಂದು ಅರ್ಥವಾಗುತ್ತದೆ. ಆದ್ದರಿಂದ ಕೆಳಗೆ ಕಂಡಂತೆ ಎರಡುವಿಧದಲ್ಲಿ ನಿರ್ವಚನವನ್ನು ಹೇಳಬಹುದು.

೧. **ಪಂಚಾಧಿಕಾಃ ದಶ = ಪಂಚದಶ.** ಮಧ್ಯಮ ಪದಲೋಪೀ ಕರ್ಮಧಾರಯ ಸಮಾಸ. ಹದಿನೈದು ಎಂದರ್ಥ. ಅಥವಾ **ಪಂಚ ಚ ದಶ ಚ ಪಂಚದಶ** = ಎಂದು ದ್ವಂದ್ವಸಮಾಸ. **ಪಂಚದಶ (ಪ್ರಕರಣಾನಿ) ಅಸ್ಯಾಂ ಕೃತೌ ಸಂತೀತಿ ಪಂಚದಶೀ.** ಮೊದಲು **'ಪಂಚದಶನ್'** ಶಬ್ದದ ಮೇಲೆ **'ಅರ್ಶ ಆದಿಭ್ಯೋಽಚ್'** ಎಂಬ ಸೂತ್ರದಿಂದ **ಅಚ್** ಪ್ರತ್ಯಯ ಬರುತ್ತದೆ. 'ನಸ್ತದ್ಧಿತೇ' ಎಂಬ ಸೂತ್ರದಿಂದ ಟಿಲೋಪ (ಅನ್ ಎಂಬುದಕ್ಕೆ ಲೋಪ). **ಅಚ್** ಪ್ರತ್ಯಯವು ಸೇರಿ **'ಪಂಚದಶ'** ಎಂದು ಅಕಾರಾಂತ ಶಬ್ದವಾಗುತ್ತದೆ. ಆಮೇಲೆ **'ಷಿದ್‌ಗೌರಾದಿಭ್ಯಶ್ಚ'** ಎಂಬ ಸೂತ್ರದಿಂದ **ಙೀಷ್** ಎಂಬ ಸ್ತ್ರೀಪ್ರತ್ಯಯವು ಬಂದು **ಪಂಚದಶೀ** ಎಂಬ ಶಬ್ದವು ಸಿದ್ಧವಾಗುತ್ತದೆ. ಅರ್ಶಆದಿ ಗಣದಲ್ಲಾಗಲಿ ಗೌರಾದಿಗಣದಲ್ಲಾಗಲಿ ಪಂಚದಶ ಶಬ್ದವಿಲ್ಲ. ಅವೆರಡೂ ಆಕೃತಿಗಣ ಗಳಾದ್ದರಿಂದ ಈ ಶಬ್ದವನ್ನು ಸೇರಿಸಿಕೊಳ್ಳಬೇಕು.

೨. ಹಿಂದಿನ ನಿರ್ವಚನದಲ್ಲಿ ಹೇಳಿದಂತೆ ಮಧ್ಯಮಪದಲೋಪೀ ಕರ್ಮಧಾರಯ ಅಥವಾ ದ್ವಂದ್ವ ಸಮಾಸ. ಅನಂತರ **ಪಂಚದಶಾನಾಂ ಪೂರಣೀ ಪಂಚದಶೀ** ಎಂದು ವ್ಯುತ್ಪತ್ತಿ. **'ತಸ್ಯ ಪೂರಣೇ ಡಟ್'** ಎಂಬ ಸೂತ್ರದಿಂದ **ಡಟ್** ಪ್ರತ್ಯಯ. ಹಿಂದೆ ಹೇಳಿದಂತೆ **'ಅನ್'** ಎಂಬುದಕ್ಕೆ ಲೋಪ . ಪ್ರತ್ಯಯವು **ಟಿತ್** ಆದ್ದರಿಂದ **'ಟಿಡ್ಢಾಣಞ್...'** ಎಂಬ ಸೂತ್ರದಿಂದ **ಙೀಪ್** ಎಂಬ ಪ್ರತ್ಯಯ. **'ಪಂಚದಶೀ'** ಎಂದು ರೂಪ. ಏಕಾದಶೀ, ದ್ವಾದಶೀ ಮುಂತಾದ ಶಬ್ದಗಳಲ್ಲಿಯೂ ಹೀಗೆಯೇ ವ್ಯುತ್ಪತ್ತಿ.

ಆದರೆ ಇಲ್ಲಿ ಪಂಚದಶೀ ಶಬ್ದಕ್ಕೆ ಗ್ರಂಥದ ಹದಿನೈದನೆಯ ಪ್ರಕರಣವೆಂದು ವಾಚ್ಯಾರ್ಥ. ಅದು ಹದಿನೈದನೆಯದಾಗುವುದಕ್ಕೆ ಉಳಿದ ಹದಿನಾಲ್ಕು ಪ್ರಕರಣಗಳೂ ಕಾರಣವಾದ್ದರಿಂದಲೂ **'ಸಮೂಹ ಸಮೂಹಿನೋರಭೇದಃ'** ಎಂಬ ಪ್ರಸಿದ್ಧ ನ್ಯಾಯವಿರುವುದರಿಂದಲೂ ಈ ಹದಿನೈದನೆಯ ಪ್ರಕರಣವು ಹದಿನೈದು ಪ್ರಕರಣಗಳ ಸಮೂಹವನ್ನು ಬೋಧಿಸುತ್ತದೆ. ಈ ಪ್ರಕರಣ ಸಮೂಹವೇ ಪಂಚದಶೀ ಗ್ರಂಥ. ಸಮೂಹಿ ಎಂದರೆ ಅವಯವಿ. **'ಅವಯವಾವಯವಿನೋರಭೇದಃ'** ಎಂಬ ನ್ಯಾಯಕ್ಕೂ ಇದೇ ಅರ್ಥ.

ಈ ಬಗೆಯ ವ್ಯವಹಾರವು ಲೋಕಪ್ರಸಿದ್ಧವಾದದ್ದು. ಹಿಮಾಲಯ ಪರ್ವತದ ಏಕದೇಶವನ್ನು ತೋರಿಸಿ 'ಅದು ಹಿಮಾಲಯ ಪರ್ವತ' ಎನ್ನುವುದು, ಚೈತ್ರನ ಕಾಲ್ಬೆರಳಿಗೆ ಗಾಯವಾದಾಗ ಚೈತ್ರನಿಗೆ ಪೆಟ್ಟಾಗಿದೆ ಎನ್ನುವುದು ಲೋಕಪ್ರಸಿದ್ಧವಾದದ್ದು. ಋಗ್ವೇದದ ಅಂಗವಾದ ಒಂದು ಸೂಕ್ತವು ಸೂಕ್ತ ಸಮೂಹವಾದ ಋಗ್ವೇದವೆನಿಸಿಕೊಳ್ಳುತ್ತದೆ. **'ಪ್ರಾಗ್ದೀವ್ಯತೋಽಣ್'** ಎಂಬ ಸೂತ್ರದಲ್ಲಿರುವ **'ದೀವ್ಯತ್'** ಶಬ್ದದಿಂದ **''ತೇನ ದೀವ್ಯತಿ ಖನತಿ ಜಯತಿ ಜಿತಂ''** ಎಂಬ ಸೂತ್ರವು ಗೃಹೀತವಾಗುತ್ತದೆ. ಪ್ರಾಯೇಣ ಗ್ರಂಥ ನಾಮಗಳು ಲಾಕ್ಷಣಿಕವಾದವು. ಉದಾಹರಣೆಗೆ, ಸಿದ್ಧಾಂತ ಕೌಮುದೀ, ತತ್ತ್ವಕೌಮುದೀ, ರತ್ನಪ್ರಭಾ, ನ್ಯಾಯ ಮಂಜರೀ, ಕುಸುಮಾಂಜಲಿ, ಕಾದಂಬರೀ, ವಾಸವದತ್ತಾ- ಮುಂತಾದ ಗ್ರಂಥನಾಮಗಳು. 'ಶಾರೀರಕಂ ಭಾಷ್ಯಂ' ಎಂಬ ಪ್ರಯೋಗ ಹೇಗೆ? **ಶರೀರೇ ಭವಃ ಶಾರೀರಃ ಜೀವಾತ್ಮಾ. ಸ ಏವ ಶಾರೀರಕಃ. ತಮಧಿಕೃತ್ಯ ಕೃತೋ ಗ್ರಂಥಃ ಶಾರೀರಕಂ ಭಾಷ್ಯಮ್.**

ಮೊದಲನೆಯ ನಿರ್ವಚನದಲ್ಲಿ **'ಪಂಚದಶ'** ಶಬ್ದವನ್ನು ಅರ್ಶ ಆದಿ ಮತ್ತು ಗೌರಾದಿ - ಈ ಎರಡುಗಣಗಳಲ್ಲಿ ಹೊಸದಾಗಿ ಸೇರಿಸಿಕೊಳ್ಳಬೇಕಾಗುತ್ತದೆ. ಪ್ರಸಿದ್ಧವಾದ ಪ್ರಾಚೀನ ಶಬ್ದವನ್ನು ಪ್ರಯೋಗಾನುಸಾರವಾಗಿ ಆಕೃತಿಗಣದಲ್ಲಿ ಸೇರಿಸುವುದುಂಟು. ಗ್ರಂಥಪರವಾದ **'ಪಂಚದಶ'** ಶಬ್ದವು ಈಚಿನದು. ಅಗತಿಕಗತಿಯೆಂದು ಎರಡೂ ಗಣಗಳಲ್ಲಿ ಸೇರಿಸಬೇಕಾಗುತ್ತದೆ. ಎರಡನೆಯ ನಿರ್ವಚನವು ಸಹಜವಾದದ್ದು; ಪ್ರಸಿದ್ಧವಾದದ್ದು.

ಇದಿಷ್ಟು ಪೂರ್ವ ಪೀಠಿಕೆಯಾಯಿತು. ಇನ್ನು ಪ್ರತಿಪಾದ್ಯ ವಿಷಯವನ್ನು ಪರಾಮರ್ಶಿಸಬಹುದು. ಪಂಚದಶಿಯು ಪ್ರಕರಣಾತ್ಮಕಗಳಾದ ಮೂರು - ಪಂಚಕಗಳಿಂದ ಕೂಡಿದ ಕೃತಿ. ಪ್ರಕರಣವೆಂದರೆ ಶಾಸ್ತ್ರದ ಏಕದೇಶಕ್ಕೆ ಸಂಬಂಧಿಸಿದ್ದು ಶಾಸ್ತ್ರದ ಮುಖ್ಯ ಪ್ರಮೇಯವನ್ನು ತಿಳಿಯಲು ಉಪಯುಕ್ತವಾದ ಗ್ರಂಥವೆಂದರ್ಥ.

**ಶಾಸ್ತ್ರೈಕದೇಶಸಂಬದ್ಧಂ ಶಾಸ್ತ್ರಕಾರ್ಯಾಂತರೇ ಸ್ಥಿತಮ್ ।**

**ಆಹುಃ ಪ್ರಕರಣಂ ನಾಮ ॥**

ಎಂದು ಪ್ರಕರಣದ ಲಕ್ಷಣ. ಬಿಡಿ ಬಿಡಿಯಾದ ಎಲ್ಲ ಪ್ರಕರಣಗಳೂ ಸೇರಿರುವುದರಿಂದ ಪಂಚದಶಿಯು ಸರ್ವಾಂಗಪೂರ್ಣವಾದ ವೇದಾಂತ ಶಾಸ್ತ್ರ ಗ್ರಂಥವೆನ್ನಬಹುದು.

## ಪ್ರಕರಣಗಳ ತಾತ್ಪರ್ಯ

### ೧. ತತ್ತ್ವವಿವೇಕ

ಇದು ಪ್ರತ್ಯಕ್‌ತತ್ತ್ವವಿವೇಕ. ಪ್ರತ್ಯಕ್‌ತತ್ತ್ವವೆಂದರೆ ಈ ಶರೀರವೆಂಬ ಉಪಾಧಿಯಲ್ಲಿರುವ ಆತ್ಮ. ಇದನ್ನು ಶರೀರೋಪಾಧಿಯಿಂದ ಬೇರ್ಪಡಿಸಿ ನಿಜ ಸ್ವರೂಪವನ್ನು ತೋರಿಸುವುದು. ತತ್ತ್ವವಿವೇಕ. ವಿವೇಕವೆಂದರೆ ಪೃಥಕ್ಕರಣ (ಬೇರ್ಪಡಿಸುವುದು) ಅಥವಾ ವಿವೇಚನೆ. ನಮಗೆ ಜಾಗ್ರತ್, ಸ್ವಪ್ನ, ಸುಷುಪ್ತಿಗಳೆಂಬ ಮೂರು ಅವಸ್ಥೆಗಳುಂಟಷ್ಟೆ. ಇಂದ್ರಿಯಗಳಿಂದ ಬಾಹ್ಯ ವಿಷಯಗಳನ್ನು ತಿಳಿಯುವುದು ಜಾಗ್ರತ್. ಜಾಗ್ರತ್ತಿನ ಸಂಸ್ಕಾರದಿಂದ ಮನಸ್ಸು ಬಾಹ್ಯ ವಿಷಯವಿಲ್ಲದಿದ್ದರೂ ಅದನ್ನು ತಿಳಿಯುವುದು ಸ್ವಪ್ನ. ಕೇವಲ ಅಜ್ಞಾನದ ಅನುಭವರೂಪ ಜ್ಞಾನವೇ ಸುಷುಪ್ತಿ. ನಿದ್ರೆಯಿಂದ ಎಚ್ಚರವಾದ ಮೇಲೆ ''ನನಗೆ ಗಾಢ ನಿದ್ರೆ ಬಂದಾಗ ಏನೂ ತಿಳಿಯಲಿಲ್ಲ'' ಎಂಬ ಸ್ಮರಣೆಯುಂಟಾಗುವುದಷ್ಟೆ. ಅದು ಅಜ್ಞಾನವನ್ನು ಅನುಭವಿಸಿರುವುದರಿಂದ ಬಂದದ್ದು. ಹೀಗೆ ಬಾಹ್ಯ ವಿಷಯ, ಸಂಸ್ಕಾರದಿಂದ ಕಲ್ಪಿತವಾದ ವಿಷಯ, ಅಜ್ಞಾನವೆಂಬ ವಿಷಯ ಇವು ಮೂರೂ ಜ್ಞಾನಕ್ಕಿಂತ ಭಿನ್ನವಾದವು. ಈ ಮೂರರ ಸಂಬಂಧವೂ ಇಲ್ಲದ ಕೇವಲ ಶುದ್ಧ ಜ್ಞಾನಕ್ಕೆ ಸಂವಿತ್ ಎಂದು ಹೆಸರು. ಈ ಸಂವಿತ್ ಎಂಬುದೇ ಆತ್ಮ. ಇದು ಪರಮ ಪ್ರೇಮಾಸ್ಪದವೂ

ಆನಂದಸ್ವರೂಪವೂ ಆಗಿದೆ. ಇದೇ ಸಚ್ಚಿದಾನಂದ. ಇದನ್ನರಿಯದೆ ಮನುಷ್ಯನು ದೇಹವೇ ಆತ್ಮ, ಇಂದ್ರಿಯಗಳು ಆತ್ಮ ಇತ್ಯಾದಿವಿಮೋಹಕ್ಕೆ ಒಳಗಾಗಿದ್ದಾನೆ. ಇದಕ್ಕೆ ಕಾರಣ ಅನಾದಿಯಾದ ಅವಿದ್ಯೆ.

ಶ್ರವಣ ಮನನ ನಿದಿಧ್ಯಾಸನಗಳಿಂದ ಈ ಅವಿದ್ಯೆ ತೊಲಗುತ್ತದೆ. ನಿದಿಧ್ಯಾಸನದ ತೀವ್ರವಾದ ಪ್ರಗತಿಯೇ ಸಮಾಧಿ. ಸಮಾಧಿಯಿಂದ ಪಾಪಪುಣ್ಯಗಳೆಂಬ ಪ್ರತಿಬಂಧಕಗಳು ನಾಶವಾಗುತ್ತವೆ. ಪುಣ್ಯವು ಫಲಭೋಗಕ್ಕಾಗಿ ಜನ್ಮಾಂತರವನ್ನು ಉಂಟುಮಾಡುವುದರಿಂದ ಅದು ಮೋಕ್ಷಕ್ಕೆ ಪ್ರತಿಬಂಧಕ. ಅನಂತರ ನಿರ್ವಿಕಲ್ಪಕ ಸಮಾಧಿಯುಂಟಾಗುತ್ತದೆ. ಇದನ್ನು ಧರ್ಮಮೇಘವೆನ್ನುತ್ತಾರೆ. ಸಕಲ ಕರ್ಮಗಳೂ ವಾಸನೆಗಳೂ ಕ್ಷಯಿಸಿದ ಮೇಲೆ ಅಪರೋಕ್ಷ ಜ್ಞಾನವಾಗಿ ಅಜ್ಞಾನವು ನಿರ್ಮೂಲವಾಗುತ್ತದೆ. ಸಾಧಕನು ಮುಕ್ತನಾಗುತ್ತಾನೆ. ಹೀಗೆ ಬಾಹ್ಯದ ವಸ್ತುಗಳಿಂದ ಬೇರ್ಪಡಿಸಿ ಪ್ರತ್ಯಕ್ ತತ್ತ್ವವನ್ನು ಇಲ್ಲಿ ತೋರಿಸಲಾಗಿದೆ.

**೨. ಪಂಚಭೂತವಿವೇಕ**

ಉಪಾಧಿಗಳಾದ ಪಂಚಭೂತಗಳನ್ನು ವಿವೇಚಿಸಿದರೆ 'ಸತ್' ಎಂಬ ಆತ್ಮಸ್ವರೂಪವು ಗೋಚರಿಸುತ್ತದೆ. ಪಂಚಭೂತಗಳ ಗುಣಕ್ರಿಯೆಗಳಿಗೆ ವಿಷಯವಾದದ್ದೆಲ್ಲವೂ ಜಗತ್. ಇದು ಅಸತ್. ಅಸತ್ತಾದ ಜಗತ್ತು ಇಲ್ಲ ಎಂಬುದು ನಿರ್ವಿಕಲ್ಪಕ ಸಮಾಧಿಯಲ್ಲಿ ಅನುಭವಕ್ಕೆ ಬರುತ್ತದೆ. ಈ ಸಮಾಧಿಗೆ ಅಸ್ಪರ್ಶಯೋಗವೆಂದು ಹೆಸರು. ಸತ್ ಸ್ವರೂಪದ ವಿಸ್ತೃತ ವಿವೇಚನೆ. **ಪಾದೋಽಸ್ಯ ವಿಶ್ವಾಭೂತಾನಿ** - ಎಂಬ ಶ್ರುತಿಯ ತಾತ್ಪರ್ಯ. ಆಕಾಶಾದಿ ಪಂಚಭೂತಗಳ ವಿವೇಚನೆ. ಅವೆಲ್ಲವೂ ಅಸತ್ ಎಂದು ಪ್ರತಿಪಾದನೆ.

**೩. ಪಂಚಕೋಶವಿವೇಕ**

ಈಶ್ವರ, ಜೀವ - ಇವೆರಡೂ ಉಪಾಧಿಯಿಂದ ಕಲ್ಪಿತವಾದವು. ಈಶ್ವರೀ ಶಕ್ತಿಯ ಸ್ವರೂಪ. ಈ ಶಕ್ತಿಯು ಆನಂದಮಯಕೋಶದಿಂದ ಹಿಡಿದು ಸಕಲಕೋಶಗಳನ್ನು ನಿಯಂತ್ರಿಸುತ್ತದೆ. ಈ ಪಂಚಕೋಶಗಳೆಂಬ ಉಪಾಧಿಯಿಂದ ಬ್ರಹ್ಮವೇ ಜೀವವೆನಿಸಿಕೊಂಡು ತಂದೆ, ಮಗ - ಮುಂತಾದ ವ್ಯವಹಾರಗಳು ಉದ್ಭವಿಸುತ್ತವೆ. ಬ್ರಹ್ಮವು ಈ ಎಲ್ಲ ಉಪಾಧಿಗಳಿಂದ ವಿಮುಕ್ತವಾದದ್ದು. ಪಂಚಕೋಶಗಳು ಪಂಚಭೂತಗಳಿಂದ ಉಂಟಾಗಿವೆ.

### ೪. ದ್ವೈತವಿವೇಕ

ದ್ವೈತವು ಈಶ್ವರನಿರ್ಮಿತ, ಜೀವನಿರ್ಮಿತ - ಎಂದು ಎರಡು ವಿಧ. ಮಾಯೋಪಾಧಿಕವಾದ ಚೈತನ್ಯ (ಬ್ರಹ್ಮ) ಈಶ್ವರ. ಪ್ರಾಣಿಶರೀರದಲ್ಲಿರುವ ಚೈತನ್ಯ, ಅದರಲ್ಲಿ ಕಲ್ಪಿತವಾದ ಅವಿದ್ಯೆಯೆಂಬ ಲಿಂಗದೇಹ, ಅದರಲ್ಲಿ ಪ್ರತಿಬಿಂಬಿತವಾದ ಚಿದಾಭಾಸ - ಈ ಮೂರರ ಸಮುದಾಯವೇ ಜೀವ. ಪಂಚಭೂತಾತ್ಮಕವಾದ ಈ ವಿಶ್ವವೆಂಬ ದ್ವೈತವೆಲ್ಲವೂ ಈಶ್ವರನಿರ್ಮಿತವೇ ಆದರೂ, ಜೀವನು ತನ್ನ ಜ್ಞಾನ ಕರ್ಮಗಳಿಂದ ಇವುಗಳಲ್ಲಿಯೇ ಕೆಲವನ್ನು ತನ್ನ ಭೋಗಕ್ಕಾಗಿ ಮಾರ್ಪಡಿಸಿಕೊಂಡಿದ್ದಾನೆ. ಜೀವನಿಂದ ಅನುಭವಿಸಲ್ಪಡುವ ವಸ್ತುವನ್ನು ಭೋಜ್ಯ ಅಥವಾ ಅನ್ನ ಎನ್ನುತ್ತಾರೆ. ಇದೆಲ್ಲವೂ ಜೀವನಿರ್ಮಿತವಾದ ದ್ವೈತ. ವಸ್ತುತಃ ಭೋಗ್ಯವಸ್ತುಗಳೂ ಸಹ ಈಶ್ವರನಿರ್ಮಿತಗಳೇ ಆದರೂ ದೃಷ್ಟಿಭೇದದಿಂದ ಅವು ಜೀವನಿರ್ಮಿತಗಳಾಗುತ್ತವೆ. ಉದಾಹರಣೆಗೆ, ಸ್ತ್ರೀಯರನ್ನು ಈಶ್ವರನೇ ಸೃಷ್ಟಿಸಿದ್ದಾನೆ. ಆದರೆ ಒಬ್ಬ ಸ್ತ್ರೀಯನ್ನೇ ಒಬ್ಬನು ಹೆಂಡತಿಯೆಂದೂ ಇನ್ನೊಬ್ಬನು ತಾಯಿಯೆಂದೂ ಮತ್ತೊಬ್ಬನು ಸೊಸೆಯೆಂದೂ ಭಾವಿಸುತ್ತಾರೆ. ಅವಳೇ ಅಕ್ಕ, ತಂಗಿ, ಅತ್ತೆಯೂ ಆಗಿ ಬಿಡುತ್ತಾಳೆ. ಇದು ಜೀವ ಕಲ್ಪಿತವಾದ ದ್ವೈತ. ಹೀಗೆ ಸಕಲ ವಸ್ತುಗಳ ವಿಷಯ ದಲ್ಲಿಯೂ ಜೀವನಿಗೆ ಮತಿಭೇದ ಉಂಟು. ಈಶ್ವರನ ಸೃಷ್ಟಿ ಮಾಯಾಮಯ. ಜೀವನಸೃಷ್ಟಿ ಮನೋಮಯ. ಸ್ವಪ್ನದಲ್ಲಿ ಕಾಣುವ ವಸ್ತುಗಳೆಲ್ಲವೂ ಜೀವನು ಕಲ್ಪಿಸಿಕೊಂಡ ದ್ವೈತ. ಅದು ಜೀವನಿರ್ಮಿತ. ಇಷ್ಟೇ ಅಲ್ಲ, ಸಕಲವಸ್ತುಗಳೂ ಮನೋಮಯವಾಗಬಹುದು. ಹೊರಗೆ ಕಾಣಿಸುವ ಗಡಿಗೆ ಬಾಹ್ಯ. ಅದು ಮಣ್ಣಿನಿಂದ ಆದದ್ದು . ಅದು ಎದುರಿಗಿಲ್ಲದಿದ್ದರೂ ಮನಸ್ಸಿಗೆ ಗೋಚರಿಸುವ ಗಡಿಗೆ ಮನೋಮಯವಾದದ್ದು. ಇದು ಜೀವ ಸೃಷ್ಟಿ.

ಈಶ್ವರ ನಿರ್ಮಿತವಾದ ದ್ವೈತವು ಇದ್ದೇ ಇರುತ್ತದೆ. ಅದನ್ನು ತ್ಯಜಿಸಲು ಯಾರಿಗೂ ಶಕ್ಯವಲ್ಲ. ಸಾಧಕನು ಮನೋಮಯವಾದ ದ್ವೈತವನ್ನು ತ್ಯಜಿಸಲು ಸಾಧ್ಯವಾಗುತ್ತದೆ. ಅದನ್ನು ತ್ಯಜಿಸಬೇಕು. ತ್ಯಜಿಸದಿದ್ದರೆ ಬಂಧದಿಂದ ನಿವೃತ್ತಿ ಇಲ್ಲ.

### ೫. ಮಹಾವಾಕ್ಯವಿವೇಕ

ಉಪನಿಷತ್ತುಗಳಿಂದ ಆರಿಸಿದ ನಾಲ್ಕು ವಾಕ್ಯಗಳನ್ನು ವೇದಾಂತ ಶಾಸ್ತ್ರದಲ್ಲಿ ಮಹಾವಾಕ್ಯಗಳೆನ್ನುತ್ತಾರೆ. ಅವುಗಳ ಅರ್ಥ ವಿವರಣೆ ಈ ಪ್ರಕರಣದಲ್ಲಿ ಬಂದಿದೆ.

**೧. ಪ್ರಜ್ಞಾನಂ ಬ್ರಹ್ಮ (ಐತರೇಯ ಉಪನಿಷತ್.೫-೩) = ಪ್ರಜ್ಞಾನವು ಬ್ರಹ್ಮ**

ಜೀವನು ತನ್ನ ಇಂದ್ರಿಯಗಳಿಂದ ಶಬ್ದ ಸ್ಪರ್ಶಾದಿ ವಿಷಯಗಳನ್ನು ತಿಳಿಯುತ್ತಾನಷ್ಟೆ. ಹಾಗೆ ತಿಳಿಯುವುದಕ್ಕೆ ಅಂತಃಕರಣದ (ಮನಸ್ಸಿನ) ವ್ಯಾಪಾರವು ಆವಶ್ಯಕ. ಈ ವ್ಯಾಪಾರವೇ ವೃತ್ತಿ ಎನಿಸುತ್ತದೆ. ಇದೆಲ್ಲವೂ ಜಡವಾದ್ದರಿಂದ ಚೈತನ್ಯದಿಂದಲೇ 'ತಿಳಿವು' ಹುಟ್ಟಬೇಕು. ಅಂತಃಕರಣ ವೃತ್ತಿಯಿಂದ ಉಪಹಿತವಾದ ಚೈತನ್ಯದಿಂದ ಇಂದ್ರಿಯದ್ವಾರಾ ಜೀವನು ಶಬ್ದಾದಿ ವಿಷಯಗಳನ್ನು ತಿಳಿಯುತ್ತಾನೆ. ಈ 'ಅರಿವು' ವೃತ್ತಿಜ್ಞಾನವೆನಿಸುತ್ತದೆ. ಇದಕ್ಕೆ ಮೂಲಕಾರಣವೂ ಉಪಾಧಿನಿರ್ಮುಕ್ತವೂ ಆದ ಶುದ್ಧ ಚೈತನ್ಯವೇ ಪ್ರಜ್ಞಾನ. ದೇವತೆಗಳು, ಮನುಷ್ಯರು, ಅಶ್ವಗಜಾದಿ ಪ್ರಾಣಿಗಳು, ಆಕಾಶಾದಿ ಪಂಚಭೂತಗಳು- ಒಟ್ಟಿನಲ್ಲಿ ಈ ಜಗತ್ತಿನ ಸೃಷ್ಟಿ ಸ್ಥಿತಿ ಲಯಗಳಿಗೆ ಕಾರಣವಾಗಿ ಸರ್ವತ್ರ ಇವುಗಳಲ್ಲಿ ನೆಲೆಸಿರುವ ಈ ಚೈತನ್ಯವೇ ಬ್ರಹ್ಮ - ಎಂದು ಈ ಮಹಾ ವಾಕ್ಯದ ಅರ್ಥ.

**೨. ಅಹಂ ಬ್ರಹ್ಮಾಸ್ಮಿ (ಬೃಹದಾರಣ್ಯಕ ಉಪನಿಷತ್.೧-೪-೧೦) = ನಾನು ಬ್ರಹ್ಮವಾಗಿದ್ದೇನೆ.**

ದೇಶಕಾಲವಸ್ತುಗಳ ಅಳತೆಗೆ ಸಿಗದೆ ಪರಿಪೂರ್ಣನಾದ ಮತ್ತು ಈ ದೇಹದಲ್ಲಿದ್ದು ಲಿಂಗದೇಹಕ್ಕೆ ಸಾಕ್ಷಿಯಾಗಿರುವ ಪರಮಾತ್ಮನು 'ಅಹಂ' ಶಬ್ದದ ಅರ್ಥ. ಇದು ಲಕ್ಷಣಾವೃತ್ತಿಯಿಂದ ತೋರುವ ಲಕ್ಷ್ಯಾರ್ಥ. ಇಲ್ಲಿ ಪರಮಾತ್ಮನೆಂದರೆ ಮಾಯೋಪಾಧಿಕನಾದ ಈಶ್ವರ. ಬ್ರಹ್ಮಶಬ್ದವು ಲಕ್ಷಣಾವೃತ್ತಿಯಿಂದ ಪರಮಾತ್ಮನನ್ನು ಬೋಧಿಸುತ್ತದೆ. ಆದ್ದರಿಂದ ಪರಮಾತ್ಮನೆಂಬುದೂ ಸಹ ಬ್ರಹ್ಮಶಬ್ದದ ಲಕ್ಷ್ಯಾರ್ಥ. 'ಅಸ್ಮಿ' ಶಬ್ದವು ಜೀವೇಶ್ವರರ ಐಕ್ಯವನ್ನು ಬೋಧಿಸುತ್ತದೆ.

**೩. ತತ್ತ್ವಮಸಿ (ಛಾಂದೋಗ್ಯೋಪನಿಷತ್.೭-೮-೭)= ಆ ಬ್ರಹ್ಮವೇ ನೀನಾಗಿದ್ದೀಯೆ.**

'ಸದೇವ ಸೋಮ್ಯ ಇದಮಗ್ರ ಆಸೀತ್' ಎಂಬ ಶ್ರುತಿಯಲ್ಲಿ ನಾಮ ರೂಪರಹಿತವಾದ ಯಾವ ಸದ್ವಸ್ತುವನ್ನು ಹೇಳಲಾಗಿದೆಯೋ ಆ 'ಸತ್' ಎಂಬ ವಸ್ತು ತತ್‌ಪದದ ಲಕ್ಷ್ಯಾರ್ಥ. 'ತ್ವಂ' ಪದದಿಂದ ಶರೀರಾದಿಗಳಿಂದ ವಿಮುಕ್ತವಾದ 'ಸತ್' ಎಂಬ ವಸ್ತುವೇ ಲಕ್ಷಣೆಯಿಂದ ಗೃಹೀತವಾಗುತ್ತದೆ. ಈ ಪದಾರ್ಥದ್ವಯದ ಐಕ್ಯವನ್ನು 'ಅಸಿ' ಪದವು ಬೋಧಿಸುತ್ತದೆ.

**೪. ಅಯಮಾತ್ಮಾ ಬ್ರಹ್ಮ (ಮಾಂಡೂಕ್ಯೋಪನಿಷತ್.೨)= ಈ ಆತ್ಮನೇ ಬ್ರಹ್ಮ**

'ನಾನು, ನಾನು' ಎಂದು ಯಾರನ್ನು ಹೇಳಿಕೊಳ್ಳುತ್ತೇವೊ ಆತನೇ ಜೀವಾತ್ಮ. ಆತನು ತಾನಾಗಿ ತೋರಿಕೊಳ್ಳುತ್ತಾನಾದ್ದರಿಂದ ಸ್ವಯಂ ಪ್ರಕಾಶನಾಗಿದ್ದಾನೆ. ತೋರಿಕೊಳ್ಳುವುದರಿಂದ ಅವನು ಪರೋಕ್ಷನೂ ಅಲ್ಲ. ದೇಹದಲ್ಲಿ ತೋರಿಕೊಳ್ಳುವ ಈತನು ಪ್ರತ್ಯಗಾತ್ಮನೆನಿಸುತ್ತಾನೆ. ಈತನು ಪರಮಾರ್ಥದಲ್ಲಿ ಸಚ್ಚಿದಾನಂದ ಸ್ವರೂಪವಾದ ಚೈತನ್ಯವೆಂಬ ಬ್ರಹ್ಮವಸ್ತುವಾಗಿದ್ದಾನೆ.

ಈ ಪ್ರಕರಣದಲ್ಲಿ ವಿವೇಕವೆಂದರೆ ವಿವೇಚನೆ, ನಿಜಸ್ವರೂಪ ಕಥನ, ನಿರೂಪಣೆ, ಅನ್ಯ ವಸ್ತುವಿನಿಂದ ಬೇರ್ಪಡಿಸುವುದು, ಪೃಥಕ್ಕರಣ ಎಂದರ್ಥ.

## ದೀಪ ಪಂಚಕ

ಪ್ರಪಂಚಕ್ಕೆ ಮೂಲವೂ ಸತ್ಯವೂ ಆದದ್ದು ಚೈತನ್ಯ. ಇದೇ ಚಿತ್. ಇದೇ ಬ್ರಹ್ಮ. ನಾವು ಭ್ರಾಂತಿಯಿಂದ ಈ ಪ್ರಪಂಚವನ್ನು ಚಿದ್ವಸ್ತುವಿನಲ್ಲಿ ಆರೋಪಿಸಿಕೊಂಡಿದ್ದೇವೆ. ವಸ್ತುತಃ ಚೈತನ್ಯವು ಪ್ರಪಂಚರಹಿತ. ನಮಗೆ ಕಾಣುವುದೆಲ್ಲವೂ ಆರೋಪಿತವಾದದ್ದು. ಇದೆಲ್ಲವನ್ನೂ 'ನ-ನ' ಎಂದು ಅಲ್ಲಗಳೆದಾಗ ಕಡೆಯಲ್ಲುಳಿಯುವುದು ನಿಷ್ಪ್ರಪಂಚವಾದ ಚಿತ್. ಈ ಮಾತನ್ನೇ **''ಅಧ್ಯಾರೋಪಾಪವಾದಾಭ್ಯಾಂ ನಿಷ್ಪ್ರಪಂಚಂ ಪ್ರಪಂಚ್ಯತೇ''** ಎಂಬ ವೇದಾಂತಸೂಕ್ತಿಯು ಘೋಷಿಸುತ್ತದೆ. ಅಪವಾದವೆಂದರೆ ಅಲ್ಲಗಳೆಯುವುದು.

ದೀಪವು ಇತರ ವಸ್ತುಗಳನ್ನು ಪ್ರಕಾಶಿಸಿ ತೋರಿಸುತ್ತದೆ. ಅದು ಅನ್ಯ ಪ್ರಕಾಶಕ. ದೀಪವನ್ನು ನೋಡಲು ಇನ್ನೊಂದು ದೀಪವು ಬೇಕಿಲ್ಲ, ಅದು ಸ್ವಯಂಪ್ರಕಾಶ. ಹೀಗೆ ಚಿತ್ತಿನಲ್ಲಿ ಆರೋಪಿತವಾದ ಅನ್ಯವಸ್ತುಗಳನ್ನು ತೋರಿಸಿ, ದೀಪದಂತಿರುವ ಚಿದ್ವಸ್ತುವಿನ ಕಡೆಗೆ ಬೆರಳು ತೋರಿಸುವುದು ಈ ಪಂಚಕದ ಉದ್ದೇಶವಾಗಿದೆ.

**೬. ಚಿತ್ರದೀಪ**

ಚಿತ್ರವನ್ನು ಬರೆದಿರುವ ಪಟದ ದೃಷ್ಟಾಂತದಿಂದ ಚಿದ್ವಸ್ತು ಯಾವುದೆಂಬುದನ್ನು ಇಲ್ಲಿ ತೋರಿಸಿಕೊಡಲಾಗಿದೆ. ಪಟ ಎಂದರೆ ಬಟ್ಟೆ. ಸ್ವತಃ ಶುಭ್ರವಾದ ಬಟ್ಟೆ ಧೌತವೆನಿಸುತ್ತದೆ. ಅನ್ನದ ಗಂಜಿಯನ್ನು ಸೇರಿಸಿ ರಟ್ಟಿನಂತೆ ಗಟ್ಟಿ ಮಾಡಿದಾಗ ಅದಕ್ಕೆ ಘಟ್ಟಿತ ಎಂದು ಹೆಸರು. ಅದರ ಮೇಲೆ

ಮಸಿಯಿಂದ ರೇಖಾಕಾರವಾಗಿ ಚಿತ್ರವನ್ನು ಬರೆದದ್ದು ಲಾಂಛಿತ. ಅದಕ್ಕೆ ಯೋಗ್ಯವಾದ ಬಣ್ಣವನ್ನು ತುಂಬಿದಾಗ ರಂಜಿತವೆನಿಸುತ್ತದೆ. ಅಂತೆಯೇ ಮಾಯಾಸಂಬಂಧವಿಲ್ಲದ ಶುದ್ಧಬ್ರಹ್ಮವು ಚಿತ್. ಮಾಯಾಯುಕ್ತವಾದಾಗ ಅಂತರ್ಯಾಮಿಯೆನಿಸುತ್ತದೆ. ಅಪಂಚೀಕೃತ ಭೂತನಿರ್ಮಿತವಾದ ಸಮಷ್ಟಿ ಶರೀರವುಳ್ಳವನು ಸೂತ್ರಾತ್ಮ. ಪಂಚೀಕೃತ ಭೂತನಿರ್ಮಿತವಾದ ಸ್ಥೂಲಸಮಷ್ಟಿ ಶರೀರಯೋಗವುಳ್ಳವನ್ನು ವಿರಾಟ್ ಎಂದು ತಿಳಿಯಬೇಕು. ಭಗವಂತನು ಪಟ, ಮಸಿ, ಕುಂಚ- ಮುಂತಾದ ಯಾವುದೇ ಒಂದು ಸಲಕರಣೆಯೂ ಇಲ್ಲದೆ ಅತ್ಯದ್ಭುತವಾದ ಈ ಜಗತ್ತೆಂಬ ಚಿತ್ರವನ್ನು ರಚಿಸಿದ್ದಾನೆ!

ಬ್ರಹ್ಮವಿದೆಯೆಂಬ ನಿಶ್ಚಯವು ಪರೋಕ್ಷಜ್ಞಾನ. ಅದು ಮುಕ್ತಿಗೆ ಕಾರಣವಲ್ಲ. **'ಅಹಂ ಬ್ರಹ್ಮಾಸ್ಮಿ'** ಎಂಬ ಯಥಾರ್ಥಜ್ಞಾನವು ಸಾಕ್ಷಾತ್ಕಾರ ವೆನಿಸುತ್ತದೆ. ಜಗತ್ತು ಸತ್ಯ. ನಾನು ಬ್ರಹ್ಮಕ್ಕಿಂತ ಅನ್ಯ - ಎಂದು ತಿಳಿದಿರುವುದು ಭ್ರಾಂತಿ. ಈ ಭ್ರಾಂತಿಗೆ ಅನಾದಿಯಾದ ಅವಿದ್ಯೆಯೇ ಕಾರಣ. ಇದಕ್ಕೆ ಮೂಲಾವಿದ್ಯೆಯೆಂದು ಹೆಸರು. ಪಂಚದಶೀಯು ಮೂಲಾವಿದ್ಯೆಯನ್ನು ಅಂಗೀಕರಿಸಿದೆಯೆಂಬುದು ಇಲ್ಲಿ ಗಮನಾರ್ಹವಾದದ್ದು. **''ಅನಾದಿರವಿ- ವೇಕೋಽಯಂ ಮೂಲಾವಿದ್ಯೇತಿ ಗಮ್ಯತಾಮ್''** (ಚಿ.ದೀ.-೨೫).

ಈ ಅವಿದ್ಯೆಯಿಂದ ಭ್ರಾಂತನಾದ ಮನುಷ್ಯನು ಒಂದೆ ಸದ್ವಸ್ತುವಿನಲ್ಲಿ ನಾನಾ ವಿಧವಾದ ಕಲ್ಪನೆಗಳನ್ನು ಬೆಳೆಸಿಕೊಂಡಿದ್ದಾನೆ. ಕೂಟಸ್ಥ, ಬ್ರಹ್ಮ, ಜೀವ, ಈಶ್ವರ - ಎಂಬ ಭೇದಗಳನ್ನು ಒಂದೇ ಚಿದ್ವಸ್ತುವಿನಲ್ಲಿ ಮಾಡಿಕೊಂಡಿದ್ದಾನೆ. ಮುಮುಕ್ಷುವಿಗೆ ಈ ಭೇದಕಲ್ಪನೆ ಇರಬಾರದು. ಬ್ರಹ್ಮ, ವಿಷ್ಣು, ಶಿವ - ಇತ್ಯಾದಿ ಕಲ್ಪನೆಗಳೂ ಸತ್ತ್ವಾದಿಗುಣತ್ರಯಾಪೇಕ್ಷೆಯಿಂದ ಆದವು. ಯುಕ್ತಿಗಳಿಂದ ಜಗನ್ನಿರ್ಮಾಣಾದಿಗಳನ್ನು ನಿರ್ಣಯಿಸಲು ಶಕ್ಯವಿಲ್ಲ. 'ಇದೊಂದೂ ನನಗೆ ತಿಳಿಯದು' ಎಂದು ಹೇಳುವುದೇ ಕಡೆಯ ಗತಿಯಾದೀತು. **''ನ ಜಾನಾಮಿ ಕಿಮಪ್ಯೇತದಿತ್ಯಂತೇ ಶರಣಂ ತವ''** (ಚಿ.ದೀ. ೧೪೫) ಆದ್ದರಿಂದ ವೇದವಾಕ್ಯದಿಂದಲೇ ಈ ಪ್ರಪಂಚದ ಆಗುಹೋಗುಗಳನ್ನು ಕಂಡುಕೊಳ್ಳಬೇಕು. ವಸ್ತ್ರದಮೇಲೆ ವರ್ಣರಂಜಿತವಾದ ಚಿತ್ರವು ಹೇಗೆ ರಚಿತವಾಗಿರುವುದೋ ಹಾಗೆ ಶುದ್ಧ ಚೈತನ್ಯದಲ್ಲಿ ಈ ಜಗತ್ತು ಈಶ್ವರನ ಮಾಯಾಶಕ್ತಿಯಿಂದ ಕಲ್ಪಿತವಾಗಿದೆ. ಈ ಪ್ರಕಾರ ೨೯೦ ಶ್ಲೋಕಗಳಿಂದ ವಿಸ್ತಾರವಾಗಿ ಈ ವಿಚಿತ್ರ ಜಗತ್ತನ್ನು ಈ ಪ್ರಕರಣದಲ್ಲಿ ವರ್ಣಿಸಿದ್ದಾರೆ.

### ೭. ತೃಪ್ತಿದೀಪ

ಇದರಲ್ಲಿ ೨೯೮ ಶ್ಲೋಕಗಳಿವೆ. ಪಂಚದಶೀ ಗ್ರಂಥದಲ್ಲಿ ಇದೇ ದೊಡ್ಡದಾದ ಪ್ರಕರಣ. ' ನಾನು ಇಂಥವನು' ಎಂದು ತನ್ನ ಆತ್ಮಸ್ವರೂಪವನ್ನು ತಿಳಿದುಕೊಂಡಮೇಲೆ ಮನುಷ್ಯನಿಗೆ ಇನ್ನೇನೂ ಬೇಕೆನಿಸುವುದಿಲ್ಲ. ಸಂಪೂರ್ಣ ತೃಪ್ತಿಯನ್ನುಪಡೆದು ಪರಮ ಸುಖದಲ್ಲಿ ಮುಳುಗಿ ಹೋಗುತ್ತಾನೆ - ಎಂಬುದನ್ನು ಈ ಪ್ರಕರಣದಲ್ಲಿ ಬಹುಸುಂದರವಾಗಿ ನಿರೂಪಿಸಿದ್ದಾರೆ.

**ಈಕ್ಷಣಾದಿಪ್ರವೇಶಾಂತಾ ಸೃಷ್ಟಿರೀಶೇನ ಕಲ್ಪಿತಾ ।**
**ಜಾಗ್ರದಾದಿವಿಮೋಕ್ಷಾಂತಃ ಸಂಸಾರೋ ಜೀವಕಲ್ಪಿತಃ ॥**

ಎಂದು ವೇದಾಂತದಲ್ಲಿ ಪ್ರಸಿದ್ಧವಾದ ಶ್ಲೋಕವು ಈ ಪ್ರಕರಣದಲ್ಲಿದೆ. (ಶ್ಲೋ.೪) ಹಾಗೆಯೇ 'ದಶಮಸ್ತ್ವಮಸಿ' ಎಂಬ ನ್ಯಾಯದ ವಿವರಣೆ, 'ತತ್ತ್ವಮಸಿ' ಎಂಬ ಮಹಾ ವಾಕ್ಯದ ಅರ್ಥನಿರೂಪಣೆ, ಕ್ಲಿಷ್ಟವಾದ ಭಗವದ್ಗೀತಾಶ್ಲೋಕಗಳ ತಾತ್ಪರ್ಯಕಥನ - ಇತ್ಯಾದಿ ವಿಚಾರಗಳಿಂದ ತುಂಬಿದ ಈ ಪ್ರಕರಣವು ಮನನೀಯವಾದದ್ದು. ಪರೋಕ್ಷಜ್ಞಾನ, ಅಪರೋಕ್ಷಜ್ಞಾನಗಳಿಗಿರುವ ಭೇದ, ಪರೋಕ್ಷಜ್ಞಾನವಾಗುವ ಬಗೆ, ಆತ್ಮಜ್ಞಾನಿಯು ಲೋಕವ್ಯವಹಾರಗಳನ್ನು ನಡೆಸಲು ಸಾಧ್ಯ, ಜಗನ್ಮಿಥ್ಯೆಯೆಂಬ ಬೋಧವು ಗಟ್ಟಿಯಾಗಿ ನಿಂತಾಗ ವಿಷಯಭೋಗದಿಂದ ಜ್ಞಾನಿಗೆ ಹಾನಿಯೇನೂ ಇಲ್ಲ- ಇತ್ಯಾದಿ ವಿಚಾರಗಳು ಈ ಪ್ರಕರಣದಲ್ಲಿ ಪ್ರತಿಪಾದಿತವಾಗಿವೆ. **'ಇಂದ್ರಜಾಲಮಿದಂ ದ್ವೈತಂ'** ಎಂಬ ನಿಶ್ಚಯವಿದ್ದಾಗ ಪ್ರಾರಬ್ಧಕರ್ಮದಿಂದಾದ ಸುಖದುಃಖಗಳು ಆತನನ್ನು ಏನೂ ಮಾಡಲಾರವು. ಆ ಜ್ಞಾನಿಯು ಸದಾ ತೃಪ್ತನಾಗಿರುತ್ತಾನೆ. ಆತ್ಮಜ್ಞಾನದಿಂದ ಸಂತೃಪ್ತನಾದ ಪುರುಷನು -

**ಧನ್ಯೋಽಹಂ ಧನ್ಯೋಽಹಂ ಧನ್ಯೋಧನ್ಯಃ ಪುನಃ ಪುನರ್ಧನ್ಯಃ ।**
**ಅಹೋ ಶಾಸ್ತ್ರಮಹೋ ಶಾಸ್ತ್ರಮಹೋ ಗುರುರಹೋ ಗುರುಃ ॥**

ಎಂದುಕೊಳ್ಳುತ್ತಾ ನಿತ್ಯಾನಂದದಲ್ಲಿ ಮುಳುಗಿರುತ್ತಾನೆ.

ಈ ಭಾಗವು ಪ್ರಕರಣವೆನಿಸಿದರೂ ಪೂರ್ಣವಾದ ಶಾಸ್ತ್ರವೇ ಎಂಬಂತೆ ಪ್ರತೀತವಾಗುತ್ತದೆ.

## ೮. ಕೂಟಸ್ಥದೀಪ

ಸರ್ವವ್ಯಾಪಿಯೂ ಸರ್ವವೂ ಆದ ಚೈತನ್ಯವು ದೇಹದಲ್ಲಿ ಕೂಟಸ್ಥ ಎನ್ನಿಸುತ್ತದೆ. ಅಂತಃಕರಣದಲ್ಲಿ ಮೂಡುವ ಚೈತನ್ಯಪ್ರತಿಬಿಂಬಕ್ಕೆ ಚಿದಾಭಾಸವೆಂದು ಹೆಸರು. ಒಂದು ಘಟವನ್ನು ನೋಡಿದಾಗ ಆಗುವ ಜ್ಞಾನವು ಕೂಟಸ್ಥನಿಂದ ಸಾಮಾನ್ಯಾಕಾರವಾಗಿಯೂ ಚಿದಾಭಾಸನಿಂದ ವಿಶೇಷಾಕಾರವಾಗಿಯೂ ತೋರುತ್ತದೆ. ಘಟವು ಜ್ಞಾತವಾದಾಗ ಅದರಲ್ಲಿ ಜ್ಞಾತತಾಜನನವಾಗುತ್ತದೆ. ಜ್ಞಾತವಾಗುವುದಕ್ಕೆ ಮೊದಲು ಘಟದಲ್ಲಿ ಅಜ್ಞಾತತಾ ಇರುತ್ತದೆ. ಅದರ ಜನನವು ಅವಿದ್ಯೆಯಿಂದ ಆದದ್ದು. ಜನನ ಬೇರೆ, ಜ್ಞಾನ ಬೇರೆ. ಘಟದ ಅಜ್ಞಾತತಾಜ್ಞಾನಗಳು, ಜ್ಞಾತತಾಜ್ಞಾನಗಳು ಯಾವುದರಿಂದ ಆಗುತ್ತವೆ? ಅವೆರಡೂ ಚೈತನ್ಯದಿಂದಲೇ ಆಗುತ್ತವೆ - ಎಂಬುದನ್ನು ಸೂಕ್ಷ್ಮ ತರ್ಕದಿಂದ ಈ ಪ್ರಕರಣದಲ್ಲಿ ವಿವೇಚಿಸಿದ್ದಾರೆ. ಕೂಟಸ್ಥನೇ ಸಾಕ್ಷಿ, ಸಾಕ್ಷಿಗೂ ಜಿದಾಭಾಸನಿಗೂ ಇರುವ ಭೇದ, ಶುದ್ಧಚೈತನ್ಯಕ್ಕೂ ಜೀವೇಶ್ವರರಿಗೂ ಇರುವ ಭೇದ - ಇತ್ಯಾದಿ ವಿಚಾರಗಳು ಈ ಪ್ರಕರಣದಲ್ಲಿ ಸ್ಪಷ್ಟವಾಗಿ ತಿಳಿದುಬರುತ್ತವೆ.

## ೯. ಧ್ಯಾನದೀಪ

ಮೋಕ್ಷಕ್ಕೆ ಬ್ರಹ್ಮದ ಅಪರೋಕ್ಷಜ್ಞಾನವೇ ಕಾರಣ. ಇದಕ್ಕೆ ಸಾಧನವಾದದ್ದು ಉಪಾಸನೆ. ಉಪಾಸನೆಯಲ್ಲಿ ಅನೇಕ ಪ್ರಕಾರಗಳುಂಟು. ಅವೆಲ್ಲವೂ ಧ್ಯಾನವೆಂಬ ಒಂದು ಶಬ್ದದಲ್ಲಿ ಸೇರಿಕೊಳ್ಳುತ್ತವೆ. ಧ್ಯಾನವು ಧ್ಯಾತೃ, ಧ್ಯೇಯ, ಧ್ಯಾನ - ಎಂಬ ತ್ರಿಪುಟಿಯನ್ನವಲಂಬಿಸುವುದರಿಂದ ದ್ವೈತ ಸ್ಥಿತಿಯಲ್ಲಿಯೇ ಧ್ಯಾನವು ಆರಬ್ಧವಾಗುತ್ತದೆ. ಭ್ರಮೆಯಿಲ್ಲದೆ ದ್ವೈತವೇ ಇರುವುದಿಲ್ಲವಾದ್ದರಿಂದ ಪ್ರತೀಕೋಪಾಸನೆಯೂ ಶಿವ ವಿಷ್ಣು ಬ್ರಹ್ಮ - ಮುಂತಾದ ದೇವತೆಗಳಲ್ಲಿ ಭಕ್ತಿಯೂ ಸಿದ್ಧಾಂತದಲ್ಲಿ ಭ್ರಮಮೂಲಕವೇ ಆಗಿರುತ್ತದೆ. ಪೂರ್ವಜನ್ಮಗಳ ಸಂಸ್ಕಾರಗಳಿಂದ ಹುಟ್ಟಿ ಬೆಳೆದ ಈ ಭ್ರಮೆಯು ನಿರ್ಮೂಲವಾಗದೆ ಅಪರೋಕ್ಷಜ್ಞಾನವು ಹುಟ್ಟುವುದಿಲ್ಲ. ಸಂಸ್ಕಾರಗಳು ನಿರ್ಮೂಲವಾಗದೆ ಭ್ರಮೆಯು ಹೋಗದು. ಆದ್ದರಿಂದ ಸಂಸ್ಕಾರಗಳೇ ಅಪರೋಕ್ಷಜ್ಞಾನಕ್ಕೆ ಪ್ರತಿಬಂಧಕಗಳು. ಪ್ರತಿಜನ್ಮದಲ್ಲಿಯೂ ಈ ಸಂಸ್ಕಾರಗಳು ಬೆಳೆಯುತ್ತಲೇ ಹೋಗುವುದರಿಂದ ಇವನ್ನು ನಾಶಮಾಡಲು ಧ್ಯಾನವೇ ಯುಕ್ತವಾದ ಶಾಸ್ತ್ರೀಯ ಮಾರ್ಗ. ಆದ್ದರಿಂದ ಮುಮುಕ್ಷುವಿಗೆ ಧ್ಯಾನವು ಅನಿವಾರ್ಯವೂ ಅತ್ಯಾವಶ್ಯಕವೂ ಆಗಿದೆ. ಸಗುಣಬ್ರಹ್ಮವು ಉಪಾಸನೆಗೆ ಶಕ್ಯವಾಗುತ್ತದೆ. ಆದ್ದರಿಂದ

ಸಗುಣೋಪಾಸನೆ ಲೋಕಪ್ರಸಿದ್ಧವಾಗಿದೆ. ನಿರ್ಗುಣ ಬ್ರಹ್ಮವೂ ಉಪಾಸನೆಗೆ ಶಕ್ಯವೆಂದು ಧ್ಯಾನದೀಪದಲ್ಲಿ ಹೇಳಲಾಗಿದೆ.

ಬ್ರಹ್ಮವು ನಿರ್ಗುಣವಾದದ್ದು, ಅವಾಙ್ಮನಸಗೋಚರವೆಂದೇ ಏಕೆ ಉಪಾಸನೆ ಮಾಡಬಾರದು? ನಿರ್ಗುಣೋಪಾಸನೆಯನ್ನೂ ಮಾಡಲು ಸಾಧ್ಯವೆಂದು ಈ ಪ್ರಕರಣದಲ್ಲಿ ನಾನಾಯುಕ್ತಿಗಳಿಂದ ಸಾಧಿಸಲಾಗಿದೆ.

ಧ್ಯಾನನಿಷ್ಠನಿಗೆ ಲೌಕಿಕ ವ್ಯವಹಾರಕ್ಕೆ ಅವಕಾಶವು ಕಡಿಮೆ ಇರುವುದರಿಂದ ಲೌಕಿಕ ಕಾರ್ಯವು ಅವನಿಗೆ ಅಲ್ಪವಾಗಿರುವುದು ಸಹಜ. ತತ್ತ್ವಜ್ಞಾನಿಯು ಲೌಕಿಕ ವ್ಯವಹಾರವನ್ನು ಉತ್ತಮ ರೀತಿಯಲ್ಲಿಯೇ ನಿರ್ವಹಿಸಬಹುದು. ಪ್ರಪಂಚವು ಮಿಥ್ಯೆಯೆಂಬ ಜ್ಞಾನವು ವ್ಯವಹಾರಕ್ಕೆ ಬಾಧಕವಲ್ಲ. ಮನಸ್ಸು, ವಾಕ್, ಬಾಹ್ಯಪದಾರ್ಥಗಳು ವ್ಯವಹಾರಕ್ಕೆ ಸಾಧನಗಳು. ತತ್ತ್ವವಿದನು ಅವನ್ನೇನೂ ನಾಶಪಡಿಸಿರುವುದಿಲ್ಲ - ಇತ್ಯಾದಿ ವಿಚಾರಗಳನ್ನು ಈ ಪ್ರಕರಣದಲ್ಲಿ ನಾನಾ ದೃಷ್ಟಾಂತಗಳಿಂದ ಉಪಪಾದಿಸಿದ್ದಾರೆ.

**೧೦. ನಾಟಕದೀಪ**

ಅದ್ವಯಾನಂದಪೂರ್ಣನಾದ ಪರಮೇಶ್ವರನು ತನ್ನ ಮಾಯಾ ಶಕ್ತಿಯಿಂದ ಜಗತ್ತನ್ನು ಸೃಜಿಸಿ ಜೀವರೂಪದಿಂದ ಅದರೊಳಗೆ ಪ್ರವೇಶಿಸಿದ್ದಾನೆ. ವಿಷ್ಣು ಶಿವ - ಮೊದಲಾದ ಉತ್ತಮದೇಹಗಳಲ್ಲಿ ಪ್ರವೇಶಿಸಿದಾಗ ದೇವತೆಯಾಗಿರುತ್ತಾನೆ. ಕೀಳು ದೇಹಗಳಲ್ಲಿ ಪ್ರವೇಶಿಸಿದಾಗ ಮನುಷ್ಯ, ಮೃಗ, ಪಕ್ಷಿ, ಕ್ರಿಮಿ - ಮುಂತಾದ ಹೆಸರುಗಳನ್ನು ಪಡೆಯುತ್ತಾನೆ. ಒಬ್ಬನೇ ಪಾತ್ರಧಾರಿಯು ನಾಟಕದಲ್ಲಿ ಯಾವ ಯಾವ ವೇಷವನ್ನು ಧರಿಸುತ್ತಾನೋ ಆಯಾ ಹೆಸರು ಆತನಿಗೆ ಬಂದು ಬಿಡುತ್ತದೆ. ಇದೆಲ್ಲವೂ ಅಧ್ಯಾರೋಪದಿಂದ ಬಂದದ್ದು. ಅನಾದಿಯಾದ ಅಜ್ಞಾನದಿಂದ ಕೀಳುದರ್ಜೆಯ ಮನುಷ್ಯಾದಿದೇಹಗಳು ಪ್ರಾಪ್ತವಾಗಿರುತ್ತವೆ. ಅಧ್ಯಾತ್ಮ ವಿಚಾರದಿಂದ ಅಜ್ಞಾನವು ನಷ್ಟವಾದಾಗ, ಮನುಷ್ಯನು ಸ್ವಸ್ವರೂಪದಲ್ಲಿ ನಿಲ್ಲುತ್ತಾನೆ. ಪಾತ್ರಧಾರಿಯು ತನ್ನ ವೇಷವನ್ನು ಕಿತ್ತೆಸೆದು ನಿಜಸ್ವರೂಪದಲ್ಲಿ ನಿಲ್ಲುವಂತೆ ಇರುವುದೇ ಮೋಕ್ಷ.

ಕೂಟಸ್ಥನೆಂಬ ದೀಪವು ಬೆಳಗುತ್ತಿರುವಾಗ ಬುದ್ಧಿಯೆಂಬ ನರ್ತಕಿ ನಾನಾ ಬಗೆಯ ನೃತ್ಯಗಳನ್ನು ಮಾಡುತ್ತಾಳೆ. ಈ ನರ್ತನದ ಪ್ರಭು ಅಹಂಕಾರ. ಶಬ್ದಾದಿ ವಿಷಯಗಳು ಸಭಾಸದರು. ಇಂದ್ರಿಯಗಳು ತಾಳಗಳನ್ನು ಹಾಕುತ್ತವೆ.

ಮೃದಂಗಗಳನ್ನು ಬಾರಿಸುತ್ತವೆ. ವೀಣೆಯನ್ನು ನುಡಿಸುತ್ತವೆ. ಇದೇ ಸಂಸಾರ ನಾಟಕ. ಬಹುಕಾಲದಿಂದ ನಡೆಯುತ್ತಿರುವ ಈ ನಾಟಕಕ್ಕೆ ಅಂತ್ಯವೆ ತೋರದಾಗಿದೆ. ಈ ನಾಟಕವನ್ನು ಮುಗಿಸಬೇಕು - ಎಂಬುದು ಮುಮುಕ್ಷುವಿನ ಧ್ಯೇಯವಾಗಿರುತ್ತದೆ.

## ಆನಂದ ಪಂಚಕ

ಯೋಗಾನಂದ - ಮುಂತಾದ ಮುಂದಿನ ಐದು ಪ್ರಕರಣಗಳು ಬ್ರಹ್ಮಾನಂದಕ್ಕೆ . ಸೇರಿದವು. ''ಬ್ರಹ್ಮಾನಂದಂ ಪ್ರವಕ್ಷ್ಯಾಮಿ'' ಎಂದು ಈ ಪಂಚಕದ ಆರಂಭವಾಗಿದೆ. ಈ ಪ್ರಕರಣದಲ್ಲಿರುವುದೆಲ್ಲವೂ ಬ್ರಹ್ಮಾನಂದವೇ ಆದರೂ ನಿಮಿತ್ತಭೇದದಿಂದ ಐದು ವಿಭಾಗಗಳನ್ನು ಮಾಡಿದ್ದಾರೆ. ಈ ವಿಭಾಗವು ಪ್ರಪಂಚಾರ್ಥ.

### ೧೧. ಯೋಗಾನಂದ

ಯೋಗಿಯ ಅನುಭವಕ್ಕೆ ಬರುವ ಬ್ರಹ್ಮಾನಂದಕ್ಕೆ ಯೋಗಾನಂದವೆಂದು ಹೆಸರು. ''**ರಸೋ ವೈ ಸಃ** (ತೈ. ಉ. ೨-೬). **ರಸಂ ಹ್ಯೇವಾಯಂ ಲಬ್ಧ್ವಾನಂದೀ ಭವತಿ** '' (ತೈ. ಉ. ೨-೧) ಎಂದು ಶ್ರುತಿಯು ಹೇಳಿರುವುದರಿಂದ ರಸಸ್ವರೂಪನಾದ ಆತ್ಮನ ಜ್ಞಾನವಾದಾಗ ಮನುಷ್ಯನು ಆನಂದಮಯನಾಗಿ ಆನಂದ ಸ್ವರೂಪನೇ ಆಗಿಬಿಡುತ್ತಾನೆ. ವೇದ ಶಾಸ್ತ್ರಗಳನ್ನು ಓದಿದ ಮಾತ್ರದಿಂದ ಮಾನವನು ಸುಖಿಯಾಗುವುದಿಲ್ಲ. ''**ಯೋ ವೈ ಭೂಮಾ ತತ್ಸುಖಂ ನಾಲ್ಪೇ ಸುಖಮಸ್ತಿ**'' (ಛಾಂ. ಉ. ೭-೨೩-೧) ಭೂಮವಾದದ್ದು ಅದ್ವಿತೀಯ ಬ್ರಹ್ಮವೇ. ಅದು ಅದ್ವಿತೀಯವಾದ್ದರಿಂದ ಭಯಕ್ಕೆ ಇನ್ನೊಂದು ನಿಮಿತ್ತವೇ ಇಲ್ಲ. ಮನುಷ್ಯನು ಸುಷುಪ್ತಿಯನ್ನು ಬಯಸುವುದು ಸುಖಕ್ಕಾಗಿ. ಸುಷುಪ್ತಿಯಲ್ಲಿ ವಿಷಯ ಭೋಗವಿಲ್ಲದೆಯೇ ಆನಂದದ ಅನುಭವವಾಗುತ್ತದೆ. ಆದ್ದರಿಂದ ಸ್ವಸ್ವರೂಪವೇ ಆನಂದವೆಂದು ಸಿದ್ಧವಾಗುತ್ತದೆ. ಬ್ರಹ್ಮಾನಂದ, ವಾಸನಾನಂದ, ವಿಷಯಾನಂದ - ಎಂದು ಆನಂದವು ಮೂರು ವಿಧ. ಅದ್ವೈತಾನಂದ , ವಿದ್ಯಾನಂದ - ಮುಂತಾದವು ಈ ಮೂರರಲ್ಲಿಯೇ ಸೇರಿ ಹೋಗುತ್ತವೆ. (ಶ್ಲೋಕ.೮೭). ಮನೋನಿಗ್ರಹದಿಂದಲೇ ಸುಖದ ಪ್ರಾಪ್ತಿ. ಇದು ಯೋಗಾನಂದವೆನಿಸಿದೆ. '**ತತ್ತ್ವಮಸಿ**' (ಛಾಂ. ಉ. ೬-೮-೭) ಮಹಾವಾಕ್ಯದ 'ತತ್' ಪದದ ವಿವರಣೆ ಇದು.

**೧೨. ಆತ್ಮಾನಂದ**

ಬುದ್ಧಿಶಾಲಿಗಳಿಗೆ ಯೋಗಾನಂದವು ಮಾರ್ಗದರ್ಶನ ಮಾಡುತ್ತದೆ. ಮಂದಪ್ರಜ್ಞರಿಗಾಗಿ ಈ ಆತ್ಮಾನಂದದ ಪ್ರಕರಣವಿದೆ. ಮಹಾವಾಕ್ಯದಲ್ಲಿರುವ 'ತ್ವಂ' ಪದದ ವಿವೇಚನೆ ಇಲ್ಲಿದೆ. ಪ್ರತಿಯೊಬ್ಬರೂ ಇನ್ನೊಬ್ಬರನ್ನಾಗಲಿ ಇನ್ನೊಂದು ವಸ್ತುವನ್ನಾಗಲಿ ಪ್ರೀತಿಸುವುದು ತಮ್ಮ ಸಂತೋಷಕ್ಕಾಗಿಯೇ ಸರಿ. ಇದನ್ನೇ ಯಾಜ್ಞ್ಯವಲ್ಕ್ಯರು ತಮ್ಮ ಪತ್ನಿಯಾದ ಮೈತ್ರೇಯಿಗೆ " **ನ ವಾ ಅರೇ ಪತ್ಯುಃ ಕಾಮಾಯ ಪತಿಃ ಪ್ರಿಯೋ ಭವತಿ, ಆತ್ಮನಸ್ತು ಕಾಮಾಯ ಪತಿಃ ಪ್ರಿಯೋ ಭವತಿ**" (ಬೃ.ಉ.೪-೫-೬) ಎಂದು ವಿಸ್ತಾರವಾಗಿ ತಿಳಿಸಿಕೊಟ್ಟಿದ್ದಾರೆ. ಆದ್ದರಿಂದ 'ನಾನು' ಎಂದುಕೊಳ್ಳುವ ಆತ್ಮನು ಅತ್ಯಂತ ಪ್ರಿಯನೂ ಆನಂದಸ್ವರೂಪನೂ ಆಗಿದ್ದಾನೆ. ಮಹಾವಾಕ್ಯದಲ್ಲಿ 'ತ್ವಂ' ಎಂದರೆ ಈ ಆತ್ಮ. ಆತನ ಸ್ವರೂಪವನ್ನು ವಿವೇಚಿಸುತ್ತ ಹೋದಾಗ ಈ ಶರೀರಕ್ಕೆ ಅತಿರಿಕ್ತನೂ ನಿರ್ಗುಣನೂ ಆನಂದಸ್ವರೂಪನೂ ಆದ ಪರಮಾತ್ಮನೇ ನಾನು ಎಂಬ ಅರಿವಾಗುವುದು. ಈ ಅರಿವು ದೃಢವಾಗಿ ಮನಸ್ಸಿನಲ್ಲಿ ನಿಲ್ಲಬೇಕು. ಈ ವಿಷಯವನ್ನಿಲ್ಲಿ ವಿಶದವಾಗಿ ಪ್ರತಿಪಾದಿಸಲಾಗಿದೆ.

**೧೩. ಅದ್ವೈತಾನಂದ**

ಬ್ರಹ್ಮಾನಂದವೇಯೋಗಜನ್ಯ ಸಾಕ್ಷಾತ್ಕಾರವಾದಾಗ ಯೋಗಾನಂದ ವೆನಿಸುತ್ತದೆ. ಇದು ಅದ್ವಿತೀಯವಾದ ಆತ್ಮಾನಂದವೆಂದು ಹೇಳಲಾಯಿತು. ಆತ್ಮನು ಯಾರೆಂದು ವಿವೇಚಿಸುವಾಗ ದೇಹವು ನಾನಲ್ಲ, ನಾನು ಪ್ರೀತಿಸುವುದು ನನಗಾಗಿ, ಅನ್ಯರಿಗಾಗಿ ಅಲ್ಲ - ಎಂದು ತಿಳಿಸಿದೆ. ಇದರಿಂದ ತನಗಿಂತ ಅತಿರಿಕ್ತ ವಸ್ತುವಿದೆಯೆಂದು ಪ್ರತೀತವಾಗುತ್ತದೆ. ಆಗ ಆತ್ಮಾನಂದವು ಅದ್ವಿತೀಯಾ ನಂದವಾಗುವುದು ಹೇಗೆ?- ಎಂಬ ಶಂಕೆ ಹುಟ್ಟುತ್ತದೆ. ಅದರ ನಿವಾರಣೆಗಾಗಿ ಈ ಪ್ರಕರಣ ಬಂದಿದೆ. ಆತ್ಮನ ಮಾಯಾಶಕ್ತಿಯು ಇಂದ್ರಜಾಲದಂತೆ ಈ ಜಗತ್ತನ್ನು ಕಲ್ಪಿಸಿರುವುದರಿಂದ ಈ ಜಗತ್ತಿಗೆ ಸತ್ಯವಾದ ಅಸ್ತಿತ್ವವಿಲ್ಲ. ಅದ್ವೈತವೇ ಪರಮಾರ್ಥ ಸ್ಥಿತಿ. ಆತ್ಮಾನಂದವು ಅದ್ವಿತೀಯವಾದ ಆತ್ಮಾನಂದವೇ ಸರಿ ಎಂಬುದರ ಪ್ರತಿಪಾದನೆ ಇಲ್ಲಿದೆ.

**೧೪. ವಿದ್ಯಾನಂದ**

ಉಪನಿಷತ್ ಮುಂತಾದ ಶಾಸ್ತ್ರಗಳ ಜ್ಞಾನವು ವಿದ್ಯೆ ಎನಿಸುತ್ತದೆ. ಇದರಿಂದಾಗುವ ವಿದ್ಯಾನಂದವು ಬುದ್ಧಿವೃತ್ತಿಯ ಪರಿಣಾಮ ವಿಶೇಷ

ವೆನ್ನಬಹುದು. ದುಃಖದ ಅಭಾವ, ಇಷ್ಟಪ್ರಾಪ್ತಿ, ನಾನು ಕೃತಕೃತ್ಯನಾದೆನೆಂಬ ನಂಬಿಕೆ, ಪ್ರಾಪ್ಯವಾದದ್ದು ನನಗೆ ದೊರೆಯಿತು ಎಂಬ ವಿಶ್ವಾಸ - ಇವು ನಾಲ್ಕು ವಿದ್ಯಾನಂದದ ಪ್ರಭೇದಗಳು. ಆತ್ಮನು ಜೀವಾತ್ಮ, ಪರಮಾತ್ಮ - ಎಂದು ಎರಡು ವಿಧವಾಗಿದ್ದಾನೆ. ಸ್ಥೂಲದೇಹ, ಸೂಕ್ಷ್ಮದೇಹ, ಕಾರಣದೇಹಗಳೊಡನೆ ಸೇರಿಕೊಂಡಾಗ ಅವನು ಜೀವಾತ್ಮನೆನಿಸುತ್ತಾನೆ. ಈ ಸ್ಥಿತಿಯಲ್ಲಿರುವ ಆತ್ಮನು ಭೋಕ್ತೃವಾಗಿರುತ್ತಾನೆ. ಸಚ್ಚಿದಾನಂದ ಸ್ವರೂಪನಾದ ಪರಮಾತ್ಮನು ನಾಮರೂಪಗಳನ್ನು ಮಾಯೆಯಿಂದ ಧರಿಸಿ ವಿಷಯ ಸ್ವರೂಪನಾಗಿ ಜೀವನಿಗೆ ಭೋಗ್ಯನಾಗಿಬಿಡುತ್ತಾನೆ. ಈ ಭೋಗ್ಯವೇ ಜಗತ್ತು. ಜೀವಾತ್ಮನ ಶರೀರತ್ರಯವೂ ಮಾಯಿಕವಾದದ್ದು. ವಿದ್ಯಾಬಲದಿಂದ ಈ ಶರೀರತ್ರಯವನ್ನು ಭೋಗ್ಯವಾದ ಜಗತ್ತನ್ನು ಅಲ್ಲಗಳೆದು ತಳ್ಳಿಹಾಕಿದಾಗ ಭೋಕ್ತನೂ ಇರುವುದಿಲ್ಲ. ಭೋಗ್ಯವೂ ಇರುವುದಿಲ್ಲ. ಸಚ್ಚಿದಾನಂದ ಸ್ವರೂಪನಾದ ಪರಮಾತ್ಮನೊಬ್ಬನೇ ಸತ್ಯವಸ್ತುವಾಗಿ ಉಳಿಯುತ್ತಾನೆ. ಆಗ ''**ಅಹಮನ್ನಂ, ಅಹಮನ್ನಾದಃ**'' (ತೈ.ಉ.೩-೧೦-೫) ಎಂಬ ಸಾಮಗಾನ ಹೊರಡುತ್ತದೆ. ದುಃಖಾಭಾವ - ಮುಂತಾದ ನಾಲ್ಕು ವಿಧದ ಆನಂದಗಳೂ ಒಟ್ಟಿಗೆ ಪ್ರಾಪ್ತವಾಗುತ್ತವೆ. ಆಗ ವಿದ್ಯಾನಂದವು ಬ್ರಹ್ಮಾನಂದವಾಗಿ ಬಿಡುತ್ತದೆ.

**೧೫. ವಿಷಯಾನಂದ**

ಶಬ್ದ, ಸ್ಪರ್ಶಾದಿ ವಿಷಯಗಳ ಸಂಬಂಧದಿಂದ ಜೀವಾತ್ಮನಿಗಾಗುವ ಆನಂದವು ವಿಷಯಾನಂದ. ಇದು ಬ್ರಹ್ಮಾನಂದವಲ್ಲವಾದರೂ ಅದರ ಒಂದು ಲೇಶವು ವಿಷಯಾನಂದವೆನಿಸಿದೆ. ''**ಏತಸ್ಯ ಮಾತ್ರಾಮುಪಜೀವಂತಿ**'' ಎಂದು ಉಪನಿಷತ್ತು ಹೇಳಿದೆ. ಲೇಶಮಾತ್ರವಾದ ವಿಷಯಾನಂದದಿಂದ ಅಖಂಡವಾದ ಬ್ರಹ್ಮಾನಂದ ಸ್ವರೂಪವನ್ನು ಊಹಿಸಿಕೊಳ್ಳಲು ಸಾಧ್ಯವಿದೆ. ಜೀವಾತ್ಮನಿಗೆ ಬ್ರಹ್ಮಾನಂದದ ಒಂದು ಕಣವಾದರೂ ಹೇಗೆ ಅನುಭವಕ್ಕೆ ಬರುತ್ತದೆಯೆಂಬುದರ ವಿವರಣೆ ಈ ಪ್ರಕರಣದಲ್ಲಿದೆ.

ಇದಿಷ್ಟು ಪಂಚದಶಿಯಲ್ಲಿರುವ ವಿಚಾರಗಳ ಸಾರ ಸಂಗ್ರಹ. ಇನ್ನು ವೇದಾಂತದಲ್ಲಿ ಉಳಿಯುವ ವಿಚಾರವಾದರೂ ಯಾವುದು? ಶ್ರೀಶಂಕರಭಗವತ್ಪಾದರು ಪ್ರಸ್ಥಾನತ್ರಯಭಾಷ್ಯಗಳಲ್ಲಿಯೂ ಇತರ ಪ್ರಕರಣ ಗ್ರಂಥಗಳಲ್ಲಿಯೂ ಪ್ರಸಂಗವಶದಿಂದ ಅಲ್ಲಲ್ಲಿ ಸುರಿಸಿದ ದ್ರಾಕ್ಷಾಫಲಗಳನ್ನು ಸಂಗ್ರಹಿಸಿ ತಂದು, ದ್ರಾಕ್ಷಾ ಪಾಕವನ್ನು ತಯಾರಿಸಿಕೊಟ್ಟಿದ್ದಾರೆ ಶ್ರೀವಿದ್ಯಾರಣ್ಯ

ಮಹಾಸ್ವಾಮಿಗಳು. ಗೀತೋಪನಿಷತ್ತುಗಳ ಸೂಕ್ತಿಮಧು ಬಿಂದುಗಳನ್ನು ಕೂಡಿಸಿ ಅಧ್ಯಾತ್ಮ ರಸಾಯನವನ್ನು ಮಾಡಿ ನೀಡಿದ್ದಾರೆ. ತತ್ತ್ವಜ್ಞಾನದಿಂದ ಕೃತಾರ್ಥನಾಗಬೇಕೆಂದು ಬಯಸುವ ಮುಮುಕ್ಷುವಿಗೆ ಈ ಗ್ರಂಥ ಒಂದೇ ಸಾಕು. ಮನಸ್ಸಿಗೆ ನಾಟುವಂತೆ ವಿದ್ಯಾರಣ್ಯಸ್ವಾಮಿಗಳು ಕೊಡುವ ವಿಪುಲ ದೃಷ್ಟಾಂತಗಳು ಇನ್ನೆಲ್ಲಿಯೂ ದೊರಕುವುದಿಲ್ಲ.

ಇಷ್ಟಾದರೂ ಪಂಚದಶಿಗೆ ವಿದ್ವತ್ ಸಮಾಜದಲ್ಲಿ ಅರ್ಹವಾದ ಸ್ಥಾನವು ದೊರಕಿಲ್ಲ. ಇದರಲ್ಲಿರುವ ಒಂದು ವಾಕ್ಯವನ್ನು ಉದಾಹರಿಸಿದರೆ 'ವಿಪಶ್ಚಿದಪಶ್ಚಿಮರು' ಅದನ್ನು ಗಣನೆಗೇ ತೆಗೆದುಕೊಳ್ಳುವುದಿಲ್ಲ. ಏಕೆಂದರೆ, ಪಂಚದಶಿಯಲ್ಲಿ ಅವಚ್ಛೇದಕಾವಚ್ಛಿನ್ನಗಳು ಹೊರೆಹೊರೆಯಾಗಿ ಉರುಳಿಲ್ಲ. ಘಟ, ಪಟ, ಕುಡ್ಯ, ಕುಸೂಲ, ಕವಾಟಗಳ 'ಢಬ ಢಬ' ಧ್ವನಿಯೂ ಇಲ್ಲ!

ಹೆಚ್ಚಿನ ವಾದವಿವಾದಗಳಿಗೆ ತೊಡಗದೆ ವೇದಾಂತ ಶಾಸ್ತ್ರಸಿದ್ಧಾಂತವನ್ನು ಸ್ಫುಟವಾಗಿ ತಿಳಿಯುವ ಇಚ್ಛೆ ಯಾರಿಗುಂಟೋ ಅವರಿಗೆ ಅತ್ಯಂತ ಉಪಯುಕ್ತವಾದದ್ದು ಈ ಪಂಚದಶೀಗ್ರಂಥ. ಇದು ಕನ್ನಡಿಗರಿಗೆ ನೆರವಾಗಲೆಂಬ ಉದ್ದೇಶದಿಂದ ಇದನ್ನು ಕನ್ನಡಕ್ಕೆ ಅನುವಾದಿಸಬೇಕೆಂಬ ಅಪೇಕ್ಷೆ ತಲೆದೋರಿತು. ಪಂಚದಶೀಪ್ರವಚನವೆಂಬ ಹೆಸರಿನಲ್ಲಿ ವಿವರಣ ಸಹಿತವಾದ ಅನುವಾದವನ್ನು ಬಿಡಿ ಲೇಖನಗಳ ರೂಪದಲ್ಲಿ ಬರೆಯಲಾರಂಭಿಸಿದೆ. ಈ ಲೇಖನಗಳು ಶೃಂಗೇರಿಯಿಂದ ಹೊರಡುವ **'ಶ್ರೀಶಂಕರಕೃಪಾ'** ಮಾಸಪತ್ರಿಕೆಯಲ್ಲಿ ಪ್ರಕಟವಾಗುತ್ತಿದ್ದವು. ಹೀಗೆ ಲೇಖನರೂಪದಲ್ಲಿ ಬರುತ್ತಿದ್ದರೆ ಗ್ರಂಥವನ್ನು ಪೂರ್ತಿಮಾಡಲು ಇನ್ನು ಹತ್ತು ವರ್ಷಗಳಾದರೂ ಬೇಕಾಗುವದೆಂದೂ ಬಿಡಿಲೇಖನಗಳಿಂದ ವಾಚಕರಿಗೆ ಪ್ರಯೋಜನ ವಾಗದೆಂದೂ ತೋರಿದ್ದರಿಂದ ಗ್ರಂಥದ ಅನುವಾದವನ್ನು ಒಟ್ಟಿಗೇ ಬರೆದು ಪೂರ್ಣಗೊಳಿಸಿದೆನು.

**'ಪಂಚದಶೀ ಪ್ರವಚನ'**ವೆಂಬ ಈ ಗ್ರಂಥವನ್ನು ಮುದ್ರಿಸಿ ಪ್ರಕಟಿಸಲು ಯಡತೊರೆಯ ಶ್ರೀಯೋಗಾನಂದೇಶ್ವರ ಸರಸ್ವತೀ ಮಠದಲ್ಲಿ ಸ್ಥಾಪಿತವಾಗಿರುವ **'ವೇದಾಂತ ಭಾರತೀ'** ಎಂಬ ಸಂಸ್ಥೆಯು ಅಪೇಕ್ಷಿಸಿತು. ಈ ವಿಚಾರವನ್ನು ನಾನು **ಶ್ರೀಶೃಂಗೇರಿ ಜಗದ್ಗುರು ಪೀಠದಲ್ಲಿ** ವಿರಾಜಮಾನರಾಗಿರುವ ಪರಮ ಪೂಜ್ಯ **ಶ್ರೀಶ್ರೀಭಾರತೀ ತೀರ್ಥಮಹಾಸ್ವಾಮಿಗಳ** ಸಾನ್ನಿಧ್ಯದಲ್ಲಿ ಅರಿಕೆ ಮಾಡಿಕೊಂಡಾಗ ಅವರು

ಸಂತೋಷದಿಂದ ಸಂಮತಿಸಿದರಲ್ಲದೆ, ಈ ಗ್ರಂಥಕ್ಕೆ ಶ್ರೀಮುಖವನ್ನೂ ಅನುಗ್ರಹಿಸಿ ಹರಸಿದ್ದಾರೆ. ಪೂಜ್ಯ ಶ್ರೀಮಹಾಸ್ವಾಮಿಗಳ ಕೃಪಾದೃಷ್ಟಿಯು ನನ್ನ ಮೇಲೆ ಒಂದೇ ಪ್ರಕಾರವಾಗಿ ಹರಿಯುತ್ತಿರುವುದನ್ನು ಅರಿತು ನಾನು ಧನ್ಯನಾದೆನೆಂದುಕೊಂಡಿದ್ದೇನೆ. **ಶ್ರೀ ಜಗದ್ಗುರು ಮಹಾಸ್ವಾಮಿಗಳ** ಪವಿತ್ರಚರಣಗಳಿಗೆ ಸಾಷ್ಟಾಂಗ ಪ್ರಣಾಮಗಳನ್ನು ಅರ್ಪಿಸುತ್ತೇನೆ.

ಯಡತೊರೆಯ **ವೇದಾಂತಭಾರತೀ** ಸಂಸ್ಥೆಯ ಅಧ್ಯಕ್ಷರೂ ಶ್ರೀ ಯೋಗಾನಂದೇಶ್ವರ ಸರಸ್ವತೀ ಮಠಾಧಿಪತಿಗಳೂ ಆದ **ಶ್ರೀಶ್ರೀ ಶಂಕರಭಾರತೀ ಮಹಾಸ್ವಾಮಿಗಳು** ಈ ಗ್ರಂಥವನ್ನು ವೇದಾಂತಭಾರತಿಯ ಮೂಲಕ ಪ್ರಕಟಿಸಲು ಆದೇಶವನ್ನಿತ್ತುದಲ್ಲದೆ ಶ್ರೀ ಮುಖದ್ವಾರಾ ಅನುಗ್ರಹಿಸಿರುವುದರಿಂದ ಅವರಿಗೆ ನಾನು ಕೃತಜ್ಞತಾ ಪೂರ್ವಕವಾದ ಸಾಷ್ಟಾಂಗ ನಮಸ್ಕಾರಗಳನ್ನು ಅರ್ಪಿಸುತ್ತೇನೆ.

ವಿದ್ವಾನ್ ಅನಂತಶರ್ಮಾ, ಭುವನಗಿರಿ ಮತ್ತು ಚಿ. ಶಂಕರಭಟ್ಟ ಇವರು ಈ ಪುಸ್ತಕದ ಕರಡನ್ನು ಶೋಧಿಸಲು ನೆರವಾಗಿದ್ದಾರೆ. ವಿದ್ವಾನ್ ಜಿ. ಮಹಾಬಲೇಶ್ವರ ಭಟ್ಟರು, ಅವರ ಧರ್ಮಪತ್ನಿ ವಿದುಷಿ ಶ್ರೀಮತಿ ವಿಜಯಲಕ್ಷ್ಮಿ -ಈ ದಂಪತಿಗಳು ಈ ಪಂಚದಶೀ ಪ್ರವಚನದ ಕರಡು ಶೋಧನೆ ಮತ್ತು ಮುದ್ರಣದ ಪರಿಷ್ಕಾರಾದಿಕಾರ್ಯಗಳಲ್ಲಿ ನನಗೆ ತುಂಬಾ ಸಹಾಯವನ್ನು ಮಾಡಿದ್ದಾರೆ. ಈ ಚಿರಂಜೀವಿಗಳೆಲ್ಲರನ್ನು ಭಗವಂತನು ಅನುಗ್ರಹಿಸಲೆಂದೂ ಶ್ರೀ ವಿದ್ಯಾರಣ್ಯಮಹಾಸ್ವಾಮಿಗಳ ಕೃಪಾದೃಷ್ಟಿ ಇವರ ವಿಷಯದಲ್ಲಿ ನಿರಂತರವಾಗಿರಲೆಂದೂ ಪ್ರಾರ್ಥಿಸಿಕೊಳ್ಳುತ್ತೇನೆ. ಈ ಗ್ರಂಥದಿಂದ ವೇದಾಂತ ಜಿಜ್ಞಾಸುಗಳಾದ ಕನ್ನಡಿಗರಿಗೆ ವಿಶೇಷ ಪ್ರಯೋಜನವಾದರೆ ನನ್ನ ಶ್ರಮ ಸಾರ್ಥಕವಾಯಿತೆಂದು ಭಾವಿಸುತ್ತೇನೆ.

ಬೆಂಗಳೂರು **- ವಿದ್ವಾನ್ ಎನ್. ರಂಗನಾಥ ಶರ್ಮಾ**

೧.೧೦.೨೦೦೩

# ಪರಿವಿಡಿ

## ★ ವಿವೇಕಪಂಚಕ



## ★★ ದೀಪಪಂಚಕ



## ★★★ ಆನಂದಪಂಚಕ

## ಸಂಕೇತಾಕ್ಷರಗಳ ವಿವರ

| | |
|---|---|
| ಅ.ಬಿಂ. | ಅಮೃತಬಿಂದೂಪನಿಷತ್ |
| ಋ.ವೇ. | ಋಗ್ವೇದ |
| ತೈ.ಸಂ. | ತೈತ್ತರೀಯಸಂಹಿತಾ |
| ಐ.ಉ. | ಐತರೇಯೋಪನಿಷತ್ |
| ಕಠ.ಉ. | ಕಠೋಪನಿಷತ್ |
| ಕೇ.ಉ. | ಕೇನೋಪನಿಷತ್ |
| ಭ.ಗೀ. | ಭಗವದ್ಗೀತಾ |
| ಛಾಂ.ಉ. | ಛಾಂದೋಗ್ಯೋಪನಿಷತ್ |
| ತೈ.ಉ. | ತೈತ್ತರೀಯೋಪನಿಷತ್ |
| ನೃ.ಉ.ತಾ.ಉ. | ನೃಸಿಂಹೋತ್ತರತಾಪನೀಯೋಪನಿಷತ್ |
| ನೃ.ಪೂ.ತಾ.ಉ. | ನೃಸಿಂಹಪೂರ್ವತಾಪನೀಯೋಪನಿಷತ್ |
| ನೈ.ಸಿ. | ನೈಷ್ಕರ್ಮ್ಯಸಿದ್ಧಿ |
| ಪಂ.ದ. | ಪಂಚದಶೀ |
| ಪ್ರ.ಉ. | ಪ್ರಶ್ನೋಪನಿಷತ್ |
| ಪಾ.ಶಿ. | ಪಾಣಿನೀಯಶಿಕ್ಷಾ |
| ಬೃ.ಉ. | ಬೃಹದಾರಣ್ಯಕೋಪನಿಷತ್ |
| ಬ್ರ.ಬಿಂ. | ಬ್ರಹ್ಮಬಿಂದೂಪನಿಷತ್ |
| ಬ್ರ.ಸೂ. | ಬ್ರಹ್ಮಸೂತ್ರಗಳು |
| ಮೈ.ಉ. | ಮೈತ್ರಾಯಣೀಯೋಪನಿಷತ್ |
| ಮುಂ.ಉ. | ಮುಂಡಕೋಪನಿಷತ್ |
| ಮಾಂ.ಕಾ. | ಮಾಂಡೂಕ್ಯಕಾರಿಕಾ |
| ವಿ.ಪು. | ವಿಷ್ಣುಪುರಾಣ |
| ಶ್ವೇ.ಉ. | ಶ್ವೇತಾಶ್ವತರೋಪನಿಷತ್ |
| ಹಂ.ಉ. | ಹಂಸೋಪನಿಷತ್ |
| ಮಾಂ.ಉ. | ಮಾಂಡೂಕ್ಯೋಪನಿಷತ್ |
| ಯೋ.ಸೂ. | ಯೋಗಸೂತ್ರ |
| ಗೀ.ಭಾ. | ಗೀತಾಭಾಷ್ಯ |
| ಈ.ವಾ.ಉ. | ಈಶಾವಾಸ್ಯೋಪನಿಷತ್ |
| ಯೋ.ಶಿ. | ಯೋಗಶಿಕ್ಷಾ |
| ಶಂ.ಭಾಷ್ಯ. | ಶಂಕರಭಾಷ್ಯ |

# ಪಂಚದಶೀ ಪ್ರವಚನ

ಪಂಚದಶಿಯು ಶ್ರೀವಿದ್ಯಾರಣ್ಯಸ್ವಾಮಿಗಳಿಂದ ವಿರಚಿತವಾದ ವೇದಾಂತಗ್ರಂಥ. ಶ್ರೀ ಶಂಕರಭಗವತ್ಪಾದರ ಅನಂತರ ಇವರು ವೈದಿಕ ಧರ್ಮರಕ್ಷಣೆಗಾಗಿ ಶ್ರಮಿಸಿದ ಮಹಾಪುರುಷರಲ್ಲಿ ಅಗ್ರಗಣ್ಯರು. ಶ್ರೀವಿದ್ಯಾರಣ್ಯಮುನಿಗಳೆಂದು ಮುನಿಶಬ್ದದಿಂದಲೂ ಗೌರವವನ್ನು ಪಡೆದ ತಪಸ್ವಿಗಳು. ಶ್ರೀಶೃಂಗೇರಿಶಾರದಾಜಗದ್ಗುರುಪೀಠದಲ್ಲಿ ವಿರಾಜಿಸಿದವರು.

ಈ ಲೇಖನಮಾಲೆಯಲ್ಲಿ ಪಂಚದಶಿಯ ಎಲ್ಲ ಶ್ಲೋಕಗಳಿಗೂ ಅನುವಾದಸಹಿತ ವಿವರಣೆಯನ್ನು ನೀಡಲಾಗುವುದು. ಲೇಖನವು ವಿಸ್ತಾರವಾಗುವುದರಿಂದಲೂ ಸಾಮಾನ್ಯಜನರಿಗೆ ಅನಾವಶ್ಯಕವಾದ್ದರಿಂದಲೂ ಸಂಸ್ಕೃತ ಶ್ಲೋಕಗಳನ್ನು ಬರೆಯುವುದಿಲ್ಲ. ಸ್ಮರಣೆಯಲ್ಲಿಟ್ಟುಕೊಳ್ಳಬೇಕಾದ ಮುಖ್ಯ ಶ್ಲೋಕಗಳನ್ನು ಮಾತ್ರ ಬರೆಯಲಾಗುವುದು. ಓದುಗರ ಸೌಕರ್ಯಕ್ಕಾಗಿ ಯಾವ ಶ್ಲೋಕಗಳ ವಿವರಣೆಯೆಂದು ತಿಳಿಸುವುದಕ್ಕಾಗಿ ಶ್ಲೋಕಸಂಖ್ಯೆಗಳನ್ನು ಮಾತ್ರ ತಿಳಿಸಲಾಗುವುದು. ಇದು ಲೇಖನರೂಪದಲ್ಲಿರುವ ಪ್ರವಚನ. ಇದು ಆಯಾ ಶ್ಲೋಕಗಳಿಗೆ ಸೀಮಿತವಾಗಿರುತ್ತದೆ.

ಈ ಗ್ರಂಥದಲ್ಲಿ ವಿವೇಕ, ದೀಪ, ಆನಂದ ಎಂಬ ಮೂರು ವಿಭಾಗಗಳಿದ್ದು ಒಂದೊಂದು ವಿಭಾಗದಲ್ಲಿ ಐದೈದು ಪ್ರಕರಣಗಳಿವೆ. ಒಟ್ಟು ಹದಿನೈದು ಪ್ರಕರಣಗಳಿರುವುದರಿಂದ ಈ ಕೃತಿಗೆ ಪಂಚದಶೀ ಎಂಬ ಹೆಸರು ಬಂದಿದೆ.

## ೧. ತತ್ತ್ವವಿವೇಕಪ್ರಕರಣ

**ನಮಃ ಶ್ರೀಶಂಕರಾನಂದಗುರುಪಾದಾಂಬುಜನ್ಮನೇ ।**
**ಸವಿಲಾಸಮಹಾಮೋಹಗ್ರಾಹಗ್ರಾಸೈಕಕರ್ಮಣೇ ॥**

ಗ್ರಂಥಾರಂಭದಲ್ಲಿ ಮಂಗಳಾರ್ಥವಾಗಿ ತಮ್ಮ ಗುರುಗಳಾದ ಶ್ರೀ ಶಂಕರಾನಂದಸ್ವಾಮಿಗಳಿಗೆ ಅರ್ಪಿಸಿದ ಪ್ರಣಾಮವಿದು. ಶ್ರೀಶಂಕರಾನಂದ ಗುರುಗಳ ಪಾದಕಮಲಕ್ಕೆ ನಮಸ್ಕಾರ. ಪಾದಕಮಲ ವೆಂತಹದು? ತನ್ನ ವಿಲಾಸಪ್ರಪಂಚದಿಂದ ಸಹಿತವಾದ ಯಾವ ಮಹತ್ತರವಾದ ಅಜ್ಞಾನವುಂಟೋ ಆ ಅಜ್ಞಾನವೆಂಬ ಮೊಸಳೆಯನ್ನು ನುಂಗಿಹಾಕುವ ಕಾರ್ಯದಲ್ಲಿ ಸದಾ ತೊಡಗಿರ ತಕ್ಕದ್ದು.

ಶ್ರೀ ಎಂದರೇನು? **'ಋಚಃ ಸಾಮಾನಿ ಯಜೂಂಷಿ,ಸಾ ಹಿ ಶ್ರೀರಮೃತಾ ಸತಾಂ'** (ತೈ.ಸಂ.) ಎಂದು ವೇದವು ಹೇಳುತ್ತದೆ. ವೇದವೇದಾರ್ಥ ಜ್ಞಾನವೆಂದರ್ಥ. ಇದರಿಂದ ಕೂಡಿದವರು ಶಂಕರಾನಂದ ಗುರುಗಳು. ಶ್ರೀ ಶಂಕರನೆಂಬ ಆನಂದಸ್ವರೂಪದ ಗುರುಗಳು. ಇದು ಈಶ್ವರನಿಗೂ ಅನ್ವಯಿಸುತ್ತದೆ. ಆತನು ಬ್ರಹ್ಮನೇ ಮೊದಲಾದವರಿಗೂ ಗುರುವಾಗಿ ಲೋಕಗುರುವೆನಿಸಿದ್ದಾನೆ. **''ಪೂರ್ವೇಷಾಮಪಿ ಗುರುಃ ಕಾಲೇನಾನವಚ್ಛೇದಾತ್''** ಎಂದು ಯೋಗಸೂತ್ರವು ಹೇಳಿದೆ. (ಯೋಗ ೧-೨೬) ಶ್ರೀಶಂಕರಾನಂದ ಸ್ವಾಮಿಗಳಿಗೂ ಈಶ್ವರನಿಗೂ ಅಭೇದವೆಂದೂ ಇದರಿಂದ ವ್ಯಕ್ತವಾಗುತ್ತದೆ. ಶ್ರೀಶಂಕರಾನಂದ ಸ್ವಾಮಿಗಳು ಬ್ರಹ್ಮಜ್ಞಾನಿಗಳು. 'ಬ್ರಹ್ಮ ವೇದ ಬ್ರಹ್ಮೈವ ಭವತಿ' (ಮುಂ.ಉ.೩-೨-೯) ಎಂಬ ಶ್ರುತಿವಾಕ್ಯದಂತೆ ಬ್ರಹ್ಮಜ್ಞಾನಿಯು ಬ್ರಹ್ಮವೆಂದೇ ತಿಳಿಯತಕ್ಕದ್ದು.

ಶ್ಲೋಕದಲ್ಲಿರುವ 'ಪಾದಾಂಬುಜನ್ಮ' ಎಂಬುದರ ಅರ್ಥವು ಪಾದ ಕಮಲವೆಂದು. ಇದಕ್ಕೆ ಎರಡು ಅರ್ಥಗಳನ್ನು ಹೇಳಬಹುದು.

೧. ಪಾದವೇ ಕಮಲ ಎಂದು ರೂಪಕ. ಈ ಪಕ್ಷದಲ್ಲಿ ಪಾದವನ್ನು ಕಮಲವೆಂದೇ ತಿಳಿಯಬೇಕು. ಕಮಲವು ಅಜ್ಞಾನವೆಂಬ ಮೊಸಳೆಯನ್ನು ನುಂಗಲಾರದು. ಆದ್ದರಿಂದ ಮತ್ತೆ ಕಮಲವನ್ನು ಪಾದವನ್ನಾಗಿಯೂ ಮೊಸಳೆಯನ್ನು ಅಜ್ಞಾನವನ್ನಾಗಿಯೂ ಪರಿಣಮಿಸಿಕೊಳ್ಳಬೇಕು. ಗುರುಪಾದವು ಸೇವೆಮಾಡುವ ಶಿಷ್ಯನ ಅಜ್ಞಾನವನ್ನು ಹೋಗಲಾಡಿಸಲು ಸಮರ್ಥವಾಗಿದೆ. ಹೀಗೆ ಪರಿಣಾಮಗೊಳಿಸಿಕೊಳ್ಳಬೇಕಾದ್ದರಿಂದ ಇದಕ್ಕೆ ಪರಿಣಾಮಾಲಂಕಾರ ಎನ್ನುತ್ತಾರೆ.

೨. ಕಮಲದಂತಿರುವ ಪಾದ ಎಂದೂ ಅರ್ಥ ಹೇಳಬಹುದು. ಆಗ ಪಾದವೇ ಮುಖ್ಯಾರ್ಥವಾಗುತ್ತದೆ. ಇದು ಉಪಮಾಲಂಕಾರ. ಹೀಗೆಯೇ ಮೊಸಳೆಯಂತಿರುವ ಅಜ್ಞಾನ ಎಂದು ವಿಗ್ರಹವನ್ನು ಹೇಳಿದರೆ ಅಜ್ಞಾನವು ಮುಖ್ಯಾರ್ಥವಾಗುತ್ತದೆ. ಗುರುಪಾದವು ಅಜ್ಞಾನವನ್ನು ಹೋಗಲಾಡಿಸುತ್ತದೆ, ಎಂಬುದು ಸ್ಪಷ್ಟವಾಗಿಯೇ ಇದೆ. (೧)

ಮನುಷ್ಯನು ಹಿಂದಿನ ನಾನಾಜನ್ಮಗಳಲ್ಲಿ ಮಾಡಿದ ಕರ್ಮಗಳಿಂದ ಆತನ ಅಂತಃಕರಣದಲ್ಲಿ ಕಾಮ, ಕ್ರೋಧ, ದ್ವೇಷ-ಮೊದಲಾದವು ಸಂಸ್ಕಾರ

ರೂಪದಿಂದ ಬಂದು ತುಂಬಿಕೊಂಡಿರುತ್ತವೆ. ಇವುಗಳಿಂದ ಅಂತಃಕರಣವು ಕೊಳೆಯಿಂದ ತುಂಬಿದ ನೀರಿನಂತೆ ಅಥವಾ ಕನ್ನಡಿಯಂತೆ ಮಲಿನವಾಗಿರುತ್ತದೆ. ಕೊಳೆಯಾದ ನೀರಲ್ಲಾಗಲಿ ಕನ್ನಡಿಯಲ್ಲಾಗಲಿ ಪ್ರತಿಬಿಂಬವು ಮೂಡುವುದಿಲ್ಲ. ಅಂತೆಯೇ ಮಲಿನವಾದ ಅಂತಃಕರಣದಲ್ಲಿ ಗುರೂಪದೇಶವು ಪ್ರತಿಬಿಂಬಿಸುವುದಿಲ್ಲ. ಯಾರು ಶ್ರದ್ಧೆಯಿಂದ ಗುರುಶುಶ್ರೂಷೆಯನ್ನು ಮಾಡುತ್ತಾರೋ ಅವರ ಅಂತಃಕರಣವು ಹಿಂದಿನ ಮಲಿನಸಂಸ್ಕಾರಗಳನ್ನು ದೂರಮಾಡಿ ನಿರ್ಮಲವಾಗುತ್ತದೆ. ಹೀಗೆ ಅಂತಃಕರಣವು ನಿರ್ಮಲವಾದವರಿಗೆ ಮುಂದೆ ಹೇಳುವ ತತ್ತ್ವವಿವೇಕವು ಸುಲಭವಾಗಿ ಅರ್ಥವಾಗುತ್ತದೆ. ತತ್ತ್ವವೆಂದರೆ ಸರ್ವದಾ ಸತ್ಯವಾಗಿ ಇರತಕ್ಕದ್ದು. ಅದು ಅಖಂಡ ಪರಮಾನಂದಸ್ವರೂಪವಾದ ಆತ್ಮ. ಜನರು ಆತ್ಮನು ಯಾರೆಂಬುದನ್ನರಿಯದೆ ದೇಹೇಂದ್ರಿಯಾದಿಗಳನ್ನು ಸೇರಿಸಿ ಕಲಬೆರಕೆ ಮಾಡಿಕೊಂಡು ತೊಳಲುತ್ತಿದ್ದಾರೆ. ಈ ಆತ್ಮನಿಂದ ದೇಹೇಂದ್ರಿಯಾದಿಗಳನ್ನು ಪೃಥಕ್ಕರಿಸುವುದೇ ವಿವೇಕ. ವಿವೇಕವೇ ವಿವೇಚನೆ. ಹೀಗೆ ವಿವೇಚನೆ ಮಾಡಿದಾಗ ಆತ್ಮನು ಯಾರೆಂಬುದು ಸ್ಪಷ್ಟವಾಗುವುದು. (೨)

ಮನುಷ್ಯನಿಗೆ ಶ್ರೋತ್ರ (ಕಿವಿ), ತ್ವಕ್ (ಚರ್ಮ), ನೇತ್ರ, ಜಿಹ್ವಾ (ನಾಲಿಗೆ), ಘ್ರಾಣ ಅಥವಾ ನಾಸಿಕಾ (ಮೂಗು) ಎಂಬ ಐದು ಜ್ಞಾನೇಂದ್ರಿಯಗಳಿವೆ. ಈ ಪಂಚ ಜ್ಞಾನೇಂದ್ರಿಯಗಳು ಶಬ್ದ, ಸ್ಪರ್ಶ, ರೂಪ, ರಸ, ಗಂಧ - ಎಂಬ ಐದು ವಿಷಯಗಳನ್ನು ಕ್ರಮವಾಗಿ ತಿಳಿಸಬಲ್ಲವು. ಕಣ್ಣಿಗೆ ಕಾಣಿಸುವ ಕಿವಿ ಮೊದಲಾದವೇ ಇಂದ್ರಿಯಗಳಲ್ಲ. ಅವು ಇಂದ್ರಿಯಗಳಿರುವ ಗೋಳಕಗಳು. ಅವುಗಳಲ್ಲಿರುವ ಇಂದ್ರಿಯಗಳು ಸೂಕ್ಷ್ಮವಾದವು. ಅವುಗಳನ್ನೇ ಶ್ರೋತ್ರೇಂದ್ರಿಯ, ತ್ವಗಿಂದ್ರಿಯ ಇತ್ಯಾದಿ ಹೆಸರುಗಳಿಂದ ವ್ಯವಹರಿಸುತ್ತೇವೆ. ಈ ಇಂದ್ರಿಯಗಳಿಂದ ಶಬ್ದ, ಸ್ಪರ್ಶ - ಮೊದಲಾದವನ್ನು ಗ್ರಹಿಸುತ್ತೇವೆ. ಈ ಜ್ಞಾನೇಂದ್ರಿಯಗಳಿಂದ ಶಬ್ದಜ್ಞಾನ, ಸ್ಪರ್ಶಜ್ಞಾನ - ಮೊದಲಾದ ವಿಷಯಜ್ಞಾನಗಳಾಗುತ್ತವೆ. ಪ್ರತಿಯೊಬ್ಬರಿಗೂ ಜಾಗ್ರತ್, ಸ್ವಪ್ನ, ಸುಷುಪ್ತಿ - ಎಂಬ ಮೂರು ಅವಸ್ಥೆಗಳುಂಟು. ಇದೇ ಅವಸ್ಥಾತ್ರಯ, ಜಾಗ್ರತ್, ಜಾಗರ, ಜಾಗೃತಿ, ಜಾಗರಿತ, ಜಾಗರಣ - ಎಂಬ ಶಬ್ದಗಳ ಅರ್ಥ ಒಂದೇ. ಸ್ವಪ್ನವೆಂದರೆ ಕನಸು, ಸುಷುಪ್ತಿಯೆಂದರೆ ಕನಸಲ್ಲದ ಗಾಢನಿದ್ರೆ. ಇದನ್ನು ತನಿನಿದ್ರೆಯೆಂದೂ ಹೇಳುತ್ತಾರೆ. ಜಾಗ್ರತ್ ಎಂದರೇನು? ''**ಇಂದ್ರಿಯೈಃ ಅರ್ಥೋಪಲಬ್ಧಿಃ**

**ಜಾಗರಿತಮ್''** - ಮೇಲೆ ಹೇಳಿದ ಜ್ಞಾನೇಂದ್ರಿಯಗಳ ಮೂಲಕ ಶಬ್ದಸ್ಪರ್ಶಾದಿ ವಿಷಯಗಳನ್ನರಿಯುವ ಸ್ಥಿತಿಗೆ ಜಾಗ್ರತ್ ಎಂದು ಹೆಸರು. ನಮ್ಮ ಲೋಕವ್ಯವಹಾರವು ಈ ಜಾಗ್ರದವಸ್ಥೆಯಲ್ಲಿ ನಡೆಯುತ್ತದೆ. ಶಬ್ದಜ್ಞಾನ, ಸ್ಪರ್ಶಜ್ಞಾನಗಳಂತೆಯೇ ಘಟದ ರೂಪವನ್ನು ನೋಡಿದಾಗ ಘಟಜ್ಞಾನ, ಪಟದರೂಪವನ್ನು ನೋಡಿದಾಗ ಪಟಜ್ಞಾನವೂ ಬರುತ್ತವೆ. ಸಿಹಿ, ಕಹಿ ಎಂಬ ರಸಜ್ಞಾನ, ಸುಗಂಧ ದುರ್ಗಂಧವೆಂಬ ಗಂಧಜ್ಞಾನ ಮುಂತಾದವೂ ಜಾಗ್ರತ್ತಿನಲ್ಲಿ ಇಂದ್ರಿಯಗಳ ಮೂಲಕ ಬರುತ್ತವೆ. ಹಾಗೆ ವ್ಯವಹಾರದಲ್ಲಿ ನೂರಾರು ಪದಾರ್ಥಗಳ ಜ್ಞಾನವು ಬರುತ್ತದೆ. ಇಲ್ಲಿ ವಿವೇಚಿಸಬೇಕಾದ್ದೇನೆಂದರೆ, ಶಬ್ದ ಸ್ಪರ್ಶ ಘಟ ಪಟ ಮೊದಲಾದವೆಲ್ಲವೂ ಜ್ಞಾನದ ವಿಷಯಗಳು. ಈ ವಿಷಯಗಳು ನಾನಾ ರೂಪವಾಗಿವೆ. ಇವನ್ನು ಗ್ರಹಿಸುವ ಜ್ಞಾನ ಒಂದೇ. ವಿಷಯವೆಲ್ಲವೂ ವೇದ್ಯ - ಜ್ಞೇಯ - ಜ್ಞಾನಕ್ಕೆ ಗೋಚರ. ವಿಷಯಗಳನ್ನು ಪ್ರತ್ಯೇಕಿಸಿ ತೆಗೆದು ಬಿಟ್ಟರೆ ಜ್ಞಾನ ಒಂದೇ ಏಕರೂಪವಾಗಿ ಉಳಿದುಕೊಳ್ಳುತ್ತದೆ. ಅದರಲ್ಲಿ ಯಾವ ಭೇದವೂ ಇಲ್ಲ, ಭೇದ ತೋರುವುದು ವಿಷಯಗಳ ಸಂಬಂಧದಿಂದ. ಹೀಗೆ ವಿವೇಚನಾಬುದ್ಧಿಯಿಂದ ವಿಷಯಗಳನ್ನು ಪೃಥಕ್ಕರಿಸಿದಾಗ, ಏಕರೂಪವಾಗಿ ಉಳಿದುಕೊಳ್ಳತಕ್ಕ ಜ್ಞಾನಕ್ಕೆ ಸಂವಿತ್ ಎಂದು ಹೆಸರಿದೆ. ಇದು ವಿಷಯಸಂಬಂಧವಿಲ್ಲದ ಕೇವಲ ಜ್ಞಾನ (೩). ಈಗ ಸ್ವಪ್ನದ ವಿಚಾರವನ್ನು ಮಾಡೋಣ. ಜಾಗರದಲ್ಲಿ ನಾವು ಹಲವಾರು ವಿಷಯಗಳನ್ನು ನೋಡಿ, ಕೇಳಿ, ವಿಚಾರಿಸಿರುತ್ತೇವೆ. ಇದರಿಂದ ಅಂತಃಕರಣದ ಮೇಲೆ ಒಂದು ಪರಿಣಾಮ ಅಥವಾ ಪ್ರಭಾವ ಉಂಟಾಗಿರುತ್ತದೆ. ಇದನ್ನು ಸಂಸ್ಕಾರ ಎನ್ನುತ್ತಾರೆ. ಈ ಸಂಸ್ಕಾರವಿರುವುದರಿಂದಲೇ ಹಿಂದೆ ಅನುಭವಿಸಿದ್ದರ ಸ್ಮರಣೆ ಬರುತ್ತದೆ. ಯಾವುದನ್ನು ನೋಡಿಲ್ಲವೋ ಕೇಳಿಲ್ಲವೋ ಅನುಭವಿಸಿಲ್ಲವೋ ಅದರ ಸ್ಮರಣೆ ಎಂದಿಗೂ ಬರುವುದಿಲ್ಲ. ಸ್ವಪ್ನದ ಸಮಯದಲ್ಲಿ ಜ್ಞಾನೇಂದ್ರಿಯಗಳೆಲ್ಲವೂ ವಿಶ್ರಮಿಸುತ್ತವೆ. ಅವು ಕೆಲಸಮಾಡುತ್ತಿರುವುದಿಲ್ಲ. ಆಗ ಕನಸು ಬೀಳುತ್ತದೆ. ಕನಸು ಮನಸ್ಸಿನಲ್ಲುಂಟಾಗುವ ಸ್ಮರಣೆ. ಪಂಚ ಇಂದ್ರಿಯಗಳು ಕೆಲಸಮಾಡದೆ ವಿಶ್ರಮಿಸುತ್ತಿರುವಾಗ ಮನಸ್ಸಿನಲ್ಲಾಗುವ ಸ್ಮರಣೆಯನ್ನು ಸ್ವಪ್ನ ಎನ್ನಬಹುದು. ಈ ಸ್ವಪ್ನದಲ್ಲಿ ಯಾವುದೋ ಗೃಹವನ್ನೋ ಹುಲಿಯನ್ನೋ ನೋಡಬಹುದು. ಆಗಲೂ ಗೃಹಜ್ಞಾನ, ವ್ಯಾಘ್ರಜ್ಞಾನ ಮೊದಲಾದ ಜ್ಞಾನಗಳುಂಟಾಗುತ್ತವೆ. ಈ ಗೃಹ, ವ್ಯಾಘ್ರಗಳು ಸ್ಥಿರವಾದವಲ್ಲ, ಎಚ್ಚರವಾದ ಮೇಲೆ ಮಾರನೇದಿನ

ಇರುವುದೇ ಇಲ್ಲ. ಜಾಗ್ರತ್ತಿನಲ್ಲಾದದ್ದು ಹಾಗಲ್ಲ, ಜಾಗ್ರತ್ತಿನಲ್ಲಿ ಕಂಡ ಮನೆ ಮೊದಲಾದವು ಮಾರನೆಯ ದಿನವೂ ಇರುತ್ತವೆ. ಆದ್ದರಿಂದ ಸ್ವಪ್ನ, ಜಾಗ್ರತ್ತುಗಳು ಬೇರೆ ಬೇರೆ. ಜಾಗ್ರತ್ತಿನಲ್ಲಿ ವಿಷಯವು ಸ್ಥಿರ, ಸ್ವಪ್ನದಲ್ಲಿ ಅಸ್ಥಿರ. ಹೀಗೆ ವಿಷಯಗಳಲ್ಲಿ ಭೇದವಿದೆಯೇ ಹೊರತು ಅವುಗಳ ಕೇವಲಜ್ಞಾನದಲ್ಲಿ ಯಾವ ಭೇದವೂ ಇಲ್ಲ. ಜಾಗ್ರತ್ತಿನಲ್ಲಾಗುವ ಸಂವಿತ್, ಕನಸಿನಲ್ಲಾಗುವ ಸಂವಿತ್ ಏಕರೂಪವಾದದ್ದು. ಅವುಗಳಲ್ಲಿ ಭೇದವಿಲ್ಲ ಎಂದು ಸಿದ್ಧವಾಯಿತು (೪). ಜಾಗ್ರತ್ತಿನಲ್ಲಿ ಹುಟ್ಟುವ ಘಟಾದಿಜ್ಞಾನದಂತೆ ಕನಸಿನಲ್ಲಿಯೂ ಅಂತಹ ಜ್ಞಾನವು ಹುಟ್ಟುತ್ತದೆ. ಘಟ, ಅಶ್ವ, ಗೃಹ - ಮೊದಲಾದವು ಜ್ಞಾನಕ್ಕೆ ಅಂಟಿಕೊಂಡಿರುವ ಉಪಾಧಿಗಳು. ಇವನ್ನು ಕಳಚಿಹಾಕಿದರೆ ಉಳಿಯುವ ಶುದ್ಧಜ್ಞಾನವು ಏಕರೂಪವಾದದ್ದು. ಇದನ್ನೇ ಸಂವಿತ್ ಎನ್ನುತ್ತಾರೆ - ಎಂದು ತಿಳಿಸಿದ್ದಾಗಿದೆ. ಈಗ ಸುಷುಪ್ತಿಯ ವಿಚಾರ. ಸುಷುಪ್ತಿಯೆಂದರೆ ಸ್ವಪ್ನವಿಲ್ಲದ ತನಿನಿದ್ರೆ. ಆಗ ಏನಾದರೂ ಜ್ಞಾನವಿರುತ್ತದೆಯೋ ಹೇಗೆ? ಆಗ ಏನೂ ಗೊತ್ತಾಗುವುದಿಲ್ಲವೆಂದೂ ಯಾವ ಜ್ಞಾನವೂ ಇರುವುದಿಲ್ಲವೆಂದೂ ಜನರು ಹೇಳುತ್ತಾರೆ. ಒಬ್ಬನು ತನಿನಿದ್ರೆಯಿಂದ ಎಚ್ಚೆತ್ತು ಕುಳಿತಾಗ -''ಅಯ್ಯಾ, ಇಷ್ಟು ಹೊತ್ತು ನಿದ್ರಿಸುತ್ತಿದ್ದೆಯಲ್ಲ, ಆಗ ಏನನ್ನು ಕಂಡೆ?''- ಎಂದು ಕೇಳಿರಿ. ಆತನು ''ನನಗೆ ಕನಸೇನೂ ಬೀಳಲಿಲ್ಲ ಗಾಢನಿದ್ರೆ ಬಂದಿತ್ತು. ಯಾವುದನ್ನೂ ನಾನು ಕಾಣಲಿಲ್ಲ. ನನಗೆ ಏನೂ ತಿಳಿಯಲಿಲ್ಲ'' - ಎಂದು ಉತ್ತರಿಸುತ್ತಾನೆ. ಹಾಗೆಂದರೇನು? ಹಾಗೆಂದರೆ, ಎಲ್ಲ ವಿಷಯಗಳ ಅಜ್ಞಾನವಿತ್ತು ಎಂದರ್ಥ! ಎಚ್ಚರವಾದ ಮೇಲೆ ಆ ಅಜ್ಞಾನವಿತ್ತು ಎಂಬುದರ ಸ್ಮರಣೆಯಾಗಿದೆ. ಯಾವುದನ್ನು ನಾವು ಕಂಡು ಅನುಭವಿಸುತ್ತಿರುತ್ತೇವೋ ಅದರ ಸ್ಮರಣೆ ಬರುತ್ತದೆ. ಅನುಭವಿಸದೇ ಇದ್ದದ್ದು ಎಂದಿಗೂ ಸ್ಮರಣೆಗೆ ಬರುವುದಿಲ್ಲ. ಏವಂಚ ಸುಷುಪ್ತಿಕಾಲದಲ್ಲಿ ಅಜ್ಞಾನವನ್ನು ಅನುಭವಿಸುತ್ತಿದ್ದೆವು ಎಂದಾಯಿತು (೫). ಈ ಜ್ಞಾನವು ಘಟಜ್ಞಾನ, ಪಟಜ್ಞಾನಗಳಂತೆ ಒಂದು ಬಗೆಯ ಜ್ಞಾನವೇ ಆಯಿತು. ಇದು ಅಜ್ಞಾನದ ಜ್ಞಾನ. ಇಲ್ಲಿಯೂ ಅಜ್ಞಾನವೆಂಬ ವಿಷಯವನ್ನು - ಉಪಾಧಿಯನ್ನು ಕಿತ್ತುಹಾಕಿದರೆ ಶುದ್ಧವಾದ ಜ್ಞಾನವು ಮಾತ್ರ ಉಳಿಯುತ್ತದೆ. ಇದೇ ಸಂವಿತ್. ಜಾಗ್ರತ್, ಸ್ವಪ್ನ, ಸುಷುಪ್ತಿ - ಈ ಮೂರು ಅವಸ್ಥೆಗಳಲ್ಲಿಯೂ ಇರತಕ್ಕದ್ದು ಒಂದೇ ಸಂವಿತ್. ಅದಕ್ಕೆ ಗೋಚರಿಸುವ ವಿಷಯದ ಸ್ವರೂಪವು ಬೇರೆ ಬೇರೆ.

ಹೀಗೆ ಒಂದು ದಿನದಲ್ಲಾಗುವ ಜಾಗ್ರತ್, ಸ್ವಪ್ನ, ಸುಷುಪ್ತಿ - ಎಂಬ ಅವಸ್ಥಾತ್ರಯದಲ್ಲಿ ಶುದ್ಧಜ್ಞಾನವೆಂಬ ಸಂವಿತ್ತು ಏಕವಾಗಿದ್ದದ್ದು ಶಾಶ್ವತವಾಗಿ

ಇದ್ದೇ ಇರುತ್ತದೆ. ತಿಂಗಳು, ವರ್ಷಗಳೆಷ್ಟಾದರೂ ಅದರ ಸ್ಥಿತಿ ಶಾಶ್ವತ. ಘಟ, ಪಟಾದಿಗಳು ಅದಕ್ಕೆ ಹೇಗೆ ಉಪಾಧಿಗಳೋ ಹಾಗೆ ದಿನ, ಮಾಸ, ವರ್ಷ, ಯುಗ, ಕಲ್ಪಗಳೂ ಉಪಾಧಿಗಳೇ. ಈ ಸಂವಿತ್ತು ಸಕಲ ಪ್ರಾಣಿಗಳಲ್ಲಿಯೂ ಒಂದೇ ಇದೆ. ಅನೇಕ ಸಂವಿತ್ತುಗಳಿವೆಯೆಂಬುದಕ್ಕೆ ಯಾವ ಪ್ರಮಾಣವೂ ಇಲ್ಲ. ಇದಕ್ಕೆ ಉತ್ಪತ್ತಿವಿನಾಶಗಳಿಲ್ಲವಾದ್ದರಿಂದ ಇದು ನಿತ್ಯ. ಏಕೆಂದರೆ ಇದರ ಉತ್ಪತ್ತಿಯಲ್ಲಿಯೂ ವಿನಾಶಗಳನ್ನರಿಯಬಲ್ಲ ಇನ್ನೊಂದು ಸಂವಿತ್ ಇಲ್ಲ. ತನ್ನ ಉತ್ಪತ್ತಿವಿನಾಶಗಳನ್ನು ತಾನೇ ಅರಿಯಲಾರದು. ಏಕೆಂದರೆ, ಒಂದೇ ವಸ್ತು ಏಕಕಾಲದಲ್ಲಿ ಕರ್ತೃವೂ ಕರ್ಮವೂ ಆಗುವುದು ವಿರುದ್ಧವಾಗಿದೆ. ಈ ಸಂವಿತ್ತು ಸ್ವಯಂಪ್ರಕಾಶವಾಗಿದ್ದು ಇತರ ವಸ್ತುಗಳನ್ನೂ ಬೆಳಗುತ್ತಿರುವುದು. ಇದು ಸ್ವಯಂಜ್ಯೋತಿ (೬-೭). ಯಾವುದು ನಿತ್ಯವೋ ಅದೇ ಸತ್ಯವಾದದ್ದು. ನಿತ್ಯವೂ, ಸತ್ಯವೂ, ಸ್ವಯಂಪ್ರಕಾಶವೂ ಆದದ್ದು ಆತ್ಮ. 'ನಾನು' ಎಂಬ ಮಾತಿನಿಂದ ತೋರಿಬರುವ ಪರಮಾರ್ಥವೇ ಆತ್ಮ. ''ತಾನು'' ಎಂಬುದು ಆತ್ಮ ಶಬ್ದದ ಸಹಜವಾದ ಅರ್ಥವಾಗಿದೆ. ಮನುಷ್ಯನ ಪರಮಪ್ರೀತಿಗೆ ಗೋಚರವಾದದ್ದು 'ತಾನು'. ಸರ್ವವೂ ತಾನಿದ್ದರೆ ಪ್ರಿಯ-ತಸಗಾಗಿ ಪ್ರಿಯ. ಇದನ್ನೇ ಯಾಜ್ಞವಲ್ಕ್ಯರು ಬೃಹದಾರಣ್ಯಕೋಪನಿಷತ್ತಿನಲ್ಲಿ- (೪-೫-೬) **''ಆತ್ಮನಸ್ತು ಕಾಮಾಯ ಸರ್ವಂ ಪ್ರಿಯಂ ಭವತಿ''** - ಎಂದು ವಿಸ್ತಾರವಾಗಿ ಉಪಪಾದಿಸಿದ್ದಾರೆ. ಇಲ್ಲಿ ''ಸ್ವಾರ್ಥ'' ಎಂಬ ಸಂಕುಚಿತಾರ್ಥವನ್ನು ಇಟ್ಟುಕೊಳ್ಳಬಾರದು. ಪರಾರ್ಥವೆಂಬ ಉದಾರಭಾವನೆಯೂ ಸಹ ಆತ್ಮಕ್ಕೆ ಪ್ರಿಯವಾದ್ದರಿಂದಲೇ ಹೊರಟಿರುತ್ತದೆ. ಸರ್ವರಿಗೂ ಆನಂದವು ಪರಮಪ್ರಿಯವಾದ್ದರಿಂದ ಹೊರಟಿರುತ್ತದೆ. ಈ ಪರಮಪ್ರಿಯವಾದ ಆತ್ಮವನ್ನೇ ನಿರತಿಶಯಸುಖಸ್ವರೂಪವೆಂದು ನಿಶ್ಚಯಿಸಬಹುದು. ಆದ್ದರಿಂದಲೇ ಯಾವ ಮನುಷ್ಯನೂ ತಾನು ನಾಶವಾಗಿ ಬಿಡಬೇಕೆಂದು ಬಯಸುವುದಿಲ್ಲ. ತಾನು ಇರಬೇಕೆಂಬುದೇ ಅವನ ಇಚ್ಛೆಯಾಗಿರುತ್ತದೆ. ಕೆಲವು ವೇಳೆ ಕೋಪ ಶೋಕತಾಪಗಳಿಗೆ ಒಳಗಾಗಿ ತನ್ನನ್ನು ನಿಂದಿಸಿಕೊಳ್ಳಬಹುದು. ತಾನು ಸಾಯಬೇಕೆಂದು ಬಯಸಬಹುದು. ಅದು ದುಃಖನಿಮಿತ್ತದಿಂದ, ತಾತ್ಕಾಲಿಕವಾಗಿ ಬಂದದ್ದು ಮತ್ತು ಕೇವಲ ಶರೀರಕ್ಕೆ ಸಂಬಂಧಿಸಿದ್ದು. ಈ ಪರಿಸ್ಥಿತಿಯಲ್ಲಿ ಈ ಶರೀರವು ಬೇಡ - ಎಂಬ ಇಚ್ಛೆ. ತಾನೇ ನಾಶವಾಗಬೇಕೆಂಬ ಇಚ್ಛೆಯಲ್ಲ(೮). ಹೀಗೆ ಯಾವುದೇ ಒಂದು ಪ್ರಾಣಿಯನ್ನೋ ವಸ್ತುವನ್ನೋ ಪ್ರೀತಿಸುವುದು ಆತ್ಮ ತೃಪ್ತಿಗಾಗಿ. ಪುತ್ರನಲ್ಲಿ,

ಪತ್ನಿಯಲ್ಲಿ, ಮಿತ್ರನಲ್ಲಿ ಅಥವಾ ಉಳಿದ ಯಾರಲ್ಲಾಗಲೀ ಇಡುವ ಪ್ರೇಮವು ಆತ್ಮಸಂತೋಷಕ್ಕಾಗಿಯೇ ಇರುತ್ತದೆ ಎಂಬುದರಲ್ಲಿ ಯಾವ ಸಂದೇಹವೂ ಇಲ್ಲ. ತನ್ನಲ್ಲಿ - ತನ್ನ ಆತ್ಮನಲ್ಲಿ ಇಡುವ ಪ್ರೇಮವು ಅನ್ಯಾರ್ಥವಲ್ಲ, ಅದು ಸಹಜವಾದದ್ದು. ಆತ್ಮ ಪ್ರೇಮವು ಏತಕ್ಕಾಗಿಯೆಂದರೆ ಆತ್ಮಕ್ಕಾಗಿಯೇ ಎಂದು ಮಾತ್ರ ಉತ್ತರಿಸಬಹುದು. ಇಷ್ಟು ಪರ್ಯಾಲೋಚನೆ ಮಾಡಿದಾಗ ಆತ್ಮನು ನಿರತಿಶಯ ಪ್ರೇಮಾಸ್ಪದನೆಂದೂ ಆತ್ಮನು ಪರಮಾನಂದಸ್ವರೂಪನೇ ಎಂದು ಸಿದ್ಧವಾಗುತ್ತದೆ (೯).

ಇಷ್ಟು ವಿಚಾರಮಾಡಿದ್ದರಿಂದ ಸಿದ್ಧವಾದದ್ದೇನು? ಹಿಂದೆ ಹೇಳಿದ ಪ್ರಕಾರ ಶುದ್ಧಜ್ಞಾನವೆಂಬ ಸಂವಿತ್ ನಿತ್ಯವಾದದ್ದೆಂದೂ ಅದೇ ಆತ್ಮನೆಂದೂ ಆತ್ಮನು ಪರಮಪ್ರೇಮಾಸ್ಪದನಾದ್ದರಿಂದ ಆತನು ಆನಂದಸ್ವರೂಪನೆಂದೂ ಸಿದ್ಧವಾಯಿತು. ಜ್ಞಾನವು ನಿತ್ಯವಾದ್ದರಿಂದ ಅದೇ ಸತ್ಯ. ಸತ್ಯವಾದದ್ದೇ ಸತ್. ಜ್ಞಾನವು ಚೈತನ್ಯವಾದ್ದರಿಂದ ಅದೇ ಚಿತ್. ಜ್ಞಾನವೆಂಬ ಆತ್ಮನು ಪರಮಪ್ರಿಯನಾದ್ದರಿಂದ ಆತ್ಮನೇ ಆನಂದ. ಈ ಪ್ರಕಾರ ಆತ್ಮನು 'ಸಚ್ಚಿದಾನಂದ' ಎಂದು ಸಿದ್ಧವಾಯಿತು . ಈ ಆತ್ಮನು ಬೇರೆ ಯಾರೂ ಅಲ್ಲ, ನಮ್ಮ ದೇಹದಲ್ಲಿಯೇ ಇರತಕ್ಕವನು. 'ನಾನು' ಎಂಬುದರ ಪರಮಾರ್ಥವೇ ಈ ಆತ್ಮ. ಛಾಂದೋಗ್ಯದಲ್ಲಿ 'ತತ್ತ್ವಮಸಿ' ಎಂಬ ಮಹಾವಾಕ್ಯವನ್ನು ಉದ್ದಾಲಕ ಮಹರ್ಷಿಯು ತನ್ನ ಪುತ್ರನಾದ ಶ್ವೇತಕೇತುವಿಗೆ ಒಂಬತ್ತು ಸಲ ಉಪದೇಶಿಸಿದ್ದಾನೆ. ಇದುವರೆಗೆ ನಾವು ಪ್ರತಿಪಾದಿಸಿರುವ ಸಚ್ಚಿದಾನಂದನಾದ ಆತ್ಮನು ಈ ಮಹಾವಾಕ್ಯದಲ್ಲಿರುವ 'ತ್ವಂ' ಶಬ್ದದ ಅರ್ಥ. ಉದ್ದಾಲಕನಿಗೆ ''ತ್ವಂ'' ಆದವನೇ ಶ್ವೇತಕೇತುವಿಗೆ 'ಅಹಂ' ಆಗುತ್ತಾನೆ. ಅಹಂ ಎಂದರೆ ನಾನು. ಆ ಮಹಾವಾಕ್ಯದಲ್ಲಿರುವ ''ತತ್'' ಎಂಬ ಶಬ್ದಕ್ಕೆ ಪರಬ್ರಹ್ಮವೆಂದರ್ಥ. ಈ ಪರಬ್ರಹ್ಮ ಮತ್ತು ''ತ್ವಂ'' ಪದಾರ್ಥವಾದ ಆತ್ಮ - ಇವೆರಡೂ ಬೇರೆ ಬೇರೆಯಲ್ಲ. ಒಂದೇ ಅದ್ವಿತೀಯವಾದ ಪರಬ್ರಹ್ಮ - ಎಂಬ ಅಖಂಡಾದ್ವೈತವನ್ನು ಉಪನಿಷತ್ತುಗಳು ಉಪದೇಶಿಸುತ್ತವೆ. ಈ ವಿಷಯವು ಇನ್ನಾವ ಬಗೆಯಿಂದಲೂ ನಮಗೆ ತಿಳಿಯುವುದಿಲ್ಲ. ಆದ್ದರಿಂದ ಉಪನಿಷತ್ತುಗಳು ಅರ್ಥವತ್ತಾದ ಅಮೂಲ್ಯಗ್ರಂಥಗಳಾಗಿವೆ (೧೦).

ಆತ್ಮನು ಪರಮಪ್ರೇಮಾಸ್ಪದನೆಂದೂ, ಆನಂದಸ್ವರೂಪನೆಂದೂ ಸಿದ್ಧವಾಯಿತು. ಈಗೊಂದು ಪ್ರಶ್ನೆ ಹುಟ್ಟುತ್ತದೆ. ಆತ್ಮನ ಈ ಸ್ವರೂಪವು ಜನರಿಗೆ

ತಿಳಿದಿದೆಯೇ? ಇಲ್ಲವೇ? ತನ್ನ ಸ್ವರೂಪವು ತನಗೆ ತಿಳಿದಿಲ್ಲವೆನ್ನುವುದು ಯುಕ್ತವಲ್ಲ. ಆದ್ದರಿಂದ ಜನರಿಗೆ ಆತ್ಮಸ್ವರೂಪವು ತಿಳಿದಿದೆಯೆನ್ನಬೇಕಾಗುತ್ತದೆ. ಹಾಗಾದರೆ ಅವರು ಆತ್ಮಾರಾಮರೂ ಆತ್ಮತೃಪ್ತರೂ ಆಗಿರಬೇಕಲ್ಲದೆ ಕ್ಷುದ್ರವಾದ ವಿಷಯಸುಖಕ್ಕಾಗಿ ಏಕೆ ಹಾತೊರೆಯುತ್ತಿದ್ದಾರೆ? ಹಣ, ಆಸ್ತಿ, ಮನೆ - ಇತ್ಯಾದಿ ಭೋಗವಸ್ತುಗಳಿಗಾಗಿ ಹಗಲಿರುಳೂ ಶ್ರಮಿಸುತ್ತಿದ್ದಾರೆ. ಈ ಕ್ಷುದ್ರವೂ ಅಲ್ಪವೂ ಆದ ಸುಖಕ್ಕಾಗಿ ಪಾಪಕಾರ್ಯಗಳನ್ನೆಸಗಲು ಹಿಂಜರಿಯುತ್ತಿಲ್ಲ. ಅದೇಕೆ? ಬಳಿಯಲ್ಲಿಯೇ ಸುವರ್ಣನಿಧಿಯಿರುವಾಗ ಅದನ್ನು ಬಿಟ್ಟು ಕವಡೆಯನ್ನು ಸಂಪಾದಿಸುವುದಕ್ಕಾಗಿ ಕಡಲೆಡೆಗೆ ಏಕೆ ಧಾವಿಸುತ್ತಾರೆ? ಆದ್ದರಿಂದ, ಆತ್ಮ ಸ್ವರೂಪವು ಜನರಿಗೆ ತಿಳಿದಿಲ್ಲವೆಂದು ಹೇಳಬೇಕಾದೀತು. ಆ ಪಕ್ಷದಲ್ಲಿ ಜನರಿಗೆ ಆತ್ಮನಲ್ಲಿ ಪರಮಪ್ರೇಮ ಏಕಿದೆ? ತಮ್ಮನ್ನು ಎಲ್ಲದಕ್ಕಿಂತ ಅತಿಶಯವಾಗಿ ಪ್ರೀತಿಸುವುದು ಏಕೆ? ಎಂಬ ಪ್ರಶ್ನೆ ಎದುರಾಗುತ್ತದೆ. ಆದ್ದರಿಂದ, ಆತ್ಮನು ಆನಂದ ಸ್ವರೂಪನೆಂದು ಹೇಳುವುದು ಸರಿಯಲ್ಲ. ಆತ್ಮನಿಗೆ ಹೊರಗಿನ ಶಬ್ದ, ಸ್ಪರ್ಶಾದಿ ವಿಷಯಗಳಿಂದ ಆನಂದವಾಗುವುದೆಂದೂ, ಆದ್ದರಿಂದಲೇ ವಿಷಯ ಸಾಮಗ್ರಿಗಾಗಿ ಅವನು ಧಾವಿಸುತ್ತಾನೆಂದೂ ಹೇಳುವುದು ಉತ್ತಮ. ಪ್ರತಿಯೊಬ್ಬರೂ ತಮ್ಮನ್ನು ಪ್ರೀತಿಸಿಕೊಳ್ಳುವುದು ತಮ್ಮ ಸುಖಕ್ಕಾಗಿ. ಈ ಸುಖವು ಹೊರಗಿನಿಂದ ಬರಬೇಕೇ ಹೊರತು, ಒಳಗಿಲ್ಲ ಎಂಬ ಆಕ್ಷೇಪವು ದೃಢವಾಗುತ್ತದೆ - ಎಂದರೆ, ಹಾಗಲ್ಲ. ಆತ್ಮನು ಪರಮಾನಂದಸ್ವರೂಪನೆಂಬುದು ಸತ್ಯವೇ ಹೌದು. ಆದರೆ ಅದು ಜನರಿಗೆ ಸ್ಪಷ್ಟವಾಗಿ ತಿಳಿದಿಲ್ಲ, ಮಸಕು ಮಸಕಾಗಿ ತಿಳಿದಿದೆ (೧೧). ಹೇಗೆಂದರೆ, ಅನೇಕ ಬಾಲಕರು ಒಟ್ಟಾಗಿ ವೇದವನ್ನು ಪಠಿಸುತ್ತಿದ್ದಾರೆ ಎಂದು ಇಟ್ಟುಕೊಳ್ಳೋಣ. ಆ ಹುಡುಗರ ನಡುವೆ ನಿಮ್ಮ ಒಬ್ಬ ಮಗನೂ ಕುಳಿತು ವೇದವನ್ನು ಹೇಳುತ್ತಿದ್ದಾನೆ. ನಿಮ್ಮ ಪುತ್ರನ ಧ್ವನಿ ಸಾಮಾನ್ಯ ರೂಪದಲ್ಲಿ ಕೇಳಿಸುತ್ತದೆ. ಸ್ಪಷ್ಟವಾಗಿ ಕೇಳಿಸುವುದಿಲ್ಲ. ಅವನು ವೇದವನ್ನು ಪಠಿಸುತ್ತಿದ್ದಾನೆಂದು ಗೊತ್ತಿದೆ, ಆದರೆ ಸರಿಯಾಗಿ ಧ್ವನಿಯನ್ನು ಗುರುತಿಸಲಾಗುವುದಿಲ್ಲ. ಅದು ಮಸಕು ಮಸಕಾಗಿದೆ. ಸರಿಯಾಗಿ ಕೇಳಿಸದೇ ಇರಲು ಕಾರಣವುಂಟು. ಇತರ ಬಾಲಕರ ಉಚ್ಚಾರಣಧ್ವನಿಯು ಪುತ್ರಧ್ವನಿಗೆ ಪ್ರತಿಬಂಧಕವಾಗಿದೆ. ಅಂತೆಯೇ ಆತ್ಮನ ಆನಂದಸ್ವರೂಪವು ಜನರಿಗೆ ಗೊತ್ತಾಗದಿರಲು ಪ್ರತಿಬಂಧಕವಿದೆ (೧೨). ಲೋಕದಲ್ಲಿ ನಾವು ಎಷ್ಟೋ ವಸ್ತುಗಳನ್ನು ಅಸ್ತಿ = ಇದೆ, ಭಾತಿ = ತೋರುತ್ತದೆ, - ಎಂದು ವ್ಯವಹರಿಸುತ್ತೇವೆ. ಇದಕ್ಕೆ ವಿರುದ್ಧವಾಗಿ ನಾಸ್ತಿ = ಇಲ್ಲ, ನ ಭಾತಿ = ತೋರುವುದಿಲ್ಲ ಎಂಬ

ವ್ಯವಹಾರವನ್ನುಂಟು ಮಾಡುವುದು ಪ್ರತಿಬಂಧಕವೆನಿಸುತ್ತದೆ. ವೇದಾಧ್ಯಯನ ಮಾಡುವ ಪುತ್ರನ ಧ್ವನಿಯು ಕೇಳಿಸದಂತೆ ಪ್ರತಿಬಂಧವನ್ನುಂಟು ಮಾಡಿದ್ದು ಯಾವುದು? ಪುತ್ರನ ಧ್ವನಿಯಂತೆಯೇ ಇದ್ದ ಬಾಲಕರ ಧ್ವನಿಯು ಪ್ರತಿಬಂಧವನ್ನುಂಟು ಮಾಡಿದೆ. ಸಮಾನಧ್ವನಿಯೇ ಪ್ರತಿಬಂಧಕ. ಹಾಗೆಯೇ ಪ್ರಕೃತದಲ್ಲಿ ಆತ್ಮನ ಆನಂದ ಸ್ವರೂಪವನ್ನು ಮರೆಮಾಡುವ ಪ್ರತಿಬಂಧಕವು ಅನಾದಿಯಾದ ಅವಿದ್ಯೆ. ಈ ಅವಿದ್ಯೆಯು ಆನಂದಸ್ವರೂಪವನ್ನರಿಯಲು ಪ್ರತಿಬಂಧಕವು ಮಾತ್ರವಲ್ಲ, ವಿಪರೀತ ಜ್ಞಾನವನ್ನುಂಟುಮಾಡಿ ವ್ಯಾಮೋಹವನ್ನು ಸಹ ಹುಟ್ಟಿಸಿಬಿಡುತ್ತದೆ (೧೩-೧೪).

ಅವಿದ್ಯೆಯೆಂದರೇನು? ಅದರ ಸ್ವರೂಪವಾವುದು ? - ಎಂಬುದೀಗ ವಿಚಾರಣೀಯವಾಗಿದೆ. ಅವಿದ್ಯೆಯೆಂದರೆ ಅಜ್ಞಾನವೆಂದು ಸಾಮಾನ್ಯವಾದ ಅರ್ಥ. ಇದು ಜ್ಞಾನದ ಅಭಾವವಲ್ಲ, ಬುದ್ಧಿಗೆ ಮಬ್ಬು ಹಿಡಿಸುವ ಒಂದು ಶಕ್ತಿ ಇದು. ಇದರ ಮೂಲಸ್ಥಾನ ಪರಬ್ರಹ್ಮವೇ. ಅದ್ವೈತಸಿದ್ಧಾಂತದಲ್ಲಿ ಪರಬ್ರಹ್ಮವನ್ನು ಬಿಟ್ಟು ಇನ್ನೊಂದು ವಸ್ತುವೇ ಇಲ್ಲವಷ್ಟೆ? ಈ ವಿಚಾರದಲ್ಲಿ ತುಂಬ ವಾದವಿವಾದಗಳಿವೆ. ಈ ಗ್ರಂಥದಲ್ಲಿಯೇ ಮುಂದೆ ಹೆಚ್ಚಿನ ವಿವರ ದೊರೆಯುತ್ತದೆ. ಪ್ರಕೃತದಲ್ಲಿ ಹೇಳಬೇಕಾದ್ದಿಷ್ಟು. ಸತ್ತ್ವರಜಸ್ತಮೋಗುಣಗಳಿಂದ ಕೂಡಿದ ಪ್ರಕೃತಿಯೆಂಬ ಒಂದು ಪದಾರ್ಥವಿದೆ. ಸತ್ತ್ವಾದಿಗುಣಗಳು ಇದರಲ್ಲಿ ಸಾಮಾನ್ಯಾವಸ್ಥೆಯಲ್ಲಿ ಇರುತ್ತವೆ. ಪರಬ್ರಹ್ಮದ ಪ್ರತಿಬಿಂಬವು ಇದರಲ್ಲಿ ಮೂಡಿರುತ್ತದೆ. ಸತ್ತ್ವಗುಣವು ರಜಸ್ತಮೋಗುಣಗಳಿಂದ ಮಿಶ್ರವಾಗದೆ ಶುದ್ಧವಾಗಿದ್ದಲ್ಲಿ ಆ ಪ್ರಕೃತಿಗೆ ಮಾಯೆಯೆಂದು ಹೆಸರು. ಅವುಗಳಿಂದ ಮಿಶ್ರವಾಗಿ ಕಲುಷಿತವಾಗಿದ್ದರೆ, ಆ ಪ್ರಕೃತಿಗೆ ಅವಿದ್ಯೆಯೆಂದು ಹೆಸರು. ಏವಂಚ, ಪ್ರಕೃತಿಯು ಮಾಯೆ, ಅವಿದ್ಯೆ - ಎಂಬುದಾಗಿ ಎರಡು ವಿಧವೆಂದು ಸಿದ್ಧವಾಯಿತು. ಶುದ್ಧಸತ್ತ್ವ ಗುಣವುಳ್ಳ ಮಾಯೆಯನ್ನು ವಶಪಡಿಸಿಕೊಂಡು ಮಾಯೆಯಲ್ಲಿ ಪ್ರತಿಫಲಿತನಾದ ಚಿದಾತ್ಮನಿಗೆ ಈಶ್ವರನೆಂದು ಹೆಸರು. ಸರ್ವಜ್ಞನೂ ಸರ್ವಶಕ್ತನೂ ಆದ ಈಶ್ವರನಿವನು. ಲೋಕದಲ್ಲಿ ಜನರು 'ದೇವರು' ಎಂದು ವ್ಯವಹರಿಸುತ್ತಾರಲ್ಲ, ಆ ದೇವರೇ ಈಶ್ವರ. ಈಶ್ವರನು ಮಾಯಾಶಕ್ತಿಸಹಿತನಾದ್ದರಿಂದ ಸಗುಣನೆಂದು ತಿಳಿಯಬೇಕು (೧೫-೧೬). ಸತ್ತ್ವಗುಣವು ಕಲುಷೀಕೃತವಾದರೆ ಆ ಪ್ರಕೃತಿಗೆ ಅವಿದ್ಯೆ ಎಂದು ಹೆಸರಿದೆಯಷ್ಟೆ ಈ ಅವಿದ್ಯೆಗೆ ಅಧೀನನಾದ ಚಿದಾತ್ಮನೇ ಜೀವ ಎನ್ನಿಸಿದ್ದಾನೆ. ಅವಿದ್ಯಾವಶನಾದವನು ಜೀವಾತ್ಮ. ಮಾಯೆಗೆ ಪ್ರಭುವಾದವನು ಹಿಂದೆ ಹೇಳಿದ

ಈಶ್ವರ, ಪರಮಾತ್ಮ - ಎಂದು ಸ್ಪಷ್ಟವಾಗಿ ತಿಳಿದಿರಬೇಕು. ಈ ಜೀವಾತ್ಮನಿಗೆ ಉಪಾಧಿಯಾದದ್ದು ಅವಿದ್ಯೆ. ಅವನು ಅವಿದ್ಯೆಗೆ ಅಧೀನ. ಈಶ್ವರನಿಗೆ ಉಪಾಧಿಯಾದದ್ದು ಮಾಯೆ. ಅವನು ಮಾಯೆಗೆ ಪ್ರಭು. ಮಾಯೆಗೆ ಅಧೀನನಲ್ಲ. ಅವಿದ್ಯೆಯ ಒಂದಂಶವಾದ ಸತ್ತ್ವಗುಣವು ರಜಸ್ತಮೋಗುಣಗಳ ಮಿಶ್ರಣದಿಂದ ಕಲುಷಿತವಾಗಿರುತ್ತದೆ. ಈ ಮಿಶ್ರಣದ ಹೆಚ್ಚು - ಕಡಿಮೆಗಳಿಂದ ಈ ಕಾಲುಷ್ಯವು ನಾನಾವಿಧವಾಗಿರುತ್ತದೆ. ಆದ್ದರಿಂದ ಜೀವನೂ ಸಹ ಅವಿದ್ಯೆಯಲ್ಲಿರುವ ತಾರತಮ್ಯದಿಂದ ನಾನಾ ಶರೀರಗಳನ್ನು ಧರಿಸಬೇಕಾಗುತ್ತದೆ. ಅದಕ್ಕೆ ಅವನು ಮಾಡಿರುವ ಕರ್ಮವೇ ಕಾರಣ. ದೇವ, ಮನುಷ್ಯ, ಮೃಗ, ಪಕ್ಷಿ, ಕ್ರಿಮಿ, ಮೊದಲಾದ ಯೋನಿಗಳಲ್ಲಿ ಜನಿಸಿ ಬೇರೆ ಬೇರೆ ಶರೀರಗಳನ್ನು ಈ ಜೀವನು ಧರಿಸುತ್ತಾನೆ. ಜೀವನ ಶರೀರಗಳು ಮೂರು - ಕಾರಣಶರೀರ, ಸೂಕ್ಷ್ಮಶರೀರ, ಸ್ಥೂಲಶರೀರ. ಈ ಅವಿದ್ಯೆಯೇ ಜೀವಾತ್ಮನ ಕಾರಣ ಶರೀರವಾಗಿದೆ. ಸ್ಥೂಲ ಸೂಕ್ಷ್ಮಶರೀರಾದಿಗಳಿಗೆ ಕಾರಣವಾದ್ದರಿಂದ ಈ ಅವಿದ್ಯೆ ಕಾರಣಶರೀರವೆನಿಸಿದೆ. ಈ ಕಾರಣಶರೀರವೇ 'ನಾನು' ಎಂಬ ಅಭಿಮಾನವನ್ನು ತಳೆದ ಜೀವನಿಗೆ ಪ್ರಾಜ್ಞನೆಂದು ಹೆಸರು (೧೭). ಈ ಪ್ರಾಜ್ಞರು ಅನಂತ ಸಂಖ್ಯೆಯಲ್ಲಿದ್ದಾರೆ. ಇವರೆಲ್ಲರೂ ಅನಾದಿಯಾದ ಕರ್ಮಬಂಧನಕ್ಕೆ ಒಳಗಾಗಿದ್ದಾರೆ. ಈ ಸಂಸಾರಬಂಧನದಲ್ಲಿ ಯಾವಾಗ ಹೇಗೆ ಸಿಲುಕಿದರೆಂಬುದನ್ನು ಹೇಳಲು ಯಾರೂ ಸಮರ್ಥರಾಗಿಲ್ಲ. ಹೇಗೋ ಸಿಕ್ಕಿಕೊಂಡಿದ್ದೇವೆ. ಇದರಿಂದ ಬಿಡುಗಡೆ ಹೇಗೆ? - ಎಂಬುದಿಷ್ಟೇ ನಾವು ಚಿಂತಿಸಬೇಕಾದದ್ದು. ಯಾವ ಕಾರಣದಿಂದಲೋ ರೋಗವು ಬಂದುಬಿಟ್ಟಿದೆ. ಇದಕ್ಕೆ ಚಿಕಿತ್ಸೆಯೇನು? - ಎಂದು ಆಲೋಚಿಸಿ ಬಿಡುಗಡೆ ಹೊಂದಲು ಪ್ರಯತ್ನಪಡಬೇಕಾದದ್ದು ಬುದ್ಧಿವಂತರ ಲಕ್ಷಣ. ಇವರು ತಮ್ಮ ತಮ್ಮ ಪುಣ್ಯ ಪಾಪ ಕರ್ಮಗಳಿಗೆ ತಕ್ಕ ಫಲವನ್ನು ಭೋಗಿಸಬೇಕೆಂಬುದು ಈಶ್ವರನು ಗೊತ್ತುಮಾಡಿದ ನಿಯಮ. ಫಲವನ್ನು ಭೋಗಿಸಲು ಶರೀರವು ಜೀವರಿಗೆ ಬೇಕು. "**ಭೋಗಾಯತನಂ ಶರೀರಂ**" - ಎಂಬ ನುಡಿ ದಾರ್ಶನಿಕರಲ್ಲಿ ಪ್ರಸಿದ್ಧವಾಗಿದೆ. ಹಾಗೆಯೇ ಅನ್ನಪಾನಾದಿಗಳೂ ಶಬ್ದಸ್ಪರ್ಶಾದಿವಿಷಯಗಳೂ ಬೇಕು. ಇವೆಲ್ಲವನ್ನೂ ಯಥಾಯೋಗ್ಯವಾಗಿ ಸೃಜಿಸಬೇಕೆಂದು ಈಶ್ವರನು ಆಲೋಚಿಸುತ್ತಾನೆ. ಇವನ್ನು ಸೃಜಿಸಲು ಅವನಿಗಿರುವ ಸಾಮಗ್ರಿ ಯಾವುದು? ತನ್ನ ಶಕ್ತಿ ರೂಪವಾದ ಪ್ರಕೃತಿಯನ್ನು ಬಿಟ್ಟರೆ ಇನ್ನಾವುದೂ ಇಲ್ಲ. ಪ್ರಕೃತಿಯಲ್ಲಿ ಮೂರು ಗುಣಗಳಿವೆಯಷ್ಟೆ. ಅವುಗಳಲ್ಲಿ ತಮೋಗುಣ ಪ್ರಧಾನವಾದ

ಪ್ರಕೃತಿಯಿಂದ ಈಶ್ವರನ ಆಜ್ಞೆಯಂತೆ ಆಕಾಶ, ವಾಯು, ಅಗ್ನಿ, ಜಲ, ಭೂಮಿ - ಎಂಬ ಪಂಚಭೂತಗಳು ಉತ್ಪನ್ನವಾದವು. ಯಾವುದೋ ಒಂದು ಕಾರ್ಯವು ಉತ್ಪನ್ನವಾಗಬೇಕಾದರೆ ನಿಮಿತ್ತಕಾರಣ, ಉಪಾದಾನ ಕಾರಣ, - ಎಂಬ ಎರಡು ಕಾರಣಗಳು ಬೇಕು. ಒಂದು ಗಡಿಗೆಯನ್ನು ಮಾಡಬೇಕಾದರೆ ಕುಂಬಾರನು ಬೇಕು. ಅವನು ನಿಮಿತ್ತಕಾರಣ. ನಯವಾಗಿ ಕಲಸಿದ ಮಣ್ಣು ಉಪಾದಾನ ಕಾರಣ. ಆದ್ದರಿಂದ ಈ ಪಂಚಭೂತಗಳು ಉತ್ಪನ್ನವಾಗಲು ನಿಮಿತ್ತಕಾರಣ ಯಾರು? ಉಪಾದಾನಕಾರಣ ಯಾವುದು ? - ಎಂಬ ಪ್ರಶ್ನೆ ಹುಟ್ಟುತ್ತದೆ. ಈಶ್ವರನ ಇಚ್ಛೆಯಿಂದ ಇವು ಹುಟ್ಟಿವೆಯಾದ್ದರಿಂದ ಈಶ್ವರನು ನಿಮಿತ್ತಕಾರಣ. ತಮಃಪ್ರಧಾನವಾದ ಪ್ರಕೃತಿಯು ಉಪಾದಾನಕಾರಣ. ಈ ಪ್ರಕೃತಿಯು ಈಶ್ವರನಿಗಿಂತ ಬೇರೆಯಾಗಿರುವ ಸ್ವತಂತ್ರ ವಸ್ತುವಲ್ಲ. ಆದ್ದರಿಂದ, ಈಶ್ವರನೇ ಈ ಜಗತ್ತಿಗೆ ನಿಮಿತ್ತಕಾರಣನೂ ಹೌದು. ಉಪಾದಾನಕಾರಣವೂ ಹೌದು ಎಂದು ಸಿದ್ಧಾಂತವಿದೆ. ಇಷ್ಟನ್ನು ಈಗ ಮನನ ಮಾಡಿಕೊಂಡರೆ ಸಾಕು.

ಜೀವಾತ್ಮನಿಗೆ ಕಾರಣ, ಸೂಕ್ಷ್ಮ, ಸ್ಥೂಲ ಎಂಬ ಮೂರು ಶರೀರ ಗಳುಂಟೆಂದೂ, ಕೇವಲ ಅವಿದ್ಯೆಯೇ ಕಾರಣ ಶರೀರವೆಂದೂ, ಇದರಲ್ಲಿ ಅಭಿಮಾನವನ್ನು ತಳೆದ ಜೀವನಿಗೆ ಪ್ರಾಜ್ಞನೆಂಬ ಹೆಸರೆಂದೂ ಹೇಳಿದ್ದಾಯಿತು. ಈಶ್ವರನ ಇಚ್ಛೆಯಂತೆ ಆಕಾಶಾದಿ ಪಂಚಮಹಾಭೂತಗಳು ಉತ್ಪನ್ನವಾದವು (೧೮). ಶೀರ್ಯಮಾಣವಾದದ್ದು ಶರೀರ. ಶೀರ್ಯಮಾಣವೆಂದರೆ ನಾಶವಾಗತಕ್ಕದ್ದು ಎಂದರ್ಥ. ಈ ಮೂರು ಶರೀರಗಳೂ ನಾಶವಾಗುವ ಮಾರ್ಗವನ್ನು ಬೋಧಿಸುವುದಕ್ಕಾಗಿಯೇ ವೇದಾಂತದರ್ಶನವು ಹೊರಟಿದೆ. ಸ್ಥೂಲಶರೀರವು ನಾಶವಾಗುವುದನ್ನು ಎಲ್ಲರೂ ನೋಡುತ್ತಿದ್ದಾರೆ. ಸತ್ತಮೇಲೆ ಅದು ಸುಟ್ಟು ಬೂದಿಯಾಗುತ್ತದೆ. ಆದರೆ, ಅದರ ಸರ್ವನಾಶವಾಯಿತೆಂದು ತಿಳಿಯಬಾರದು. **"ಯೋನಿಮನ್ಯೇ ಪ್ರಪದ್ಯಂತೇ ಯಥಾಕರ್ಮ ಯಥಾ ಶ್ರುತಂ"** - ಎಂಬಂತೆ, ಸತ್ತಮೇಲೆ ಜನ್ಮಾಂತರವಿದೆ. ಕರ್ಮಾನುಸಾರವಾಗಿ ಇನ್ನೊಂದು ದೇಹ ಬರುತ್ತದೆ. ಸ್ಥೂಲ, ಸೂಕ್ಷ್ಮ, ಕಾರಣ ದೇಹಗಳನ್ನು ಒಂದು ವೃಕ್ಷಕ್ಕೆ ಹೋಲಿಸಬಹುದು. ವೃಕ್ಷದ ಕಾಂಡ, ಕೊಂಬೆ, ಎಲೆ ಮೊದಲಾದವು ಸ್ಥೂಲ ಶರೀರ. ಇದನ್ನು ಕಡಿದರೆ ವೃಕ್ಷದ ಸರ್ವನಾಶವಾಗುವುದಿಲ್ಲ, ನೀರು ಬಿದ್ದೊಡನೆ ಮತ್ತೆ ಚಿಗುರುತ್ತದೆ. ಅದರ ಬೇರುಗಳೂ ತಾಯಿಬೇರೂ ಕಡಿದ ಮರವನ್ನು ಚಿಗುರಿಸುತ್ತವೆ. ಹಾಗೆಯೇ ಈ ಸ್ಥೂಲಶರೀರವು ನೆಲದ ಮೇಲೆ

ಕಾಣುವ ಮರ. ಸೂಕ್ಷ್ಮಶರೀರವು ಬೇರುಗಳು. ಕಾರಣಶರೀರವು ತಾಯಿ ಬೇರು. ಈ ಬೇರು ಮತ್ತು ತಾಯಿಬೇರುಗಳಿಗೆ ನಮ್ಮ ಕರ್ಮಶೇಷವೆಂಬ ನೀರು ಸುರಿದೊಡನೆ , ಆ ಬೇರುಗಳು ಇನ್ನೊಂದು ಸ್ಥೂಲಶರೀರವನ್ನು ಚಿಗುರಿಸುತ್ತವೆ. ಇದೆಲ್ಲವೂ ಅವಿದ್ಯೆಯೆಂಬ ಪ್ರಕೃತಿಯ ದೊಂಬರಾಟ. ಇದನ್ನು ಆಡಿಸತಕ್ಕವನು ಸರ್ವಜ್ಞನೂ ಸರ್ವಶಕ್ತನೂ ಆದ ಪರಮೇಶ್ವರ. ಪ್ರಕೃತಿಯ ದೊಂಬರಾಟದ ಪ್ರಕೃತವನ್ನೀಗ ನೋಡೋಣ.

ಪ್ರಕೃತಿಯಲ್ಲಿ ಸತ್ತ್ವ, ರಜಸ್ಸು, ತಮಸ್ಸು ಎಂಬ ಮೂರು ಗುಣಗಳೂ ಇವೆ. ಇವು ಸಮಪ್ರಮಾಣದಲ್ಲಿರುವಾಗ ಯಾವ ಕ್ರಿಯೆಯೂ ನಡೆಯುವುದಿಲ್ಲ. ಈ ಗುಣಗಳು ಏರುಪೇರಾದಾಗಲೇ ಕ್ರಿಯೆ ಸಂಭವಿಸುತ್ತದೆ. ತಮೋಗುಣವು ಪ್ರಧಾನವಾಗಿ ಸತ್ತ್ವರಜೋಗುಣಗಳು ಅಲ್ಪವಾದಾಗ - ಎಂದರೆ - ತಮೋ ಗುಣವೇ ಅಧಿಕವಾದ ಪ್ರಕೃತಿಯಿಂದ ಪಂಚಭೂತಗಳು ಹುಟ್ಟಿದವೆಂದು ಹಿಂದೆ ಹೇಳಿದೆ. ಇವುಗಳಲ್ಲಿ ಸತ್ತ್ವಗುಣವು ಅಲ್ಪಪ್ರಮಾಣದಲ್ಲಿ ಇದ್ದೇ ಇರುತ್ತದೆ. ಈ ಸತ್ತ್ವಗುಣದ ಅಂಶದಿಂದ ಐದು ಜ್ಞಾನೇಂದ್ರಿಯಗಳು ಹುಟ್ಟಿದವು. ಆಕಾಶದಿಂದ ಶ್ರೋತ್ರ (ಕಿವಿ), ವಾಯುವಿನಿಂದ ತ್ವಕ್ (ಚರ್ಮ), ತೇಜಸ್ಸಿನಿಂದ ಚಕ್ಷುಸ್ಸು (ಕಣ್ಣು), ಅಪ್ (ಜಲ) ದಿಂದ ಜಿಹ್ವಾ (ನಾಲಿಗೆ), ಪೃಥ್ವಿಯಿಂದ ನಾಸಿಕಾ (ಮೂಗು) - ಎಂದು ಐದು ಇಂದ್ರಿಯಗಳು ಹುಟ್ಟಿದವು. ಇಂದ್ರಿಯವು ಬಹು ಸೂಕ್ಷ್ಮವಾದದ್ದು. ಕಣ್ಣಿಗೆ ಕಾಣತಕ್ಕದ್ದಲ್ಲ. ಕಣ್ಣಿಗೆ ಕಾಣುವ ಕಿವಿ, ಚರ್ಮ, ಕಣ್ಣು , ನಾಲಿಗೆ , ಮೂಗು - ಇವು ಇಂದ್ರಿಯಗಳಿರುವ ಸ್ಥಾನಗಳು. ಇವುಗಳಿಗೆ ಗೋಳಕಗಳೆಂದು ಹೆಸರು. ಇವೇ ಇಂದ್ರಿಯಗಳಲ್ಲ - ಎಂದು ಸ್ಪಷ್ಟವಾಗಿ ತಿಳಿದಿರಬೇಕು. ಆದ್ದರಿಂದ, ಗೋಳಕವಾದ ಕಿವಿ ಇದ್ದರೂ ಒಬ್ಬನು ಕಿವುಡನಾಗಿರಬಹುದು. ಈ ಇಂದ್ರಿಯಗಳೂ ಸಹ ತಮಗೆ ಸಹಕಾರಿಗಳಿದ್ದಾಗ, ಪ್ರತಿಬಂಧಕವಿಲ್ಲದಾಗ ಕೆಲಸ ಮಾಡುತ್ತವೆ. ಚಕ್ಷುರಿಂದ್ರಿಯಕ್ಕೆ ಕಣ್ಣಿನ ಪೊರೆ ಪ್ರತಿಬಂಧಕ. ಪೊರೆಯನ್ನು ತೆಗೆದುಹಾಕಿದರೆ ಕಾಣುತ್ತದೆ. ಶ್ರೋತ್ರೇಂದ್ರಿಯಕ್ಕೆ ಕೆಲವು ನರಗಳು ಸಹಕಾರಿಗಳು. ಈ ಸಹಕಾರಿಗಳಲ್ಲಿ ದೋಷವಿದ್ದಾಗ ಕಿವಿಗೆ ಶಬ್ದವು ಕೇಳಿಸುವುದಿಲ್ಲ. ಹೀಗೆಯೇ ಇತರ ಇಂದ್ರಿಯಗಳೂ ಸಹ ತಮಗೆ ಸಹಕಾರಿಗಳಿದ್ದಾಗ, ಪ್ರತಿಬಂಧಕವಿಲ್ಲದಾಗ ತಮ್ಮ ಕೆಲಸವನ್ನು ಮಾಡುತ್ತವೆ (೧೯). ಆಕಾಶಾದಿಗಳಲ್ಲಿರುವ ಸತ್ತ್ವಗುಣದ ಒಂದೊಂದು ಅಂಶದಿಂದ ಹಿಂದೆ ಹೇಳಿದ ಪಂಚಜ್ಞಾನೇಂದ್ರಿಯಗಳು ಹುಟ್ಟಿದವು. ಆಕಾಶಾದಿಗಳಲ್ಲಿರುವ

ಸತ್ತ್ವಗುಣದ ಅಂಶಗಳಿಂದ ಅಂತಃಕರಣವು ಹುಟ್ಟಿತು. ಕರಣವೆಂದರೆ ಇಂದ್ರಿಯ. ಅಂತಃಕರಣವೆಂದರೆ ಅಂತರಿಂದ್ರಿಯ. ಶ್ರೋತ್ರಾದಿ ಜ್ಞಾನೇಂದ್ರಿಯಗಳು ದೇಹದ ಹೊರಗಿರತಕ್ಕ ಬಾಹ್ಯೇಂದ್ರಿಯಗಳು. ಅಂತಃಕರಣವು ಮನಸ್ಸು,ಬುದ್ಧಿ- ಎಂದು ಎರಡು ವಿಧ. ಅಂತಃಕರಣ ವ್ಯಾಪಾರದಿಂದ- ಎಂದರೆ ಅದು ಮಾಡುವ ಕೆಲಸದಿಂದ ಈ ಹೆಸರು ಬಂದಿದೆ. ವಾಸ್ತವವಾಗಿ ಮನಸ್ಸು ಬುದ್ಧಿಗಳು ಬೇರೆ ಬೇರೆ ವಸ್ತುಗಳಲ್ಲ. ಸಂಶಯ ವಿಕಲ್ಪಗಳನ್ನು ಮಾಡುವಾಗ ಮನಸ್ಸು ನಿಶ್ಚಯಿಸುವಾಗ ಅದೇ ಬುದ್ಧಿ ಎನ್ನಿಸುತ್ತದೆ. ಒಬ್ಬನು ಪಾಠ ಹೇಳುತ್ತಿದ್ದರೆ ಉಪಾಧ್ಯಾಯನೆನಿಸುತ್ತಾನೆ. ಆತನೇ ಅಡಿಗೆ ಮಾಡುತ್ತಿದ್ದಾಗ ಪಾಚಕನೆಂದೂ, ಕೃಷಿಕಾರ್ಯಮಾಡುತ್ತಿದ್ದಾಗ ರೈತನೆಂದು ಹೆಸರು ಪಡೆಯುತ್ತಾನೆ. ಈ ಅಂತಃಕರಣವನ್ನು ಮನಸ್ಸು, ಬುದ್ಧಿ, ಚಿತ್ತ, ಅಹಂಕಾರ ಎಂದೂ ವಿಂಗಡಿಸುವುದುಂಟು. ಧಾರಣಾತ್ಮಕವಾದದ್ದು ಚಿತ್ತ. ''ಅಹಂ - ನಾನು '' ಎಂದುಕೊಳ್ಳುವುದು ಅಹಂಕಾರ. ಹೀಗೆ ಅಂತಃಕರಣ ಚತುಷ್ಟಯವೆಂದೂ ಕೆಲವರು ವಿಂಗಡಿಸಿದ್ದುಂಟು. ಫಲಿತಾಂಶದಲ್ಲಿ ಭೇದವೇನೂ ಇಲ್ಲ. ಶ್ರೋತ್ರಾದಿಜ್ಞಾನೇಂದ್ರಿಯಗಳು ಶಬ್ದಸ್ಪರ್ಶಾದಿ ಜ್ಞಾನವನ್ನುಂಟುಮಾಡುವ ಸಾಧನಗಳು. ಅವುಗಳಲ್ಲಿಯೇ ಜ್ಞಾನ ಹುಟ್ಟುವುದಿಲ್ಲ. ಶಬ್ದಸ್ಪರ್ಶಾದಿಗಳನ್ನು ಅವು ಅಂತಃಕರಣಕ್ಕೆ ಒಯ್ದು ಮುಟ್ಟಿಸುತ್ತವೆ. ಅವುಗಳ ಜ್ಞಾನವಾಗುವುದು ಅಂತಃಕರಣದಲ್ಲಿ. ಈ ಜ್ಞಾನಕ್ಕೆ ವೃತ್ತಿಜ್ಞಾನವೆಂದು ಹೆಸರಿದೆ. ವೃತ್ತಿಯು ಅಂತಃಕರಣದ ಒಂದು ವ್ಯಾಪಾರವೇ. ಶಬ್ದಾದಿಗಳ ಜ್ಞಾನವಾದ ಮೇಲೆ, ಆ ವಸ್ತುವಿನ ವಿಷಯದಲ್ಲಿ ಅಂತಃಕರಣವು ವಿಚಾರಮಾಡುತ್ತದೆ. ಆಗ ಸಂಶಯವೋ ನಿಶ್ಚಯವೋ ಉಂಟಾಗುತ್ತದೆ. ಈ ಅಂತಃಕರಣ ವೃತ್ತಿಭೇದವನ್ನು ಗಣಿಸದೆ ಮನಸ್ಸನ್ನು ಬುದ್ಧಿಯೆಂದೂ ಚಿತ್ತವೆಂದೂ ಅಲ್ಲಲ್ಲಿ ವ್ಯವಹರಿಸುವುದುಂಟು. ಅದೇನೂ ಮುಖ್ಯವಾದದ್ದಲ್ಲ(೨೦). ಇನ್ನು ಆಕಾಶಾದಿಗಳ ರಜೋಗುಣದ ಐದು ಅಂಶಗಳಿಂದ ಕ್ರಮವಾಗಿ ಐದು ಕರ್ಮೇಂದ್ರಿಯಗಳು ಹುಟ್ಟಿದವು. ವಾಕ್, ಪಾಣಿ, ಪಾದ, ಪಾಯು (ಗುದ) ಮತ್ತು ಉಪಸ್ಥ (ಗುಹ್ಯ) - ಎಂಬಿವು ಐದು ಕರ್ಮೇಂದ್ರಿಯಗಳು. ವಾಕ್ ಎಂದರೆ ಮಾತಾಡಲು ಸಹಕರಿಸುವುದು ಜಿಹ್ವೆ. ಹಿಂದೆ ಹೇಳಿದಂತೆ ಇವೆಲ್ಲವೂ ಇಂದ್ರಿಯಗಳಿರುವ ಗೋಳಕಗಳು. ಇಂದ್ರಿಯವು ಸೂಕ್ಷ್ಮವಾದದ್ದು. ಜಿಹ್ವೆಯಿಂದ ಮಾತಾಡಬಹುದು. ಸಿಹಿ, ಕಹಿ ಮುಂತಾದ ರುಚಿಗಳನ್ನು ತಿಳಿಯಬಹುದು. ಜಿಹ್ವೆಯು ಕರ್ಮೇಂದ್ರಿಯವೂ ಹೌದು, ಜ್ಞಾನೇಂದ್ರಿಯವೂ

ಹೌದು (೨೧). ಪಂಚಭೂತಗಳಲ್ಲಿರುವ ಎಲ್ಲ ರಜೋಂಶಗಳಿಂದ ಪ್ರಾಣವಾಯುವಿನ ನಿರ್ಮಾಣವಾಯಿತು. ಈ ಪ್ರಾಣವು ವ್ಯಾಪಾರ ಭೇದದಿಂದ ಐದು ಬಗೆಯಾಗಿದೆ. ಪ್ರಾಣ , ಅಪಾನ , ಸಮಾನ , ಉದಾನ , ವ್ಯಾನ - ಎಂಬಿವು ಆ ಪಂಚಭೇದಗಳು. ಪ್ರಾಣದ ಒಳಭೇದಗಳಲ್ಲಿಯೂ ಪ್ರಾಣ ಎಂಬ ಹೆಸರಿನ ಒಂದು ಭೇದವಿದೆಯೆಂಬುದನ್ನು ಗಮನಿಸಬೇಕು. ಪಂಚಪ್ರಾಣಗಳೆಂದರೆ ಈ ಐದು. ಸತ್ತ್ವಗುಣದಿಂದ ಹುಟ್ಟಿದ ಅಂತಃಕರಣವು ವೃತ್ತಿಭೇದದಿಂದ ಮನಸ್ಸು, ಬುದ್ಧಿ - ಎಂದು ಎರಡು ಬಗೆಯಾಯಿತಷ್ಟೆ. ಚಿತ್ತ ಅಹಂಕಾರಗಳನ್ನು ಸೇರಿಸಿದರೆ ಅಂತಃಕರಣವು ನಾಲ್ಕು ವಿಧವಾಗುತ್ತದೆ. ಹಾಗೆಯೇ ಪ್ರಾಣವೂ ವೃತ್ತಿಭೇದದಿಂದ ಐದು ಹೆಸರುಗಳನ್ನು ಪಡೆದಿದೆ. ವೃತ್ತಿಗೆ ಅನುಗುಣವಾಗಿ ಇವುಗಳ ಸ್ಥಾನಗಳನ್ನೂ ಹೇಳಿದ್ದಾರೆ.

**ಹೃದಿ ಪ್ರಾಣೋ ಗುದೇಽಪಾನಃ ಸಮಾನೋ ನಾಭಿಸಂಸ್ಥಿತಃ ।**
**ಉದಾನಃ ಕಂಠದೇಶಸ್ಥೋ ವ್ಯಾನಃ ಸರ್ವಶರೀರಗಃ ॥**

(ಅಮರಕೋಶ)

ಇವುಗಳ ಕೆಲಸಗಳೇನೆಂದರೆ -

**ಅನ್ನಪ್ರವೇಶನಂ ಮೂತ್ರಾದ್ಯುತ್ಸರ್ಗೋಽನ್ನವಿಪಾಚನಮ್ ।**
**ಭಾಷಣಾದಿನಿಮೇಷಾದಿ ತದ್ವ್ಯಾಪಾರಾಃ ಕ್ರಮಾದಮೀ ॥**

(ಅಮರಕೋಶ ವ್ಯಾಖ್ಯಾನ ಸುಧಾ)

ಇಲ್ಲಿ ಹೇಳಿದ ಕ್ರಿಯೆಗಳು ಸಂಬಂಧಿಸಿದ ಇತರ ಕ್ರಿಯೆಗಳಿಗೂ ಉಪಲಕ್ಷಣ. ಆಹಾರವನ್ನು ಒಳಗೆ ತಳ್ಳುವುದು, ಕುಡಿಯುವುದು - ಮೊದಲಾದದ್ದು ಪ್ರಾಣದ ವ್ಯಾಪಾರ. ಉಸಿರಾಡುವುದೂ ಪ್ರಾಣಕ್ಕೆ ಸೇರಿದ ಕ್ರಿಯೆ. ಮೂತ್ರ , ಮಲಾದಿಗಳ ವಿಸರ್ಜನೆ ಅಪಾನದ ಕ್ರಿಯೆ. ಆಹಾರವನ್ನು ಜೀರ್ಣಮಾಡುವುದು ಸಮಾನದ ವೃತ್ತಿ. ಮಾತಾಡುವುದು , ಉಗುಳುವುದು ಮೊದಲಾದದ್ದು ಉದಾನದ ವೃತ್ತಿ. ಕಣ್ಣುಮುಚ್ಚುವುದು, ತೆರೆಯುವುದು, ದೇಹದೊಳಗಡೆ ನಡೆಯುವ ಕೆಲವು ಆಂತರಕ್ರಿಯೆಗಳು ವ್ಯಾನದ ವ್ಯಾಪಾರ. ಮುಂದಿನ ಶ್ಲೋಕದಲ್ಲಿ ಪ್ರಾಣವನ್ನು ಸೂಕ್ಷ್ಮಶರೀರದಲ್ಲಿ ಸೇರಿಸಿದ್ದಾರೆ. ಆದ್ದರಿಂದ ಈ ಪಂಚಪ್ರಾಣಗಳು ಇಂದ್ರಿಯಗೋಚರವಲ್ಲ. ನಾವು ಉಸಿರಾಡುವ ಗಾಳಿ, ಅಪಾನವಾಯು - ಇವನ್ನೇ ಕೆಲವರು ಪ್ರಾಣಾಪಾನಗಳೆಂದು ತಿಳಿದಿದ್ದಾರೆ.

ಅದು ತಪ್ಪು. ಪ್ರಾಣವಾಯು, ಉದಾನವಾಯು - ಎಂಬ ಹೆಸರು ರೂಢಿಯಲ್ಲಿರುವುದರಿಂದ ಈ ಭ್ರಮೆಯುಂಟಾಗಿದೆ. ಪಂಚಭೂತಗಳಲ್ಲಿಯೇ ವಾಯು ಸೇರಿಹೋಗಿರುವುದರಿಂದ, ಆ ಪಕ್ಷದಲ್ಲಿ ಪ್ರತ್ಯೇಕವಾಗಿ ಈಗ ಪ್ರಾಣದ ಉತ್ಪತ್ತಿಯನ್ನು ಹೇಳಬೇಕಾದ್ದೇ ಇರಲಿಲ್ಲ. ವಾಯುವಿಗೆ ಪ್ರೇರಕ ಶಕ್ತಿ ಇದೆ. ಒಂದಾನೊಂದು ಪ್ರೇರಕಶಕ್ತಿವಿಶೇಷವುಳ್ಳ ಸೂಕ್ಷ್ಮವಸ್ತುವೇ ಪಂಚಪ್ರಾಣ ಗಳೆನಿಸಿದೆ. ವಾಯುವಿನ ಸಹಕಾರದಿಂದ ಅದು ತನ್ನ ವಿವಿಧ ವ್ಯಾಪಾರಗಳನ್ನು ನಡೆಸುತ್ತದೆ. ಈಗ ಪುನರುಕ್ತಿಯಾದರೂ ಓದುಗರಿಗೆ ಗೊಂದಲವಾಗ ಬಾರದೆಂದು ಇನ್ನೊಂದು ವಿಷಯವನ್ನು ಸ್ಫುಟಗೊಳಿಸ ಬೇಕಾಗಿದೆ. ತಮೋಗುಣಪ್ರಧಾನವಾದ ಪ್ರಕೃತಿಯಿಂದ ಪಂಚಸೂಕ್ಷ್ಮಭೂತಗಳು ಹುಟ್ಟಿದ್ದವಷ್ಟೆ, ಇವುಗಳಲ್ಲಿ ಮೂರುಗುಣಗಳಿದ್ದರೂ ತಮೋಗುಣವು ಅಧಿ ಕವೆಂದು ತಿಳಿಯಬೇಕು. ಈ ಪಂಚಭೂತಗಳಲ್ಲಿರುವ ಸತ್ತ್ವಾಂಶದಿಂದ ಕ್ರಮವಾಗಿ ಶ್ರೋತ್ರ , ತ್ವಕ್, ನೇತ್ರ , ಜಿಹ್ವಾ , ನಾಸಿಕಾ - ಎಂಬ ಐದು ಜ್ಞಾನೇಂದ್ರಿಯಗಳು ಹುಟ್ಟಿದವು. ಆಕಾಶದ ಸತ್ತ್ವಾಂಶದಿಂದ ಶ್ರೋತ್ರ, ವಾಯುವಿನ ಸತ್ತ್ವಾಂಶದಿಂದ ತ್ವಗಿಂದ್ರಿಯ ಇತ್ಯಾದಿ. ಆಮೇಲೆ ಈ ಸೂಕ್ಷ್ಮಭೂತಗಳ ರಜೋಂಶದಿಂದ ಕ್ರಮವಾಗಿ ವಾಕ್, ಪಾಣಿ, ಪಾದ, ಗುಹ್ಯ, ಗುದ - ಎಂಬ ಐದು ಕರ್ಮೇಂದ್ರಿಯಗಳು ಹುಟ್ಟಿದವು. ಪಂಚದಶೀ ಶ್ಲೋಕದಲ್ಲಿ 'ಪಾಯೂಪಸ್ಥಾಭಿಧಾನಾನಿ ಜಜ್ಞಿರೇ ' ಎಂದು ಹೇಳಿದೆ. ಇಲ್ಲಿ ಉಪಸ್ಥ, ಪಾಯು ಎಂದಿರಬೇಕಾಗಿತ್ತು. ಶ್ಲೋಕದ ಛಂದಸ್ಸಿಗಾಗಿ ಇದು ಹಿಂದುಮುಂದಾಗಿದೆ. ಜಲದ ರಜೋಂಶದಿಂದ ಗುಹ್ಯ, ಪೃಥ್ವಿಯ ರಜೋಂಶದಿಂದ ಗುದ ಹುಟ್ಟಿದವೆಂದು ತಿಳಿಯಬೇಕು. ಕರ್ಮೇಂದ್ರಿಯಗಳೂ ಸೂಕ್ಷ್ಮವಾದವು. ಬಾಹ್ಯದಲ್ಲಿ ಕಾಣತಕ್ಕವಲ್ಲ. ಸೂಕ್ಷ್ಮಭೂತಗಳ ಎಲ್ಲ ಸತ್ತ್ವಾಂಶಗಳೂ ಸೇರಿ ಅಂತಃಕರಣವು ಹುಟ್ಟಿದೆ. ಇದು ವೃತ್ತಿಭೇದದಿಂದ ಮನಸ್ಸು, ಬುದ್ಧಿ ಎಂದು ಎರಡಾಗುತ್ತದೆ. ಕೆಲವರು ಚಿತ್ತ, ಅಹಂಕಾರ ಎಂದು ಇನ್ನೆರಡನ್ನೂ ಸೇರಿಸುತ್ತಾರೆ. ಇನ್ನು ಈ ಸೂಕ್ಷ್ಮಭೂತಗಳ ಎಲ್ಲ ರಜೋಂಶಗಳೂ ಸೇರಿ ಪ್ರಾಣವೆಂಬ ಶಕ್ತಿಯು ಹುಟ್ಟುತ್ತದೆ. ಇದು ವೃತ್ತಿಭೇದದಿಂದ ಪ್ರಾಣ, ಅಪಾನ , ವ್ಯಾನ , ಉದಾನ , ಸಮಾನ , ಎಂದು ಐದು ವಿಧ. ನಾವು ಉಸಿರಾಡುವ ಗಾಳಿ ಮೊದಲಾದದ್ದು ಈ ಪ್ರಾಣಶಕ್ತಿಯಿಂದ ಚಲಿಸುವ ಬಾಹ್ಯವಾದ ಸ್ಥೂಲವಾಯು , ಸೂಕ್ಷ್ಮವಾಯುವಲ್ಲ(೨೨). ಈ ಪಂಚಜ್ಞಾನೇಂದ್ರಿಯಗಳು , ಪಂಚಕರ್ಮೇಂದ್ರಿಯಗಳು , ಪಂಚವಾಯುಗಳು ,

ಮನಸ್ಸು, ಬುದ್ಧಿ- ಎಂಬ ಹದಿನೇಳು ಸೂಕ್ಷ್ಮದ್ರವ್ಯಗಳಿಗೆ ಸೂಕ್ಷ್ಮಶರೀರವೆಂದೂ ಲಿಂಗಶರೀರವೆಂದೂ ಹೆಸರಿದೆ. ಲಿಂಗವೆಂದರೆ ಜ್ಞಾಪಕವೆಂದರ್ಥ. ಇವು ಆತ್ಮವಿದೆಯೆಂಬುದಕ್ಕೆ ಲಿಂಗಗಳು. ಹೇಗೆಂದರೆ, ಸೂಕ್ಷ್ಮಶರೀರವು ಒಂದಾನೊಂದು ವ್ಯವಸ್ಥೆಯಿಂದ ಕ್ರಿಯೆಯನ್ನು ನಡೆಸುತ್ತಿದೆ. ಜಡವಾದ ಶರೀರದಲ್ಲಿ ಈ ಕ್ರಿಯೆ ನಡೆಯಬೇಕಾದರೆ ಚೈತನ್ಯಶಾಲಿಯೊಬ್ಬನಿರಲೇಬೇಕು. ಚೇತನವಾದ ಆತ್ಮನಿದ್ದಾನೆಂಬುದನ್ನು ಸೂಕ್ಷ್ಮಶರೀರವು ಜ್ಞಾಪಿಸುತ್ತದೆ. ಚಿತ್ತ, ಅಹಂಕಾರ ಎಂಬ ಎರಡು ಅಂತಃಕರಣ ವೃತ್ತಿಗಳನ್ನು ಸೇರಿಸಿ ಹತ್ತೊಂಬತ್ತು ದ್ರವ್ಯಗಳಿಂದ ಸೂಕ್ಷ್ಮಶರೀರವಾಗಿದೆಯೆಂದು ಕೆಲವರು ಹೇಳುತ್ತಾರೆ. ಈ ವೃತ್ತಿಭೇದಗಳು ನಮ್ಮ ಕಲ್ಪನೆಗೆ ಒಳಪಟ್ಟವಾದ್ದರಿಂದ ವಸ್ತುಭೇದವೇನೂ ಆಗುವುದಿಲ್ಲ. ಅವಿದ್ಯೆಯು ಕಾರಣ ಶರೀರವೆಂದು ಹಿಂದೆ ಹೇಳಿದೆ. ಈ ಕಾರಣ ಶರೀರ, ಲಿಂಗಶರೀರಗಳೆರಡೂ ಮೋಕ್ಷವಾಗುವವರೆಗೂ ಇರುತ್ತವೆ. ಜನ್ಮಾಂತರಗಳಲ್ಲಿಯೂ ಇವು ಜೊತೆಗೆ ಬರತಕ್ಕವು. ಸ್ಥೂಲದೇಹದಂತೆ ಇವು ನಾಶವಾಗತಕ್ಕವಲ್ಲ. ಸತ್ತಾಗ ಸ್ಥೂಲದೇಹವು ಮಾತ್ರ ನಶಿಸುತ್ತದೆ (೨೩).

ಈ ಸೂಕ್ಷ್ಮಶರೀರದಲ್ಲಿ 'ಅಹಂ' ಎಂಬ ಅಭಿಮಾನವನ್ನಿಟ್ಟ ಪ್ರಾಜ್ಞನಿಗೆ ತೈಜಸನೆಂದು ಹೆಸರು. ಎಲ್ಲ ಸೂಕ್ಷ್ಮಶರೀರಗಳಲ್ಲಿ ಅಭಿಮಾನವನ್ನಿಟ್ಟಿರುವ ಈಶ್ವರನಿಗೆ ಹಿರಣ್ಯಗರ್ಭನೆಂದು ಹೆಸರು. ತೈಜಸನೆನಿಸಿದ ಪ್ರಾಜ್ಞನಾದ ಜೀವನು ವ್ಯಷ್ಟಿ, ಹಿರಣ್ಯಗರ್ಭನೆನಿಸಿದ ಈಶ್ವರನು ಸಮಷ್ಟಿ- ಎಂದು ತಿಳಿಯಬೇಕು. ಇದೂ ಸ್ವಲ್ಪ ವಿವರಣೆಯನ್ನಪೇಕ್ಷಿಸುತ್ತದೆ. ಮಲಿನಸತ್ತ್ವಪ್ರಧಾನವಾದದ್ದು ಅವಿದ್ಯೆ. ಸತ್ತ್ವಗುಣದಲ್ಲಿ ರಜಸ್ತಮೋಗುಣಗಳೆರಡೂ ಸೇರಿಕೊಂಡಾಗ ಅದು ಮಲಿನವಾಗುತ್ತದೆ. ಈ ಅವಿದ್ಯೆಯೇ ಉಪಾಧಿಯಾಗಿರುವ ಜೀವಾತ್ಮನಿಗೆ ಪ್ರಾಜ್ಞನೆಂದು ಹೆಸರು. ಆತನೇ ಸೂಕ್ಷ್ಮಶರೀರವನ್ನು ಪಡೆದುಕೊಂಡಾಗ ತೈಜಸನೆನಿಸಿದ್ದಾನೆ. ಎಷ್ಟು ಜೀವಾತ್ಮರಿದ್ದಾರೋ ಅಷ್ಟು ಶೂಕ್ಷ್ಮಶರೀರಗಳಿವೆ. ಒಬ್ಬ ಜೀವಾತ್ಮನಿಗೆ ಒಂದು ಸೂಕ್ಷ್ಮಶರೀರವಿರುತ್ತದೆ. ಈ ಒಂದರಲ್ಲಿ ಅಭಿಮಾನವಿಟ್ಟ ಆತನು ವ್ಯಷ್ಟಿ. ಈಶ್ವರನಿಗೆ ಅವಿದ್ಯೆ ಉಪಾಧಿಯಾಗಿಲ್ಲ. ಅವನು ಮಾಯೆಯನ್ನು ವಶಪಡಿಸಿಕೊಂಡು ಅದನ್ನು ತನ್ನ ಅಧೀನದಲ್ಲಿಟ್ಟುಕೊಂಡಿದ್ದಾನೆ. ಅವನಿಗೆ ಮಾಯೆ ಉಪಾಧಿ. ಸಮಸ್ತ ಸೂಕ್ಷ್ಮಶರೀರಗಳಲ್ಲಿಯೂ ಆತನು 'ಅಹಂ' ಎಂಬ ಅಭಿಮಾನವನ್ನಿಟ್ಟು ಕೊಂಡಾಗ ಹಿರಣ್ಯಗರ್ಭನೆನಿಸುತ್ತಾನೆ. ಆದ್ದರಿಂದ ಆತನು ಸಮಷ್ಟಿ ಒಬ್ಬ ಮನುಷ್ಯನು ವ್ಯಷ್ಟಿ ಮನುಷ್ಯಸಮೂಹವು ಸಮಷ್ಟಿ(೨೪). ಪರಿಣಾಮವೇನಾಯಿ

ತೆಂದರೆ ; ಈಶ್ವರನು , ಈ ಸಮಸ್ತತೈಜಸರೂ 'ನಾನು ' ಎಂಬ ಅಭಿಮಾನವನ್ನು ತಳೆದವನು. ಆದ್ದರಿಂದ ಅವನು ಸಮಷ್ಟಿ. ಜೀವನು ಒಂದೇ ಸೂಕ್ಷ್ಮಶರೀರದಲ್ಲಿ 'ನಾನು ' ಎಂಬ ಅಭಿಮಾನವನ್ನು ತಳೆದವನು. ಆದ್ದರಿಂದ ಇವನು ವ್ಯಷ್ಟಿ (೨೫). ಅನಂತರ ಭಗವಂತನು ಜೀವರ ಸುಖದುಃಖ ಭೋಗಗಳಿಗೆ ಬೇಕಾದ ಭೋಗ್ಯವಸ್ತುಗಳನ್ನೂ ಸುಖದುಃಖಗಳನ್ನು ಅನುಭವಿಸುವ ಭೋಗಾಯತನವಾದ ಶರೀರವನ್ನೂ ನಿರ್ಮಿಸುವುದಕ್ಕಾಗಿ , ಆಕಾಶಾದಿ ಸೂಕ್ಷ್ಮಭೂತಗಳನ್ನು ಪಂಚೀಕರಿಸುತ್ತಾನೆ. ಅನಾದಿಯಾದ ಸಂಸಾರದಲ್ಲಿ ಜೀವಾತ್ಮರು ನಾನಾಬಗೆಯ ಪುಣ್ಯಾಪಾಪಕರ್ಮಗಳನ್ನು ಮಾಡಿರುತ್ತಾರೆ. ಅವುಗಳ ಫಲವನ್ನು ಅವರು ಅನುಭವಿಸಲೇಬೇಕು. ಅನುಭವಿಸುವುದಕ್ಕೆ ವಿಧವಿಧವಾದ ಆಹಾರಾದಿವಸ್ತುಗಳು ಬೇಕು. ಅವು ಭೋಗ್ಯಗಳು. ಅವನ್ನು ಭೋಗಿಸುವುದಕ್ಕೆ ತಕ್ಕ ಶರೀರವೂ ಬೇಕು. ಶರೀರವು ಭೋಗಾಯತನ. ಸುಖದುಃಖಗಳನ್ನು ಭೋಗಿಸುವ ಮನೆ. ಈ ವಸ್ತುಗಳನ್ನೂ ಶರೀರವನ್ನೂ ಪಂಚಭೂತಗಳಿಂದಲೇ ನಿರ್ಮಿಸಬೇಕಾಗಿದೆ. ಅದಕ್ಕೆ ತಕ್ಕಂತೆ ರೂಪಿಸುವುದಕ್ಕಾಗಿ ಈ ಸೂಕ್ಷ್ಮಭೂತಗಳನ್ನು ಸ್ಥೂಲವನ್ನಾಗಿ ಮಾಡಬೇಕಾಗಿದೆ. ಆದ್ದರಿಂದ ಈಶ್ವರನು ಇವನ್ನು ಪಂಚೀಕರಿಸುತ್ತಾನೆ. ಪಂಚೀಕರಣವೆಂದರೆ ಒಂದು ವಸ್ತುವಿಗೆ ಇತರ ನಾಲ್ಕು ವಸ್ತುಗಳನ್ನು ಸೇರಿಸಿ ಐದರ ಮಿಶ್ರಣವನ್ನಾಗಿ ಮಾಡುವುದು (೨೬). ಹೇಗೆಂದರೆ, ಆಕಾಶಾದಿಗಳಲ್ಲಿ ಒಂದೊಂದು ಭೂತವನ್ನು ಸಮವಾಗಿ ಎರಡು ವಿಭಾಗ ಮಾಡುವುದು. ಮೊದಲನೆಯ ವಿಭಾಗವನ್ನು ಮತ್ತೆ ನಾಲ್ಕು ಅಂಶಗಳನ್ನಾಗಿ ವಿಂಗಡಿಸುವುದು. ನಾಲ್ಕರಲ್ಲಿ ಒಂದೊಂದು ಅಂಶವನ್ನೂ ಇತರ ಭೂತಗಳ ದ್ವಿತೀಯಾಂಶದಲ್ಲಿ ಸೇರಿಸುತ್ತ ಹೋದರೆ, ಎಲ್ಲ ಪಂಚಭೂತಗಳೂ ಪಂಚೀಕೃತವಾಗುತ್ತವೆ. ಇದನ್ನು ಹೀಗೆ ವಿವರಿಸಬಹುದು. ಒಂದು ರೂಪಾಯಿಗೆ ಹದಿನಾರು ಆಣೆಗಳೆಂದು ಹಿಂದೆ ಲೆಕ್ಕವಿತ್ತಷ್ಟೆ. ಆಕಾಶವನ್ನು ಎರಡು ಸಮವಿಭಾಗಗಳನ್ನು ಮಾಡಿದರೆ ಎಂಟಾಣೆ, ಎಂಟಾಣೆಯೆಂದು ಎರಡು ವಿಭಾಗವಾಗುತ್ತದೆ.- ಮೊದಲನೆಯ ಎಂಟಾಣೆಯನ್ನು ನಾಲ್ಕು ಅಂಶಗಳನ್ನಾಗಿ ವಿಂಗಡಿಸಿದರೆ ಒಂದೊಂದೂ ಎರಡಾಣೆಯ ಅಂಶವಾಗುತ್ತದೆ. ಹೀಗೆ ಎಲ್ಲ ಭೂತಗಳನ್ನೂ ವಿಂಗಡಿಸತಕ್ಕದ್ದು. ಅವುಗಳಲ್ಲಿ ಎರಡನೆಯ ಭಾಗ ಎಂಟಾಣೆ. ಅದಕ್ಕೆ ಉಳಿದ ನಾಲ್ಕು ಭೂತಗಳ ಎರಡಾಣೆ ಅಂಶವನ್ನು ಸೇರಿಸಬೇಕು. ತನ್ನ ಸ್ವಾಂಶವು ಎಂಟಾಣೆ. ಉಳಿದವುಗಳಿಂದ ನಾಲ್ಕು ಎರಡಾಣೆ ಅಂಶಗಳು ಸೇರಿದಾಗ ಒಂದೊಂದು ಭೂತವೂ ಹದಿನಾರಾಣೆಯುಳ್ಳದ್ದೇ ಆಗುತ್ತದೆ.

ಅದರಲ್ಲಿ ತನ್ನದು ಎಂಟಾಣೆಭಾಗ. ಹೊಸದಾಗಿ ಸೇರಿದ್ದು ನಾಲ್ಕು ಎರಡಾಣೆಯ ಭಾಗ. ಹೀಗೆ ತಿಳಿಯಬೇಕು. ಪೃಥ್ವಿಯು ಪಂಚೀಕೃತವಾಯಿತು. ಸ್ವಾಂಶ ಎಂಟಾಣೆ. ಜಲಾಂಶ ಎರಡಾಣೆ. ಅಗ್ನಿಯ ಅಂಶ ಎರಡಾಣೆ. ವಾಯುವಿನ ಅಂಶ ಎರಡಾಣೆ. ಆಕಾಶದ ಅಂಶ ಎರಡಾಣೆ. ಒಟ್ಟು ಹದಿನಾರಾಣೆ. ಹೀಗೆ ಎಲ್ಲ ಭೂತಗಳೂ ಪಂಚೀಕೃತವಾಗಿ ಸ್ಥೂಲಭೂತಗಳಾದವು ಎಂದು ಅಭಿಪ್ರಾಯ (೨೭).

''ತಮೋಗುಣ ಪ್ರಧಾನವಾದ ಪ್ರಕೃತಿಯಿಂದ ಈಶ್ವರನ ಆಜ್ಞೆಯಂತೆ ಆಕಾಶ, ವಾಯು, ಅಗ್ನಿ, ಜಲ, ಪೃಥ್ವಿ - ಎಂಬ ಪಂಚಭೂತಗಳು ಉತ್ಪನ್ನವಾದವು'' ಎಂದು ತಿಳಿಸಿದೆ. ಈ ಪಂಚಭೂತಗಳು ಸೂಕ್ಷ್ಮವಾದವು. ಇವು ಇಂದ್ರಿಯಗೋಚರಗಳಲ್ಲ. ಇವನ್ನು ಪಂಚತನ್ಮಾತ್ರೆಗಳೆಂದೂ ಹೇಳುತ್ತಾರೆ. ಈ ಪಂಚತನ್ಮಾತ್ರೆಗಳಿಂದ ಪಂಚಮಹಾಭೂತಗಳು ಉದಿಸಿದವೆಂದು ಮುಂದೆ ವಿವರಿಸಲಾಗುವುದು. ಈ ಮಹಾಭೂತಗಳು ಸ್ಥೂಲವಾದವು. ನಾವು ಬಳಸುವ ಪೃಥ್ವಿ, ಜಲ, ಅಗ್ನಿ ಮೊದಲಾದವು ಸ್ಥೂಲವಾದ ಮಹಾಭೂತಗಳು. ಸೂಕ್ಷ್ಮವಾದ ಈ ಪಂಚತನ್ಮಾತ್ರೆಗಳಿಗೆ ಶಬ್ದ, ಸ್ಪರ್ಶ, ರೂಪ, ರಸ, ಗಂಧ ಎಂಬ ಹೆಸರುಗಳೂ ಇವೆ. ಇವು ಪರಮಾಣುಗಳಂತಿರುವ ಸೂಕ್ಷ್ಮದ್ರವ್ಯಗಳು, ಗುಣಗಳಲ್ಲ. ಮಹಾಭೂತಗಳಲ್ಲಿರುವ ಶಬ್ದಸ್ಪರ್ಶಾದಿಗಳು ಗುಣಗಳು, ದ್ರವ್ಯಗಳಲ್ಲ. ಈ ವಿಷಯವನ್ನು ಸ್ಪಷ್ಟವಾಗಿ ತಿಳಿದು ನೆನಪಿನಲ್ಲಿಡಬೇಕು. ಒಂದೇ ಹೆಸರು ಇರುವುದರಿಂದ ಭ್ರಮೆಯಾಗುವ ಸಂಭವ ಇದೆ. ವೇದಾಂತಿಗಳು ಬಳಸುವ ಕೆಲವು ಶಬ್ದಗಳನ್ನು ಸಾಂಖ್ಯರೂ ಬಳಸುತ್ತಾರೆ. ಕೆಲವು ವೇಳೆ ಅರ್ಥವು ಬೇರೆಯಾಗಿರುತ್ತದೆ. ಉದಾಹರಣೆಗೆ, ಪ್ರಕೃತಿ ಎಂಬ ಶಬ್ದ. ವೇದಾಂತದಲ್ಲಿ ಇದಕ್ಕೆ ಈಶ್ವರನಿಗೆ ಅಧೀನವಾದ ಮಾಯೆಯೆಂದರ್ಥ. ಸಾಂಖ್ಯಶಾಸ್ತ್ರದಲ್ಲಿ ಇದೊಂದು ಸ್ವತಂತ್ರವಾದ ತತ್ತ್ವ. ಯಾರಿಗೂ ಅಧೀನವಾದ್ದಲ್ಲ ಮತ್ತು ಶಾಶ್ವತವಾಗಿ ಇರತಕ್ಕದ್ದು. ಇದನ್ನು ಮೂಲಪ್ರಕೃತಿ, ಪ್ರಧಾನ ಎಂದೂ ಹೇಳುತ್ತಾರೆ. ಇದರಿಂದ ಮಹತ್, ಅಹಂಕಾರ, ಪಂಚತನ್ಮಾತ್ರಗಳು ಕ್ರಮವಾಗಿ ಒಂದರಿಂದ ಒಂದು ಹುಟ್ಟುತ್ತವೆಯೆಂದು ಸಾಂಖ್ಯರ ಮತವಿದೆ. ಪಂಚದಶಿಯಲ್ಲಾದರೋ ಮಾಯೆಯಿಂದ ನೇರವಾಗಿ ಪಂಚತನ್ಮಾತ್ರೆಗಳು ಉದಿಸಿದವೆಂದು ತಿಳಿದು ಬರುತ್ತದೆ. ಮಹತ್, ಅಹಂಕಾರ - ಎಂಬ ತತ್ತ್ವಗಳನ್ನು ಇಲ್ಲಿ ಹೇಳಿಲ್ಲ. ವೇದಾಂತದಲ್ಲಿ ಮಹತ್ತೆಂದರೆ ಹಿರಣ್ಯಗರ್ಭನೆಂದೂ ಅಹಂಕಾರವೆಂದರೆ ಪ್ರಜಾಪತಿಬ್ರಹ್ಮನೆಂದೂ ಕೆಲವರು ಹೇಳಿದ್ದುಂಟು.

ಮುಖ್ಯವಾಗಿ ಈ ಸೃಷ್ಟಿಕ್ರಮವನ್ನು ಹೇಳುವುದರಲ್ಲಿ ವೇದಾಂತಕ್ಕೆ ತಾತ್ಪರ್ಯವಿಲ್ಲ. ಇವೆಲ್ಲವೂ ಅನಾತ್ಮವಸ್ತುಗಳು. ಜಗತ್ತೆಲ್ಲವೂ ಮಯಾಕಲ್ಪಿತವಾದ ಅನಾತ್ಮವೆಂದೂ ಹೇಳಿ ಇದರಲ್ಲಿ ಆಸಕ್ತಿಯನ್ನಿಡದೆ ಆತ್ಮವಸ್ತುವಿನ ಕಡೆಗೆ ಮನಸ್ಸನ್ನು ತಿರುಗಿಸುವುದಕ್ಕಾಗಿ ಈ ಅನಾತ್ಮವನ್ನೇ ಬಿಡಿಸಿ ತಿಳಿಸುತ್ತಿದ್ದಾರೆ. ಪಂಚೀಕೃತವಾದ ಈ ಸ್ಥೂಲ ಪಂಚಮಹಾಭೂತಗಳಿಂದ ಬ್ರಹ್ಮಾಂಡವೂ ಅದರಲ್ಲಿ ಭೂಲೋಕಾದಿಸಮಸ್ತಲೋಕಗಳೂ ಉತ್ಪನ್ನವಾದವು. ಈ ಸ್ಥೂಲ ಭೂತಗಳಿಂದಲೇ ಭೋಗ್ಯಗಳಾದ ಅನ್ನ, ವೃಕ್ಷ, ಪುಷ್ಪ, ಫಲಾದಿಗಳೂ ಅವನ್ನು ಭೋಗಿಸತಕ್ಕ ದೇವ, ಮನುಷ್ಯ, ಮೃಗಾದಿಗಳ ಶರೀರಗಳು ಈಶ್ವರಾಜ್ಞೆಯಿಂದ ಹುಟ್ಟಿದವು. ಈ ಸ್ಥೂಲಶರೀರಗಳಲ್ಲಿ ಅಭಿಮಾನಿಯಾದ ಹಿರಣ್ಯಗರ್ಭನಿಗೆ ವೈಶ್ವಾನರನೆಂದು ಹೆಸರು. ಈತನು ಸಮಷ್ಟಿ ಶರೀರಗಳಲ್ಲಿ ಅಭಿಮಾನಿ. ವ್ಯಷ್ಟಿಯಾದ ಒಂದೊಂದು ಸ್ಥೂಲ ಶರೀರದಲ್ಲಿ ಅಭಿಮಾನಿಗಳಾದ ತೈಜಸರಿಗೆ ವಿಶ್ವರೆಂದು ಹೆಸರು. ದೇವತೆಗಳು, ತಿರ್ಯಗ್ ಜಂತುಗಳು, ಮನುಷ್ಯರು ಮೊದಲಾದ ಜೀವಿಗಳೆಲ್ಲರೂ ವಿಶ್ವರೆನಿಸುತ್ತಾರೆ. ಈ ವಿಶ್ವರು ಬಾಹ್ಯದೃಷ್ಟಿಯುಳ್ಳವರು. ಪ್ರತ್ಯಗಾತ್ಮನನ್ನರಿಯದ ಅಜ್ಞಾನಿಗಳು (೨೮-೨೯).

ತಾತ್ಪರ್ಯವೇನಾಯಿತೆಂದರೆ, ಶುದ್ಧಬ್ರಹ್ಮವು ಮಾಯಾಶಕ್ತಿಯಿಂದ ಸಹಿತವಾಗಿ ಈಶ್ವರನಾಯಿತು. ಈಶ್ವರನು ಸಮಷ್ಟಿಲಿಂಗಶರೀರಗಳಲ್ಲಿ ಅಭಿಮಾನಿಯಾಗಿ ಹಿರಣ್ಯಗರ್ಭನೆಂದೂ ಸಮಷ್ಟಿಸ್ಥೂಲಶರೀರಗಳಲ್ಲಿ ಅಭಿಮಾನಿಯಾಗಿ ವೈಶ್ವಾನರನೆಂದೂ ಹೇಳಲ್ಪಡುತ್ತಾನೆ. ಶುದ್ಧಬ್ರಹ್ಮವೇ ಮಲಿನ ಸತ್ತ್ವಪ್ರಧಾನವಾದ ಅವಿದ್ಯೆಯೆಂಬ ಉಪಾಧಿಗೆ ಒಳಗಾಗಿ ಪ್ರಾಜ್ಞನೆಂಬ ಹೆಸರನ್ನು ಪಡೆಯುತ್ತದೆ. ಈ ಪ್ರಾಜ್ಞನೇ ಅಂತಃಕರಣ ವಿಶಿಷ್ಟವಾದ ಲಿಂಗಶರೀರದಲ್ಲಿ ಅಭಿಮಾನಿಯಾಗಿ ತೈಜಸನೆಂದೂ ಸ್ಥೂಲಶರೀರದಲ್ಲಿ ಅಭಿಮಾನಿಯಾಗಿ ವಿಶ್ವನೆಂದೂ ಹೇಳಲ್ಪಡುತ್ತಾನೆ. ಈತನು ವ್ಯಷ್ಟಿಯಾದವನು. ಇವನೇ ಜೀವನು. ಮಾಯೆಯೆಂಬ ಶಕ್ತಿಯನ್ನು ವಶಪಡಿಸಿಕೊಂಡು ಸ್ವತಂತ್ರನಾದವನು ಈಶ್ವರ, ಅವಿದ್ಯೆಯೆಂಬ ಶಕ್ತಿಗೆ ಅಧೀನನಾಗಿ ಪರತಂತ್ರನಾದವನು ಜೀವ. ಈಶ್ವರನಿಗೇ ಉಪಾಧಿಭೇದದಿಂದ ಹಿರಣ್ಯಗರ್ಭನೆಂದೂ ವೈಶ್ವಾನರನೆಂದೂ ಹೆಸರು. ಜೀವನಿಗೆ ಉಪಾಧಿ ಭೇದದಿಂದ ಪ್ರಾಜ್ಞ, ತೈಜಸ, ವಿಶ್ವ ಎಂದು ಹೆಸರು. ಈ ಜೀವರು ಅಜ್ಞಾನಿಗಳಾದ್ದರಿಂದ ಮನುಷ್ಯಾದಿಶರೀರಗಳನ್ನು ಪಡೆದು, ಸುಖದುಃಖಗಳನ್ನು ಭೋಗಿಸುವುದಕ್ಕಾಗಿ ವಿವಿಧ ಕರ್ಮಗಳನ್ನು ಮಾಡುತ್ತಾರೆ.

ಕರ್ಮಗಳನ್ನು ಮಾಡುವುದಕ್ಕಾಗಿ ಹಿಂದೆ ಮಾಡಿದ ಕರ್ಮಫಲಗಳನ್ನು ಭೋಗಿಸುತ್ತಾರೆ. ಅಭಿಪ್ರಾಯವೇನೆಂದರೆ, ಫಲಾಪೇಕ್ಷೆಯಿಂದ ಕೆಲಸ ಮಾಡುತ್ತಾರೆ. ಅದಕ್ಕೆ ತಕ್ಕ ಫಲವು ದೊರಕಿದಾಗ ಭೋಗಿಸುತ್ತಾರೆ. ಈ ಭೋಗವು ಫಲಾಪೇಕ್ಷೆಯನ್ನು ಬೆಳೆಸುವುದರಿಂದ ಫಲಕ್ಕಾಗಿ ಮತ್ತೆ ಕರ್ಮಗಳಲ್ಲಿ ತೊಡಗುವಂತೆ ಮಾಡುತ್ತದೆ. ಸುಖವಾದರೆ ಅದೇ ಬಗೆಯ ಕರ್ಮದಲ್ಲಿ ಮನುಷ್ಯನು ತೊಡಗುತ್ತಾನೆ. ದುಃಖವಾದರೆ ಅದಕ್ಕೆ ವಿರುದ್ಧವಾದ ಕರ್ಮದಲ್ಲಿ ಇಚ್ಛೆ ಹುಟ್ಟುತ್ತದೆ. ಹೀಗೆ ಕರ್ಮ - ಭೋಗ , ಭೋಗ - ಕರ್ಮ ಇವುಗಳ ಚಕ್ರದಲ್ಲಿ ಸಿಕ್ಕಿದ ಜೀವರು ಒಂದಲ್ಲ ಒಂದು ಕರ್ಮವನ್ನು ಮಾಡುತ್ತ, ಫಲಭೋಗಕ್ಕಾಗಿ ಒಂದಾದಮೇಲೆ ಒಂದರಂತೆ ಜನ್ಮವನ್ನು ಪಡೆಯುತ್ತಲೇ ಇರುತ್ತಾರೆ. ಇವರಿಗೆ ಶಾಂತಿಸುಖವೆಂಬುದು ದೊರೆಯುವುದೇ ಇಲ್ಲ. ನದೀಪ್ರವಾಹದಲ್ಲೇಳುವ ನೀರಿನ ಸುಳಿಗಳಲ್ಲಿ ಸಿಕ್ಕಿಕೊಂಡ ಕೀಟಗಳು ಸುಳಿಯಿಂದ ಸುಳಿಗೆ ಹೋಗಿ ಸಿಕ್ಕಿಕೊಳ್ಳುವಂತೆ ಈ ಜೀವರ ಪರಿಸ್ಥಿತಿಯುಂಟಾಗುತ್ತದೆ (೩೦). ಹಿಂದೆ ಮಾಡಿದ ಯಾವುದೋ ಸತ್ಕರ್ಮದ ಫಲದಿಂದ ಈ ಕೀಟಗಳನ್ನು ಒಬ್ಬ ಕರುಣಾಳುವು ಕಾಣಬಹುದು. ಆತನು ಈ ಕೀಟಗಳನ್ನೆತ್ತಿ ನದೀತೀರದಲ್ಲಿ ಬಿಟ್ಟಾಗ ಆ ಕೀಟಗಳು ಒಂದು ಮರದ ನೆರಳಲ್ಲಿ ಸುಖವಾಗಿ ವಿಶ್ರಮಿಸುತ್ತವೆ. ಅಂತೆಯೇ ಮನುಷ್ಯರೂ ಸಹ ತಮ್ಮ ಸತ್ಕರ್ಮದ ಬಲದಿಂದ ತತ್ತ್ವದರ್ಶಿಯಾದ ಒಬ್ಬ ಗುರುವನ್ನು ಪಡೆಯುತ್ತಾರೆ. ಅವರ ಉಪದೇಶದಿಂದ ಮುಂದೆ ಹೇಳುವಂತೆ ಪಂಚಕೋಶಗಳನ್ನು ವಿವೇಚಿಸಿ ಶ್ರೇಷ್ಠವಾದ ಮೋಕ್ಷಸುಖವನ್ನು ಪಡೆಯುತ್ತಾರೆ (೩೧-೩೨). ಇನ್ನು ಮುಂದೆ ಪಂಚಕೋಶಗಳ ವಿಚಾರವು ನಡೆಯುತ್ತದೆ. ಅನ್ನ, ಪ್ರಾಣ, ಮನಸ್ಸು, ಬುದ್ಧಿ ಆನಂದ - ಎಂದು ಐದು ಕೋಶಗಳು ಈ ಶರೀರದಲ್ಲಿವೆ. ಇವನ್ನೇ ಅನ್ನಮಯ, ಪ್ರಾಣಮಯ , ಮನೋಮಯ , ವಿಜ್ಞಾನಮಯ ಮತ್ತು ಆನಂದಮಯ ಕೋಶಗಳೆನ್ನುತ್ತಾರೆ. ಶ್ಲೋಕದಲ್ಲಿ ಬುದ್ಧಿ ಎಂದರೆ ವಿಜ್ಞಾನಮಯಕೋಶ. ಕೋಶವೆಂದರೆ ಚೀಲ, ಚೀಲದೊಳಗೆ ಇನ್ನೊಂದು ಚೀಲ ಅದರೊಳಗೆ ಇನ್ನೊಂದು ಚೀಲ. ಹೀಗೆ ಐದು ಚೀಲಗಳಿದ್ದು ಕಡೆಯದಾದ ಆನಂದಮಯ ಚೀಲದೊಳಗೆ ಆತ್ಮನಿದ್ದಾನೆಂದು ಇಲ್ಲಿ ವರ್ಣಿಸಲಾಗಿದೆ. ಅನ್ನಮಯ ಶರೀರಾದಿಗಳು ಆತ್ಮವಲ್ಲವೆಂದು ತಿಳಿಸುವುದು ಈ ಪಂಚಕೋಶ ಕಲ್ಪನೆಗಳ ಉದ್ದೇಶ (೩೩).

ಪಂಚೀಕೃತವಾದ ಭೂಮ್ಯಾದಿ ಪಂಚಭೂತಗಳಿಂದ ಹುಟ್ಟಿದ ನಮ್ಮ ಸ್ಥೂಲ ಶರೀರವು ಅನ್ನಮಯಕೋಶವೆನಿಸಿದೆ. **'ಅನ್ನಾತ್ ಪುರುಷಃ'**( ತೈ. ಉ. ೨-೧-೨) ಎಂಬ ಶ್ರುತಿವಚನದಂತೆ ಅನ್ನರಸದಿಂದ ಹುಟ್ಟಿಬೆಳೆದು ಉಳಿದಿರುವುದರಿಂದ ಈ ದೇಹವು ಅನ್ನಮಯಕೋಶ. ಇದರಲ್ಲಿ ಹಿಂದೆ ಹೇಳಿದ ಲಿಂಗದೇಹವಿದೆಯಷ್ಟೆ, ಆದರಲ್ಲಿರುವ ರಜೋಗುಣಜನ್ಯವಾದ ಪ್ರಾಣಾಪಾನಾದಿಪಂಚವಾಯು ಗಳಿಂದಲೂ ಕರ್ಮೇಂದ್ರಿಯಗಳಿಂದಲೂ ಸಹಿತವಾದದ್ದು ಪ್ರಾಣಮಯಕೋಶ. ಸತ್ತ್ವಪ್ರಧಾನಜ್ಞಾನೇಂದ್ರಿಯಗಳಿಂದ ಕೂಡಿದ ವಿಮರ್ಶಾತ್ಮಕವಾದ ಮನಸ್ಸು ಮನೋಮಯಕೋಶವೆನಿಸಿದೆ. ಈ ಜ್ಞಾನೇಂದ್ರಿಯಗಳಿಂದಲೇ ಸಹಿತವಾಗಿ ನಿಶ್ಚಯಾತ್ಮಕವಾದ ಬುದ್ಧಿಯು ವಿಜ್ಞಾನಮಯಕೋಶವೆನಿಸುತ್ತದೆ (೩೪-೩೫). ಇನ್ನು ಅವಿದ್ಯೆಯೇ ಕಾರಣಶರೀರವೆಂದು ತಿಳಿಸಿದೆ. ಅದರಲ್ಲಿರುವ ಸತ್ತ್ವಗುಣವು ರಜಸ್ತಮೋಗುಣಗಳಿಂದ ಸಂಮಿಶ್ರವಾಗಿ ಮಲಿನವಾಗಿದೆ. ಅಂತಃಕರಣಕ್ಕೆ ಇಷ್ಟವಾದ ವಸ್ತುಗಳು ದೊರಕಿ ಅವನ್ನು ಭೋಗಿಸಿದಾಗ ಪ್ರಿಯ, ಮೋದ, ಪ್ರಮೋದಗಳೆಂಬ ಚಿತ್ತವೃತ್ತಿಗಳುಂಟಾಗುತ್ತವೆ. ಇವು ಆನಂದದ ಭೇದಗಳು. ಈ ವೃತ್ತಿಗಳಿಂದ ಸಹಿತವಾದ ಅವಿದ್ಯೆಗೆ ಆನಂದ ಮಯಕೋಶವೆಂದು ಹೆಸರು. ಏವಂಚ ಸ್ಥೂಲ, ಸೂಕ್ಷ್ಮ, ಕಾರಣಗಳೆಂಬ ಮೂರು ಶರೀರಗಳೇ ನಿಮಿತ್ತಭೇದದಿಂದ ಪಂಚಕೋಶ ಗಳೆನಿಸಿವೆ. ಈ ಶರೀರದಲ್ಲಿರುವ ಪ್ರತ್ಯಗಾತ್ಮನು ಈ ಕೋಶಗಳಲ್ಲಿ 'ಅದೇ ನಾನು' ಎಂಬ ತಾದಾತ್ಮ್ಯಾಭಿಮಾನವನ್ನು ಪಡೆದಿರುತ್ತಾನೆ. ಆಗ ಈ ಆತ್ಮನನ್ನೇ ಅನ್ನಮಯ ಆತ್ಮಾ, ಪ್ರಾಣಮಯ ಆತ್ಮಾ, ಮನೋಮಯ ಆತ್ಮಾ, ವಿಜ್ಞಾನಮಯ ಆತ್ಮಾ, ಆನಂದಮಯ ಆತ್ಮಾ ಎಂದು ವ್ಯವಹರಿಸುವುದುಂಟು. ''ಶುದ್ಧಾತ್ಮನಾದ ನಾನು ಈ ಪಂಚಕೋಶಗಳಿಗಿಂತ ಬೇರೆಯಾದವನು. ಇವುಗಳ ಸಂಬಂಧವು ನನಗಿಲ್ಲ'' ಎಂದು ಯಾವಾತನು ಅನ್ವಯವ್ಯತಿರೇಕಗಳಿಂದ ದೃಢವಾಗಿ ನಿಶ್ಚಯಿಸಿ ಕೊಳ್ಳುತ್ತಾನೋ - ಬುದ್ಧಿಯಿಂದ ವಿವೇಚಿಸಿ ತಿಳಿದುಕೊಳ್ಳುತ್ತಾನೋ - ಆತನು ಪರಬ್ರಹ್ಮನೇ ಆಗಿ ಬಿಡುತ್ತಾನೆ, ಮುಕ್ತನಾಗುತ್ತಾನೆ. ಅನ್ವಯವ್ಯತಿರೇಕ ಗಳೆಂದರೇನೆಂಬುದು ಮುಂದೆ ತಿಳಿಯುತ್ತದೆ (೩೬-೩೭). ಕನಸಿನಲ್ಲಿ ಸ್ಥೂಲದೇಹವಾದ ಈ ಅನ್ನಮಯ ಕೋಶವು ನಮಗೆ ಪ್ರತೀತವಾಗುವುದಿಲ್ಲ, ಆದರೆ ಕನಸಿಗೆ ಸಾಕ್ಷಿಯಾಗಿ ಆತ್ಮನು ಪ್ರತೀತನಾಗುತ್ತಾನೆ. ಇದು ಅನ್ವಯ. ಅನ್ನಮಯಕೋಶವು ತೋರದಿದ್ದರೂ ಕನಸಿಗೆ ಸಾಕ್ಷಿಯಾಗಿ ಸ್ಫುರಿಸಿದರೂ

ಸ್ಥೂಲದೇಹವು ತೋರುವುದೇ ಇಲ್ಲ. ಇದು ವ್ಯತಿರೇಕ. ಅನ್ನಮಯಕೋಶ ವಿಲ್ಲದಿದ್ದರೂ ಆತ್ಮನು ಇರುತ್ತಾನೆ. ಈ ರೀತಿಯಲ್ಲಿ ಇರುವುದಕ್ಕೆ ಅನ್ವಯವೆಂದು ಹೆಸರು. ಅದೇ ಸ್ವಪ್ನಾವಸ್ಥೆಯಲ್ಲಿ ಸ್ವಪ್ನವೃತ್ತಾಂತಕ್ಕೆ ಸಾಕ್ಷಿಯಾಗಿ ಆತ್ಮನ ಸ್ಫು ರಣವಿದ್ದರೂ ಸ್ಥೂಲದೇಹದ ಪ್ರತೀತಿಯಾಗದಿರುವುದು ವ್ಯತಿರೇಕವೆನಿಸುತ್ತದೆ. ಇಲ್ಲಿ **'ತದಸತ್ತ್ವೇ ತತ್ಸತ್ತ್ವಮನ್ವಯಃ , ತತ್ಸತ್ತ್ವೇ ತದಸತ್ತ್ವಂ ವ್ಯತಿರೇಕಃ'** ಎಂದು ತಿಳಿಯಬೇಕು. ಸ್ವಪ್ನದಲ್ಲಿ ಸ್ಥೂಲ ದೇಹವಿಲ್ಲದಿದ್ದರೂ ಆತ್ಮನಿರುತ್ತಾನೆ ಎಂಬುದು ಅನ್ವಯ. ಸ್ವಪ್ನದಲ್ಲಿ ಆತ್ಮನಿದ್ದರೂ ಸ್ಥೂಲದೇಹವಿಲ್ಲ ಎನ್ನುವುದು ವ್ಯತಿರೇಕ. ದರ್ಶನವಾದರೆ ಇದೆ, ದರ್ಶನವಾಗದಿದ್ದರೆ ಇಲ್ಲ - ಎಂದು ಅಭಿಪ್ರಾಯ. ಒಟ್ಟಿನಲ್ಲಿ ದೇಹವು ತೋರದಿದ್ದಾಗಲೂ ಆತ್ಮನ ಸ್ಫುರಣವು ಸ್ಪಷ್ಟವಾಗಿರುವುದರಿಂದ ಈ ಸ್ಥೂಲದೇಹ ಆತ್ಮನಲ್ಲ ಎಂದು ನಿಶ್ಚಯಿಸಬಹುದು (೩೮). ಸ್ವಪ್ನವಿಲ್ಲದ ತನಿನಿದ್ರೆಯಾದ ಸುಷುಪ್ತಿಯಲ್ಲಿ ಅಂತಃಕರಣಸ್ವರೂಪವಾದ ಸೂಕ್ಷ್ಮದೇಹವೂ ಇರುವುದಿಲ್ಲ, ಆಗ ಆತ್ಮನ ಸ್ಫುರಣವಿದ್ದೇ ಇರುತ್ತದೆ. ಸುಷುಪ್ತಿಗೆ ಆತ್ಮನೇ ಸಾಕ್ಷಿ. ಆದ್ದರಿಂದಲೇ ಎಚ್ಚೆತ್ತಮೇಲೆ 'ಸುಖವಾಗಿ ನಿದ್ರಿಸಿದೆನು' ಎಂದು ಹೇಳುತ್ತೇವೆ. ಇಲ್ಲಿ ಸುಷುಪ್ತಿ ಸುಖದ ಸ್ಮರಣೆ ಇದೆ. ಅದನ್ನು ಅನುಭವಿಸದೇ ಇದ್ದರೆ ಸ್ಮರಣೆಯಾಗುತ್ತಿರಲಿಲ್ಲ. ಈ ಸುಷುಪ್ತಿಗೆ ಸಾಕ್ಷಿಯಾದವನು ಆತ್ಮ. ಸೂಕ್ಷ್ಮದೇಹವೇ ಲಿಂಗದೇಹ. ಲಿಂಗದೇಹವಿಲ್ಲದಿದ್ದರೂ ಆತ್ಮನು ತೋರುವುದು ಅನ್ವಯ. ಆತ್ಮನು ತೋರಿದರೂ ಲಿಂಗದೇಹವು ತೋರದಿರುವುದು ವ್ಯತಿರೇಕ (೩೯). ಸ್ಥೂಲದೇಹವೇ ಅನ್ನಮಯಕೋಶ. ಸೂಕ್ಷ್ಮದೇಹದಲ್ಲಿ (ಲಿಂಗದೇಹದಲ್ಲಿ) ಪ್ರಾಣಮಯ, ಮನೋಮಯ, ವಿಜ್ಞಾನಮಯಕೋಶಗಳು ಅಡಕವಾಗಿವೆಯಷ್ಟೆ. ಈ ಪ್ರಕಾರವಾದ ಅನ್ವಯ - ವ್ಯತಿರೇಕಗಳಿಂದ ವಿವೇಚಿಸಿದಾಗ ಆತ್ಮನು ಈ ನಾಲ್ಕು ಕೋಶಗಳಿಗಿಂತಲೂ ಅತಿರಿಕ್ತನಾದವನೆಂದು ಸಿದ್ಧವಾಗುತ್ತದೆ (೪೦). ಇನ್ನು ಆನಂದಮಯಕೋಶದ ವಿಚಾರ. ಅವಿದ್ಯೆಯೆಂದರೆ ಅಜ್ಞಾನವೆಂದರ್ಥ. ಈ ಅವಿದ್ಯೆಯನ್ನು ಕಾರಣಶರೀರವೆಂದು ಹಿಂದೆ ತಿಳಿಸಿದೆ. ಇದೇ ಪ್ರಿಯಾದಿವೃತ್ತಿಗಳಿಂದ ಸಹಿತವಾಗಿ ಆನಂದಮಯಕೋಶವೆನಿಸಿದೆ. ಸಮಾಧಿಯ ಸ್ವರೂಪವನ್ನು ಮುಂದೆ ಹೇಳಲಾಗುತ್ತದೆ. ಆ ಸಮಾಧಿಯ ಸ್ಥಿತಿಯಲ್ಲಿ ಅಜ್ಞಾನದ ಸ್ಫುರಣವೇ ಇರುವುದಿಲ್ಲ, ಕೇವಲ ಆತ್ಮನ ಸ್ಫುರಣವಿರುತ್ತದೆ. ಹೀಗೆ ಆನಂದಮಯಕೋಶದ ಭಾನವಿಲ್ಲದಿದ್ದರೆ ಆತ್ಮನ ಭಾನವಿದೆಯೆಂಬುದು ಅನ್ವಯ. ಆತ್ಮನ ಭಾನವಿದ್ದರೂ ಅಜ್ಞಾನದ - ಎಂದರೆ - ಅವಿದ್ಯಾರೂಪವಾದ ಆನಂದಮಯಕೋಶದ

ಭಾನವಿಲ್ಲದಿರುವುದು ವ್ಯತಿರೇಕ. ಈ ಪ್ರಕಾರವಾಗಿ ಆತ್ಮನು ಪಂಚಕೋಶಗಳಿಂದಲೂ ಅತಿರಿಕ್ತನಾದವನೆಂಬುದು ಸ್ಪಷ್ಟವಾಗುತ್ತದೆ. ಆತ್ಮನು ಪಂಚಕೋಶಾತಿರಿಕ್ತನೆಂಬು ದನ್ನು ಇಲ್ಲಿ ಯುಕ್ತಿಯಿಂದ ಸಾಧಿಸಲಾಗಿದೆ. ಇದನ್ನು ಅನುಮಾನ ಪ್ರಮಾಣವೆನ್ನುತ್ತಾರೆ. ಇದನ್ನು ಹೀಗೆ ಬಿಡಿಸಿ ತೋರಿಸಬಹುದು. ನಮ್ಮ ದೇಹದಲ್ಲಿರುವ ಪ್ರತ್ಯಗಾತ್ಮನು ಅನ್ನಮಯಾದಿ ಪಂಚಕೋಶಗಳಿಗಿಂತ ಭಿನ್ನನಾದವನು. ಈ ಕೋಶಗಳಲ್ಲಿ ಯಾವಕೋಶವು ವ್ಯಾವೃತ್ತವಾದರೂ - ಎಂದರೆ - ಪ್ರತೀತವಾಗದಿದ್ದರೂ ಆತ್ಮನು ಮಾತ್ರ ಪ್ರತೀತಿಗೋಚರನಾಗುತ್ತಲೇ ಇರುತ್ತಾನಾದ್ದರಿಂದ , ಇನ್ನೊಂದರಿಂದ ವ್ಯಾವೃತ್ತಿಗೊಳಿಸಿದರೂ ಯಾವುದು ಇದ್ದೇ ಇರುತ್ತದೆಯೋ - ಪ್ರತೀತಿಗೋಚರವಾಗುತ್ತಲೇ ಇರುತ್ತದೆಯೋ ಅದು ಇನ್ನೊಂದರಿಂದ ಭಿನ್ನವಾಗಿರುತ್ತದೆ. ಹೇಗೆಂದರೆ , ಹೂವಿನ ಮಾಲೆಯಿಂದ ಹೂವನ್ನು ಕಿತ್ತುಹಾಕಿದರೂ ಅನುಸ್ಯೂತವಾದ ದಾರವು ಇದ್ದೇ ಇರುತ್ತಗೆ ಈ ದಾರವು ಹೂವಿಗಿಂತ ಬೇರೆಯಾದದ್ದು. ನಿಕಟವಾಗಿ ಹೂಗಳನ್ನು ಪೋಣಿಸಿರುವ ಪುಷ್ಪಮಾಲೆಯಲ್ಲಿ ದಾರವಿರುವುದು ಕಾಣಿಸುವುದಿಲ್ಲ. ದಾರವೇ ಇಲ್ಲವೆಂದು ಒಬ್ಬನು ಭ್ರಮಿಸಬಹುದು. ದಾರವೆಂದರೆ ಹೂಗಳ ಸಂಘಟನೆಯೇ ಹೊರತು ಬೇರೆ ಇಲ್ಲವೆಂದು ಇನ್ನೊಬ್ಬ ಹೇಳಬಹುದು. ಹೂಗಳನ್ನು ಒಂದೊಂದಾಗಿ ಬಿಡಿಸಿ ಇಟ್ಟಾಗ ದಾರವು ಪುಷ್ಪಮಾಲೆಯಲ್ಲಿರುವುದು ತಿಳಿಯುತ್ತದೆ. ಅದು ಹೂಗಳಲ್ಲಿ ಸೇರದೆ ಬೇರೊಂದು ವಸ್ತುವೆಂದು ಗೊತ್ತಾಗುತ್ತದೆ. ಹಾಗೆಯೇ ಮನುಷ್ಯನು ದೇಹ , ಇಂದ್ರಿಯ , ಮನಸ್ಸು , ಬುದ್ಧಿ , ಆನಂದ - ಇವೇ ಆತ್ಮವೆಂದೂ ಬೇರೊಂದು ವಸ್ತುವಿಲ್ಲವೆಂದು ಭ್ರಮಿಸಿರುತ್ತಾನೆ. ಗುರುವು ಅನ್ವಯವ್ಯತಿರೇಕಗಳಿಂದ ಬಿಡಿಸಿ ತೋರಿಸಿದಾಗ ಇವೆಲ್ಲಕ್ಕೂ ಅತಿರಿಕ್ತನಾದ ಆತ್ಮನಿದ್ದಾನೆಂಬುದು ಗೊತ್ತಾಗುತ್ತದೆ. ಈ ಪ್ರಕರಣದಲ್ಲಿ ಮುಂದೆ ಹೇಳುವುದೆಲ್ಲವೂ ಪೀಠಿಕೆಯಂತೆ ಸಂಕ್ಷೇಪವಾಗಿ ಬಂದಿದೆ. ಮುಂದೆ ಇದೆಲ್ಲವೂ ವಿಸ್ತಾರವಾಗಿ ಬರಲಿದೆ (೪೧). ಮುಂಜವೆಂದರೆ ಒಂದು ಜಾತಿಯ ಹುಲ್ಲು. ಉಪನಯನದಲ್ಲಿ ಇದರಿಂದ ಮಾಡಿದ ಉಡಿದಾರವನ್ನು ವಟುವಿನ ಸೊಂಟಕ್ಕೆ ಕಟ್ಟುತ್ತಾರೆ. ಈ ಹುಲ್ಲನ್ನು 'ಮೆದೆ ಚಂಟೆ' ಎಂದು ಕೆಲವು ಕಡೆ ಕರೆಯುವುದುಂಟು. ಈ ಹುಲ್ಲಿನ ನಡುವೆ ಇರುವ ಕೋಮಲವಾದ ಕಡ್ಡಿಗೆ ಇಷೀಕಾ ಎಂದು ಹೆಸರು. ಈ ಇಷೀಕವನ್ನು ಉಪಾಯವಾಗಿ ಮೆಲ್ಲನೆ ಎಳೆದರೆ, ಈ ಕಡ್ಡಿಯು ದಪ್ಪವಾದ ಹುಲ್ಲಿನ ಎಲೆಗಳಿಂದ ಬೇರೆಯಾಗುತ್ತದೆ. ಹಾಗೆ

ಕಡ್ಡಿಯನ್ನು ಎಳೆದು ಬೇರ್ಪಡಿಸುವಂತೆ ಪ್ರತ್ಯಗಾತ್ಮನನ್ನು ಹಿಂದೆ ಹೇಳಿದ ಮೂರುಶರೀರಗಳಿಂದ ಅಥವಾ ಪಂಚಕೋಶಗಳಿಂದ ಸೂಕ್ಷ್ಮಬುದ್ಧಿ ಪೂರ್ವಕವಾಗಿ ಪ್ರತ್ಯೇಕಿಸಿ ಆತ್ಮಸ್ವರೂಪವನ್ನು ನಿಶ್ಚಯಿಸಬಹುದು. ಶಮದಮಾದಿ ಸಾಧನಸಂಪನ್ನರಾದ ಮುಮುಕ್ಷುಗಳು ಈ ಪ್ರಕಾರವಾಗಿ ತಮ್ಮ ಆತ್ಮಸ್ವರೂಪವೇನೆಂದು ವಿವೇಚಿಸಿ ತಿಳಿದುಕೊಂಡರೆ ಆತ್ಮನು ಚಿದಾನಂದ ರೂಪನೆಂದು ನಿಶ್ಚಯವಾಗುತ್ತದೆ. ಈ ನಿಶ್ಚಯ ಜ್ಞಾನವನ್ನು ಗಳಿಸಿದವನು ಪರಬ್ರಹ್ಮನೇ ಆಗಿಬಿಡುತ್ತಾನೆ.

ಕಠೋಪನಿಷತ್ತಿನಲ್ಲಿ-

**ಅಂಗುಷ್ಠಮಾತ್ರಃ ಪುರುಷೋಽಂತರಾತ್ಮಾ**
**ಸದಾ ಜನಾನಾಂ ಹೃದಯೇ ಸಂನಿವಿಷ್ಟಃ ।**
**ತಂ ಸ್ವಾಚ್ಛರೀರಾತ್ ಪ್ರಬೃಹೇತ್**
**ಮುಂಜಾದಿವೇಷೀಕಾಂ ಧೈರ್ಯೇಣ ॥**

(೨-೬-೧೭)

ಎಂದಿದೆ. ಈ ಮಂತ್ರದ ತಾತ್ಪರ್ಯವನ್ನೇ ಈ ೪೨ನೆಯ ಶ್ಲೋಕದಲ್ಲಿ ಹೇಳಿದ್ದಾರೆ.

ನಮ್ಮ ಹೃದಯವು ಅಂಗುಷ್ಠದ ಪ್ರಮಾಣದಲ್ಲಿದೆಯೆಂಬ ಭಾವನೆಯಿಂದ ಅದರಲ್ಲಿ ತುಂಬಿಕೊಂಡಿರುವ ಆತ್ಮನು ಅಂಗುಷ್ಠಮಾತ್ರನೆಂದು ಇಲ್ಲಿ ಹೇಳಿದೆ. ಆತ್ಮನು ಸರ್ವವ್ಯಾಪಕನಾಗಿ ಸರ್ವವೂ ಆಗಿರುವುದರಿಂದ ಅವನಿಗೊಂದು ಅಳತೆ ಇಲ್ಲ. ಇಷೀಕದಂತೆ ಎಳೆಯಬೇಕೆಂಬ ಹೋಲಿಕೆಗಾಗಿ, ಹೃದಯದ ಪ್ರಮಾಣವನ್ನು ಉಪಾಧಿನಿಮಿತ್ತದಿಂದ ಕಲ್ಪಿಸಿಕೊಳ್ಳಲಾಗಿದೆ (೪೨). ಈ ಪ್ರಕಾರವಾಗಿ ಸೂಕ್ಷ್ಮದೃಷ್ಟಿಯಿಂದ ವಿಚಾರಮಾಡಿದಾಗ ನಮ್ಮ ಆತ್ಮನು ಶರೀರತ್ರಯದಿಂದ ಭಿನ್ನನೆಂಬುದು ಸ್ಪಷ್ಟವಾಗುವುದಷ್ಟೆ, ಹಾಗೆಯೇ ಯುಕ್ತಿಪೂರ್ವಕವಾಗಿ ವಿಮರ್ಶಿಸಿನೋಡಿದಾಗ ಜೀವಾತ್ಮನೂ ಪರಮಾತ್ಮನೂ ಒಬ್ಬನೇ ಎಂಬುದೂ ತಿಳಿದು ಬರುತ್ತದೆ. ಜೀವನು ಅಲ್ಪಜ್ಞ, ಅಲ್ಪಶಕ್ತ, ಪರಮಾತ್ಮನು ಸರ್ವಜ್ಞ, ಸರ್ವಶಕ್ತ, ಹೀಗಿರುವಾಗ ಇವರು ಬೇರೆ ಬೇರೆಯವರು, ಒಬ್ಬನೇ ಅಲ್ಲ- ಎಂದು ಸರ್ವರೂ ತಿಳಿದುಕೊಂಡಿರುತ್ತಾರೆ. ದೇಹವೇ ನಾನೆಂದು ಭ್ರಮಿಸುವಂತೆಯೇ ಇದು. ಭಾಗತ್ಯಾಗಲಕ್ಷಣೆಯನ್ನು ಬಳಸಿ ವಿಚಾರಮಾಡಿದರೆ ಜೀವಾತ್ಮನು ಪರಮಾತ್ಮನೇ ಎಂದು

ನಿರ್ಣಯಿಸಿಬಿಡಬಹುದು (೪೩). ಜೀವಾತ್ಮ ಪರಮಾತ್ಮರಿಗೆ ಅಭೇದವನ್ನು ಹೇಳತಕ್ಕ ''ತತ್ತ್ವಮಸಿ'' ಎಂಬ ಶ್ರುತಿವಾಕ್ಯವಿದೆಯಷ್ಟೆ. ತತ್ - ಆ ಬ್ರಹ್ಮ ವಸ್ತುವು, ತ್ವಮಸಿ - ನೀನಾಗಿದ್ದೀಯೆ - ಎಂದರ್ಥ. ಇಲ್ಲಿ ತತ್ ಪದದಿಂದ ಯಾವುದನ್ನು ಗ್ರಹಿಸಬೇಕು, ತ್ವಂಪದದಿಂದ ಯಾವುದನ್ನು ಗ್ರಹಿಸಬೇಕು - ಎಂಬುದನ್ನೀಗ ವಿಚಾರಮಾಡೋಣ. ಪರಬ್ರಹ್ಮವು ತಾಮಸಮಾಯಾ ವೃತ್ತಿಯೆಂಬ ಉಪಾಧಿಯಿಂದ ಈ ಜಗತ್ತಿಗೆ ಉಪಾದಾನ ಕಾರಣವೆನಿಸಿದೆಯಷ್ಟೆ ಅದೇ ಬ್ರಹ್ಮವು ಸಾತ್ತ್ವಿಕಮಾಯಾವೃತ್ತಿಯೆಂಬ ಉಪಾಧಿಯಿಂದ ಈ ಜಗತ್ತಿಗೆ ನಿಮಿತ್ತಕಾರಣವೂ ಆಗಿದೆ. ಈ ವಿಚಾರವನ್ನು ಹಿಂದೆ ವಿವರಿಸಲಾಗಿದೆ. ಈ ಪ್ರಕಾರದಲ್ಲಿ ಜಗತ್ತಿಗೆ ಉಪಾದಾನಕಾರಣ ನಿಮಿತ್ತ ಕಾರಣಗಳೆರಡೂ ಆದ ಬ್ರಹ್ಮವು ''ತತ್ತ್ವಮಸಿ'' ಎಂಬ ವಾಕ್ಯದಲ್ಲಿರುವ ತತ್ ಪದದ ಅರ್ಥ(೪೪).

ಇನ್ನು 'ತ್ವಂ' ಪದದ ಅರ್ಥವೇನೆಂಬುದನ್ನು ನೋಡೋಣ. ಮಾಯೆಯ ಸತ್ತ್ವಗುಣಕ್ಕೆ ಸ್ವಲ್ಪ ರಜಸ್ತಮೋಗುಣಗಳು ಸೇರಿದರೆ ಅದು ಮಲಿನ ಸತ್ತ್ವವಾಗುತ್ತದೆ. ಈ ಮಲಿನ ಸತ್ತ್ವಪ್ರಧಾನವಾದ ಮಾಯೆಯನ್ನು ಅವಿದ್ಯೆ ಎನ್ನುತ್ತಾರೆ. ಇದು ಕಾಮ ಕರ್ಮಾದಿಗಳಿಗೆ ಪ್ರೇರಕವಾದ್ದರಿಂದ ದೋಷಯುಕ್ತವಾದದ್ದು. ಶುದ್ಧವಾದ ಪರಬ್ರಹ್ಮವೇ ಅವಿದ್ಯೆಯೆಂಬ ಉಪಾಧಿಗೆ ಒಳಗಾಗಿ ಜೀವವಾಗಿದೆ. ಇದೇ 'ತ್ವಂ' ಪದದ ಅರ್ಥ. ಸೃಷ್ಟಿಕರ್ತನಾದ ಈಶ್ವರನ ಉಪಾಧಿಯಾದ ಮಾಯೆ ಎರಡುವಿಧ. ಆತನು ಜಗತ್ತಿಗೆ ಉಪಾದಾನವಾಗುವಾಗ ತಮೋಗುಣಪ್ರಧಾನವಾದ ಮಾಯೆ. ನಿಮಿತ್ತ ಕಾರಣವಾಗುವಾಗ ಸತ್ತ್ವಗುಣಪ್ರಧಾನವಾದ ಮಾಯೆ. ಜೀವನಿಗಾದರೂ ಮಲಿನಸತ್ತ್ವಪ್ರಧಾನವಾದ ಮಾಯೆ ಅಥವಾ ಅವಿದ್ಯೆ ಉಪಾಧಿ. ಪ್ರಪಂಚ ಉಪಾಧಿಯಾದ, ಈ ಮಾಯೆಯ ಮೂರು ಪ್ರಕಾರಗಳೂ ಪರಸ್ಪರ ವಿರುದ್ಧವಾದವು. 'ತತ್' ಪದದಿಂದ ಗೃಹೀತನಾದ ಈಶ್ವರನಿಗೂ 'ತ್ವಂ' ಪದದಿಂದ ಗೃಹೀತನಾದ ಜೀವನಿಗೂ ಅನ್ಯೋನ್ಯವಿರುದ್ಧವಾದ ಮೂರು ಬಗೆಯ ಉಪಾಧಿಗಳಿರುವಾಗ ಅವರಿಬ್ಬರಿಗೂ ಅಭೇದವನ್ನು ಹೇಳುವುದು ಹೇಗೆ? - ಎಂದರೆ, ಹೌದು. ವಿರೋಧ ಉಂಟು. ಆದ್ದರಿಂದ ಲಕ್ಷಣಾವೃತ್ತಿಯನ್ನು ಆಶ್ರಯಿಸಿ ಈ ಮೂರು ಬಗೆಯ ಉಪಾಧಿಗಳನ್ನೂ ತಳ್ಳಿಬಿಡಬೇಕು. ಇಲ್ಲದಿದ್ದರೆ ಅಭೇದವು ಕೂಡುವುದಿಲ್ಲ. ಉಪಾಧಿಗಳನ್ನು ಮನಸ್ಸಿನಲ್ಲಿಯೇ ಕಿತ್ತು ಹಾಕಿ ನೋಡಿದಾಗ ಅಖಂಡವೂ ಸಚ್ಚಿದಾನಂದವೂ

ಆದ ಶುದ್ಧ ಬ್ರಹ್ಮ ಒಂದೇ ಉಳಿಯುತ್ತದೆ. ಅದನ್ನೇ ಈ 'ತತ್ತ್ವಮಸಿ' ಎಂಬ ವಾಕ್ಯವು ಬೋಧಿಸುತ್ತದೆ. ಉಪಾಧಿ ವಿಶಿಷ್ಟವಾಗಿ ಬೇರೆ ಬೇರೆಯೆಂದು ತೋರತಕ್ಕ ವಸ್ತು ಒಂದೇ ಎಂದು ಈ ಮಹಾವಾಕ್ಯದ ತಾತ್ಪರ್ಯ (೪೫-೪೬). ಈ ರೀತಿಯಲ್ಲಿ ಲಕ್ಷಣಾವೃತ್ತಿಯನ್ನಾಶ್ರಯಿಸಿ ಅರ್ಥಮಾಡುವುದು ಹೊಸದೇನಲ್ಲ. ಇದು ಲೋಕದಲ್ಲಿ ಪ್ರಸಿದ್ಧವಾದದ್ದೇ. ಇದು ರೂಢಿಯಿಂದ ಒಗ್ಗಿಹೋಗಿರುವುದರಿಂದ ಜನರು ಗಮನಿಸುವುದಿಲ್ಲ. ಸೂಕ್ಷ್ಮದೃಷ್ಟಿಯಿಂದ ವಿಚಾರ ಮಾಡತಕ್ಕ ಶಾಸ್ತ್ರಕಾರರು ಇದನ್ನು ಬಲ್ಲರು. ಹೇಗೆಂದರೆ, '**ಸೋಽಯಂ ದೇವದತ್ತಃ**'- ''ಅವನೇ ಈ ದೇವದತ್ತ'' ಎಂಬ ವಾಕ್ಯವನ್ನು ನೋಡಬಹುದು. ಹತ್ತು ವರ್ಷಗಳ ಹಿಂದೆ ಕಾಶಿಯಲ್ಲಿ ದೇವದತ್ತ ಎಂಬುವನನ್ನು ನೋಡಿ ಸ್ನೇಹ ಮಾಡಿಕೊಂಡಿರುತ್ತೇವೆ. ಈಗ - ಹತ್ತು ವರ್ಷಗಳ ಅನಂತರ ಅವನನ್ನು ಬೆಂಗಳೂರಿನಲ್ಲಿ ಕಂಡಾಗ ಥಟ್ಟನೆ ಗುರುತು ಹತ್ತುವುದಿಲ್ಲ. ದೇವದತ್ತನು ಬೆಳೆದು ಈಗ ಎತ್ತರವಾಗಿದ್ದಾನೆ. ಗಡ್ಡ ಮೀಸೆಗಳು ಬಂದಿವೆ. ಆದ್ದರಿಂದ ಗುರುತು ಹತ್ತಲಿಲ್ಲ. ಆಪ್ತರಾದ ಇನ್ನೊಬ್ಬರು ಆತನ ಪರಿಚಯವನ್ನು ಹೇಳಿದಾಗ ಎಲ್ಲವೂ ನೆನಪಿಗೆ ಬಂದು 'ಆಹಾ! ಆತನೇ ಈ ದೇವದತ್ತ' ಎಂದು ಉದ್ಗರಿಸುತ್ತೇವೆ. ಇಲ್ಲಿ ಸ್ವಲ್ಪ ವಿಚಾರ ಮಾಡೋಣ ಹತ್ತು ವರ್ಷಗಳ ಹಿಂದೆ ಕಾಶಿಯಲ್ಲಿ ನೋಡಿದಾಗ ದೇವದತ್ತನು ಇಷ್ಟು ಎತ್ತರವಾಗಿರಲಿಲ್ಲ. ಗಡ್ಡ ಮೀಸೆಗಳು ಹುಟ್ಟಿರಲಿಲ್ಲ. ಆಗ ಕಾಶಿಯಲ್ಲಿದ್ದ. ಈಗ ಬೆಂಗಳೂರಿನಲ್ಲಿದ್ದಾನೆ. ಆದರೂ 'ಅವನೇ ಇವನು' ಎಂದು ಒಪ್ಪುತ್ತೇವೆ. ಎತ್ತರ, ಗಡ್ಡ, ಮೀಸೆ, ಕಾಶಿ, ಬೆಂಗಳೂರು - ಇವೆಲ್ಲವೂ ದೇವದತ್ತನಿಗೆ ಹತ್ತಿದ ಉಪಾಧಿಗಳು. ಈ ಉಪಾಧಿಗಳನ್ನು ತೊರೆದು ''ಇಬ್ಬರು ಮನುಷ್ಯರಲ್ಲ ಒಬ್ಬನೇ ದೇವದತ್ತ. ಉಪಾಧಿಗಳಿಂದ ಬೇರೆಯೋ ಎಂಬಂತೆ ತೋರುತ್ತಾರೆ'' ಎಂದು ನಿರ್ಧರಿಸುತ್ತೇವೆ. ಹೀಗೆ ಐಕ್ಯವನ್ನು ಒಪ್ಪುವಾಗ ಕಾಶಿಯ ದೇವದತ್ತನಿಗೆ ಅಂಟಿದ್ದ ''ಕುಳ್ಳತನ, ಗಡ್ಡ ಮೀಸೆಗಳ ರಾಹಿತ್ಯ'' ಎಂಬ ಉಪಾಧಿ ಗಳನ್ನೂ ಬೆಂಗಳೂರು ದೇವದತ್ತನಿಗೆ ಅಂಟಿರುವ ''ಎತ್ತರ, ಗಡ್ಡ ಮೀಸೆಗಳು'' ಎಂಬ ಉಪಾಧಿಗಳನ್ನೂ ತ್ಯಜಿಸಲೇ ಬೇಕಾಗುತ್ತದೆ. ಈ ರೀತಿಯಲ್ಲಿ ಯಾವ ಉಪಾಧಿಗಳನ್ನಾದರೂ ಕಲ್ಪಿಸಿ ಕೊಳ್ಳಬಹುದು. ಆಗ ಪ್ಯಾಂಟ್ ಹಾಕಿದ್ದ. ಈಗ ಧೋತಿಯನ್ನು ಉಟ್ಟಿದ್ದಾನೆ - ಆಗ ಟೋಪಿಯನ್ನು ಹಾಕಿಕೊಳ್ಳುತ್ತಿದ್ದ, ಈಗ ಕೆಂಪು ರುಮಾಲನ್ನು ಸುತ್ತಿಕೊಂಡಿದ್ದಾನೆ ಇತ್ಯಾದಿ. ಈ ಉಪಾಧಿಗಳು ಮುಖ್ಯ ವಸ್ತುವಿನ ಭಾಗಗಳು. ಎರಡು ಕಡೆಗಳಲ್ಲಿಯೂ ಇರುವ ಈ ಭಾಗಗಳನ್ನು

ತ್ಯಜಿಸಿ ಅರ್ಥ ಮಾಡುವಾಗ ಭಾಗತ್ಯಾಗಲಕ್ಷಣಾ ಬೇಕಾಗುತ್ತದೆ. ಈ ಲಕ್ಷಣಾವೃತ್ತಿಯಿಂದಲೇ ಈ ಮಹಾವಾಕ್ಯಕ್ಕೆ ಅರ್ಥವನ್ನು ಹೇಳಬೇಕು. ಹೀಗೆ ಪರಮೇಶ್ವರನಿಗೆ ಉಪಾಧಿಯಾದ ಮಾಯೆಯನ್ನೂ ಜೀವನಿಗೆ ಉಪಾಧಿಯಾದ ಅವಿದ್ಯೆಯನ್ನೂ ತ್ಯಜಿಸಿದ ಮೇಲೆ ಲಕ್ಷಿತವಾದ ಅರ್ಥ ಅಖಂಡವೂ ಸಚ್ಚಿದಾನಂದವೂ ಆದ ಪರಬ್ರಹ್ಮವೇ. ಆಗ ವಿರೋಧವೇನೂ ಇರುವುದಿಲ್ಲ (೪೭-೪೮). ಈಗೊಂದು ಪ್ರಶ್ನೆ. ''ಭಾಗತ್ಯಾಗಲಕ್ಷಣೆಯಿಂದ ಲಕ್ಷಿತವಾದ ವಸ್ತುವು ಸವಿಕಲ್ಪವೆ? ನಿರ್ವಿಕಲ್ಪವೆ? ಯಾವ ಉತ್ತರವನ್ನು ಹೇಳಲೂ ನಿಮಗೆ ಬರುವುದಿಲ್ಲ. ಲಕ್ಷಿತವಾದದ್ದು ಸವಿಕಲ್ಪವೆಂದರೆ ನೀವು ಸಾಧಿಸಿದ ಪರಬ್ರಹ್ಮವು ಅಖಂಡ ಸಚ್ಚಿದಾನಂದವಾದ ನಿರ್ಗುಣ ವಸ್ತುವಾಗುವುದಿಲ್ಲ. ಹಾಗೆ ಬ್ರಹ್ಮವನ್ನು ವರ್ಣಿಸುವುದು ತಪ್ಪಾಗುತ್ತದೆ. ಏಕೆಂದರೆ, ವಿವಿಧಧರ್ಮಗಳ ಕಲ್ಪನೆ ವಿಕಲ್ಪ, ಸವಿಕಲ್ಪವೆಂದರೆ ಜಾತ್ಯಾದಿವಿವಿಧ ಧರ್ಮಗಳುಳ್ಳದ್ದು ಎಂದಾಗುತ್ತದೆ. ಹಾಗಲ್ಲದೆ ನಿರ್ವಿಕಲ್ಪವು ಲಕ್ಷಿತವೆಂದು ಹೇಳಿದರೆ ಅದೂ ಅಸಂಗತವೇ. ಧರ್ಮರಹಿತವಾದ ನಿರ್ಗುಣವಸ್ತು ಲಕ್ಷಣೆಯಿಂದ ತೋರಿದ್ದು ಎಲ್ಲಿಯೂ ಕಂಡುಬರುವುದಿಲ್ಲ. ಅಂತಹ ನಿರ್ವಿಕಲ್ಪವಾದ ಲಕ್ಷ್ಯವೇ ಇಲ್ಲ. ಈಗ ಏನು ಹೇಳುತ್ತೀರಿ?'' ಎಂದು ಒಬ್ಬನು ಆಕ್ಷೇಪವನ್ನು ಎತ್ತುತ್ತಾನೆ (೪೯). ಈ ಆಕ್ಷೇಪವನ್ನೆತ್ತಿದ ಪೂರ್ವಪಕ್ಷಿಗೆ ಸಿದ್ಧಾಂತಿಯು ಹೇಳುವುದೇನೆಂದರೆ, ''ಅಯ್ಯಾ, ನೀನು ಎತ್ತಿದ ಆಕ್ಷೇಪವು ಜಾತ್ಯುತ್ತರವೆಂಬ ದೋಷದಿಂದ ತುಂಬಿದೆ. ಹೇಗೆಂದರೆ, ನಿನಗೆ ಈ ಪ್ರಶ್ನೆಯನ್ನು ಕೇಳುತ್ತೇನೆ. ಲಕ್ಷ್ಯವು ನಿರ್ವಿಕಲ್ಪವೋ ಸವಿಕಲ್ಪವೋ ಎಂಬುದು ನಿನ್ನ ಪ್ರಶ್ನೆ. ನೀನು ಯಾವ ಲಕ್ಷ್ಯವನ್ನಿಟ್ಟುಕೊಂಡಿದ್ದೀಯೆ? ನಿರ್ವಿಕಲ್ಪವೆಂದು ನೀನು ಹೇಳುವುದಾದರೆ, ಅದು ಸ್ವವ್ಯಾಘಾತವನ್ನೇ ಮಾಡುತ್ತದೆ. ನಿರ್ವಿಕಲ್ಪವನ್ನು ನೀನು ಒಪ್ಪಿಕೊಂಡೇ ಪ್ರಶ್ನೆ ಹಾಕಿದಂತಾಯಿತು. ಸವಿಕಲ್ಪಕವಾದ ಲಕ್ಷ್ಯವನ್ನಿಟ್ಟುಕೊಂಡಿದ್ದರೆ, ಅದರಲ್ಲಿ ಒಂದು ಕಲ್ಪ (ಧರ್ಮ) ವನ್ನಿಟ್ಟುಕೊಂಡಿದ್ದೀಯೋ? ಅಥವಾ ಅನೇಕ ಕಲ್ಪಗಳನ್ನೋ? ಈ ಪ್ರಶ್ನೆಗಳಿಗೆ ಹೇಗೆ ಉತ್ತರ ಹೇಳಿದರೂ ಆತ್ಮಾಶ್ರಯ, ಅನ್ಯೋನ್ಯಾಶ್ರಯ, ಚಕ್ರಕ, ಅನವಸ್ಥಾ ಮುಂತಾದ ದೋಷಗಳು ಬರುತ್ತವೆ. ಆದ್ದರಿಂದ ನಿನ್ನ ಆಕ್ಷೇಪವು ಸರಿಯಾದದ್ದಲ್ಲ. (ಆತ್ಮಾಶ್ರಯ ಮೊದಲಾದ ದೋಷಗಳನ್ನು ಸಾಮಾನ್ಯವಾಚಕರು ಅರ್ಥಮಾಡಿಕೊಳ್ಳಲಾರರು. ಆದ್ದರಿಂದ ಅವನ್ನು ಇಲ್ಲಿ ವಿವರಿಸುವುದಿಲ್ಲ) (೫೦). ಈ ರೀತಿಯಾಗಿ ವಿಕಲ್ಪಿಸಿ ದೂಷಣ

ಮಾಡತಕ್ಕದ್ದು ಗುಣ, ಕ್ರಿಯೆ, ಜಾತಿ, ದ್ರವ್ಯ, ಇವುಗಳ ಸಂಬಂಧ - ಎಂಬ ಐದು ವಿಷಯಗಳಲ್ಲಿಯೂ ಸಮಾನವಾದದ್ದು. ಎಂದರೆ, ಹಿಂದಿನಂತೆ ಇವುಗಳನ್ನು ಕುರಿತು ವಿಕಲ್ಪಿಸುವುದು, ಈಗ ಹೇಳಿದಂತೆಯೇ ದೋಷಯುಕ್ತವಾಗುವುದರಿಂದ ಯುಕ್ತವಲ್ಲ. ಉದಾಹರಣೆಗೆ, ಒಂದು ದ್ರವ್ಯವು ಗುಣಸಹಿತವಾಗಿದೆ ಎಂದಾಗ, ಈ ಗುಣವು ನಿರ್ಗುಣದಲ್ಲಿದೆಯೋ? ಅಥವಾ ಸಗುಣದಲ್ಲಿದೆಯೋ? ಎಂದು ವಿಕಲ್ಪಿಸಿ ಪ್ರಶ್ನೆ ಹಾಕಬಹುದು. ನಿರ್ಗುಣದಲ್ಲಿ ಗುಣವಿದೆಯೆಂದರೆ ಸ್ವವ್ಯಾಘಾತ. ಸಗುಣದಲ್ಲಿದೆಯೆಂದರೆ ಹಿಂದೆ ಹೇಳಿದಂತೆ ಅನ್ಯೋನ್ಯಾಶ್ರಯಾದಿ ದೋಷಗಳು ಘಟಿಸುತ್ತವೆ. ಆದ್ದರಿಂದ ಗುಣಕ್ರಿಯಾದಿಗಳು ಆಯಾ ವಸ್ತುಸ್ವರೂಪಗಳೆಂದು ತಿಳಿಯಬೇಕು. ಅಭಿಪ್ರಾಯವೇನೆಂದರೆ, ಬುಟ್ಟಿಯಲ್ಲಿ ಹಣ್ಣುಗಳಿರುವಂತೆ ಒಂದು ವಸ್ತುವಿನಲ್ಲಿ ಗುಣವು ಹೋಗಿ ಕುಳಿತಿರುವುದಿಲ್ಲ. ಹಸಿರು ಎಲೆ ಎನ್ನುತ್ತೇವೆ. ಎಲೆ ಎಂಬ ಒಂದು ವಸ್ತುವಿನಲ್ಲಿ ಗುಣವು ಹೋಗಿ ಕುಳಿತು ಕೊಳ್ಳುವುದಿಲ್ಲ. ಎಲೆಯ ಸ್ವರೂಪವೇ ಹಸಿರು. ರೇಶ್ಮೆಯು ಮೃದುವಾಗಿದೆ ಎನ್ನುತ್ತೇವೆ. ಮೃದುತ್ವವಿಲ್ಲದ ರೇಶ್ಮೆಯಲ್ಲಿ ಮೃದುತ್ವವು ಬಂದು ಸೇರಿಕೊಳ್ಳುವುದಿಲ್ಲ. ಮೃದುತ್ವವು ರೇಶ್ಮೆಯ ಸ್ವರೂಪ. ಆದ್ದರಿಂದಲೇ **'ಗುಣಗುಣಿನೋರಭೇದಃ'** ಮುಂತಾದ ವಚನಗಳು ಹುಟ್ಟಿವೆ. ಹೀಗೆಯೇ ಕ್ರಿಯಾದಿಗಳಲ್ಲಿಯೂ ತಿಳಿಯತಕ್ಕದ್ದು (೫೧).

'ತತ್ತ್ವಮಸಿ' ಎಂಬ ವಾಕ್ಯದಿಂದ ಅಖಂಡ ಸಚ್ಚಿದಾನಂದರೂಪವಾದ ಪರಬ್ರಹ್ಮವು ಲಕ್ಷಿತವಾಗುತ್ತದೆಯೆಂದು ಹೇಳಿದ್ದಾಯಿತು. ಹೀಗೆ ಲಕ್ಷಿತವಾದದ್ದು ಸವಿಕಲ್ಪವೋ ಎಂದರೆ ನಾಮಜಾತ್ಯಾದಿಗಳಿಂದ ವಿಶಿಷ್ಟವೆ? ಅಲ್ಲವೆ? ಎಂದು ವಿಕಲ್ಪಿಸಿದಾಗ, ಹಾಗೆ ವಿಕಲ್ಪಿಸುವುದೇ ಅಸಂಬದ್ಧವೆಂದೂ ಪ್ರತಿಪಾದಿಸಿದ್ದಾಯಿತು. ಈ ಪ್ರಕಾರವಾಗಿ ವಿಕಲ್ಪವಿಕಲ್ಪಾಭಾವಗಳೆರಡೂ ಇಲ್ಲದ್ದು ಆತ್ಮವಸ್ತು. ಅದು ವಿಕಲ್ಪಿತ, ಲಕ್ಷಿತ, ಸಂಬಂಧವಿಶಿಷ್ಟ ದ್ರವ್ಯ, ಗುಣ, ಜಾತಿ - ಹೀಗೆಲ್ಲಾ ಹೇಳುವುದೂ ಸಹ ಕಲ್ಪಿತವೇ ಸರಿ. ಲೋಕದಲ್ಲಿ ಇದು ದ್ರವ್ಯ, ಇದು ಗುಣ, ಇದು ಸಂಬಂಧ, ಇದು ಕ್ರಿಯೆ ಎಂದು ಹೇಳುತ್ತೇವಷ್ಟೆ ಹಾಗೆ ಆತ್ಮ ವಸ್ತುವನ್ನು ಯಾವ ಪದಾರ್ಥವೆಂದು ಹೇಳಲು ಶಕ್ಯವೇ ಅಲ್ಲವೆಂದು ತಿಳಿಯಬೇಕು (೫೨). ಜಗತ್ತಿಗೆ ಯಾವುದು ಉಪಾದಾನಕಾರಣ, ಯಾವುದು ನಿಮಿತ್ತಕಾರಣ, ತತ್ತ್ವಮಸಿ ಇತ್ಯಾದಿ ವಾಕ್ಯಗಳಿಗೆ ಅರ್ಥವೇನು? - ಎಂದು ಗುರುವು ಹೇಳುವುದನ್ನು ಕೇಳುವುದಕ್ಕೆ ಶ್ರವಣವೆಂದು ಹೆಸರು. ಹಾಗೆ

ಹೇಳುವುದಕ್ಕೆ ಯುಕ್ತಿಯಾವುದು? ದೃಷ್ಟಾಂತ ಯಾವುದು? ಅದು ಹೇಗೆ ಹೊಂದುತ್ತದೆ. ಎಂದು ಮನಸ್ಸಿನಲ್ಲಿಯೇ ತರ್ಕಿಸಿ ತಿಳಿದುಕೊಳ್ಳುವುದಕ್ಕೆ ಮನನವೆಂದು ಹೆಸರು. ಹೀಗೆ ಶ್ರವಣ ಮನನಗಳಿಂದ ನಿಶ್ಚಿತವಾದ ಆತ್ಮ ವಸ್ತುವನ್ನು ಏಕಾಗ್ರತೆಯಿಂದ ಧ್ಯಾನಿಸುವುದಕ್ಕೆ ನಿದಿಧ್ಯಾಸನವೆನ್ನುತ್ತಾರೆ (೫೩-೫೪), ನಿದಿಧ್ಯಾಸನವೆಂಬುದು ಒಂದು ಬಗೆಯ ಧ್ಯಾನವೇ ಸರಿ. ಈ ಧ್ಯಾನದಲ್ಲಿ ಧ್ಯಾನಮಾಡುವವನು, ಧ್ಯಾನ, ಧ್ಯೇಯವಾದ ವಸ್ತು- ಎಂಬ ಮೂರು ಅಂಶಗಳಿರುತ್ತವೆ. ಎಂದರೆ ಕರ್ತೃ, ಕ್ರಿಯೆ, ಕರ್ಮ (Object) - ಎಂಬ ತ್ರಿಪುಟಿ ಇರುತ್ತದೆ. ಧ್ಯಾನವು ಮಾನಸ ಕ್ರಿಯೆ. ಕ್ರಿಯೆಯಿದ್ದಲ್ಲಿ ತ್ರಿಪುಟಿ ಇರುತ್ತದೆ. ಒಬ್ಬನು ಬರೆಯುತ್ತಾನೆ ಎನ್ನೋಣ. ಅಲ್ಲಿ ಲೇಖಕನೆಂಬ ಕರ್ತೃ, ಲೇಖನ ಕ್ರಿಯೆ, ಲೇಖ್ಯವಾದ ವಿಷಯ - ಇವು ಮೂರು ಇರಬೇಕಾಗುತ್ತದೆ. ನಿದಿಧ್ಯಾಸನದಲ್ಲಿ ತ್ರಿಪುಟೀಜ್ಞಾನವು ಧ್ಯಾತೃವಿಗೆ ಇರುತ್ತದೆ ಎಂದು ಒಟ್ಟಿನ ಅಭಿಪ್ರಾಯ. ಧ್ಯಾನಮಾಡತಕ್ಕ ಧ್ಯಾತೃವಾದ ತಾನು, ಧ್ಯಾನವೆಂಬ ಕ್ರಿಯೆ, ಇವೆರಡೂ ಗೋಚರವಾಗದೆ ಧ್ಯೇಯದಲ್ಲಿ ಮಾತ್ರ ಚಿತ್ತವು ನಿಂತುಕೊಳ್ಳುವ ಸ್ಥಿತಿಗೆ ಸಮಾಧಿ ಯೆಂದು ಹೆಸರು. ಗಾಳಿಯಿಲ್ಲದ ಸ್ಥಳದಲ್ಲಿ ದೀಪವು ಅಲ್ಲಾಡದೆ ಹೇಗೆ ನಿಶ್ಚಲವಾಗಿರುವುದೋ ಹಾಗೆ ಧ್ಯೇಯದಲ್ಲಿಯೇ ಮನಸ್ಸು ಲೀನವಾಗಿರಬೇಕು. ಇದು ಸಮಾಧಿ (೫೫), ಇಲ್ಲೊಂದು ಶಂಕೆ ಹುಟ್ಟಬಹುದು. ಸಮಾಧಿಯಲ್ಲಿ ಧ್ಯೇಯವಾದ ಆತ್ಮವಸ್ತು ಒಂದೇ ಇರುತ್ತದೆ ಎನ್ನುತ್ತೀರಿ. ಚಿತ್ತವು ಧ್ಯೇಯದಲ್ಲಿ ಮಾತ್ರ ನೆಟ್ಟಿದೆ ಎಂದು ನಿಶ್ಚಯಿಸುವುದು ಹೇಗೆ? ಧ್ಯೇಯದಲ್ಲಿ ಮಾತ್ರನೆಟ್ಟಿದೆಯೆಂಬುದನ್ನು ಅರಿಯುವ ಚಿತ್ತವೃತ್ತಿ ಇರಲೇ ಬೇಕಲ್ಲವೆ? ಆಗ ನನ್ನ ಚಿತ್ತವು ಧ್ಯೇಯದಲ್ಲಿ ಮಾತ್ರ ನೆಟ್ಟಿದೆ ' ಎಂದು ಕೊಳ್ಳುವ ಧ್ಯಾತೃವೂ ಚಿತ್ತವೂ ಗೋಚರವಾಗಲೇಬೇಕಾಗುತ್ತದೆ. ಆಗ 'ನೀವು ಹೇಳುವ ಸಮಾಧ್ಯವಸ್ಥೆ ದುರ್ಲಭವಾಗುತ್ತದೆಯಲ್ಲವೆ? ಈ ಶಂಕೆಗೆ ಉತ್ತರವೇನೆಂದರೆ; ಹೌದು, ಸಮಾಧಿ ಯಲ್ಲಿ ಧ್ಯಾತೃವೂ ಚಿತ್ತವೂ ಚಿತ್ತವೃತ್ತಿಯೂ ಇದ್ದೇ ಇರುತ್ತವೆ. ಅವು ಇರುವುದಿಲ್ಲವೆಂದು ನಾವು ಹೇಳಿಲ್ಲ, ಇದ್ದರೂ ಗೋಚರಿಸುವುದಿಲ್ಲ ಎಂದು ಮಾತ್ರ ಹೇಳುತ್ತಿದ್ದೇವೆ. ಅವು ಯಾವುವೂ ಗೋಚರಿಸದೆ ಆತ್ಮವು ಮಾತ್ರ ಸ್ವಯಂ ಪ್ರಕಾಶವಾಗಿ ತೋರುತ್ತಲೇ ಇರುವುದು. ಇದು ಲೋಕದುರ್ಲಭವಾದ ಒಂದು ಅಪೂರ್ವಸ್ಥಿತಿ. ಆದ್ದರಿಂದಲೇ ಸಮಾಧಿಯಿಂದ ವ್ಯುತ್ಥಾನವಾದ ಮೇಲೆ ''ಇಷ್ಟು ಹೊತ್ತು ನಾನು ಸಮಾಧಿಯಲ್ಲಿದ್ದೆನು'' ಎಂಬ ಸ್ಮರಣೆ ಬರುತ್ತದೆ.

ಸ್ಮರಣೆಗೆ ಯಾವುದು ಬರುತ್ತದೆಯೋ ಅದು ಅನುಭೂತವಾಗಿರಲೇಬೇಕು. ಎಂಬುದು ನಿಯಮ. ಸುಷುಪ್ತಿಯಂತಹ ಒಂದು ಅವಸ್ಥೆ ಇದು. ಸುಷುಪ್ತಿಯಲ್ಲಿಯೂ ನಾನು, ನನ್ನ ಚಿತ್ತ - ಎಂಬುದು ಗೋಚರಿಸುವುದಿಲ್ಲ ಸುಷುಪ್ತಿಗೂ ಸಮಾಧಿಗೂ ಭೇದ ಉಂಟು. ಸಾದೃಶ್ಯವೂ ಇದೆ (೫೬). ಈಗ ಇನ್ನೊಂದು ಪ್ರಶ್ನೆ ಹುಟ್ಟುತ್ತದೆ. ಸಮಾಧಿ ಕಾಲದಲ್ಲಿ ಧ್ಯೇಯವಾದ ಆತ್ಮ ವನ್ನರಿಯುವ ಚಿತ್ತವೃತ್ತಿಗಳು ಹುಟ್ಟುತ್ತಲೇ ಇರುತ್ತವೆಯೆಂದೂ ಅದನ್ನು ಮಾತ್ರ ತಿಳಿದಿರುವುದಿಲ್ಲವೆಂದೂ ಹೇಳುತ್ತೀರಿ. ಚಿತ್ತವೃತ್ತಿಯು ಒಂದು ವ್ಯಾಪಾರ; ಮಾನಸಕ್ರಿಯೆ. ಪ್ರತಿಯೊಂದು ಕ್ರಿಯೆಯೂ ಪ್ರಯತ್ನದಿಂದಲೇ ಹುಟ್ಟುತ್ತದೆ. ಪ್ರಯತ್ನವಿಲ್ಲದೆ ಕ್ರಿಯೆ ಇಲ್ಲ. ಸಮಾಧಿ ಕಾಲದಲ್ಲಿ ಪ್ರಯತ್ನವಿರುವುದಿಲ್ಲವಾದ್ದರಿಂದ ಚಿತ್ತವೃತ್ತಿಯು ಹುಟ್ಟುವುದು ಹೇಗೆ? ಈ ಪ್ರಶ್ನೆಗೆ ಉತ್ತರವಿದು; ಸಮಾಧಿಯಲ್ಲಿ ಪ್ರಯತ್ನ ವಿರುವುದಿಲ್ಲವೆಂಬುವುದು ನಿಜ. ಆದರೆ ಸಮಾಧಿಯನ್ನೇರುವ ಮೊದಲು ನಡೆದ ಪ್ರಥಮ ಪ್ರಯತ್ನದಿಂದಲೇ ಚಿತ್ತವೃತ್ತಿಯು ಮುಂದುವರಿಯುತ್ತ ಹೋಗುವುದು. ಈ ಪ್ರಯತ್ನವು ಇತರ ಪ್ರಯತ್ನಗಳಂತಲ್ಲ. ಇದರ ಜೊತೆಗೆ ಅದೃಷ್ಟವೆಂಬ ಪುಣ್ಯ ವಿಶೇಷವೂ ಭಾವನಾ ಎಂಬ ಸಂಸ್ಕಾರವಿಶೇಷವೂ ಸಹಕಾರಿಗಳಾಗಿ ಸೇರಿಕೊಂಡಿರುತ್ತವೆ. ಈ ಎರಡು ಸಂಸ್ಕಾರಗಳೊಡಗೂಡಿದ ಪ್ರಯತ್ನವು ತನ್ನಿಂದ ಹುಟ್ಟಿದ ವೃತ್ತಿಯು ಸಮಾಧಿಯಲ್ಲಿ ಅನುವೃತ್ತವಾಗುವಂತೆ ಮಾಡಲು ಶಕ್ತವಾಗಿದೆ. ಇದು ಅನುಭವ ಸಿದ್ಧವಾದ್ದರಿಂದ ಮತ್ತೆ ಪ್ರಶ್ನಿಸುವಂತಿಲ್ಲ. ಈ ವಿಷಯದಲ್ಲಿ **'ಕರ್ಮಾಶುಕ್ಲಕೃಷ್ಣಂ ಯೋಗಿನಸ್ತ್ರಿವಿಧಮಿತರೇಷಾಮ್'** ಎಂದು ಯೋಗಸೂತ್ರವಿದೆ (ಕೈ.ಪಾ.ಸೂ.೭೦). ಅರ್ಥ: ಯೋಗಿಯ ಕರ್ಮವು ಅಶುಕ್ಲ ಕೃಷ್ಣವಾಗಿರುತ್ತದೆ. ಇತರರ ಕರ್ಮವು ಶುಕ್ಲ ಕೃಷ್ಣ ಮತ್ತು ಮಿಶ್ರವಾದ ಶುಕ್ಲಕೃಷ್ಣ. ವಿವರಣೆ: ಶಾಸ್ತ್ರ ವಿಹಿತವಾದ ಕರ್ಮಕ್ಕೆ ಶುಕ್ಲವೆಂದು ಹೆಸರು. ಇದು ಸ್ವರ್ಗಸುಖಾದಿಗಳನ್ನು ಕೊಡತಕ್ಕ ಪುಣ್ಯಕರ್ಮ. ಶಾಸ್ತ್ರದಿಂದ ನಿಷಿದ್ಧವಾದದ್ದು ಕೃಷ್ಣವೆನಿಸುತ್ತದೆ. ಇದೇ ಪಾಪ ಕರ್ಮ. ಇದರಿಂದ ನರಕವೇ ಮೊದಲಾದ ದುಃಖವು ಪ್ರಾಪ್ತವಾಗುತ್ತದೆ. ಪಾಪಪುಣ್ಯಗಳೆರಡರ ಮಿಶ್ರಣವು ಶುಕ್ಲಕೃಷ್ಣ. ಇದು ಮನುಷ್ಯ ಜನ್ಮಕ್ಕೆ ಕಾರಣವಾದದ್ದು. ಸುಖದುಃಖಗಳೆರಡಕ್ಕೂ ಕಾರಣವಾದದ್ದು ಇದು. ಮನುಷ್ಯ ಜನ್ಮದಲ್ಲಿ ಸುಖದುಃಖಗಳೆರಡೂ ಇರುತ್ತವೆ. ಯೋಗಿಯಾದರೋ ಈ ಬಗೆಯ ಸುಃದುಃಖಗಳೆರಡನ್ನೂ ಬಯಸುವುದಿಲ್ಲ. ಇವೆರಡರಿಂದಲೂ ಮುಕ್ತವಾದ ಕೈವಲ್ಯವನ್ನು ಯೋಗಿಯು ಬಯಸುತ್ತಾನೆ.

ಮೋಕ್ಷಕ್ಕಾಗಿ ಮಾಡುವ ಕರ್ಮವು ನಿಷ್ಕಾಮಕರ್ಮವೆಂದೂ ಚಿತ್ತಶುದ್ಧಿಯೊಂದೇ ಅದಕ್ಕೆ ಫಲವೆಂದೂ ವೇದಾಂತಿಗಳು ಹೇಳುತ್ತಾರೆ. ಯೋಗಿಯದು ನಿಷ್ಕಾಮ ಕರ್ಮ. ಸಮಾಧಿಸ್ಥಿತಿಗಾಗಿ ಯೋಗಿಯು ಮತ್ತೆ ಮತ್ತೆ ಪ್ರಯತ್ನಿಸಿರುತ್ತಾನೆ. ಈ ಅಭ್ಯಾಸಬಲದಿಂದ ಚಿತ್ತಕ್ಕೆ ಒಂದು ಸಂಸ್ಕಾರ ಉಂಟಾಗಿರುತ್ತದೆ. ಈ ಸಂಸ್ಕಾರ ವಿಶೇಷಕ್ಕೆ ಭಾವನಾ ಎಂದು ಹೆಸರು. ನಿಷ್ಕಾಮಕರ್ಮದಿಂದ ಹುಟ್ಟಿದ ಒಂದಾನೊಂದು ಪುಣ್ಯವಿಶೇಷಕ್ಕೆ ಅದೃಷ್ಟವೆಂದು ಹೆಸರು. ಈ ಅದೃಷ್ಟ ಭಾವನೆಗಳೆರಡರಿಂದ ಸಹಿತವಾದ ಪ್ರಯತ್ನದಿಂದ ಹುಟ್ಟಿದ ಚಿತ್ತವೃತ್ತಿಯು ಸಮಾಧ್ಯವಸ್ಥೆಯಲ್ಲಿ ಮುಂದುವರಿಯುತ್ತದೆ (೫೭).

ಇದಕ್ಕೆ ನಿರ್ವಿಕಲ್ಪಕಸಮಾಧಿಯೆಂದು ಹೆಸರು. ವಿವಿಧಕಲ್ಪನೆ ವಿಕಲ್ಪ. ಅನೇಕವಸ್ತು ಪ್ರತೀತಿ. ಅದಿಲ್ಲದೆ ಏಕವಸ್ತು ಪ್ರತೀತಿಯುಳ್ಳ ಸಮಾಧಿಯು ನಿರ್ವಿಕಲ್ಪಕ ಸಮಾಧಿ. ಇದೇನೂ ನಮ್ಮ ಹೊಸ ಕಲ್ಪನೆಯಲ್ಲ. ಭಗವದ್ಗೀತೆಯಲ್ಲಿ ಶ್ರೀ ಕೃಷ್ಣನೇ ಅರ್ಜುನನಿಗೆ '**ಯಥಾ ದೀಪೋ ನಿವಾತಸ್ಥಃ**' ಇತ್ಯಾದಿ ಶ್ಲೋಕಗಳಲ್ಲಿ ಈ ಸಮಾಧಿಯನ್ನು ವರ್ಣಿಸಿ ಹೇಳಿದ್ದಾನೆ.

**ಯಥಾ ದೀಪೋ ನಿವಾತಸ್ಥೋ ನೇಂಗತೇ ಸೋಪಮಾಸ್ಮೃತಾ।**
**ಯೋಗಿನೋ ಯತಚಿತ್ತಸ್ಯ ಯುಂಜತೋ ಯೋಗಮಾತ್ಮನಃ॥**

(ಭ. ಗೀ. ೬-೧೯)

ಚಿತ್ತವನ್ನು ಆತ್ಮನಲ್ಲಿಯೇ ನಿಯಂತ್ರಿಸಿ ಆತ್ಮಧ್ಯಾನದಲ್ಲಿ ಮಗ್ನನಾದ ಯೋಗಿಗೆ, ಗಾಳಿಯಿಲ್ಲದೆಡೆಯಲ್ಲಿ ದೀಪವು ಹೇಗೆ ಅಲ್ಲಾಡುವುದಿಲ್ಲವೋ ಹಾಗೆ ಎಂಬ ಹೋಲಿಕೆ ಸಲ್ಲುತ್ತದೆ ಎಂದರ್ಥ. ಇದು ನಿರ್ವಿಕಲ್ಪಕ ಸಮಾಧಿಯ ವರ್ಣನೆ. (೫೮)

ಈ ಸಂಸಾರಕ್ಕೆ ಆದಿಯಿಲ್ಲ. ಇಂತಹ ಸಂಸಾರದಲ್ಲಿ ಮುಳುಗಿ ಏಳುತ್ತಿರುವ ನಾವು ಎಷ್ಟು ಜನ್ಮಗಳನ್ನು ಎತ್ತಿದ್ದೇವೆಯೆಂಬುದನ್ನು ಯಾರು ಬಲ್ಲರು? ಒಂದೊಂದು ಜನ್ಮದಲ್ಲಿ ಮಾಡಿದ ಪಾಪಕರ್ಮಗಳೆಷ್ಟೋ ಪುಣ್ಯಕರ್ಮಗಳೆಷ್ಟೋ! ಅವುಗಳಲ್ಲಿ ಎಷ್ಟನ್ನು ಅನುಭವಿಸಿ ತೀರಿಸಿದ್ದೇವೋ ಇನ್ನೆಷ್ಟು ಸಂಚಿತವಾಗಿ ಉಳಿದುಕೊಂಡಿವೆಯೋ. ಅಂತೂ ಅಪರಿಮಿತವಾದ ಕರ್ಮಗಳು ನಮ್ಮ ಖಾತೆಯಲ್ಲಿ ಉಳಿದಿರಬೇಕು! ಯಾವ ಪುಣ್ಯಾತ್ಮನು ಈ ನಿರ್ವಿಕಲ್ಪಕಸಮಾಧಿ ಯನ್ನೇರಿ ಆತ್ಮಧ್ಯಾನದಲ್ಲಿ ಮಗ್ನನಾಗುತ್ತಾನೋ ಆತನ ಖಾತೆಯಲ್ಲಿರುವ

ಕರ್ಮಕೋಟಿಗಳೆಲ್ಲವೂ ಒಂದೂ ಉಳಿಯದಂತೆ ನಾಶವಾಗಿ ಬಿಡುತ್ತವೆ!

ನಾವು ಒಂದೊಂದು ಜನ್ಮದಲ್ಲಿ ಅನುಭವಿಸುವ ಸುಖ ದುಃಖಗಳಿಂದ ಸಂಚಿತ ಕರ್ಮಗಳಲ್ಲಿ ಕೆಲವು ನಾಶವಾಗುತ್ತಿರುವುದು ನಿಜ. ಆದರೆ ಆಯಾ ಜನ್ಮದಲ್ಲಿ ಮತ್ತೆ ಕರ್ಮಗಳನ್ನು ಮಾಡುತ್ತೇವೆ! ಅವೆಲ್ಲವೂ ನಮ್ಮ ಖಾತೆಗೆ ಜಮಾ ಆಗುತ್ತವೆ! ಜಿಪುಣನಾದ ಸಾಹುಕಾರನಿಗೆ ವ್ಯಯಕ್ಕಿಂತ ಆಯವೇ ಅಧಿಕ! ಹಾಗೆ ನಮಗೆಲ್ಲರಿಗೂ ಕರ್ಮವ್ಯಯಕ್ಕಿಂತ ಕರ್ಮಾದಾಯವೇ ಅಧಿಕವಾಗುವುದರಿಂದ ಸಂಸಾರವು ತಾನಾಗಿ ಮುಗಿಯುವ ಸಂಭವವೇ ಇಲ್ಲ. ಆದ್ದರಿಂದ ವಿವೇಕಿಯಾದವನು ಗುರೂಪದೇಶವನ್ನು ಪಡೆದು ಅವನ ಬೋಧನೆಯಂತೆ ನಡೆಯುತ್ತ ಈ ಕರ್ಮಕೋಟಿಗಳನ್ನು ಸುಟ್ಟುಹಾಕುವ ಬಗೆಯನ್ನು ಕಂಡುಕೊಳ್ಳಬೇಕು. '**ಜ್ಞಾನಾಗ್ನಿಃ ಸರ್ವಕರ್ಮಾಣಿ ಭಸ್ಮಸಾತ್ ಕುರುತೇಽರ್ಜುನ**' ಎಂದು ಭಗವದ್ಗೀತೆಯಲ್ಲಿ (೪-೩೭) ಹೇಳಿದೆ. ''**ಕ್ಷೀಯಂತೇ ಚಾಸ್ಯ ಕರ್ಮಾಣಿ**'' (ಮುಂ. ಉ. ೨-೨-೮) ಎನ್ನುತ್ತದೆ ಉಪನಿಷತ್ತು. ಈ ಪ್ರಕಾರವಾಗಿ ಆತ್ಮ ದರ್ಶನದಿಂದ ಮಾತ್ರ ಸಕಲಸಂಚಿತಕರ್ಮಗಳು ನಾಶ ಹೊಂದುತ್ತವೆಯೆಂದು ತಿಳಿಯಬೇಕು (೫೯). ಈ ನಿರ್ವಿಕಲ್ಪಕ ಸಮಾಧಿಯನ್ನು ಬ್ರಹ್ಮಜ್ಞಾನಿಗಳಾದ ಶ್ರೇಷ್ಠಯೋಗಿಗಳು ಧರ್ಮ ಮೇಘವೆಂದು ಕರೆಯುತ್ತಾರೆ. ಏಕೆಂದರೆ, ಇದು ಧರ್ಮವೆಂಬ ಅಮೃತಧಾರೆಗಳನ್ನು ಸುರಿಸುತ್ತಿರುವುದು.

''**ಅಯಂತು ಪರಮೋ ಧರ್ಮೋ ಯದ್ಯೋಗೇನಾತ್ಮಸಾಧನಮ್**'' ಎಂಬ ವಚನದಂತೆ ಯಾವ ಯೋಗವಿಧಾನದಿಂದ ಆತ್ಮಜ್ಞಾನವನ್ನು ಸಾಧಿಸಿಕೊಳ್ಳಲು ಸಾಧ್ಯವಾಗುವುದೋ ಅದು ಪರಮಧರ್ಮವೆಂದು ಶ್ರುತಿಯು ಹೇಳುತ್ತದೆ. ನಿರ್ವಿಕಲ್ಪಸಮಾಧಿಯು ಆ ಬಗೆಯ ಒಂದು ಉತ್ತಮ ಸಾಧನ. ಆದ್ದರಿಂದ ದೃಢವಾಗಿ ಪ್ರಯತ್ನಿಸಿದರೆ, ನಿರ್ವಿಕಲ್ಪ ಸಮಾಧಿಯು ಸಿದ್ಧಿಸುತ್ತದೆ.

ನಿರ್ವಿಕಲ್ಪಕಸಮಾಧಿಯಿಂದ, ಹಲವಾರು ಜನ್ಮಗಳಲ್ಲಿ ಸಂಚಿತವಾಗಿದ್ದ ಕರ್ಮಗಳೆಲ್ಲವೂ ನಶಿಸಿಹೋಗುತ್ತವೆಯೆಂದೂ ಈ ಸಮಾಧಿಯನ್ನು ಧರ್ಮಮೇಘವೆಂದು ಯೋಗಿಗಳು ಮೆಚ್ಚುಗೆಯಿಂದ ಕರೆದಿದ್ದರೆಂದೂ ಹೇಳಿದ್ದಾಯಿತು. ಕರ್ಮಗಳೆಂದರೆ ಪಾಪಕರ್ಮಗಳು ಮಾತ್ರವೆಂದು ತಿಳಿಯಕೂಡದು. ಪುಣ್ಯಕರ್ಮಗಳೂ ಹೌದು. ಪುಣ್ಯಕರ್ಮಗಳೂ ಸಹ ಮುಮುಕ್ಷುವಿಗೆ ಬಾಧಕಗಳೇ. ಏಕೆಂದರೆ, ಪುಣ್ಯಭೋಗಕ್ಕಾಗಿ ಮತ್ತೆ ಜನ್ಮವನ್ನೆತ್ತ

ಬೇಕಾಗುತ್ತದೆ. ಆ ಜನ್ಮದಲ್ಲಿ ಪುನಃ ಪಾಪಪುಣ್ಯಕರ್ಮಗಳೆರಡೂ ಗಂಟುಬೀಳುತ್ತವೆ. ಹೀಗಾಗಿ ಹುಟ್ಟುಸಾವುಗಳ ಚಕ್ರವು ನಡೆಯುತ್ತಲೇ ಇರಬೇಕಾಗುವುದರಿಂದ ಮೋಕ್ಷದ ಪ್ರಾಪ್ತಿ ದೂರ ಉಳಿದೀತು. ಆದ್ದರಿಂದ ಪಾಪಪುಣ್ಯಗಳ ಸಂಚಯವು ಸಮೂಲವಾಗಿ ನಾಶವಾಗಲೇಬೇಕು. ಏಕಾಗ್ರತೆಯಿಂದ ಆತ್ಮ ಧ್ಯಾನರೂಪವಾದ ಸಮಾಧಿಯು ಈ ಕರ್ಮ ಸಂಚಯವನ್ನು ನಾಶಗೊಳಿಸುತ್ತದೆ. (೬೦-೬೧)

ಆಗ **'ತತ್ತ್ವಮಸಿ'** ಎಂಬ ಮಹಾವಾಕ್ಯವನ್ನಾಧರಿಸಿ ಗುರುವು ಯಾವ ಜೀವಬ್ರಹ್ಮೈಕ್ಯವನ್ನು ಬೋಧಿಸಿರುತ್ತಾನೋ ಅದು ಸಫಲವಾಯಿತೆಂದು ತಿಳಿಯಬೇಕು. ಗುರುಬೋಧೆಯಿಂದ ಮೊದಲು ಆದದ್ದು ಪರೋಕ್ಷಜ್ಞಾನ. ಅಂತಹ ಜ್ಞಾನವಾಗುವುದೇನೂ ಕಠಿಣವಾದ್ದಲ್ಲ. ಸಾಮಾನ್ಯ ವಿಚಾರಶೀಲನಿಗೂ ಸಹ ಉಪನಿಷದ್ವಾಕ್ಯದ ಅರ್ಥವನ್ನು ತಿಳಿಸಿಕೊಡುವುದಾಗಲಿ ತಿಳಿದು ಕೊಳ್ಳುವುದಾಗಲಿ ಕಷ್ಟವಲ್ಲ. ಆ ಜ್ಞಾನವು ತಲೆಗೆ ಅಂಟಿರುತ್ತದೆಯೇ ಹೊರತು ಹೃದಯಕ್ಕೆ ಅಂಟಿರುವುದಿಲ್ಲ. ಹೀಗೆ ತಲೆಗೆ ಅಂಟಿಸಿಕೊಂಡ ವೇದಾಂತಿಗಳು ಬಹಳ ಜನರಿದ್ದಾರೆ. ಅವರು ವೇದಾಂತದ ಮೇಲೆ ಉಪನ್ಯಾಸಗಳನ್ನು ನೀಡುತ್ತ ತುಂಬ ಖ್ಯಾತಿಯನ್ನು ಗಳಿಸಿರುವುದುಂಟು. ಅಹಂಕಾರವಾಗಲಿ ಮಮಕಾರವಾಗಲಿ ಅವರನ್ನು ಬಿಟ್ಟು ಹೋಗಿರುವುದಿಲ್ಲ. ಅದು ಬಾಯಿವೇದಾಂತವೇ ಹೊರತು ಹೃದಯದ ವೇದಾಂತವಲ್ಲ. ಕಾಮಕ್ರೋಧಾದಿಗಳು ಇದ್ದೇ ಇರುತ್ತವೆ. ಅದಕ್ಕೆ ಕರ್ಮಸಂಚಯವೇ ಕಾರಣ. ಕರ್ಮಸಂಚಯವಿರುವವರೆಗೆ ಕಾಮಕ್ರೋಧಾದಿಗಳು ಇದ್ದೇ ಇರುತ್ತವೆ. ಆದ್ದರಿಂದ ಚಿತ್ತಶುದ್ಧಿಯಾಗಿರುವುದಿಲ್ಲ. ಸತತವಾದ ಆತ್ಮಧ್ಯಾನದಿಂದ ಕರ್ಮಸಂಚಯವು ನಶಿಸಿದಾಗ ಚಿತ್ತಶುದ್ಧಿಯುಂಟಾಗಿ ಅಪರೋಕ್ಷ ಜ್ಞಾನವಾಗುತ್ತದೆ. ಅದೂ ಸಹ 'ತತ್ತ್ವಮಸಿ' ಎಂಬ ಮಹಾವಾಕ್ಯಜನಿತವಾದದ್ದೇ. ಆಗ ನಾನು, ನನ್ನದು ಇತ್ಯಾದಿ ಭೇದಭಾವನೆಯೆಲ್ಲವೂ ತೊಲಗಿ ಹೋಗಿರುತ್ತದೆ (೬೨). ಈ ಪರೋಕ್ಷಜ್ಞಾನ, ಅಪರೋಕ್ಷಜ್ಞಾನಗಳನ್ನು ಈ ರೀತಿ ವಿಂಗಡಿಸಬಹುದು. ಗುರೂಪದಿಷ್ಟವಾಗಿಯೇ ಉಪನಿಷದ್ವಾಕ್ಯದಿಂದ ಜೀವಬ್ರಹ್ಮೈಕ್ಯವು ತಿಳಿಯುತ್ತದೆ. ಇದರಲ್ಲಿ ನಾನು ತಿಳಿಯತಕ್ಕವನು, ಜ್ಞಾತೃ, ದ್ರಷ್ಟೃ - ಎಂಬ ಅಂಶವಿರುತ್ತದೆ. ಜೀವಬ್ರಹ್ಮರಿಗೆ ಭೇದವಿಲ್ಲ. ಅವೆರಡು ಶಬ್ದಗಳೂ ಒಂದೇ ಅರ್ಥವನ್ನು ಬೋಧಿಸತಕ್ಕವು. ಜೀವ ಬೇರೆ, ಬ್ರಹ್ಮ

ಬೇರೆ ಅಲ್ಲ. ಎರಡೂ ಒಂದೇ ಎಂಬ ಅಭೇದಜ್ಞಾನವು ಪರೋಕ್ಷ ಜ್ಞಾನವಾಗಿದೆ. ಈ ಐಕ್ಯವನ್ನು ನಾನು ತಿಳಿದುಕೊಂಡಿದ್ದೇನೆ - ಎಂಬ ಅಂಶ ಸೇರಿದೆ - ಆಗ ನಾನು ಎಂಬ ಅಂಶವು ಜೀವಬ್ರಹ್ಮರಿಗೆ ಪೃಥಕ್ ಆಗಿ ಉಳಿದುಕೊಂಡಿರುತ್ತದೆ. ಇದು ಪರಿಪೂರ್ಣವಾದುದಲ್ಲ. ಇದು ಬುದ್ಧಿಪೂರ್ವಕ ಮಾಡಿದ ಎಲ್ಲ ಪಾಪಸಂಚಯವನ್ನು ತೊಡೆದು ಹಾಕುತ್ತದೆ. ಆದರೆ ಸಂಸಾರ ಕಾರಣವಾದ ಅಜ್ಞಾನವು ಮಾತ್ರ ಉಳಿದುಕೊಂಡಿರುತ್ತದೆ. ಈ ಅಜ್ಞಾನವೇ ಅವಿದ್ಯೆ (೬೩) ಅನಂತರ ಸಮಾಧಿಯಿಂದ ಎಂದರೆ ಸತತವಾದ ಆತ್ಮಧ್ಯಾನವು ನಡೆಯುವುದರಿಂದ ಅಪರೋಕ್ಷಾತ್ಮವಿಜ್ಞಾನವುಂಟಾಗುತ್ತದೆ. ಇದರಲ್ಲಿ 'ನಾನು ತಿಳಿದಿದ್ದೇನೆ' ಎಂಬ ಅಂಶವೇ ಇರುವುದಿಲ್ಲ. ಜ್ಞಾತೃ ಅಥವಾ ದ್ರಷ್ಟೃ ಎಂಬುದೇ ಇಲ್ಲ. ಈ ಅಂಶವಿಲ್ಲದಿದ್ದರಿಂದ 'ನಾನು ಜ್ಞಾನಿ', ನಾನು ಜೀವಾತ್ಮೈಕ್ಯವನ್ನು ತಿಳಿದಿದ್ದೇನೆ - ಎಂಬ ಜ್ಞಾನವೇ ಉದಿಸುವುದಿಲ್ಲ. ತನಗಿಂತ ಬೇರೆಯಾದದ್ದು ಎಂಬ ಅಂಶವಾಗಲಿ ಅನ್ಯರಿಗಿಂತ ನಾನು ಬೇರೆ ಎಂಬ ಅಂಶವಾಗಲಿ ಇದರಲ್ಲಿಲ್ಲ. ಅರಿತಿದ್ದೇನೆ ಎಂಬುದೂ ಇಲ್ಲ. 'ಅರಿತಿದ್ದೇನೆ' ಎನ್ನುವುದು ವೃತ್ತಿಜ್ಞಾನ, ಸ್ವತಃ ಜ್ಞಾನಸ್ವರೂಪವೇ ಆಗುವುದು ಅಪರೋಕ್ಷಜ್ಞಾನ. ನಾನು, ನೀನು, ಅವನು - ಎಂಬ ಭೇದವೇ ಇಲ್ಲದಾಗ ಯಾರು ಯಾವುದನ್ನು ತಿಳಿದಂತಾಯಿತು? ಎಲ್ಲವೂ ತಾನೇ ಆಯಿತು. ತಾನೇ ಎಲ್ಲವೂ ಆಯಿತು. ಇದೇ ವಿಜ್ಞಾನ. ಈ ವಿಜ್ಞಾನವು ಉದಿಸುತ್ತಿರುವಾಗಲೇ ಅಜ್ಞಾನವೆಂಬ ಕತ್ತಲೆ ನಿರ್ಮೂಲವಾಗಿ ಅಡಗಿಹೋಗುತ್ತದೆ. ಅಜ್ಞಾನವೆಂಬ ಕತ್ತಲೆಗೆ ಈ ವಿಜ್ಞಾನವು ಚಂಡಭಾಸ್ಕರ. ಅಜ್ಞಾನವೇ ಅವಿದ್ಯೆಯಾಗಿದ್ದರಿಂದ ಇದು ತೊಲಗಿದ ಮೇಲೆ ಮತ್ತೆ ಸಂಸಾರದ ಸುಳಿವೂ ಇರುವುದಿಲ್ಲ (೬೪)

ಇದುವರೆಗೆ ಪಂಚದಶೀಗ್ರಂಥದಲ್ಲಿ ತತ್ತ್ವವಿವೇಕ ಪ್ರಕರಣವನ್ನು ಪರಿಶೀಲಿಸಿದೆವು. ತತ್ತ್ವವೆಂದರೆ ಸತ್ಯವಾದ ವಸ್ತು. ಪರಮಾರ್ಥವಾದ ಸತ್ಯ. ಲೋಕವ್ಯವಹಾರದಲ್ಲಿ ಸತ್ಯವೆಂದರೆ ವಸ್ತುವಿನ ಬಾಹ್ಯಸ್ವರೂಪಕ್ಕೆ ಸಂಬಂಧಿಸಿದ್ದು. ಮಣ್ಣಿಗಿಂತ ಬೇರೆಯಾದದ್ದು ಮರ, ಮರಕ್ಕಿಂತ ಬೇರೆಯಾದದ್ದು ಮಂಚ, ಮಂಚಕ್ಕಿಂತ ಬೇರೆಯಾದದ್ದು ಬಾಗಿಲು - ಎನ್ನುವುದು ಬಾಹ್ಯಸ್ವರೂಪಕ್ಕೆ ಸಂಬಂಧಿಸಿದ ಸತ್ಯ. ಮಣ್ಣಿನಿಂದ ಮರವಾಗಿದೆ, ಮರದಿಂದ ಮಂಚವಾಗಿದೆ, ಮರದಿಂದಲೇ ಬಾಗಿಲೂ ಆದದ್ದು - ಎಂದು ವಿವೇಚಿಸಿಕೊಂಡಾಗ ಮಣ್ಣಿಗೂ ಮರಕ್ಕೂ, ಮರಕ್ಕೂ ಮಂಚಬಾಗಿಲುಗಳಿಗೂ

ಇರುವ ಭೇದ ಸ್ವಲ್ಪ ಕಡಿಮೆಯಾಯಿತು. ಇದೂ ವ್ಯವಹಾರದಲ್ಲಿ ಸತ್ಯವೇ. ತರ್ಕಬುದ್ಧಿಯನ್ನು ಹಚ್ಚಿ ಇನ್ನೂ ಒಳಹೊಕ್ಕು ಶೋಧಿಸಿದಾಗ, ಮಣ್ಣೇ ಮರವಾಗಿದೆ, ಮರವೇ ಮಂಚವೂ ಬಾಗಿಲೂ ಆಗಿದೆ - ಎಂಬ ಇನ್ನೊಂದು ಸತ್ಯ ತಲೆಹಾಕುತ್ತದೆ. ಇನ್ನೂ ಮುಂದಕ್ಕೆ ಹೋಗಿ ವಿವೇಚಿಸಿದಾಗ, ಮರ ಮಂಚ ಬಾಗಿಲು ಇವೆಲ್ಲವೂ ಮಣ್ಣೇ ಎಂದು ತಿಳಿದುಬರುತ್ತದೆ. ಇದೆಲ್ಲವೂ ವ್ಯಾವಹಾರಿಕ ಸತ್ಯ. ಏಕೆಂದರೆ, ಮಣ್ಣಿನರೂಪಕ್ಕೆ ಬಂದಾಗ ಮಣ್ಣು ನಮಗೆ ಪ್ರತ್ಯಕ್ಷವಾಗಿದ್ದು ವ್ಯವಹಾರಗೋಚರವಾಗಿದೆ. ಬುದ್ಧಿಯು ಇನ್ನೂ ಮುಂದಕ್ಕೆ ಹೋಗುವುದಿಲ್ಲ. ಏಕೆಂದರೆ ಮಣ್ಣು ಯಾವುದರಿಂದಾಯಿತು - ಎಂಬುದನ್ನು ಬುದ್ಧಿಯು ತಿಳಿಯಲಾರದು. ಇಂದ್ರಿಯಗಳಾವುವೂ ಬುದ್ಧಿಗೆ ಸಹಾಯ ಮಾಡಲಾರವು. ಊಹೆಯಂಬ ಅನುಮಾನವೂ ಮುಂದೆ ಹೋಗದೆ ನಿಂತುಬಿಡುತ್ತದೆ. ಆಗ ಸರ್ವಜ್ಞನಿಂದ ಆವಿರ್ಭವಿಸಿ ಸರ್ವಜ್ಞವೇ ಆದ ವೇದವು ಮುಂದೆ ಬಂದು, ಮಣ್ಣಿನ ಹಿಂದೆ ಜಲ, ಜಲದ ಹಿಂದೆ ಅಗ್ನಿ, ಅಗ್ನಿಯ ಹಿಂದೆ ವಾಯು, ವಾಯುವಿನ ಹಿಂದೆ ಆಕಾಶ, ಆಕಾಶದ ಹಿಂದೆ ಆತ್ಮವಿದ್ದು ಆತ್ಮನೇ ಸರ್ವಕಾರಣಕಾರಣನೆಂದು ತಿಳಿಸಿಕೊಡುತ್ತದೆ. ಆತ್ಮನ ಹಿಂದೆ ಇನ್ನಾವುದೂ ಇಲ್ಲವೆಂದು ತಿಳಿಸಿಕೊಡುತ್ತದೆ. ಅಲ್ಲಿಗೆ ಆತ್ಮನೇ ಸರ್ವದೃಶ್ಯ ವಸ್ತುಗಳಿಗೂ ಮೂಲ ಎಂದು ತಿಳಿಸಿ ಅದೇ ಸತ್ಯದ ಸತ್ಯವೆನ್ನುತ್ತದೆ. ಇದು ಪರಮಾರ್ಥ ಸತ್ಯ. ಇದರಲ್ಲಿ ಜೀವಬ್ರಹ್ಮೈಕ್ಯ ಮಾತ್ರವಲ್ಲ, ಜಗದ್ ಬ್ರಹ್ಮೈಕ್ಯವೂ ಸೇರಿದೆ - ಬ್ರಹ್ಮಕ್ಕೆ ಅತಿರಿಕ್ತವಾಗಿ ಜೀವವೂ ಇಲ್ಲ ಜಗತ್ತೂ ಇಲ್ಲ ಎಂದು ತಿಳಿಸುತ್ತದೆ ವೇದ. ಇದನ್ನು ಯಾವಾತನು ವಿವೇಚನೆಯಿಂದ ತಿಳಿದುಕೊಂಡು ಮನಸ್ಸನ್ನು ಆತ್ಮನಲ್ಲಿ ಸ್ಥಿರಗೊಳಿಸುವನೋ ಅವನ ಸಂಸಾರಬಂಧವು ಪೂರ್ತಿಯಾಗಿ ಕಳಚುತ್ತದೆ. ಆ ಮನುಷ್ಯನು ಶೀಘ್ರದಲ್ಲಿಯೇ ನಿರತಿಶಯಾನಂದರೂಪವಾದ ಮೋಕ್ಷವನ್ನು ಪಡೆಯುತ್ತಾನೆ. ಬ್ರಹ್ಮವೇ ಆಗಿಬಿಡುತ್ತಾನೆ. ತಾನು ಬ್ರಹ್ಮವೇ ಎಂಬುದನ್ನು ತಿಳಿದುಕೊಳ್ಳುತ್ತಾನೆ. ಇದೇ ಮೋಕ್ಷ.(೭೫).

**ಇಲ್ಲಿಗೆ ತತ್ತ್ವವಿವೇಕಪ್ರಕರಣವು ಸಮಾಪ್ತವಾಯಿತು**

---

## ೨. ಪಂಚಭೂತವಿವೇಕಪ್ರಕರಣ

ಹಿಂದಿನ ಪ್ರಕರಣದಲ್ಲಿ ನಮ್ಮ ದೇಹವನ್ನು ಪಂಚಕೋಶಾತ್ಮಕವಾಗಿ ವಿಭಾಗಿಸಿ, ಜೀವಾತ್ಮನು ಪಂಚಕೋಶಗಳಿಗೆ ಅತಿರಿಕ್ತನೆಂಬುದನ್ನು ತೋರಿಸಿಕೊಡಲಾಯಿತು. ಅನಂತರ ಜೀವಾತ್ಮನು ಪರಬ್ರಹ್ಮವೇ ಹೊರತು ಬೇರೆಯಲ್ಲವೆಂಬುದನ್ನು 'ತತ್ತ್ವಮಸಿ' ಎಂಬ ಮಹಾವಾಕ್ಯದ ಆಧಾರದಿಂದ ಪ್ರತಿಪಾದಿಸಿದ್ದಾಯಿತು. ಜೀವಬ್ರಹ್ಮೈಕ್ಯವೇ ಪರಮಾರ್ಥಸತ್ಯವೆಂದೂ ತಿಳಿಸಲಾಯಿತು. ಈಗ ಹುಟ್ಟುವ ಪ್ರಶ್ನೆ ಏನೆಂದರೆ, ನಮ್ಮ ಆತ್ಮನು ದೇಹಾತಿರಿಕ್ತನೆಂದು ಪ್ರತಿಪಾದಿಸಿದ್ದೀರಿ. ಅದನ್ನು ಒಪ್ಪಿಕೊಳ್ಳುತ್ತೇವೆ. ಆದರೆ ಪರಬ್ರಹ್ಮವೂ ಜೀವಾತ್ಮನೂ ಒಂದೇ ಎಂದು ತಿಳಿಸಿದಿರಷ್ಟೆ, ಈ ಪರಬ್ರಹ್ಮದ ಸ್ವರೂಪವೇನು? ನಮ್ಮ ದೇಹಕ್ಕಿಂತ ಅತಿರಿಕ್ತವಾಗಿ ವಿಶಾಲವಾದ ಈ ಜಗತ್ತು ಇದೆ. ಜಗತ್ತಿಗೂ ಪರಬ್ರಹ್ಮಕ್ಕೂ ಸಂಬಂಧವೇನು? ಅದು ಜಗತ್ತಿಗಿಂತ ಬೇರೆಯೆ? ಅಥವಾ ಜಗತ್ತಿನಲ್ಲೊಂದೆ? ಶ್ರುತಿಯಾದರೋ **'ಯತೋ ವಾಚೋ ನಿವರ್ತಂತೇ, ಅಪ್ರಾಪ್ಯ ಮನಸಾ ಸಹ'** (ತೈ.ಉ.೨-೪) ಎಂದು ಹೇಳುತ್ತದೆ. ವಾಕ್ಕು ಮನಸ್ಸು - ಇವೆರಡು ಪರಮಾತ್ಮನನ್ನು ಮುಟ್ಟಲಾರದೆ ಹಿಂತಿರುಗಿಬಿಡುತ್ತವೆ ಎಂದರ್ಥ. ವಾಕ್ಕು ಯಾವಾಗಲೂ ಜಾತಿ, ಗುಣ, ಕ್ರಿಯೆಗಳಲ್ಲಿ ಒಂದಾದರೂ ಇರುವ ವಸ್ತುವನ್ನು ವರ್ಣಿಸೀತು. ಮನಸ್ಸೂ ಸಹ ಅಂತಹ ವಸ್ತುವನ್ನೇ ಗ್ರಹಿಸಬಲ್ಲದು. ನಾಮರೂಪಗಳಿಲ್ಲದ ವಸ್ತು ನಮ್ಮ ಅನುಭವಕ್ಕೆ ಬರುವುದೇ ಇಲ್ಲವಾದ್ದರಿಂದ ನಾಮರೂಪಗಳ ಸಂಸ್ಕಾರವನ್ನು ಪಡೆದ ಮನಸ್ಸು ನಾಮರೂಪಗಳಿಲ್ಲದ್ದನ್ನು ಹೇಗೆ ತಾನೇ ಊಹಿಸಿಕೊಂಡೀತು? ಶ್ರುತಿಯಾದರೋ, **''ಸದೇವ ಸೋಮ್ಯೇದಮಗ್ರ ಆಸೀತ್, ಏಕಮೇವಾ-ದ್ವಿತೀಯಂ''** (ಛಾಂ.ಉ.೬-೨-೧) ಎನ್ನುತ್ತದೆ. ಯಾವುದನ್ನು 'ಸತ್ = ಇದೆ' ಎಂದು ಮಾತ್ರ ಹೇಳಬಹುದೋ ಇನ್ನಾವ ವಿಶೇಷಣವನ್ನೂ ಕೊಡಲು ಸಾಧ್ಯವೇ ಇಲ್ಲವೋ ಅದು ಸೃಷ್ಟಿಯ ಆದಿಯಲ್ಲಿತ್ತು. ಅದು ಒಂದೇ ಒಂದಾಗಿತ್ತು. ಇನ್ನೊಂದು ವಸ್ತುವೇ ಇರಲಿಲ್ಲ. ಈ ಪ್ರಕಾರವಾಗಿ ವೇದವು ಹೇಳುತ್ತದೆ. ಈಗ ಜಗತ್ತಿನಲ್ಲಿ ಅಸಂಖ್ಯಾತ ವಸ್ತುಗಳು ಅಸಂಖ್ಯಾತ ನಾಮರೂಪಗಳೊಂದಿಗೆ ಕಾಣಿಸಿಕೊಳ್ಳುತ್ತಿವೆ. ಇವು ಹೇಗೆ ಬಂದವು? ಇತ್ಯಾದಿ ಪ್ರಶ್ನೆಗಳು ಹುಟ್ಟುತ್ತವೆ.

ಇದನ್ನು ತಿಳಿಸಬೇಕಾದರೆ ಜಗತ್ತಿನ ಸ್ವರೂಪವನ್ನು ಮೊದಲು ಕಂಡುಕೊಳ್ಳಬೇಕು. ಶರೀರವು ಹೇಗೆ ಪಂಚಕೋಶಾತ್ಮಕವೋ ಹಾಗೆ ಈ ಜಗತ್ತು ಪಂಚಭೂತಾತ್ಮಕ, ಅಸಂಖ್ಯಾತ ಪದಾರ್ಥಗಳನ್ನು ಐದು ಪದಾರ್ಥಗಳಲ್ಲಿ ಅಡಗಿಸಿ ಬಿಡಬಹುದು. ಈ ಐದು ಮಹಾಭೂತಗಳ ಗುಣಸ್ವರೂಪಗಳನ್ನು ಬಿಡಿಸಿ ತಿಳಿದುಕೊಂಡಾಗ ಜಗತ್ತಿನ ಪರಿಚಯವಾಗುತ್ತದೆ. ದೇಹವು ಜೀವಾತ್ಮನಿಗೆ ಹೇಗೆ ಉಪಾಧಿಯೋ ಹಾಗೆ ಈ ಜಗತ್ತು ಪರಮಾತ್ಮನಿಗೆ ಉಪಾಧಿಯೇ ಹೊರತು ಇದರ ಒಂದೇ ಒಂದು ಗುಣಸ್ವರೂಪವೂ ಆತನಿಗಿಲ್ಲವೆಂಬುದನ್ನರಿತಾಗ, 'ನ-ನ' ಎಂಬ ನಿಷೇಧರೂಪದಲ್ಲಿ ಆ ಸದ್ವಸ್ತುವಿನ ಪರಿಚಯವಾಗುವುದೆಂದು ಈಗ ಭೂತಪಂಚಕವನ್ನು ವಿವೇಚಿಸಲಾಗುತ್ತದೆ (೧). ಆಕಾಶಾದಿ ಪಂಚಮಹಾಭೂತಗಳು ತಮೋಗುಣ ಪ್ರಧಾನವಾದ ಪ್ರಕೃತಿಯಿಂದ ಕ್ರಮವಾಗಿ ಹುಟ್ಟಿದವೆಂಬುದನ್ನು ಹಿಂದಿನ ಪ್ರಕರಣದಲ್ಲಿ ಹೇಳಿದೆ. ಶಬ್ದ, ಸ್ಪರ್ಶ, ರೂಪ, ರಸ, ಗಂಧ - ಇವ್ವೈದು ಗುಣಗಳು ನಮ್ಮ ಐದು ಇಂದ್ರಿಯ ಗಳಿಗೆ ಗೋಚರವಾಗುತ್ತವೆಯಷ್ಟೆ ಇವು ಪಂಚಭೂತಗಳ ಗುಣಗಳು. ಇವು ಯಾವ ಪ್ರಕಾರದಲ್ಲಿ ಸೇರಿಕೊಂಡಿವೆಯೆಂದರೆ, ಆಕಾಶದಲ್ಲಿ ಶಬ್ದವೆಂಬ ಒಂದು ಗುಣವು ಮಾತ್ರ ಇದೆ. ವಾಯುವಿನಲ್ಲಿ ಶಬ್ದ, ಸ್ಪರ್ಶಗಳೆಂಬ ಎರಡು ಗುಣಗಳಿವೆ. ಅಗ್ನಿಯಲ್ಲಿ ಶಬ್ದ ಸ್ಪರ್ಶ, ರೂಪಗಳೆಂಬ ಮೂರುಗುಣಗಳು. ಜಲದಲ್ಲಿ ಈ ಮೂರರ ಜೊತೆಗೆ ರಸವೆಂಬ ನಾಲ್ಕನೆಯ ಗುಣವೂ ಇದೆ. ಪೃಥ್ವಿಯಲ್ಲಿ ಶಬ್ದಾದಿ ಪಂಚಗುಣಗಳೂ ಇವೆ. ಉದಾಹರಣೆಯಿಂದ ಇದನ್ನು ಸ್ಪಷ್ಟಪಡಿಸಬಹುದು (೨). ಶಬ್ದವು ಆಕಾಶದ ಗುಣ. ಪಂಚದಶಿಯ ಮೂಲಶ್ಲೋಕದಲ್ಲಿ 'ಪ್ರತಿಧ್ವನಿರ್ವಿಯಚ್ಛಬ್ದಃ' ಎಂದಿದೆ. ಶ್ರೀರಾಮಕೃಷ್ಣ ಪಂಡಿತರು ಬರೆದ ವ್ಯಾಖ್ಯಾನದಲ್ಲಿ 'ಈ ಶಬ್ದವು ಪ್ರತಿಧ್ವನಿರೂಪ' ಎಂದಿದೆ. ಹೀಗೆ ಹೇಳಲು ಕಾರಣವೇನಿರಬಹುದು? ನೀರಿನಲ್ಲಿ ಹುಟ್ಟಿದ ಅಲೆಯು ಇನ್ನೊಂದು ಅಲೆಯನ್ನೂ ಅದು ಮತ್ತೊಂದನ್ನೂ ಹುಟ್ಟಿಸುತ್ತ ಹೋಗುವಂತೆ ವೀಚೀತರಂಗ ನ್ಯಾಯದಿಂದ ಶಬ್ದವು ಪ್ರತಿಧ್ವನಿಸುತ್ತ ನಮ್ಮ ಕಿವಿಯವರೆಗೆ ಬರುತ್ತದೆಯೆಂದು ಹೇಳುವುದುಂಟು. ಹಾಗೆ ಹುಟ್ಟಿದ ಇನ್ನೊಂದು ಶಬ್ದವನ್ನು ಪ್ರತಿಧ್ವನಿಯೆಂದು ಹೇಳಬಹುದೆ? ಹಾಗಿದ್ದರೆ ಮೊದಲು ಹುಟ್ಟಿದ ಶಬ್ದವು ಯಾವುದರ ಗುಣ? ಇದು ಸ್ಪಷ್ಟವಾಗಿಲ್ಲ. ಶಬ್ದವು ಧ್ವನ್ಯಾತ್ಮಕ, ವರ್ಣಾತ್ಮಕ ಎಂದು ಎರಡು ವಿಧ. ಭೇರೀಮೃದಂಗಾದಿಗಳಿಂದ ಹುಟ್ಟುವ ಶಬ್ದವು

ಧ್ವನ್ಯಾತ್ಮಕ. ಅ, ಆ, ಕ, ಖ - ಇತ್ಯಾದ್ಯಕ್ಷರಗಳಿಂದ ಕೂಡಿದ ಶಬ್ದವು ವರ್ಣಾತ್ಮಕ. ವರ್ಣಾತ್ಮಕವು ದ್ರವಯ್ಯವೆಂದೂ ಧ್ವನ್ಯಾತ್ಮಕವುಆಕಾಶದ ಗುಣವೆಂದೂ ತಿಳಿಯಬೇಕು. ಎಲ್ಲ ಶಾಸ್ತ್ರಗ್ರಂಥಗಳಲ್ಲಿಯೂ ಶಬ್ದವು ಆಕಾಶದ ಗುಣ ಎಂದಿಷ್ಟೇ ಬರೆಯುವುದುಂಟು. ಪ್ರಕೃತದಲ್ಲಿ ಪ್ರತಿಧ್ವನಿಶಬ್ದಕ್ಕೆ ಶಬ್ದವೆಂಬ ಸಾಮಾನ್ಯ ಅರ್ಥವು ವಿವಕ್ಷಿತವೆ ಅಥವಾ ಶಬ್ದವಿಶೇಷವೆ ಎಂಬುದು ಚಿಂತನೀಯ. ಬಹುಶಃ ಧ್ವನಿ, ವರ್ಣ - ಎಂಬ ಎಲ್ಲ ಬಗೆಯ ಶಬ್ದವೂ ಆಕಾಶದ ಗುಣ ಎಂಬುದು ಗ್ರಂಥಕಾರರ ಅಭಿಪ್ರಾಯವಾಗಿರಬೇಕು. ಆಕಾಶದಲ್ಲಿ ಶಬ್ದ ಒಂದೇ ಗುಣವಿದೆ ಎಂದರ್ಥ. ನೈಯಾಯಿಕರು ಆಕಾಶದಲ್ಲಿ ಮಾತ್ರ ಶಬ್ದಗುಣವಿದೆ ಎನ್ನುತ್ತಾರೆ. ವೇದಾಂತಿಗಳು ಅದನ್ನೊಪ್ಪುವುದಿಲ್ಲ. ಶಬ್ದವು ಪಂಚಭೂತಗಳಲ್ಲಿಯೂ ಇದೆ. ಆಕಾಶದಲ್ಲಿ ಶಬ್ದವು ಮಾತ್ರವಿದೆ - ಎನ್ನುತ್ತಾರೆ. ವಾಯುವಿನಲ್ಲಿ ಬೀ-ಸೀ ಎಂದು ಶಬ್ದವಿರುವುದು ಎಲ್ಲರಿಗೂ ತಿಳಿದಿದೆ. ಬೀ-ಸೀ ಎನ್ನುವುದು ಅನುಕರಣ ಶಬ್ದ. ಭೋರ್ ಎಂದೂ ಶಬ್ದವಾಗಬಹುದು. ಮತ್ತು ವಾಯುವಿನಲ್ಲಿ ಉಷ್ಣವೂ ಅಲ್ಲದ ಶೀತವೂ ಅಲ್ಲದ ಸ್ಪರ್ಶವುಂಟು. ಹೀಗೆ ವಾಯುವಿನಲ್ಲಿ ಎರಡು ಗುಣಗಳಾದವು (೩). ಅಗ್ನಿಯಲ್ಲಿ 'ಭುಗು ಭುಗು' ಎಂಬ ಧ್ವನಿ, ಉಷ್ಣಸ್ಪರ್ಶ, ಪ್ರಭೆಯೆನಿಸಿದ ರೂಪ - ಎಂಬ ಮೂರುಗುಣಗಳಿವೆ. ಜಲದಲ್ಲಿ 'ಬುಲು ಬುಲು' ಧ್ವನಿ, ಶೀತಸ್ಪರ್ಶ, ಶುಕ್ಲವರ್ಣವೆಂಬ ಸ್ವಚ್ಛರೂಪಗಳೂ ಇವೆ. ಇದರಲ್ಲಿರುವ ರಸವು ಮಾಧುರ್ಯಮಾತ್ರ (೪). ಪೃಥ್ವಿಯಲ್ಲಿ 'ಕಟಕಟ' ಎಂಬ ಶಬ್ದ, ಕಾಠಿಣ್ಯವೆಂಬ ಸ್ಪರ್ಶ, ಕಪ್ಪು, ಕೆಂಪು ಇತ್ಯಾದಿ ಮಿಶ್ರವಾದ ಚಿತ್ರರೂಪ - ಇವು ಇರುತ್ತವೆ. ಅಲ್ಲದೆ ಮಾಧುರ್ಯ, ಹುಳಿ, ಉಪ್ಪು, ಕಹಿ - ಮುಂತಾದ ಷಡ್ರಸಗಳೂ ಇವೆ. ಗಂಧವೂ ಇದೆ. ಈ ರೀತಿಯಾದ ಗುಣವಿಭಾಗವು ವೈಜ್ಞಾನಿಕವಾದದ್ದು. ಈ ಪಂಚಭೂತಗಳ ಉತ್ಪತ್ತಿವಿಧಾನವನ್ನು ಹಿಂದೆ ತಿಳಿಸಿದೆ. ಆತ್ಮನಿಂದ ಆಕಾಶ, ಆಕಾಶದಿಂದ ವಾಯು, ಅದರಿಂದ ಅಗ್ನಿ, ಅದರಿಂದ ಜಲ, ಜಲದಿಂದ ಪೃಥ್ವಿ, ಹೀಗೆ ಹುಟ್ಟಿರುತ್ತವೆ. ಆತ್ಮನಲ್ಲಿ ರೂಪಾದಿ ಗುಣಗಳೊಂದೂ ಇಲ್ಲ. ಆತನ ಮಾಯಾಶಕ್ತಿಯಿಂದ ಆಕಾಶಾದಿಗಳು ಜನಿಸಿದವು. ಆ ಮಾಯಾಶಕ್ತಿಯನ್ನೇ ತಮೋಗುಣಪ್ರಧಾನವಾದ ಪ್ರಕೃತಿ ಎಂದು ಹೇಳಿದ್ದಾಗಿದೆ. ಆಕಾಶಾದಿಗಳು ತಮ್ಮ ಮುಂದುಮುಂದಿನ ವಸ್ತುವಿನ ಉತ್ಪತ್ತಿಗೆ ಉಪಾದಾನಕಾರಣಗಳು. ಪೃಥ್ವಿಯು ವನಸ್ಪತಿ ಮೊದಲಾದವುಗಳಿಗೆ ಉಪಾದಾನಕಾರಣ. ಆತ್ಮನು ನೇರವಾಗಿ ಸೃಷ್ಟಿಗೆ ಉಪಾದಾನಕಾರಣವಲ್ಲ. ಆತನ

ಅಚಿಂತ್ಯವಾದ ಮಾಯಾಶಕ್ತಿಯೇ ಉಪಾದಾನಕಾರಣವಾದದ್ದು. ಶಕ್ತಿಯು ಆತ್ಮನಿಂದ ಅತಿರಿಕ್ತವಾಗಿಲ್ಲವಾದ್ದರಿಂದ ಆತ್ಮನಿಂದಲೇ ಆಕಾಶಾದಿಗಳ ಸೃಷ್ಟಿಯೆಂದು ಹೇಳುವುದುಂಟು. ಆಕಾಶದಲ್ಲಿ ಶಬ್ದಗುಣವು ಅಭಿವ್ಯಕ್ತವಾಗಿದೆ. ಅದರಿಂದ ಮುಂದಿನ ವಾಯುವಿನಲ್ಲಿ ಸ್ಪರ್ಶಗುಣವು ಅಭಿವ್ಯಕ್ತವಾದಾಗ ಹಿಂದೆ ಅಭಿವ್ಯಕ್ತವಾಗಿದ್ದ ಶಬ್ದಗುಣವು ಎಲ್ಲಿಗೆ ಹೋದೀತು? ಆಕಾಶವೇ ವಾಯುರೂಪವನ್ನು ತಳೆದಿದೆ. ಹಾಗೆ ವಾಯುವೇ ಅಗ್ನಿರೂಪವನ್ನು ತಳೆಯಿತು. ಅಗ್ನಿಯು ಜಲರೂಪವನ್ನೂ ಜಲವು ಪೃಥ್ವಿರೂಪವನ್ನೂ ತಳೆದವು. ಆದ್ದರಿಂದ ಹಿಂದಿನ ಕಾರಣದಲ್ಲಿದ್ದ ಗುಣವು ಕಾರ್ಯದಲ್ಲಿ ಕಾಣಿಸಬೇಕಾದದ್ದು ನ್ಯಾಯವಾಗಿದೆ. ಇದೇ ನ್ಯಾಯವನ್ನನುಸರಿಸಿ ಶಬ್ದವೂ ವಾಯ್ವಾದಿಭೂತಗಳಲ್ಲಿ ಇರಬೇಕಾದದ್ದು ಯುಕ್ತವಾಗಿದೆ. ಆದ್ದರಿಂದ ವೇದಾಂತಿಗಳು ಹೇಳುವುದು ಸರಿಯಾದದ್ದು. ಆಕಾಶದಲ್ಲಿ ಮಾತ್ರ ಶಬ್ದವಿದೆ ಎಂಬ ತಾರ್ಕಿಕರ ವಾದವು ಸರಿ ಎನಿಸುವುದಿಲ್ಲ. ತಾರ್ಕಿಕರು ಶಬ್ದಾದಿ ಪಂಚಗುಣಗಳೊಡನೆ ಸಂಖ್ಯಾ, ಪರಿಮಾಣ, ಸಂಯೋಗ - ಮುಂತಾದವನ್ನು ಸೇರಿಸಿ ಒಟ್ಟು ೨೪ ಗುಣಗಳಿವೆಯೆನ್ನುತ್ತಾರೆ. ಕಾರುಣ್ಯ, ಕ್ರೌರ್ಯ - ಮುಂತಾದವನ್ನು ಇವುಗಳಲ್ಲಿಯೇ ಅಂತರ್ಭಾವ ಮಾಡುತ್ತಾರೆ. ಆದರೆ ಪಂಚಜ್ಞಾನೇಂದ್ರಿಯಗಳಿಗೆ ಗೋಚರವಾಗತಕ್ಕವು ಶಬ್ದಾದಿ ಪಂಚಗುಣಗಳು ಮಾತ್ರ. ಸಂಖ್ಯಾ, ಸಂಯೋಗ - ಮೊದಲಾದವುಗಳಲ್ಲಿ ಕೆಲವು ವ್ಯವಹಾರಕ್ಕಾಗಿ ಬುದ್ಧಿಕಲ್ಪಿತವಾದವು. ಕಾರುಣ್ಯ ಮೊದಲಾದವು ಅಂತಃಕರಣ ವೃತ್ತಿಗಳು. ಅವು ಮನೋಗಮ್ಯವಾದವು.

ಪಂಚಭೂತಗಳಲ್ಲಿ ಆಕಾಶವು ಒಂದು ಸದ್ವಸ್ತು ಅಲ್ಲವೆಂದೂ ಅದು ಬರಿಯ ಶೂನ್ಯವೆಂದೂ ಬೌದ್ಧರೂ ಚಾರ್ವಾಕರೂ ಹೇಳುತ್ತಾರೆ. ಅವರು ಭೂತಚತುಷ್ಟಯ ವಾದಿಗಳು. ಈಗ ಆಧುನಿಕ ವಿಜ್ಞಾನಿಗಳು ಆಕಾಶವು ಒಂದು ಸದ್ವಸ್ತುವೆಂದೂ ಅದರಿಂದ ಅತಿಸೂಕ್ಷ್ಮವಸ್ತುಕಣಗಳು ಹುಟ್ಟುತ್ತವೆಯೆಂದೂ ಒಪ್ಪಿದ್ದಾರೆ. "Quantum Physics has accepted space as plenum. It generates particles; It re-absorbs particles. It is something positive. It is not void. Einsteen has accepted space as a postive entity. Advaitha Vedantha had a clear understanding of space, much clearer than modern quantum physics."

-See Maya in Physics by N.C.Panda, Page 376

ಜಗತ್ತಿನಲ್ಲಿರುವ ಆತ್ಮೇತರವಾದ ಈ ಮಾಯಿಕ ಪದಾರ್ಥಗಳನ್ನು ಸ್ಥೂಲವಾಗಿ ಪಂಚಭೂತಗಳೆಂದು ವಿಂಗಡಿಸಿದ್ದಾರೆ. ಪೃಥ್ವೀ, ಜಲ ಮೊದಲಾದವು ಶಾಸ್ತ್ರಕಾರರ ಸಂಜ್ಞಾಶಬ್ದಗಳು. ಪೃಥ್ವಿಯೆಂದರೆ ನಾವು ತುಳಿಯುವ ಮಣ್ಣು, ಜಲವೆಂದರೆ ಕುಡಿಯುವ ನೀರು - ಎಂದು ಮಾತ್ರ ತಿಳಿಯಬೇಕಾಗಿಲ್ಲ. ಈ ಶಬ್ದಗಳು ಕೆಲವು ಗುಣಸ್ವಭಾವಗಳಿರುವ ವಸ್ತುಗಳಿಗೆ ಸಂಕೇತಮಾತ್ರ. ಇವನ್ನು Solid(ಘನಪದಾರ್ಥ), Liquid(ದ್ರವ), Gas(ವಾಯುರೂಪ), Energy(ಶಕ್ತಿ-ಅಗ್ನಿ), Space(ಆಕಾಶ) - ಎಂದು ವಿಂಗಡಿಸುವುದು ಹೆಚ್ಚು ವೈಜ್ಞಾನಿಕವಾಗುತ್ತದೆ (೫). ಇದುವರೆಗೆ ಗಂಧದ ವಿಭಾಗವನ್ನು ಹೇಳಿರಲಿಲ್ಲ. ಗಂಧವು ಸುಗಂಧ, ದುರ್ಗಂಧ ಎಂದು ಎರಡು ವಿಧ. ಅಲ್ಲಿಗೆ ಎಲ್ಲ ಗುಣಗಳನ್ನೂ ಸರಿಯಾಗಿ ತಿಳಿಸಿದ್ದಾಯಿತು. ಸತ್ತ್ವಗುಣ ಪ್ರಧಾನವಾದ ಮಾಯೆಯಿಂದ ಐದು ಜ್ಞಾನೇಂದ್ರಿಯಗಳು ಹುಟ್ಟಿದವಷ್ಟೆ. ಶ್ರೋತ್ರ, ತ್ವಕ್, ಚಕ್ಷು, ಜಿಹ್ವೆ, ನಾಸಿಕಾ - ಎಂದು ಈ ಜ್ಞಾನೇಂದ್ರಿಯಗಳೇ ಅವು (೬). ಶ್ರೋತ್ರೇಂದ್ರಿಯವೆಂದರೆ ನಮಗೆ ಕಾಣಿಸುವ ಕಿವಿಯೆಂದೂ, ತ್ವಗಿಂದ್ರಿಯವೆಂದರೆ ಕಾಣಿಸುವ ಚರ್ಮವೆಂದೂ ತಿಳಿಯಕೂಡದು. ಇಂದ್ರಿಯಗಳು ಬಹುಸೂಕ್ಷ್ಮವಾದವು, ಕಣ್ಣಿಗೆ ಕಾಣಿಸತಕ್ಕವಲ್ಲ. ನಮಗೆ ಕಾಣಿಸುವ ಕಿವಿ ಮೊದಲಾದವು ಇಂದ್ರಿಯಗಳಿರುವ ಗೋಳಕಗಳು. ಶ್ರೋತ್ರೇಂದ್ರಿಯ, ನೇತ್ರೇಂದ್ರಿಯ, ಮೊದಲಾದ ಇಂದ್ರಿಯಗಳಿರುವ ಗೋಳಕಗಳನ್ನೂ ನಾವು ಕಿವಿ, ಕಣ್ಣು - ಇತ್ಯಾದಿ ಹೆಸರುಗಳಿಂದ ಕರೆಯುತ್ತಿದ್ದೇವೆ. ಅನುಮಾನ ಪ್ರಮಾಣದಿಂದ ಇಂದ್ರಿಯಗಳಿವೆಯೆಂದು ಸಾಧಿಸಬಹುದು. ಹೇಗೆಂದರೆ, ಪ್ರತಿಯೊಂದು ಕ್ರಿಯೆ ಹುಟ್ಟುವುದಕ್ಕೂ ಒಂದು ಸಾಧನವಿದ್ದೇ ಇರಬೇಕು. ಮರವನ್ನು ಕತ್ತರಿಸುವುದಕ್ಕೆ ಕೊಡಲಿ ಬೇಕು. ಬಟ್ಟೆಯ ಕೊಳೆಯನ್ನು ಹೋಗಲಾಡಿಸಲು ನೀರು ಬೇಕು. ಹಸಿವನ್ನು ಹೋಗಲಾಡಿಸಲು ಅನ್ನಬೇಕು. ಹಾಗೆ ಕ್ರಿಯೆಯನ್ನು ನಡೆಸಲು ಸಾಧನ ಅವಶ್ಯಕ. ಮಾವಿನ ಹಣ್ಣಿನ ರೂಪವನ್ನು ನೋಡುತ್ತೇವೆ. ಅದರ ಗಂಧವನ್ನು ಮೂಸುತ್ತೇವೆ. ತಿಂದು ರುಚಿಯನ್ನು ಪಡೆಯುತ್ತೇವೆ. ನೋಡುವುದು ಮೂಸುವುದು - ಮುಂತಾದ ಕ್ರಿಯೆಗೆ ಸಾಧನವು ಯಾವುದು? ಆ ಸಾಧನವೇ ಇಂದ್ರಿಯ, ಸ್ಥೂಲವಾದ ಗೋಳಕವಲ್ಲ. ಕುರುಡನಿಗೆ ನೇತ್ರಗೋಳಕವಿದ್ದರೂ ನೋಡಲಾರ. ಕಿವಿಯಿದ್ದರೂ ಕಿವುಡನು ಕೇಳಲಾರ. ಇತ್ಯಾದಿ ಕಾರಣಗಳಿಂದ ಇಂದ್ರಿಯಗಳಿವೆಯೆಂದು

ಒಪ್ಪಬೇಕಾಗುತ್ತದೆ. ಇವು ಬಹಿರ್ಮುಖಿಗಳು. ಹೊರಗಿನವನ್ನು ಗ್ರಹಿಸತಕ್ಕವು, ಅಂತರ್ಮುಖಿಗಳಲ್ಲ. ಆದುದರಿಂದ ಶ್ರುತಿಯು **'ಪರಾಂಚಿ ಖಾನಿ ವ್ಯತೃಣತ್ ಸ್ವಯಂಭೂಃ'** (ಕಠ.ಉ.೪-೧) ಎಂದು ಹೇಳಿದೆ ಖಾನಿ - ಇಂದ್ರಿಯಗಳನ್ನು, ಪರಾಂಚಿ - ಬಹಿರ್ಮುಖವಾಗಿ, ಸ್ವಯಂಭೂಃ - ಪರಮಾತ್ಮನು, ವ್ಯತೃಣತ್ - ನಿರ್ಮಿಸಿ ಹಿಂಸೆಪಡಿಸಿದ್ದಾನೆ - ಎಂದರ್ಥ. ಪರಮಾರ್ಥದೃಷ್ಟಿಯನ್ನು ತಳೆಯಲಾರದವನು ಬಾಹ್ಯವಸ್ತುಗಳಿಗೆ ವಶನಾಗಿ ಹಿಂಸೆಗೆ ಗುರಿಯಾಗುತ್ತಾನೆ ಎಂದರ್ಥ. ಮನುಷ್ಯನು ಯಾವಾಗಲೂ ಬಹಿರ್ಮುಖಿ; ಹೊರಗಡೆ ಏನಾಗುತ್ತದೆ, ಏನು ನಡೆಯುತ್ತದೆ - ಎಂದು ತಿಳಿಯಲು ಹವಣಿಸುತ್ತಲೇ ಇರುತ್ತಾನೆ. ಅಂತರ್ಮುಖಿನಾಗಿ ತಾನು ಯಾರು ಎಂದು ವಿಚಾರಿಸುವುದೇ ಇಲ್ಲ(೭). ನಾವು ಎರಡು ಕಿವಿಗಳನ್ನೂ ಬೆರಳುಗಳಿಂದ ಮುಚ್ಚಿಕೊಂಡಾಗ, ಒಂದು ಬಗೆಯ ಆಂತರ ಶಬ್ದವು 'ಭೋ' ಎಂದು ಕೇಳಿ ಬರುವುದುಂಟು. ಇದು ಹೊರಗಡೆಯ ಶಬ್ದವಲ್ಲ. ಪ್ರಾಣವಾಯುವಿನಲ್ಲಿಯೂ ಜಠರಾಗ್ನಿಯಲ್ಲಿಯೂ ಉದ್ಭವಿಸುವ ಆಂತರ ಶಬ್ದ ಇದು(೮). ನೀರನ್ನು ಕುಡಿಯುವಾಗ, ಬಿಸಿಯಾದ ಅನ್ನವನ್ನು ತಿಂದಾಗ ಬಾಯಲ್ಲಿ, ಗಂಟಲಲ್ಲಿ, ಉದರದಲ್ಲಿ ಆಗುವ ಶೈತ್ಯ, ಉಷ್ಣಸ್ಪರ್ಶಗಳು ತಿಳಿಯುತ್ತವೆ. ಕಣ್ಣು ಮುಚ್ಚಿದಾಗ ಕಪ್ಪಾಗಿರುವಂತೆ ತೋರುತ್ತದೆ. ಅದು ದೇಹದೊಳಗಡೆ ಇರುವ ಕತ್ತಲೆ ಎನ್ನಬಹುದು. ಕತ್ತಲೆಗೂ ರೂಪ ಉಂಟು, ಅದು ಕಾಣುತ್ತದೆ - ಎಂದೂ ಅಭಿಪ್ರಾಯವಿದೆ. ಅದನ್ನನುಸರಿಸಿ ಈ ಮಾತು ಬಂದಿದೆ(೯).

ಪಂಚಜ್ಞಾನೇಂದ್ರಿಯಗಳಿಂದ ಐದು ವಿಷಯಗಳ ಜ್ಞಾನವಾಗುತ್ತದೆ ಎಂದು ಹೇಳಿದ್ದಾಯಿತು. ಈಗ ಕರ್ಮೇಂದ್ರಿಯಗಳಿಂದಾಗುವ ಕ್ರಿಯೆಗಳೇನೆಂಬುದನ್ನು ನೋಡೋಣ. ಕರ್ಮೇಂದ್ರಿಯಗಳಿರುವುದೂ ಐದು. ಪಂಚಭೂತಗಳ ರಜೋಽಂಶಗಳಿಂದ ವಾಕ್, ಪಾಣಿ, ಪಾದ, ಗುದ, ಉಪಸ್ಥ - ಎಂಬ ಈ ಕರ್ಮೇಂದ್ರಿಯಗಳು ಹುಟ್ಟಿವೆ. ವಾಗಿಂದ್ರಿಯದ ಕ್ರಿಯೆ ಮಾತಾಡುವುದು, ಪಾಣೇಂದ್ರಿಯದ ಕ್ರಿಯೆ ದಾನ, ಆದಾನಗಳು. ಪಾದದ ಕೆಲಸ ಗಮನ, ಗುದದ ಕೆಲಸ ವಿಸರ್ಜನೆ. ಉಪಸ್ಥದ ಕ್ರಿಯೆ ಆನಂದಾನುಭವ. ಗುದ ಎಂಬುದು ಉಪಸ್ಥಕ್ಕೂ ಉಪಲಕ್ಷಣ. ಅದು ಮೂತ್ರ ವಿಸರ್ಜನ ಕ್ರಿಯೆಯನ್ನೂ ಗುದವು ಮಲವಿಸರ್ಜನ ಕ್ರಿಯೆಯನ್ನೂ ಮಾಡುತ್ತವೆ. ಈ ವಿಸರ್ಜನಕ್ರಿಯೆಗೆ ಅಪಾನವಾಯುವಿನ ಸಹಕಾರವಿರುತ್ತದೆ. ವಿಶೇಷವೇನೆಂದರೆ, ವಾಗಿಂದ್ರಿಯವು

ಬಾಯಿಯಲ್ಲಿದೆ. ಬಾಯಿಯ ಜಿಹ್ವಾಗ್ರದಲ್ಲಿ ರಸನೆಯೆಂಬ ಜ್ಞಾನೇಂದ್ರಿಯವೂ ಇದೆ. ಹೀಗೆ ಎರಡು ಇಂದ್ರಿಯಗಳು ಒಂದೆಡೆ ಸೇರಿವೆ. ಅವುಗಳ ಕಾರ್ಯ ಬೇರೆ ಬೇರೆ. ಕೃಷಿ, ವಾಣಿಜ್ಯ, ಇನ್ನಿತರ ನಾನಾ ವಿಧ ಕ್ರಿಯೆಗಳು - ಎಲ್ಲವೂ ಮೇಲೆ ಹೇಳಿದ ಐದು ಕ್ರಿಯೆಗಳಲ್ಲಿಯೇ ಸೇರಿಹೋಗುತ್ತವೆಯೆಂದು ತಿಳಿಯಬೇಕು. ಐದು ಬಗೆಯ ಕ್ರಿಯೆಗಳಲ್ಲಿ ಎಲ್ಲ ಬಗೆಯ ಕರ್ಮಗಳು ಅಂತರ್ಭೂತವಾಗುತ್ತವೆ(೧೦). ಇಲ್ಲಿಯೂ ಸಹ ಮುಖ, ಕೈ, ಕಾಲು - ಮೊದಲಾದವು ಇಂದ್ರಿಯಗಳಿಗೆ ಆಧಾರಗಳಾದ ಗೋಳಕಗಳೆಂದು ತಿಳಿಯಬೇಕು. ಕರ್ಮೇಂದ್ರಿಯಗಳು ಬಹಳ ಸೂಕ್ಷ್ಮವಾಗಿದ್ದು ಈ ಗೋಳಕಗಳಲ್ಲಿರುತ್ತವೆ (೧೧). ಇನ್ನು ಮನಸ್ಸು ಎಂಬುದು ಈ ಹತ್ತು ಇಂದ್ರಿಯಗಳ ಅಧ್ಯಕ್ಷ. ಇದರ ಸ್ಥಾನ ಹೃದಯಕಮಲ. ಮನಸ್ಸನ್ನು ಅಂತಃಕರಣ, ಅಂತರಿಂದ್ರಿಯ ಎನ್ನುತ್ತಾರೆ. ಇದು ಮೇಲೆ ಹೇಳಿದ ಹತ್ತು ಇಂದ್ರಿಯಗಳ ಸಹಾಯವಿಲ್ಲದೆ ಬಾಹ್ಯವಾದ ಕಾರ್ಯದಲ್ಲಿ ಸ್ವತಂತ್ರವಾಗಿ ಪ್ರವರ್ತಿಸಲಾರದು. ಮನಸ್ಸು ಹೊರಗಿನದನ್ನು ಕೇಳಬೇಕಾದರೆ, ನೋಡಬೇಕಾದರೆ ಶ್ರೋತ್ರ, ನೇತ್ರ - ಮುಂತಾದ ಜ್ಞಾನೇಂದ್ರಿಯಗಳ ಸಹಾಯವಿಲ್ಲದೆ ಏನನ್ನೂ ಮಾಡಲಾರದು. ಅಂತೆಯೇ ಹೋಗಬೇಕೆಂದು ಇಚ್ಛಿಸಿದಾಗ ಪಾದವನ್ನೂ, ಕೊಡಬೇಕೆಂದು ಇಚ್ಛಿಸಿದಾಗ ಪಾಣೀಂದ್ರಿಯವನ್ನು ಅಪೇಕ್ಷಿಸುತ್ತದೆ. ಬಾಹ್ಯೇಂದ್ರಿಯಗಳೂ ಮನಸ್ಸಿನ ಸಹಾಯವನ್ನು ಪಡೆಯಲೇಬೇಕು. ಬಾಹ್ಯವಿಷಯಗಳಲ್ಲಿ ಪ್ರವರ್ತಿಸುವಾಗ ಮನಸ್ಸಿಗೆ ಈ ಇಂದ್ರಿಯಗಳ ನೆರವು ಬೇಕೇ ಬೇಕು. ಮಾನಸಿಕವಾದ ಧ್ಯಾನ, ಚಿಂತನೆಗಳನ್ನು ಮಾಡುವಾಗ ಮಾತ್ರ ಬಾಹ್ಯೇಂದ್ರಿಯವನ್ನು ಅಪೇಕ್ಷಿಸುವುದಿಲ್ಲ(೧೨). ಇಂದ್ರಿಯಗಳು ತಮಗೆ ವಿಷಯಗಳಾದ ಶಬ್ದ ಸ್ಪರ್ಶಾದಿಗಳ ಜ್ಞಾನವನ್ನುಂಟುಮಾಡುತ್ತವೆಯಷ್ಟೆ. ಶಬ್ದಾದಿಜ್ಞಾನವಾದ ಮೇಲೆ ಇದು ಚೆನ್ನಾಗಿದೆಯೆ, ಇದು ಒಳ್ಳೆಯದೆ, ಇದು ಸಮಂಜಸವೆ, ಇದು ಕೆಟ್ಟದು, ಇದರಲ್ಲಿ ದೋಷವಿದೆ ಇತ್ಯಾದಿ ವಿಚಾರಗಳು ಮನುಷ್ಯನಿಗೆ ಹುಟ್ಟುತ್ತವೆ. ಆ ವಿಚಾರವನ್ನು ಮಾಡತಕ್ಕದ್ದು ಮನಸ್ಸು. ಈ ಮನಸ್ಸಿನ ವ್ಯಾಪಾರಗಳು ಅಸಂಖ್ಯಾತವಾಗಿವೆ. ಮನಸ್ಸು ತ್ರಿಗುಣಾತ್ಮಕವಾದದ್ದು. ಸತ್ತ್ವ, ರಜಸ್, ತಮಸ್ ಎಂಬ ಮೂರು ಗುಣಗಳಿಂದ ಮನಸ್ಸು ವಿಕಾರಗೊಳ್ಳುತ್ತದೆ. ಎಂದರೆ ಮನೋವೃತ್ತಿಗಳು ನಾನಾ ವಿಧವಾಗುತ್ತವೆ. ಇದನ್ನೇ ಅಂತಃಕರಣವೃತ್ತಿಗಳೆನ್ನುತ್ತಾರೆ. ವೃತ್ತಿಯೆಂದರೆ

ವ್ಯಾಪಾರ, ಕ್ರಿಯಾ ರೂಪವಾದದ್ದು(೧೩). ವೈರಾಗ್ಯ, ಕ್ಷಮೆ, ಔದಾರ್ಯ ಮೊದಲಾದವು ಸತ್ತ್ವ ಗುಣದಿಂದ ಹುಟ್ಟುತ್ತವೆ. ಕಾಮ, ಕ್ರೋಧ, ಪ್ರಯತ್ನ - ಮೊದಲಾದವು ರಜಸ್ಸಿನಿಂದ ತೋರತಕ್ಕವು. ಆಲಸ್ಯ, ಭ್ರಾಂತಿ, ತೂಕಡಿಕೆ ಮೊದಲಾದವು ತಮೋಗುಣದ ಕಾರ್ಯಗಳು. ಸಾತ್ವಿಕಗಳಿಂದ ಪುಣ್ಯವೂ ರಜೋಗುಣದಿಂದ ಪಾಪವೂ ಬರುತ್ತವೆ. ಎಂದರೆ ವೈರಾಗ್ಯಾದಿಗಳು ಪುಣ್ಯಜನಕಗಳೂ ಕಾಮಕ್ರೋಧಾದಿಗಳು ಪಾಪಜನಕಗಳೂ ಆಗಿವೆ (೧೪-೧೫). ಇನ್ನು ಆಲಸ್ಯಾದಿತಮೋ ವ್ಯಾಪಾರಗಳಿಂದ ಪುಣ್ಯವೂ ಇಲ್ಲ, ಪಾಪವೂ ಇಲ್ಲ, ಏನೆಂದರೆ ಈ ತಮೋಗುಣಗಳಿಂದ ಮನುಷ್ಯನ ಆಯುಸ್ಸು ವ್ಯರ್ಥವಾಗಿ ಕಳೆದುಹೋಗುತ್ತದೆ! ಈ ಶರೀರದಲ್ಲಿ ಅಹಂ-ಅಹಂ ಎಂದುಕೊಳ್ಳತಕ್ಕವನು ಯಾವನೋ ಅವನೇ ಈ ಕ್ರಿಯೆಗಳ ಕರ್ತೃ. ಇವನನ್ನು ಜ್ಞಾತೃ ಎಂದೂ ಹೇಳುತ್ತಾರೆ. ಕರ್ತೃವಾದ ಮೇಲೆ ಪಾಪಪುಣ್ಯಗಳ ಫಲವನ್ನು ಭೋಗಿಸತಕ್ಕವನೂ ಈ ಜ್ಞಾತೃವೇ. ಇವನನ್ನು ಸದ್ಯದಲ್ಲಿ ಜೀವಾತ್ಮನೆಂದು ತಿಳಿದಿರೋಣ. ಈ ಪ್ರಕಾರವಾಗಿ ಲೋಕವ್ಯವಹಾರವು ಹಂಚಿಹೋಗಿದೆ. ಒಟ್ಟಿನಲ್ಲಿ ಪಾಂಚಭೌತಿಕಗಳಾದ ವಸ್ತುಗಳಿಂದ ಲೋಕವ್ಯವಹಾರವು ನಡೆಯುತ್ತದೆ. ಈ ವ್ಯವಹಾರಕ್ಕೆ ಮೂಲವಾದದ್ದು ಈಶ್ವರನ ಮಾಯಾಶಕ್ತಿ ಎಂಬುದು ನೆನಪಿನಲ್ಲಿರಬೇಕು. ಪರಬ್ರಹ್ಮವಸ್ತುವಿಗೂ ಈ ವ್ಯವಹಾರಕ್ಕೂ ನೇರವಾಗಿ ಯಾವ ಸಂಬಂಧವೂ ಇಲ್ಲ(೧೬). ಸೂಕ್ಷ್ಮವಾದ ಇಂದ್ರಿಯಗಳೂ ಸಹ ಭೌತಿಕಗಳೆಂದು ಹೇಳುವುದು ಹೇಗೆ? ಘಟ, ವೃಕ್ಷ, ಹೂವು, ಹಣ್ಣು- ಮೊದಲಾದವುಗಳಲ್ಲಿ ಗಂಧ, ರೂಪ, ರಸಾದಿಗಳಿರುವುದರಿಂದ ನೀವು ಹೇಳಿದಂತೆ ಶಬ್ದಾದಿಗಳು ಸ್ಪಷ್ಟವಾಗಿರುವುದರಿಂದಲೂ ಅವು ಪಾಂಚಭೌತಿಕಗಳೆನ್ನಬಹುದು. ಅವುಗಳಲ್ಲಿ ಭೂತಗುಣಗಳು ಕಂಡು ಬರುತ್ತವೆ. ಆದರೆ ಇಂದ್ರಿಯಗಳೂ ಭೌತಿಕಗಳೆನ್ನುವುದಕ್ಕೆ ಪ್ರಮಾಣವೇನು? ಪ್ರಮಾಣವುಂಟು. ಮೊದಲನೆಯದಾಗಿ ಶಾಸ್ತ್ರವು ಈ ಇಂದ್ರಿಯಗಳನ್ನು ಭೌತಿಕಗಳೆಂದು ಹೇಳಿದೆ! **ಅನ್ನಮಯಂ ಹಿ ಸೌಮ್ಯ ಮನಃ, ಆಪೋಮಯಃ ಪ್ರಾಣಃ, ತೇಜೋಮಯೀ ವಾಕ್** (ಛಾಂ. ಉ.೬-೫-೪) - ಎಂಬ ವಾಕ್ಯವು ಛಾಂದೋಗ್ಯದಲ್ಲಿ ಅನೇಕಸಲ ಉಕ್ತವಾಗಿದೆ. ಅಲ್ಲಿಯೇ **'ಅನ್ನಸ್ಯ ಅಣಿಮಾ ಮನೋಭವತಿ, ಅಪಾಂ ಅಣಿಮಾ ಪ್ರಾಣೋ ಭವತಿ'** ಇತ್ಯಾದಿ ವಾಕ್ಯಗಳಿವೆ. ಆಹಾರದ ಸೂಕ್ಷ್ಮಭಾಗವು ಮನಸ್ಸಾಗುತ್ತದೆ,

ಪ್ರಾಣವಾಗುತ್ತದೆ, ವಾಗಿಂದ್ರಿಯವಾಗುತ್ತದೆ - ಎಂದು ಅಭಿಪ್ರಾಯ. ಪಂಚಭೂತಗಳು ಮಾತ್ರ ಸ್ಪಷ್ಟವಾಗಿರುವುದರಿಂದ ಅವುಗಳ ಹೊರತು ಇನ್ನು ಯಾವ ವಸ್ತು ಜಗತ್ತಿನಲ್ಲಿ ವ್ಯಕ್ತವಾಗಿರಲು ಸಾಧ್ಯ? ಆದ್ದರಿಂದ ಆತ್ಮೇತರವಾದದ್ದೆಲ್ಲವೂ ಈ ಪ್ರಪಂಚದಲ್ಲಿ ಭೌತಿಕವಸ್ತುಗಳೇ(೧೭). ಹೀಗೆ ಪಂಚಭೂತಗಳ ಉತ್ಪತ್ತಿಕ್ರಮವನ್ನೂ ಅವುಗಳಿಂದಾದ ಭೌತಿಕ ಪದಾರ್ಥಗಳನ್ನೂ ತಿಳಿಸಿದ್ದಾಯಿತು. ಮನಸ್ಸು ಇಂದ್ರಿಯವಲ್ಲವೆಂದು ಕೆಲವರು ಹೇಳುತ್ತಾರೆ. ಇಲ್ಲಿ ಅದು ಅಂತಃಕರಣ, ಅಂತರಿಂದ್ರಿಯ - ಎಂದು ಒಪ್ಪಲಾಗಿದೆ. ಏವಂಚ ಐದು ಜ್ಞಾನೇಂದ್ರಿಯಗಳು, ಐದು ಕರ್ಮೇಂದ್ರಿಯ ಗಳು, ಮನಸ್ಸು- ಇವು ಸೇರಿ ಒಟ್ಟು ಹನ್ನೊಂದು ಇಂದ್ರಿಯಗಳಾದವು. ಪ್ರತ್ಯಕ್ಷ, ಅನುಮಾನ, ಶಬ್ದ ಇತ್ಯಾದಿ ಪ್ರಮಾಣಗಳಿಂದ ಜಗತ್ತು, ವಿಶ್ವ, ಪ್ರಪಂಚ - ಎಂದು ಹೇಳುವುದೆಲ್ಲವೂ ಪಂಚಭೂತಗಳಲ್ಲಿ ಅಥವಾ ಇವುಗಳಿಂದಾದ ಭೌತಿಕವಸ್ತುಗಳಲ್ಲಿ ಸೇರುತ್ತವೆ. **''ಸದೇವ ಸೋಮ್ಯ ಇದಮಗ್ರ ಆಸೀತ್ ಏಕಮೇವಾದ್ವಿತೀಯಂ''** (ಛಾಂ.ಉ.೬-೨-೧) ಎಂಬ ಶ್ರುತಿ ವಾಕ್ಯದಲ್ಲಿ 'ಇದಂ' ಎಂದರೆ ಪಾಂಚಭೌತಿಕವಾದ ಈ ಜಗತ್ತು, ಈ ವಿಶ್ವ, ಈ ಪ್ರಪಂಚ ಎಂದರ್ಥ. ನಮಗೆ ಗೋಚರವಾಗತಕ್ಕದ್ದು, ನಮ್ಮ ಊಹೆಗೆ ನಿಲುಕತಕ್ಕದ್ದು ಆದದ್ದನ್ನು 'ಇದು' ಎಂದು ಹೇಳಬಹುದು (೧೮). ಶ್ರುತಿವಾಕ್ಯದ ಅರ್ಥ ಹೀಗೆ - ಅಗ್ರೇ = ಸೃಷ್ಟಿಗೆ ಪೂರ್ವದಲ್ಲಿ, ಇದಂ = ಈ ಜಗತ್ತೆಲ್ಲವೂ, ಅದ್ವಿತೀಯಂ = ಎರಡನೆಯ ವಸ್ತುವಿಲ್ಲದೆ, ಏಕಮೇವ = ಒಂದೇ ವಸ್ತು ಆಸೀತ್ = ಆಗಿತ್ತು. ಈ ಮಾತನ್ನು ಅರುಣನ ಪುತ್ರನಾದ ಉದ್ದಾಲಕ ಮಹರ್ಷಿಯು ತನ್ನ ಪುತ್ರನಾದ ಶ್ವೇತಕೇತುವಿಗೆ ಹೇಳಿದ್ದಾನೆ. ಸೃಷ್ಟಿಯೆಂದರೆ ವಿಸರ್ಜಿಸುವುದೆಂದರ್ಥ. (ಸೃಜ - ವಿಸರ್ಗೇ ಎಂಬುದು ಧಾತು) ಆದಿಯಲ್ಲಿ ಆತ್ಮನೊಬ್ಬನೇ ಇದ್ದನು. ಆತನು ತನ್ನ ಮಾಯಾಶಕ್ತಿಯಿಂದ ಈ ಜಗತ್ತನ್ನು ವಿಸರ್ಜಿಸಿದನು. ಎಂದರೆ ಈ ಜಗತ್ತು ವ್ಯಕ್ತವಾಗುವಂತೆ ಮಾಡಿದನು ಎಂದರ್ಥ (೧೯).

ಹಿಂದೆ ಹೇಳಿದ ಶ್ರುತಿವಾಕ್ಯದಲ್ಲಿ **'ಏಕಮೇವಾದ್ವಿತೀಯಂ'** ಎಂಬ ಮೂರು ಪದಗಳಿವೆಯಷ್ಟೆ. ಸದೇವ ಎಂಬಲ್ಲಿ ಏವಕಾರವಿದ್ದರೂ ಮತ್ತೆ ಏವಕಾರ ಬಂದಿದೆ. ಅಲ್ಲದೆ ಏಕಂ, ಅದ್ವಿತೀಯಂ ಎಂಬ ಎರಡು ಪದಗಳು ಸೇರಿಕೊಂಡಿವೆ. ಇದರಿಂದ ಪುನರುಕ್ತಿಯಾಗುವುದಿಲ್ಲವೆ? ಎಂಬ ಪ್ರಶ್ನೆ

ಹುಟ್ಟುತ್ತದೆ. ಹಾಗಲ್ಲ; ಮೂರು ಬಗೆಯ ಭೇದಗಳನ್ನು ನಿರಾಕರಿಸುವುದಕ್ಕಾಗಿ ಮತ್ತೆ ಈ ಮೂರು ಪದಗಳು ಬಂದಿವೆ. ಹೇಗೆಂದರೆ; ಸ್ವಗತ ಭೇದ, ಸ್ವಜಾತೀಯ ಭೇದ, ವಿಜಾತೀಯ ಭೇದ ಎಂದು ಮೂರು ಬಗೆಯ ಭೇದಗಳಿವೆ. ಇವನ್ನು ಲೋಕದಲ್ಲಿರುವ ವಸ್ತುಗಳಲ್ಲಿ ತೋರಿಸಬಹುದು. ವೃಕ್ಷದಲ್ಲಿ ಎಲೆ, ಹೂವು, ಹಣ್ಣುಗಳಿರುತ್ತವೆ. ಇವೆಲ್ಲವೂ ವೃಕ್ಷದ ಅವಯವಗಳು. ಈ ಅವಯವಗಳಲ್ಲಿ ಭೇದವಿದೆ. ಎಲೆಗಿಂತ ಹೂ ಭಿನ್ನ. ಹೂವಿಗಿಂತ ಹಣ್ಣು ಭಿನ್ನ. ಹಣ್ಣಿಗಿಂತ ಕೊಂಬೆ ಭಿನ್ನ. ಹೀಗೆ ವೃಕ್ಷವು ತನ್ನಲ್ಲಿಯೇ ಭೇದಗಳನ್ನು ಹೊಂದಿದೆ. ಇದು ಸ್ವಗತಭೇದ. ಈ ಮಾವಿನಮರವು ಹಲಸಿನ ಮರಕ್ಕಿಂತ ಭಿನ್ನ. ಹಲಸಿನ ಮರ ತೆಂಗಿನ ಮರಕ್ಕಿಂತ ಭಿನ್ನ. ಹೀಗೆ ಸಜಾತೀಯವಾದ ಇನ್ನೊಂದು ಮರಕ್ಕಿಂತ ಈ ಮರವು ಭಿನ್ನವಾಗಿರುತ್ತದೆ. ಇದು ಸಜಾತೀಯ ಭೇದ. ಮರವು ಕಲ್ಲಿಗಿಂತ ಭಿನ್ನ, ಕಲ್ಲು ಕಬ್ಬಿಣಕ್ಕಿಂತ ಭಿನ್ನ. ಹೀಗೆ ಪ್ರತಿಯೊಂದು ವಸ್ತುವೂ ಲೋಕದಲ್ಲಿ ಇನ್ನೊಂದು ಜಾತಿಯ ವಸ್ತುವಿಗಿಂತ ಭಿನ್ನವಾಗಿರುತ್ತದೆ. ಇದು ವಿಜಾತೀಯ ಭೇದ. ಈ ಪ್ರಕಾರವಾಗಿ ವ್ಯವಹಾರದಲ್ಲಿ ಕಂಡು ಬರುವ ಪ್ರತಿಯೊಂದು ವಸ್ತುವಿನಲ್ಲಿಯೂ ಈ ಭೇದಗಳಿರುತ್ತವೆ. ಬ್ರಹ್ಮದಲ್ಲಿ ಈ ಯಾವ ಭೇದವೂ ಇಲ್ಲ. ಅವಯವಗಳಿಲ್ಲವಾದ್ದರಿಂದ ಸ್ವಗತ ಭೇದವಿಲ್ಲ. ಸಜಾತೀಯವಾದ ಇನ್ನೊಂದು ಚೇತನವಿಲ್ಲವಾದ್ದರಿಂದ ಸಜಾತೀಯ ಭೇದವೂ ಇಲ್ಲ. ವಿಜಾತೀಯವಾದ ಜಡವಸ್ತುವೂ ಇಲ್ಲವಾದ್ದರಿಂದ ವಿಜಾತೀಯ ಭೇದವೂ ಇಲ್ಲ (೨೦). ಇದನ್ನೇ ಮುಂದಿನ ಶ್ಲೋಕಗಳಲ್ಲಿ ವಿವರಿಸಲಾಗುತ್ತದೆ. ಈ ವೃಕ್ಷಾದಿಗಳಿಗೆ ಹಿಂದೆ ಹೇಳಿದ ಭೇದತ್ರಯಗಳು ಸದ್ವಸ್ತುವಿಗಿಲ್ಲ. ಏಕಂ- ಎಂಬುದರಿಂದ ಸದ್ವಸ್ತು ಒಂದೇ ಎಂದೂ ಏವಕಾರದಿಂದ ಒಂದು ಮಾತ್ರವೆಂಬ ಅವಧಾರಣವೂ ತೋರುತ್ತದೆ. ಅದ್ವಿತೀಯಂ- ಎಂಬುದರಿಂದ ಇನ್ನೊಂದಿಲ್ಲವೆಂದು ದ್ವಿತೀಯವಸ್ತು ನಿಷೇಧವು ಸ್ಪಷ್ಟವಾಗಿದೆ. ಆದ್ದರಿಂದ ಈ ಮೂರು ಪದಗಳೂ ಭೇದತ್ರಯವನ್ನು ನಿಷೇಧಿಸುತ್ತವೆ ಎಂಬುದೂ ಸ್ಫುಟವಾಗಿದೆ (೨೧). ಹೇಗೆಂದರೆ, ಸತ್ ಎಂಬ ವಸ್ತುವಿನಲ್ಲಿ ಯಾವ ಧರ್ಮಗಳೂ ಇಲ್ಲ. ಸತ್ = ಇದೆ ಎಂದು ಮಾತ್ರ ಆ ಶಬ್ದದಿಂದ ತೋರುತ್ತದೆ. ಯಾವ ಧರ್ಮವೂ ಇಲ್ಲದ್ದರಿಂದ ಅದರಲ್ಲಿ ಅವಯವಗಳನ್ನು ಕಲ್ಪಿಸಲಾಗುವುದಿಲ್ಲ. ಏಕೆಂದರೆ, ಒಂದಾನೊಂದು ಧರ್ಮವಿಶೇಷವು ಅವಯವವಿದ್ದರೆ ಮಾತ್ರ ಇರಲು ಸಾಧ್ಯ. ನಾಮರೂಪಗಳೂ ಸಹ ಆ ಸದ್ವಸ್ತುವಿಗೆ ಇರಲಿಲ್ಲ.

'ನಾಮರೂಪೇ ವ್ಯಾಕರವಾಣಿ' (ಛಾಂ.ಉ.೬-೩-೨) ಎಂಬ ಶ್ರುತಿಯು ಸೃಷ್ಟಿಯಾಗುವುದಕ್ಕೆ ಮುಂಚೆ ನಾಮರೂಪಗಳೂ ಇರಲಿಲ್ಲವೆಂಬುದನ್ನು ಸ್ಪಷ್ಟವಾಗಿ ತಿಳಿಸಿಕೊಡುತ್ತಿದೆ. ಆದ್ದರಿಂದ ನಾಮವಾಗಲಿ ರೂಪವಾಗಲಿ ಇಲ್ಲವಾದ್ದರಿಂದ ಅವು ಸದ್ವಸ್ತುವಿನ ಅವಯವಗಳಲ್ಲ(೨೨). ಸೃಷ್ಟಿಯಾಗುವುದಕ್ಕೆ ಮೊದಲು ನಾಮರೂಪಗಳೇ ಇರುವುದಿಲ್ಲ. ಏಕೆಂದರೆ, ನಾಮರೂಪಗಳ ಉತ್ಪತ್ತಿಯೇ ಸೃಷ್ಟಿಯಾಗಿದೆ! ನಾಮವೆಂದರೆ ಘಟ, ಪಟ ಇತ್ಯಾದಿ ಸಂಜ್ಞೆ. ರೂಪವೆಂದರೆ ಜಾತಿ ಗುಣ ಕ್ರಿಯೆಗಳು. ಇವುಗಳಿದ್ದಾಗ ಅದೊಂದು ವ್ಯವಹಾರಯೋಗ್ಯವಾದ ಪದಾರ್ಥವೆನಿಸುತ್ತದೆ. ರೂಪವೇ ಅರ್ಥ. ಅರ್ಥಾನುಸಾರಿಯಾಗಿ ನಾಮವೂ ನಾಮಾನುಗುಣವಾಗಿ ಅರ್ಥವೂ ಇರುವುದರಿಂದ ಶಬ್ದಾರ್ಥಗಳು ನಿತ್ಯಸಂಬಂಧವಾದವುಗಳು. ನಾಮ(ಸಂಜ್ಞೆ), ಜಾತಿ, ಗುಣ, ಕ್ರಿಯೆ - ಈ ನಾಲ್ಕನ್ನು ಪ್ರವೃತ್ತಿ ನಿಮಿತ್ತಗಳೆನ್ನುತ್ತಾರೆ. 'ಸತ್' ಎಂಬ ಪರಬ್ರಹ್ಮದಲ್ಲಿ ಈ ನಾಲ್ಕೂ ಇಲ್ಲ. ಆದ್ದರಿಂದ ಅದು ಅವಯವರಹಿತ, ಆಕಾಶವಿದ್ದಂತೆ. ಆಕಾಶಕ್ಕೆ ಯಾವ ಅವಯವವೂ ಇಲ್ಲ. ಅವಯವವಿಲ್ಲ ಎಂಬುದಕ್ಕೆ ಮಾತ್ರ ಇದು ದೃಷ್ಟಾಂತ. ಆಕಾಶವನ್ನು ತುಂಡುಮಾಡಲು ಶಕ್ಯವಿಲ್ಲವಷ್ಟೆ(೨೩). ಇನ್ನು ಸಜಾತೀಯ ವಸ್ತುವಿದೆಯೋ ಎಂದರೆ ಅದೂ ಇರುವುದಿಲ್ಲ. ಇನ್ನೊಂದು ಸತ್ ಎನ್ನಬೇಕಾದರೆ ಅದರಲ್ಲೊಂದು ವೈಲಕ್ಷಣ್ಯವಿರಬೇಕು. ಆದರೆ ಘಟವು ಸತ್, ಪಟವು ಸತ್ - ಎಂಬ ಅನುಭವವಿರುವುದರಿಂದ ಘಟದ ಸತ್ತೆಗಿಂತ ಪಟದ ಸತ್ತೆ ಬೇರೆಯಾಗುತ್ತದೆ. ಏವಂಚ ಸತ್ ಎಂಬುದು ಅನೇಕವಾಗಬಹುದಲ್ಲ? ಎಂದರೆ, ಅದು ಸರಿಯಲ್ಲ. ಇಲ್ಲಿ ಘಟ ಪಟ ಎಂಬ ಉಪಾಧಿಗಳನ್ನಿಟ್ಟುಕೊಂಡು ಸತ್ತೆಯಲ್ಲಿ ಭೇದವನ್ನು ಹೇಳಿದೆ. ಇದು ಉಪಾಧಿಭೇದವೇ ಹೊರತು ಸತ್ತೆಯ ಭೇದವಲ್ಲ. ಘಟಾಕಾಶ ಮಠಾಕಾಶ - ಎಂದು ಹೇಳಿದಂತೆ ಇದು. ಮತ್ತು ನಾಮರೂಪಗಳ ಸೃಷ್ಟಿಯಾಗುವುದಕ್ಕೆ ಮೊದಲು ಯಾವ ಉಪಾಧಿಯೂ ಇರುವುದಿಲ್ಲ. ನಾಮರೂಪಗಳೇ ಉಪಾಧಿಯಾಗಬಲ್ಲವು. ಆದ್ದರಿಂದ ಆಗ ಸಜಾತೀಯವಾದ ಸತ್ ಇನ್ನೊಂದಿರುವುದಿಲ್ಲ(೨೪). ಇನ್ನು ವಿಜಾತೀಯ ವೆಂದರೆ ಸತ್ತಿಗೆ ವಿಜಾತೀಯವಾದುದು ಅಸತ್! ಅಸತ್ ಎಂದರೆ ಇಲ್ಲದ್ದು ಶೂನ್ಯ. ಅದು ಇಲ್ಲವೇ ಇಲ್ಲವಾದ್ದರಿಂದ ಸದ್ವಸ್ತು ಅದಕ್ಕಿಂತ ವಿಜಾತೀಯ ವೆನ್ನುವ ಹಾಗಿಲ್ಲ. ಇಲ್ಲದೇ ಹೋದ್ದನ್ನು ಲೆಕ್ಕದಲ್ಲಿ ಸೇರಿಸಲಾಗುವುದಿಲ್ಲ. ಅದು ವೈಲಕ್ಷಣ್ಯಕ್ಕೆ ಪ್ರತಿಯೋಗಿಯಾಗುವುದಿಲ್ಲ(೨೫).

ಈ ಪ್ರಕಾರವಾಗಿ ಸೃಷ್ಟಿಯ ಆದಿಯಲ್ಲಿ ಏಕವೂ ಅದ್ವಿತೀಯವೂ ಆದ ಒಂದೇ ಸದ್ವಸ್ತುವಿತ್ತು ಎಂಬುದು ಸಿದ್ಧವಾಯಿತು. ಇದನ್ನು ಕೇಳಿ ಹೆದರಿ ಕಂಗಾಲಾದ ಕೆಲವು ಜನರು ''ಇಲ್ಲ ಇಲ್ಲ, ಅಂತಹ ಸತ್ ಎಂಬುದೇ ಇಲ್ಲ! ಸೃಷ್ಟಿಯ ಆದಿಯಲ್ಲಿ ಅಸತ್ ಆಗಿತ್ತು, ಯಾವ ವಸ್ತುವೂ ಇರಲಿಲ್ಲ!'' ಎಂದು ಹೇಳಿಬಿಟ್ಟಿದ್ದಾರೆ (೨೬). ಅಖಂಡ್ಯೈಕರಸವಾದ ಒಂದೇ ಸದ್ವಸ್ತುವೆಂದೊಡನೆ ಅದೇನಿರಬಹುದೆಂದು ತಿಳಿಯಲಾರದೆ, ಬುದ್ಧಿಯು ಗ್ರಹಿಸಲಾರದೆ, ನಾವಿರುವುದೇ ಸುಳ್ಳಾಗುವುದೆಂಬ ಸಂಭ್ರಾಂತಿಯಿಂದಲೋ ಏನೋ ಈ ಜನರಿಗೆ ದಿಕ್ಕು ತೋರದೇ ಹೋಗಿದೆ. ಅಪಾರವಾದ ಮಹಾಸಮುದ್ರದಲ್ಲಿ ಮುಳುಗಿಹೋದವನು ಯಾವ ರೀತಿ ಕಂಗಾಲಾಗಿ ದಿಙ್ಮೂಢನಾಗುವನೋ ಆ ಪರಿಸ್ಥಿತಿಯುಂಟಾಗಿ ಇವರು ಬೇರೆ ಬೇರೆ ವಾದವನ್ನು ಆರಂಭಿಸಿದರು (೨೭). ಆದ್ದರಿಂದಲೇ ಶ್ರೀ ಗೌಡಪಾದಾಚಾರ್ಯರು ನಿರ್ವಿಕಲ್ಪಸಮಾಧಿಗೆ ಕೆಲವು ಯೋಗಿಗಳು ಭಯಪಡುತ್ತಾರೆಂದೂ ಅವರೆಲ್ಲರೂ ಸಾಕಾರ ಬ್ರಹ್ಮವಾದಿಗಳಾಗಿದ್ದಾರೆಂದೂ ಹೇಳಿದ್ದಾರೆ. ಅವರು ಹೇಳಿದ ಶ್ಲೋಕವು ಹೀಗಿದೆ -

**ಅಸ್ಪರ್ಶಯೋಗೋ ನಾಮೈಷಃ ದುರ್ದರ್ಶಃ ಸರ್ವಯೋಗಿಭಿಃ ।**
**ಯೋಗಿನೋ ಬಿಭ್ಯತಿ ಹ್ಯಸ್ಮಾದಭಯೇ ಭಯದರ್ಶಿನಃ ॥**

(ಮಾಂ.ಕಾರಿಕಾ. ಅದ್ವೈತ.೩-ಕಾರಿಕಾ ೩೯.)

ಇದರ ಅರ್ಥ - ಏಷಃ = ಪರಮಾರ್ಥದರ್ಶನ ರೂಪವಾದ ಈ ನಿರ್ವಿಕಲ್ಪಸಮಾಧಿಯು, ಅಸ್ಪರ್ಶಯೋಗೋ ನಾಮ = ಅಸ್ಪರ್ಶ ಯೋಗವೆಂದು ಪ್ರಸಿದ್ಧವಾಗಿದೆ. ಸ್ಪರ್ಶವೆಂದರೆ ಸಂಬಂಧ. ಈ ಸದ್ರೂಪವಾದ ಪರಮಾರ್ಥವು ಸಕಲಸಂಬಂಧವರ್ಜಿತ. ವರ್ಣಾಶ್ರಮಾದಿ ಧರ್ಮ ಸಂಬಂಧವಾಗಲಿ ಪಾಪಪುಣ್ಯಗಳ ಸಂಬಂಧವಾಗಲಿ ಯಾವುದೂ ಇಲ್ಲದ್ದು. ಸರ್ವಯೋಗಿಭಿಃ = ವೇದಾಂತಬೋಧಿತ ಜ್ಞಾನರಹಿತರಾದ ಸಕಲಯೋಗಿ ಗಳಿಂದಲೂ ದುರ್ದರ್ಶಃ = ಅನುಭವಿಸಲು ಅಶಕ್ಯವಾದದ್ದು. ಹಿ = ಏಕೆಂದರೆ, ಯೋಗಿನಃ = ಆತ್ಮಜ್ಞಾನ ರಹಿತರಾದ ಯೋಗಿಗಳು, ಅಸ್ಮಾತ್ = ಈ ಸಮಾಧಿಗೆ, ಬಿಭ್ಯತಿ = ಹೆದರುತ್ತಾರೆ. ಏಕೆಂದರೆ, ಈ ಸಮಾಧಿಯನ್ನು ಪಡೆದರೆ ಆತ್ಮನಾಶವಾಗಿ ಬಿಡುತ್ತದೆಯೆಂದು ಹೆದರುತ್ತಾರೆ. ಈ ಜನರು ಭಯರಹಿತವಾದ ಈ

ಸದ್ವಸ್ತುವಿನಲ್ಲಿ ಭಯಪಡುತ್ತಾರೆ! (೨೮-೨೯). ಅಲ್ಲದೆ ಅಸತ್ತಿನಿಂದ ಜಗತ್ತು ಹುಟ್ಟುತ್ತದೆಯೆಂಬ ಅಸದ್ವಾದವನ್ನು ಅಥವಾ ಶೂನ್ಯವಾದವನ್ನವಲಂಬಿಸಿದ ಮಾಧ್ಯಮಿಕರೆಂಬ ಬೌದ್ಧರು ಒಣತರ್ಕವನ್ನು ಮಾಡುವುದರಲ್ಲಿ ಗಟ್ಟಿಗರು. ಶ್ರೀಶಂಕರಭಗವತ್ಪಾದರು ಅಚಿಂತ್ಯವಾದ ಈ ಸದ್ವಸ್ತು ಆತ್ಮನ ವಿಷಯದಲ್ಲಿ ಬೌದ್ಧರು ಭ್ರಾಂತರಾಗಿದ್ದಾರೆಂದು ಹೇಳಿದ್ದಾರೆ. ಬ್ರಹ್ಮಸೂತ್ರ ಭಾಷ್ಯದಲ್ಲಿ ಇದರ ವಿವರಣೆ ಇದೆ. ಸುಮಾರು ಹದಿನೈದು ಸೂತ್ರಗಳಲ್ಲಿ ಈ ಬೌದ್ಧರ ಮತವನ್ನು ಸೂತ್ರಕಾರರು ಖಂಡಿಸಿದ್ದಾರೆ (ಅಧ್ಯಾಯ ೨, ಪಾದ ೨, ೪-೫ ಅಧಿಕರಣ). ಇದನ್ನು ಆಚಾರ್ಯರು ವಿಸ್ತಾರವಾಗಿ ವಿವರಿಸಿ ಭಾಷ್ಯವನ್ನು ರಚಿಸಿದ್ದಾರೆ(೩೦). ಈ ಬೌದ್ಧರು ತಮೋಗುಣದವರು. ಶ್ರುತಿಯನ್ನೇ ಪ್ರಮಾಣವೆಂದು ಸ್ವೀಕರಿಸದೆ ಹೋದದ್ದು ಅವರ ಮೂರ್ಖತನವೇ ಹೊರತು ಬೇರೆಯಲ್ಲ. ಅವರದು ಮಾತೆತ್ತಿದರೆ ತರ್ಕ - ಅನುಮಾನ. ಈ ಒಣತರ್ಕದಿಂದಲೇ ಅವರು ಆತ್ಮನಿಲ್ಲವೆಂಬ ವಾದವನ್ನು ಹೂಡಿ ಶೂನ್ಯವಾದಿಗಳಾಗಿ ಬಿಟ್ಟಿದ್ದಾರೆ. ಪ್ರತ್ಯಕ್ಷ, ಅನುಮಾನ - ಎಂಬ ಎರಡು ಪ್ರಮಾಣಗಳನ್ನು ಮಾತ್ರ ಬೌದ್ಧರು ಒಪ್ಪುತ್ತಾರೆ. ಕಣ್ಣು, ಕಿವಿ - ಮೊದಲಾದ ಇಂದ್ರಿಯಗಳಿಗೆ ಗೋಚರವಾದದ್ದು ಪ್ರತ್ಯಕ್ಷ. ಸರಿಯಾದ ಹೇತುವನ್ನು ತೋರಿಸಿ ವಸ್ತುವನ್ನು ಸಾಧಿಸುವುದು ಅನುಮಾನ. ಉದಾಹರಣೆಗೆ - ಪರ್ವತದಲ್ಲಿ ಬೆಂಕಿ ಇದೆ, ಹೊಗೆ ಕಾಣಿಸುವುದರಿಂದ - ಎಂಬುದು ಅನುಮಾನ. ಹೊಗೆ ಇದೆಯೆಂಬ ಹೇತುವಿನಿಂದ ಪರ್ವತದಲ್ಲಿ ಬೆಂಕಿ ಇದೆ ಎಂದು ಸಿದ್ಧವಾಗುತ್ತದೆ. ಪರ್ವತದಲ್ಲಿರುವ ಬೆಂಕಿ ಪ್ರತ್ಯಕ್ಷವಲ್ಲದಿದ್ದರೂ ಬೆಂಕಿ ಇದೆಯೆಂದು ಒಪ್ಪಲೇಬೇಕು. ಏಕೆಂದರೆ, ಹೊಗೆ ಇದ್ದಲ್ಲಿ ಬೆಂಕಿ ಇದ್ದೇ ಇರುತ್ತದೆ ಎಂದು ನಮಗೆ ಪ್ರತ್ಯಕ್ಷವಾಗಿ ತಿಳಿದಿದೆ. ಅದನ್ನು ಬೇರೆ ಕಡೆ ಅಡಿಗೆ ಮನೆಯಲ್ಲಿ ನೋಡಿದ್ದೇವೆ. ಆದ್ದರಿಂದ ಪರ್ವತದಲ್ಲಿ ಬೆಂಕಿ ಇದೆಯೆಂಬುದು ಪ್ರಾಮಾಣಿಕ. ಜೀವಾತ್ಮನಾಗಲಿ ಪರಮಾತ್ಮನಾಗಲಿ ಪ್ರತ್ಯಕ್ಷವಾಗುವುದಿಲ್ಲ, ಅನುಮಾನದಿಂದ ಸಾಧಿಸುವುದಕ್ಕೆ ಸರಿಯಾದ ಹೇತುವಿಲ್ಲ - ಎಂದು ಬೌದ್ಧರ ಅಭಿಪ್ರಾಯ. ಶ್ರುತಿಯು ಶಬ್ದರೂಪವಾದ್ದರಿಂದ ಅದು ಪ್ರಮಾಣವಲ್ಲ, ಭ್ರಾಂತಿಯಿಂದ ವೇದವನ್ನು ಯಾರಾದರೂ ಹೇಳಿರಬಹುದು ಅಥವಾ ಮೋಸ ಮಾಡುವುದಕ್ಕಾದರೂ ಇರಬಹುದು. ಮನುಷ್ಯನು ಹೇಳುವುದನ್ನು ಒಪ್ಪಲಾಗುವುದಿಲ್ಲ - ಎಂದು ಬೌದ್ಧರ ಹೇಳಿಕೆ ಇದೆ. ಆದರೆ ಬುದ್ಧನು ಹೇಳಿದ್ದನ್ನು ಮಾತ್ರ ಒಪ್ಪುತ್ತಾರೆ! ಆದ್ದರಿಂದ ಇವರನ್ನು ಮೂರ್ಖರೆಂದು

ಮೂಲಶ್ಲೋಕದಲ್ಲಿ ಹೇಳಿರುವುದು(೩೧). ಬೌದ್ಧನಿಗೆ ಈಗೊಂದು ಪ್ರಶ್ನೆಯನ್ನು ಹಾಕಬೇಕಾಗಿದೆ. ಸೃಷ್ಟಿಗೆ ಪೂರ್ವದಲ್ಲಿ ಸದ್ವಸ್ತುವಿತ್ತು - ಎಂದು ನಾವು ಹೇಳುವಂತೆ ನೀನು ಸೃಷ್ಟಿಗೆ ಪೂರ್ವದಲ್ಲಿ ಶೂನ್ಯವಿತ್ತು ಎಂದು ಹೇಳುತ್ತೀಯೆ. ಶೂನ್ಯಮಾಸೀತ್, ಶೂನ್ಯಮಸ್ತಿ - ಎಂದು ಹೇಗೆ ಹೇಳಿದರೂ ಒಂದೇ. ಇಲ್ಲಿ ಪ್ರಯುಕ್ತವಾಗಿರುವುದು ಅಸ್ ಧಾತು. ಅದರಿಂದಲೇ ಸತ್ ಶಬ್ದವೂ ಸತ್ತಾ ಶಬ್ದವೂ ಹುಟ್ಟಿವೆ. ಶೂನ್ಯವು ಇರುವುದೆಂದರೆ ಶೂನ್ಯವೇ 'ಸತ್' ಎನ್ನಬೇಕು ಅಥವಾ ಶೂನ್ಯದಲ್ಲಿ 'ಸತ್ತಾ' ಇದೆ ಎನ್ನಬೇಕು. ಹೇಗೆ ಹೇಳಿದರೂ ಇದು ವ್ಯಾಹತವಾದ ಹೇಳಿಕೆಯಾಗುತ್ತದೆ. ಅನ್ಯೋನ್ಯವಿರುದ್ಧವಾದ ಹೇಳಿಕೆ. ''ಕೆಂಪು ಹೂವಿನಲ್ಲಿ ಬಿಳಿಯ ಬಣ್ಣ ತುಂಬಿಕೊಂಡಿದೆ, ಹೂವು ಎಂದರೆ ಹಣ್ಣು'' ಎಂಬಂತೆ ಅಸಂಬದ್ಧವಾದ ನುಡಿ ಇದು (೩೨). ನೀನು ಹೇಳುವ ಮಾತು ''ಸೂರ್ಯನನ್ನು ಕತ್ತಲೆ ವ್ಯಾಪಿಸಿದೆ, ಸೂರ್ಯನಲ್ಲಿ ಕತ್ತಲೆ ತುಂಬಿಕೊಂಡಿದೆ'' ಎಂದು ಹೇಳುವಂತೆ ಅಸಂಗತವಾದದ್ದು. ಸತ್ - ಶೂನ್ಯ ಇವು ಅನ್ಯೋನ್ಯವಿರೋಧಿಗಳು. 'ಇದೆ - ಇಲ್ಲ' ಎಂಬಿವು ಹೇಗೆ ಹೊಂದಿಕೊಂಡಾವು? ಘಟವು ಇಲ್ಲವಾದರೂ ಇದೆ - ಎಂದು ಹೇಳಬಹುದೆ? ಆದ್ದರಿಂದ 'ಶೂನ್ಯವಿತ್ತು' ಎಂದು ನೀನು ಹೇಗೆ ಹೇಳಬಲ್ಲೆ?(೩೩). ಹಾಗಾದರೆ ವೇದಾಂತಿಯ ಮತದಲ್ಲಿಯೂ ಹೀಗೆ ಆಕ್ಷೇಪಿಸಬಹುದೆಂದು ಬೌದ್ಧನು ಪ್ರಶ್ನೆಮಾಡಬಹುದು. ''ಅಯ್ಯಾ ವೇದಾಂತಿ, ನಿರ್ವಿಕಲ್ಪವಾದ ಸದ್ವಸ್ತು ಸೃಷ್ಟಿಗೆ ಪೂರ್ವದಲ್ಲಿತ್ತು - ಎಂದು ಹೇಳಿದ್ದೀಯಲ್ಲ, ಈ ನಿರ್ವಿಕಲ್ಪವಸ್ತುವಿನಲ್ಲಿ ಆಕಾಶ, ವಾಯು, ಅಗ್ನಿ - ಮೊದಲಾದವು ಹೇಗೆ ಬಂದು ಸೇರಿದವು? ನಾಮರೂಪಗಳಿಲ್ಲದ ಸತ್ತಿನಲ್ಲಿ ನಾಮರೂಪಗಳು ಸೇರಿಕೊಂಡದ್ದು ಹೇಗೆ? ಈ ಮಾತು ಅನ್ಯೋನ್ಯ ವಿರುದ್ಧವಲ್ಲವೆ?'' ಅದಕ್ಕೆ ವೇದಾಂತಿಯ ಉತ್ತರ ಹೀಗಿದೆ. ನಾವು ಮಾಯಾ ಶಕ್ತಿಯೊಂದನ್ನು ಒಪ್ಪುತ್ತೇವೆ. ಅದು ಸದ್ವಸ್ತುವಾದ ಪರಬ್ರಹ್ಮದ ಶಕ್ತಿ. ಈ ಮಾಯೆಯು ಆಕಾಶ, ವಾಯು, ಅಗ್ನಿ ಮೊದಲಾದ ನಾಮರೂಪಗಳನ್ನು ನಿರ್ಮಿಸಿದೆ - ಎಂದು ನಮ್ಮ ಸಿದ್ಧಾಂತ. ಹಾಗಾದರೆ ಬೌದ್ಧನೂ ಸಹ ಶೂನ್ಯದಲ್ಲಿ ನಾಮರೂಪಗಳು ಕಲ್ಪಿತವಾಗಿವೆಯೆಂದು ಹೇಳಿದರೆ ಅದು ಸರಿಯಲ್ಲ. ಮೊದಲನೆಯದಾಗಿ ಶೂನ್ಯವು ವಸ್ತುವೇ ಅಲ್ಲವಾದ್ದರಿಂದ ಯಾವ ಕಲ್ಪನೆಗೂ ಆಶ್ರಯವಾಗದು. ಎರಡನೆಯದಾಗಿ ನಾಮರೂಪಗಳನ್ನು ಕಲ್ಪಿಸತಕ್ಕದ್ದು ಯಾವುದು? ಮೂರನೆಯದಾಗಿ ನಾಮರೂಪಗಳು ಕಲ್ಪಿತಗಳೆಂದು ಬೌದ್ಧರು

ಹೇಳುವುದಿಲ್ಲ. ಅವು ಕ್ಷಣಿಕ ಎಂದು ಮಾತ್ರ ಹೇಳುತ್ತಾರೆ. ಇಲ್ಲದಿದ್ದರೆ ಅಪಸಿದ್ಧಾಂತವಾಗುತ್ತದೆ. ಈ ಅಪಸಿದ್ಧಾಂತವು ಚಿರಕಾಲ ಬಾಳಲಿ - ಎಂದೇ ನಾವು ಹೇಳಬೇಕಾದೀತು! (೩೪).

ಬೌದ್ಧ - ಹಾಗಾದರೆ ವೇದಾಂತಿಗಳ ಮತದಲ್ಲಿಯೂ ಸದ್ವಸ್ತುವಿಗೆ ನಾಮರೂಪಗಳು ಕಲ್ಪಿತವಾಗಿವೆ ಎನ್ನಬೇಕಲ್ಲವೆ? ವಾಸ್ತವವಾದ ನಾಮರೂಪಗಳು ಇಲ್ಲವಷ್ಟೆ? ಈ ಪಕ್ಷವೇ ಸರಿಯಲ್ಲ. ಸದ್ವಸ್ತುವಿನಲ್ಲಿ ನಾಮರೂಪಗಳು ಕಲ್ಪಿತವಾಗಿ ಭ್ರಾಂತಿಯಿಂದ ತೋರುತ್ತವೆಯೆನ್ನುವುದು ಸಂಗತವಲ್ಲ. ಏಕೆಂದರೆ ಇಲ್ಲಿ ಮೂರು ವಿಕಲ್ಪಗಳನ್ನೆತ್ತಬಹುದು.

೧. ಸದ್ವಸ್ತುವಿನಲ್ಲಿ ನಾಮರೂಪಗಳು ಎಲ್ಲಿಂದ ಬಂದವು? ಸದ್ವಸ್ತುವಿನಲ್ಲಿಯೇ ಇದ್ದು ಕಲ್ಪಿತವಾದವೆ?

೨. ಅಥವಾ ಬೇರೆ ಕಡೆ ಇದ್ದು ಸದ್ವಸ್ತುವಿನಲ್ಲಿ ತೋರುತ್ತವೆಯೆ?

೩. ಅಥವಾ ಜಗತ್ತಿನಲ್ಲಿದ್ದ ನಾಮರೂಪಗಳು ಸತ್ತಿನಲ್ಲಿ ಕಲ್ಪಿತವಾದವೆ?

ಒಂದನೆಯ ಪಕ್ಷ ಸರಿಯಲ್ಲ. ಅನ್ಯತ್ರ ಇರುವ ಧರ್ಮಗಳು ಅನ್ಯತ್ರ ಕಲ್ಪಿತವಾಗುತ್ತವೆಯೇ ಹೊರತು, ಅದರಲ್ಲಿಯೇ ಇರುವ ಧರ್ಮಗಳು ಅದರಲ್ಲಿ ಕಲ್ಪಿತವಾಗಿವೆಯೆನ್ನುವುದು ಅಸಂಗತ.

ಎರಡನೆಯ ಪಕ್ಷವೂ ಸರಿಯಲ್ಲ. ಸದ್ವಸ್ತುವಿಗೆ ಹೊರತಾಗಿ ಬೇರೆ ಯಾವುದೂ ಇರಲಿಲ್ಲ. ಶೂನ್ಯವು ಯಾವ ಧರ್ಮಗಳಿಗೂ ಆಶ್ರಯವಾಗದು.

ಮೂರನೆಯ ಪಕ್ಷವೂ ಸರಿಯಲ್ಲ. ನಾಮರೂಪಗಳ ಸೃಷ್ಟಿಯೇ ಜಗತ್ತು. ಜಗತ್ತೇ ಇಲ್ಲದಾಗ ಅದರಲ್ಲಿದ್ದ ನಾಮರೂಪಗಳು - ಎನ್ನುವ ಮಾತು ಅರ್ಥಶೂನ್ಯವಾದದ್ದು.

ಹಾಗಾದರೆ ಆಶ್ರಯವಿಲ್ಲದೆಯೇ ಕಲ್ಪನೆಯಾಗಲಿ ಎನ್ನುವುದೂ ಸರಿಯಲ್ಲ. ಆಶ್ರಯವಿಲ್ಲದೆ ಯಾವ ಕಲ್ಪನೆಯೂ ಆಗುವುದೇ ಇಲ್ಲ. ಶೂನ್ಯದಲ್ಲಿ ಹಾಲನ್ನು ತುಂಬಿಸಲು ಸಾಧ್ಯವೆ?(೩೫). ಎಲೈ ವೇದಾಂತಿ, ನಿನ್ನ ಮತವೂ ಅಸಂಗತ. **'ಸದೇವ ಸೌಮ್ಯೇದಮಗ್ರ ಆಸೀತ್'** (ಛಾಂ.ಉ.೬-೨-೧) ಎಂಬ ಶ್ರುತಿವಾಕ್ಯಕ್ಕೆ ನಿನ್ನ ಮತದಲ್ಲಿ ಅರ್ಥವೇನು? 'ಆದಿಯಲ್ಲಿ ಸತ್ ಎಂಬುದೊಂದೇ ಇತ್ತು' ಎಂದು ನಿನ್ನ ಮತದಲ್ಲಿ ಅರ್ಥಹೇಳಬೇಕು. ಆಸೀತ್

ಶಬ್ದದಿಂದ ಬೋಧಿತವಾದದ್ದು ಸತ್ತೆಯೇ. ಆದಿಯಲ್ಲಿ ಸತ್ ಎಂಬುದು ಸತ್ ಆಗಿತ್ತು - ಎಂದಾಯಿತು. ಆಸೀಶ್ ಎಂಬ ಶಬ್ದದಿಂದ ಬೋಧಿತವಾಗುವ ಸತ್ ಪದಾರ್ಥವು ಕರ್ತೃಪದವಾದ ಸತ್ ಎಂಬುದಕ್ಕಿಂತ ಭಿನ್ನವೆ? ಅಭಿನ್ನವೆ? ಭಿನ್ನವಾದರೆ ಅದ್ವೈತಕ್ಕೆ ಹಾನಿಯಾಗುತ್ತದೆ. ಅಭಿನ್ನವಾದರೆ 'ಮರವೆಂದರೆ ಮರ' ಎಂದಂತೆ ಪುನರುಕ್ತಿಯಾಗುತ್ತದೆ ಎಂದು ಬೌದ್ಧನ ಆಕ್ಷೇಪ. ಈ ಅಕ್ಷೇಪಕ್ಕೆ ಉತ್ತರವೇನೆಂದರೆ - ಈ ಬಗೆಯ ಪುನರುಕ್ತಿಯು ದೋಷವಲ್ಲ. ಲೋಕದಲ್ಲಿ ಈ ರೀತಿ ಹೇಳುವುದು ಕಂಡುಬರುತ್ತದೆ (೩೬). ಕರ್ತವ್ಯವನ್ನು ಮಾಡುತ್ತಾನೆ. ಧರಿಸುವುದನ್ನು ಧರಿಸುತ್ತಾನೆ. ಕ್ರಿಯೆಯನ್ನು ನಡೆಸುತ್ತಾನೆ. ಲೇಖನವನ್ನು ಬರೆಯುತ್ತಾನೆ - ಎಂದು ಲೋಕದಲ್ಲಿ ಹೇಳುತ್ತಾರಷ್ಟೆ? ನಿದ್ರೆಯನ್ನು ಮಾಡಬೇಕು ಎಂದರೇನು? ಗಡಿಗೆಯನ್ನು ಮಾಡಿದಂತೆ ನಿದ್ರೆಯನ್ನು ಮಾಡಲು ಬರುತ್ತದೆಯೆ? ಇರುವ ವಸ್ತು ಇದೆ - ಎಂದು ಹೇಳುವುದಿಲ್ಲವೆ? ಇಲ್ಲದ್ದು ಇಲ್ಲ - ಎಂದು ಹೇಳಿದಾಗ ಪುನರುಕ್ತಿಯೆಂದು ಯಾರೂ ಆಕ್ಷೇಪಿಸುವುದಿಲ್ಲ. ಈ ಬಗೆಯ ಮಾತುಗಳನ್ನು ಕೇಳಿ ಹೇಳಿ ರೂಢಿಯಾದವನನ್ನು ಕುರಿತು ವೇದವು 'ಸದಾಸೀತ್' ಎಂದು ಹೇಳಿದೆ. 'ಸದ್ವಸ್ತು ಒಂದೇ ಇತ್ತು' ಎಂದು ಹೇಳಿದರೆ ಲೋಕದಲ್ಲಿ ಜನಸಾಮಾನ್ಯರು ಯಾರೂ ಪುನರುಕ್ತಿಯಾಯಿತೆಂದು ಆಕ್ಷೇಪಿಸುವುದಿಲ್ಲ. ಲೋಕ ರೂಢಿಯನ್ನರಿಯದ ಶುಷ್ಕಪಂಡಿತನು ಮಾತ್ರ ಆಕ್ಷೇಪಿಸಬಹುದು (೩೭). ಬೌದ್ಧ - ಒಳ್ಳೆಯದು; ''ಸೃಷ್ಟಿಯ ಆದಿಯಲ್ಲಿ, ಮೊದಲು, ಅಗ್ರೇ'' - ಈ ಶಬ್ದಗಳು ಕಾಲವಾಚಕಗಳು. ಬ್ರಹ್ಮವು ಅದ್ವಿತೀಯವೆಂದಾಗ ಕಾಲವೆಂಬ ದ್ವಿತೀಯ ವಸ್ತುವೂ ಇರಲಿಲ್ಲವೆಂದು ಒಪ್ಪಬೇಕಾಗುತ್ತದೆ ಮತ್ತು ಕಾಲವು ಕ್ರಿಯಾಸಾಪೇಕ್ಷವಾಗಿರುತ್ತದೆ. ಕ್ರಿಯೆ ಇಲ್ಲದೆ ಕಾಲವೂ ಇಲ್ಲ. ನಿರ್ವಿಶೇಷಬ್ರಹ್ಮದಲ್ಲಿ ಕ್ರಿಯೆಯೂ ಇಲ್ಲ. ಹೀಗಿರುವಾಗ ''ಪೂರ್ವದಲ್ಲಿ, ಸೃಷ್ಟಿಯ ಆರಂಭ ಕಾಲದಲ್ಲಿ, ಮೊದಲು'' ಎಂಬ ಶಬ್ದಗಳನ್ನಾದರೂ ಬಳಸುವುದು ಹೇಗೆ? ಉಪನಿಷತ್ತಿನಲ್ಲಿ 'ಅಗ್ರೇ' ಎಂದಿದೆ. ಇದು ಕಾಲ ವಾಚಕ. ಕಾಲವಿದ್ದರೆ ಬ್ರಹ್ಮವು ಅದ್ವಿತೀಯವಾಗುವುದಿಲ್ಲ. ಈ ಶಂಕೆಗೆ ಸಮಾಧಾನವೇನು? ಸಿದ್ಧಾಂತಿ - ಇಲ್ಲಿಯೂ ಹಿಂದೆ ಹೇಳಿದಂತೆಯೇ ಸಮಾಧಾನ. ಪ್ರತಿಯೊಬ್ಬರಿಗೂ ಕಾಲದ ಸಂಸ್ಕಾರವಿದ್ದೇ ಇರುತ್ತದೆ. ಸೃಷ್ಟಿಯ ಆರಂಭದಲ್ಲಿ, ಮೊತ್ತ ಮೊದಲು ಎಂದು ಗುರುವು ಹೇಳಿದರೆ, ಶಿಷ್ಯನಿಗೆ ಇಂತಹ ಸಂದೇಹ ಬರುವುದೇ ಇಲ್ಲ! ದ್ವೈತವಾಸನೆ ಅಷ್ಟು ಬಲವಾಗಿ

ಮನುಷ್ಯನಿಗೆ ಅಂಟಿಕೊಂಡು ಬಿಟ್ಟಿದೆ. ಇನ್ನೊಂದು ವಿಷಯವನ್ನು ತಿಳಿದಿರಬೇಕು. ದ್ವೈತದಲ್ಲಿ ನಿಂತೇ ಅದ್ವೈತವನ್ನು ಬೋಧಿಸಬೇಕಾಗಿದೆ. ವ್ಯವಹಾರದಲ್ಲಿ ಇದು ಅನಿವಾರ್ಯ. ಪರಮಾರ್ಥಸತ್ಯದಲ್ಲಿ ವ್ಯವಹಾರವೇ ಇರುವುದಿಲ್ಲ. ಗುರು, ಶಿಷ್ಯ, ಗ್ರಂಥ, ಉಪದೇಶ - ಇಂತಹ ಶಬ್ದಗಳನ್ನೂ ಸಹ ದ್ವೈತವಿಲ್ಲದೆ ಬಳಸಲಾಗುವುದಿಲ್ಲ. ಆದ್ದರಿಂದ ಲೋಕ ವ್ಯವಹಾರವನ್ನಿಟ್ಟು ಕೊಂಡು ಪರಮಾರ್ಥಬೊಧನೆಯನ್ನು ಆಕ್ಷೇಪಿಸಬಾರದು (೩೮). ಶಂಕೆಮಾಡುವುದೂ ದ್ವೈತ ಭಾಷೆಯಲ್ಲಿ, ಅದಕ್ಕೆ ಉತ್ತರ ಹೇಳುವುದೂ ದ್ವೈತ ಭಾಷೆಯಲ್ಲಿಯೇ ಇದೆಲ್ಲವೂ ಲೋಕ ವ್ಯವಹಾರದಲ್ಲಿ ಸೇರುತ್ತದೆ. ವ್ಯವಹಾರವೆಂದೊಡನೆ ದ್ವೈತವು ಅಂಟಿಕೊಂಡೇ ತೀರುತ್ತದೆ. ಅದ್ವೈತ ಸ್ಥಿತಿಯು ಪರಮಾರ್ಥ ಸತ್ಯ. ಅದರಲ್ಲಿದ್ದಾಗ ಶಂಕೆಯೂ ಇರುವುದಿಲ್ಲ. ಉತ್ತರವೂ ಇರುವುದಿಲ್ಲ. ಬರಿಯ ಮೌನವೇ (೩೯). ಆಗ ದ್ವೈತ ನಿಷೇಧಕ್ಕೆ ಅವಧಿ ಯಾದ ಒಂದು ಸದ್ವಸ್ತುವಿತ್ತು. ಅದು ಶೂನ್ಯವಲ್ಲ. ಅದು ನಿಶ್ಚಲವಾಗಿದ್ದು ತಿಳಿಯಲಶಕ್ಯವಾದ ಗಂಭೀರವಸ್ತು. ಅದು ತೇಜಸ್ಸಲ್ಲ. ಆವರಿಸಿಕೊಳ್ಳುವ ಕತ್ತಲೆಯಲ್ಲ. ಸರ್ವವ್ಯಾಪಿಯಾದದ್ದು. ಶಬ್ದದಿಂದ ವರ್ಣಿಸಿ ಹೇಳಲು ಅಸಾಧ್ಯವಾದದ್ದು. ಯಾವ ಇಂದ್ರಿಯಕ್ಕೂ ಗೋಚರವಾಗತಕ್ಕದ್ದಲ್ಲ (೪೦). ಆಗ ಭೂಮಿ, ಜಲ ಮೊದಲಾದದ್ದು ಯಾವುದೂ ಇರಲಿಲ್ಲ. ಪರಮಾಣುವೂ ಇರಲಿಲ್ಲ. ಬೌದ್ಧ - ಆಗಲಿ; ಭೂಮಿ, ಪರಮಾಣುಗಳೆಲ್ಲವೂ ನಾಶವಾಗಿದ್ದವೆಂದೋ ಹುಟ್ಟಲೇ ಇಲ್ಲವೆಂದೋ ತಿಳಿಯೋಣ. ಪಂಚಭೂತಗಳಲ್ಲಿ ಆಕಾಶವೂ ಇರಲಿಲ್ಲವೆನ್ನುವುದು ಹೇಗೆ? ಆಕಾಶವು ನಾಶವಾಗುತ್ತದೆ ಅಥವಾ ಹುಟ್ಟುತ್ತದೆ ಎಂದರೆ ಅರ್ಥವೇ ಆಗುವುದಿಲ್ಲ. ಭೂಮಿ, ಜಲ, ಅಗ್ನಿ, ವಾಯು ಇವು ಇರಲೇ ಇಲ್ಲವೆಂದರೆ, ಅವು ಇಲ್ಲದ ಸ್ಥಿತಿಯನ್ನು ಮನಸ್ಸಿನಲ್ಲಿ ಕಲ್ಪಿಸಿಕೊಳ್ಳಲು ಬರುತ್ತದೆ. ಆದರೆ ಆಕಾಶವಿರಲಿಲ್ಲ ಎನ್ನುವುದು ಬುದ್ಧಿಗೆ ಹತ್ತುವುದೇ ಇಲ್ಲ! ಆಕಾಶವಿಲ್ಲದ ಒಂದು ಸ್ಥಿತಿಯನ್ನು ಕಲ್ಪಿಸಿಕೊಳ್ಳುವುದಕ್ಕೂ ಬರುವುದಿಲ್ಲ. ಆಕಾಶವಿರಲಿಲ್ಲ ಎನ್ನುವುದು ಹೇಗೆ? (೪೧) ಸಿದ್ಧಾಂತಿ - ನಿಜ; ಈ ಜಗತ್ತೇ ಇರಲಿಲ್ಲ. ಭೂಮ್ಯಾದಿಗಳಿರಲಿಲ್ಲ - ಎಂದರೆ ಆ ಸ್ಥಿತಿಯು ನಿನ್ನ ಬುದ್ಧಿಗೆ ಹತ್ತುತ್ತದೆ. ಆ ಸ್ಥಿತಿಯನ್ನು ಮನಸ್ಸಿನಲ್ಲಿ ಕಲ್ಪಿಸಿಕೊಳ್ಳಬಲ್ಲೆ ಎಂದಾಯಿತು. ಹಾಗೆಯೇ ಆಕಾಶವೂ ಇಲ್ಲದ ಸ್ಥಿತಿ ಏಕೆ ನಿನ್ನ ಬುದ್ಧಿಗೆ ಹತ್ತುವುದಿಲ್ಲ? ಅದನ್ನು ಮನಸ್ಸಿನಲ್ಲಿ ಕಲ್ಪಿಸಿಕೊಳ್ಳಬಹುದಲ್ಲ! (೪೨).

ಹಾಗಾದರೆ ಆಕಾಶವೊಂದನ್ನು ಬಿಟ್ಟು ಈ ಜಗತ್ತು, ಬೆಳಕು, ಕತ್ತಲೆ - ಇವು ಯಾವುವೂ ಇಲ್ಲದ ಸ್ಥಿತಿಯು ನಿನ್ನ ಬುದ್ಧಿಗೆ ಹತ್ತುವುದೆಂದೂ ಆಕಾಶವು ಮಾತ್ರ ಕಾಣಿಸುತ್ತಲೇ ಇರುವುದೆಂದೂ ನೀನು ಹೇಳಿದ ಹಾಗಾಯಿತು ! ಅಯ್ಯಾ, ನೀನು ಬರಿಯ ಬೆಳಕನ್ನೋ ಅಥವಾ ಕತ್ತಲೆಯನ್ನೋ ಕಂಡಿದ್ದೀಯೆ. ಅವೆರಡನ್ನು ಬಿಟ್ಟು ನೀನು ಆಕಾಶವನ್ನು ಎಲ್ಲಿ ನೋಡಿದ್ದೀಯೆ? ನೋಡಿದ್ದೀಯೆಂದು ಸಾಧಿಸುವುದಕ್ಕೆ ನಿನ್ನ ಪಕ್ಷದಲ್ಲಿ ಯಾವ ಆಧಾರವಿದೆ? ಆಕಾಶಕ್ಕೆ ರೂಪವೇ ಇಲ್ಲವಲ್ಲ ! ರೂಪವಿಲ್ಲದ್ದನ್ನು ನೀನು ನೋಡಿದೆಯಾ?(೪೩) ಬೌದ್ಧ - ಹಾಗಾದರೆ ಒಂದು ವಸ್ತುವಿದೆಯೆನ್ನುವುದು ನೋಡಿದ್ದರಿಂದ ಮಾತ್ರ ಸಿದ್ಧವಾಗುತ್ತದೆಯೆಂದು ಹೇಳುವಿರಾ? ನೀವು ಸದ್ವಸ್ತುವಿದೆಯೆಂದು ಸತ್, ಸತ್ ಎಂದು ಹೇಳುತ್ತಲೇ ಇದ್ದೀರಲ್ಲ, ಸದ್ವಸ್ತುವಿಗೆ ರೂಪವಿದೆಯೆ? ಅದನ್ನು ನೀವು ಕಂಡಿದ್ದೀರಾ? ಇದಕ್ಕೆ ಸಿದ್ಧಾಂತಿಯ ಉತ್ತರವೇನೆಂದರೆ: ನಿಶ್ಚಿತವಾದ ಜ್ಞಾನವುಳ್ಳ ನಮಗೆ ಸುಮ್ಮನೆ ಮೌನವಾಗಿ ಕುಳಿತಿದ್ದಾಗ 'ಸತ್' ಎಂಬ ಶುದ್ಧ ಪರಮಾತ್ಮವಸ್ತು ಅನುಭವಕ್ಕೆ ಬರುತ್ತದೆ. ಅದನ್ನು ಕಣ್ಣಿನಿಂದ ನಾವು ನೋಡಬೇಕಿಲ್ಲ; ಇಂದ್ರಿಯಗಳಿಗೆ ಅದು ಗೋಚರವಾಗತಕ್ಕದ್ದೂ ಅಲ್ಲ; ಆದ್ದರಿಂದ ಅನುಭವಕ್ಕೆ ಬರುವ ವಸ್ತು ಇಲ್ಲವೆನ್ನುವುದು ಯುಕ್ತವಲ್ಲ. ಅದು ಶೂನ್ಯವಲ್ಲ. ಏಕೆಂದರೆ, ಶೂನ್ಯವೆಂಬ ಪ್ರತೀತಿಯೇ ಆಗ ಬರುವುದಿಲ್ಲ(೪೪).

ಶಂಕೆ - ಹಾಗಿದ್ದರೆ 'ಸತ್' ಎಂಬ ಪ್ರತೀತಿಯೂ ಬರುವುದಿಲ್ಲವಾದ್ದರಿಂದ ಸದ್ವಸ್ತು ಇಲ್ಲವೆಂದೇ ಆಗುತ್ತದೆ.

ಉತ್ತರ - ಹಾಗಲ್ಲ; ಸತ್ ಎಂಬ ಬುದ್ಧಿಯು ಹುಟ್ಟದಿದ್ದರೇನಾಯಿತು? ಸದ್ವಸ್ತು ಸ್ವಯಂ ಪ್ರಕಾಶವಾದದ್ದು; ಸ್ವಯಂ ಜ್ಯೋತಿ. ಅದು ಬುದ್ಧಿ ಗೋಚರವಾಗದಿರುವುದು ಸಹಜ. 'ಅಪ್ರಾಪ್ಯ ಮನಸಾ ಸಹ' (ತೈ.ಉ.೨-೪) ಎಂದು ಶ್ರುತಿಯೇ ಹೇಳುತ್ತದೆಯಲ್ಲವೆ? ''ನಾನು ಸುಮ್ಮನಿದ್ದೇನೆ. ನನ್ನ ಮನಸ್ಸು ಯಾವ ಚಿಂತನೆಯಲ್ಲಿಯೂ ತೊಡಗಿಲ್ಲ'' ಎಂಬುದು ನಮಗೆ ಗೊತ್ತಾಗುತ್ತದೆಯಷ್ಟೆ. ಮನಸ್ಸು ಶಾಂತವಾಗಿದೆಯೆಂಬುದಕ್ಕೆ ಯಾವುದು ಸಾಕ್ಷಿಯಾಗಿದೆಯೋ ಅದೇ ಸದ್ವಸ್ತು. ಸ್ವಲ್ಪ ಆಲೋಚಿಸಿ ನೋಡಿದರೆ ಎಲ್ಲರಿಗೂ ಇದು ಹೊಳೆಯುತ್ತದೆ (೪೫). ಶ್ರೀಶಂಕರಾಚಾರ್ಯರು ಏಕಶ್ಲೋಕಿಯಲ್ಲಿ ಇದನ್ನು ಸುಂದರವಾಗಿ ಪ್ರತಿಪಾದಿಸಿದ್ದಾರೆ. ಅದು ಗುರು-ಶಿಷ್ಯ

ಸಂವಾದರೂಪದಲ್ಲಿದೆ-

ಗುರು - ''ನಿನಗೆ ವಸ್ತುವನ್ನು ಬೆಳಗಿ ತೋರಿಸುವ ಜ್ಯೋತಿ ಯಾವುದು?

ಶಿಷ್ಯ - ಹಗಲು ಹೊತ್ತು ಸೂರ್ಯನು ನನಗೆ ಜ್ಯೋತಿ. ರಾತ್ರಿಯಲ್ಲಿ ದೀಪ, ಚಂದ್ರ ಇತ್ಯಾದಿ.

ಗುರು - ಸರಿ; ಸೂರ್ಯನನ್ನೂ ದೀಪವನ್ನೂ ಕಾಣಿಸುವ ಜ್ಯೋತಿ ಯಾವುದು?

ಶಿಷ್ಯ - ಕಣ್ಣು!

ಗುರು - ಕಣ್ಣನ್ನು ಮುಚ್ಚಿದಾಗ ಯಾವುದು? ನೇತ್ರ ದೋಷವಿದ್ದಾಗ ಯಾವುದು? ಆಗಲೂ ವಸ್ತು ಸ್ವರೂಪವು ತೋರುತ್ತದೆಯಲ್ಲವೆ?

ಶಿಷ್ಯ - ಆಗ ಬುದ್ಧಿ ಅಥವಾ ಮನಸ್ಸು ಜ್ಯೋತಿಯಾಗುತ್ತದೆ.

ಗುರು - ಬುದ್ಧಿಗೆ ಅಥವಾ ಮನಸ್ಸಿಗೆ ವಸ್ತುಗಳು ತೋರುತ್ತವೆಯೆಂದು ತಿಳಿಯುತ್ತದೆಯಲ್ಲವೆ? ಆ ತಿಳಿವಿಗೆ ಜ್ಯೋತಿ ಯಾವುದು?

ಶಿಷ್ಯ - ಪೂಜ್ಯರೇ, ಆಗ ನಾನೇ ಜ್ಯೋತಿ. 'ಅಹಂ' ಎಂಬುದೇ ಜ್ಯೋತಿ.

ಗುರು - ನೋಡಿದಿಯೇನಪ್ಪ. ಜ್ಯೋತಿಯಾಗಿ ಸರ್ವೋತ್ತಮವಾದ ಜ್ಯೋತಿಯು ನೀನೇ ಆಗಿದ್ದೀಯೆ. ಪರಂಜ್ಯೋತಿ ನೀನು.

ಶಿಷ್ಯ - ಹೌದು ಗುರುಗಳೆ. ನಾನು ಪರಂಜ್ಯೋತಿಯಾದ ಸದ್ವಸ್ತು.'' ಈ ಶ್ಲೋಕವು ಈ ರೀತಿಯಾಗಿದೆ.

> **ಕಿಂ ಜ್ಯೋತಿಸ್ತವ ಭಾನುಮಾನಹನಿ ಮೇ ರಾತ್ರೌ ಪ್ರದೀಪಾದಿಕಂ**
> **ಸ್ಯಾದೇವಂ ರವಿದೀಪದರ್ಶನವಿಧೌ ಕಿಂ ಜ್ಯೋತಿರಾಖ್ಯಾಹಿ ಮೇ ।**
> **ಚಕ್ಷುಸ್ತಸ್ಯ ನಿಮೀಲನಾದಿಸಮಯೇ ಕಿಂ ಧೀರ್ಧಿಯೋ ದರ್ಶನೇ**
> **ಕಿಂ ತತ್ರಾಹಮತಃ ಪರಮಕಂ ಜ್ಯೋತಿಸ್ತದಸ್ಮಿ ಪ್ರಭೋ ॥**

ಹೀಗೆ ಮನಸ್ಸು ಚಲಿಸದೆ ನಿಷ್ಪಂದವಾದಾಗ ಮೌನಕ್ಕೆ ಸಾಕ್ಷಿಯಾಗಿ ಯಾವ ಪ್ರಕಾರದಲ್ಲಿ ಸದ್ವಸ್ತುವು ನಿರಾತಂಕವಾಗಿ ಸಿದ್ಧವಾಗುವುದೋ ಹಾಗೆಯೇ ಮಾಯೆಯು ವಿಜೃಂಭಿಸುವುದಕ್ಕೆ ಮೊದಲು ಸಹ ಸೃಷ್ಟಿಯ ಆರಂಭದಲ್ಲಿ ಆ ಸದ್ವಸ್ತುವು ಇರುತ್ತದೆಯೆಂದು ನಿರಾತಂಕವಾಗಿ ಸಿದ್ಧವಾಗುತ್ತದೆ(೪೬).

ಮಾಯೆಯೆಂದರೇನು? ಜಗತ್ತಿಗೆ ಕಾರಣವಾದ ಮೂಲವಸ್ತುವೇ ಸತ್. ಅದಕ್ಕಿಂತ ಪ್ರತ್ಯೇಕವಾಗಿ ಮಾಯೆಗೆ ಅಸ್ತಿತ್ವ ಇಲ್ಲ. ಪಂಚಭೂತಾದಿ ಜಗತ್ತನ್ನು ಸೃಷ್ಟಿಸುವುದು ಇದರ ಕಾರ್ಯ. ಈ ಕಾರ್ಯವನ್ನು ನೋಡಿ ಇದಕ್ಕೊಂದು ಕಾರಣವಿದೆಯೆಂದು ನಿಶ್ಚಯಿಸಬಹುದು. ಈ ಕಾರಣವೇ ಮಾಯೆ. ಅಗ್ನಿಯಲ್ಲಿ ದಾಹಕತ್ವ ಶಕ್ತಿ ಇದೆ. ಈ ಶಕ್ತಿಯು ಮನೆ, ಮರ, ಮಠ, ಬಟ್ಟೆ- ಮೊದಲಾದ್ದನ್ನು ಸುಟ್ಟು ಬೂದಿ ಮಾಡಬಲ್ಲದು. ಈ ಬೂದಿ ಮಾಡುವ ಕಾರ್ಯದಿಂದ ಕಾರಣವಾಗಿ ಅಗ್ನಿಯಲ್ಲಿ ಶಕ್ತಿ ಇದೆಯೆಂದು ನಾವು ನಿಶ್ಚಯಿಸಬಹುದು. ಹಾಗೆಯೇ ಜಗತ್ತನ್ನೂ ಇದರ ವೈವಿಧ್ಯಗಳನ್ನೂ ಕಂಡು, ಅಗ್ನಿಯಲ್ಲಿ ನೀವು ಹೇಳಿದ ದಾಹಕತ್ವ ಶಕ್ತಿಯನ್ನು ಊಹಿಸಿದಂತೆ ಜಗತ್ತಿಗೆ ಕಾರಣವಾಗಿ ಮಾಯೆಯೆಂಬ ಒಂದು ಶಕ್ತಿ ಇದೆಯೆಂದು ನಿಶ್ಚಯಿಸಬಹುದು. ಒಂದು ಕಾರ್ಯವು ಹುಟ್ಟುವುದಕ್ಕೆ ಮೊದಲು ಯಾವುದರಲ್ಲಿ ಯಾವ ಶಕ್ತಿ ಅಡಗಿದೆಯೆಂಬುದನ್ನು ತಿಳಿಯಲಾಗುವುದಿಲ್ಲ (೪೭). ಮಾಯೆಯು ಜಗತ್ಕಾರಣವಾದ ಸದ್ವಸ್ತುವಿಗಿಂತ ಭಿನ್ನವಾದ ಇನ್ನೊಂದು ವಸ್ತುವಲ್ಲ. ಅದು ಸತ್ ಆದರೆ ಸದ್ವಸ್ತುವೇ ಆಗಬೇಕು. ಆಗ ಸದ್ವಸ್ತುವಿನ ಶಕ್ತಿ ಎನ್ನಲಾಗುವುದಿಲ್ಲ. ಅಗ್ನಿಯಲ್ಲಿರುವ ದಾಹಕತ್ವ ಶಕ್ತಿಯು ಅಗ್ನಿಗಿಂತ ಬೇರೆ. ಅಗ್ನಿಯೇ ಶಕ್ತಿಯಲ್ಲ. ಆದ್ದರಿಂದಲೇ ಮಣಿಮಂತ್ರಾದ್ಯೌಷಧಗಳಿಂದ ಅಗ್ನಿಯು ಸುಡುವುದನ್ನು ತಡೆಗಟ್ಟಬಹುದು. ಅಗ್ನಿಯು ಶಕ್ತಿರೂಪವೇ ಆದರೆ ತಡೆಗಟ್ಟುವುದು ಯಾವುದನ್ನು? ಮಣಿಮಂತ್ರಾದ್ಯೌಷಧಿಗಳನ್ನು ಮಾಡಿದಾಗಲೂ ಅಗ್ನಿಯು ಇದ್ದೇ ಇರುತ್ತದೆ (೪೮). 'ಮಾಯೆಯ ಸ್ವರೂಪವು ಶೂನ್ಯತೆ' ಎನ್ನುವುದು ಅಪಸಿದ್ಧಾಂತ. ಶೂನ್ಯಕ್ಕೆ ನಾಮರೂಪಗಳೆಲ್ಲಿಂದ ಬರುತ್ತವೆ? ಏನೂ ಇಲ್ಲದಿರುವುದೇ ಶೂನ್ಯ. ಅದಕ್ಕೆ ಜಗತ್ತೆಂಬ ನಾಮರೂಪಗಳಿರುತ್ತವೆಯೆ? ನಾಮ ರೂಪಗಳಿಗೆ ಒಂದು ಅಧಿಷ್ಠಾನ (ಆಶ್ರಯ) ವಿರಬೇಕು. ಅಧಿಷ್ಠಾನವೆಂಬ ಆಧಾರವಸ್ತುವೇ ಇಲ್ಲದಾಗ ನಾಮರೂಪಗಳು ಬರುತ್ತವೆಯೆಂಬುದು ಹುಂಬತನ. ಆದ್ದರಿಂದ ಮಾಯೆಯು ಸತ್ ಅಲ್ಲ, ಏಕೆಂದರೆ ಅದು ಶಾಶ್ವತವಲ್ಲ. ಸದ್ವಿಲಕ್ಷಣವಾದ ಅಸತ್ ಆದರೆ ನಾಮರೂಪಾತ್ಮಕವಾದ ಜಗತ್ತು ಇಲ್ಲವೆಂದಾದೀತು. ಜಗತ್ತು ಕಾಣಿಸುವುದಿಲ್ಲ ಎಂದಾದೀತು. ಏವಂಚ ಮಾಯೆಯು ಸತ್ ಅಸತ್ ಎರಡೂ ಅಲ್ಲ. ಆದ್ದರಿಂದ ಮಾಯೆಯು ಸದಸದ್ವಿಲಕ್ಷಣವಾದ ಅನಿರ್ವಚನೀಯ ಎಂದು ಒಪ್ಪಿಕೊಳ್ಳಬೇಕು. ಈ ವಿಷಯವನ್ನು ಸುಲಭಗೊಳಿಸಿ ಹೇಳುವುದಾದರೆ ಹೀಗೆ- ಪರಬ್ರಹ್ಮವು

ಸತ್. ಅದಕ್ಕಿಂತ ಬೇರೆಯಾದ ಇನ್ನೊಂದು ತತ್ತ್ವವಿಲ್ಲ. ಜಗತ್ತು ಮಾಯಾಕಲ್ಪಿತ. ಮಾಯೆ ಸದ್ವಸ್ತುವಿನಲ್ಲಿ ಕಾಣಿಸುವ ಒಂದು ಶಕ್ತಿ. ಅದು ಸತ್ಯವಾಗಿ ಇರತಕ್ಕದ್ದಲ್ಲ. ಸತ್ಯವಾದರೆ ಅದು ಪರಬ್ರಹ್ಮವೇ ಎನ್ನಬೇಕಾದೀತು. ಆಗ ಜಗತ್ತು ಸಹ ಸತ್ಯವಾಗಿ ಬಿಡುತ್ತದೆ. ಜಗತ್ತು ಸತ್ಯವಾದರೆ ಬ್ರಹ್ಮವು ಅದ್ವಿತೀಯವಾಗುವುದಿಲ್ಲ. ಎಂದರೆ ಅದ್ವೈತವು ಸಿದ್ಧಿಸುವುದಿಲ್ಲ. ಉಪನಿಷತ್ತುಗಳ ಸಿದ್ಧಾಂತವು ಅದ್ವೈತವೇ ಆಗಿದೆ. ಆದ್ದರಿಂದ ಮಾಯೆ ಸತ್ ಅಲ್ಲ. ಅಸತ್ ಎನ್ನುವಂತೆಯೂ ಇಲ್ಲ. ಅಸತ್ ಎಂದರೆ ಶೂನ್ಯ. ಆಗ ಮಾಯೆಯು ಇಲ್ಲವೆಂದೇ ಆಗಿಬಿಡುತ್ತದೆ. ಮಾಯೆಯಿಲ್ಲದಿದ್ದರೆ ಜಗತ್ತು ಎಲ್ಲಿಂದ ಬಂದೀತು? ಎಂಬ ಪ್ರಶ್ನೆಗೆ ಉತ್ತರವಿಲ್ಲದೇ ಹೋಗುತ್ತದೆ. ಸತ್ - ಅಸತ್ ಎರಡೂ ಹೌದು ಎನ್ನುವುದು ಅಸಂಗತ. ಆದ್ದರಿಂದ ಮಾಯೆಯು ಸದಸದ್ವಿಲಕ್ಷಣವಾದದ್ದು. ಅನಿರ್ವಚನೀಯ ಎಂದು ಅಂಗೀಕರಿಸಬೇಕು. ಹೀಗೆ ಅನಿರ್ವಚನೀಯ ವಾದದ್ದು ಲೋಕದಲ್ಲಿ ಎಷ್ಟೋ ಉಂಟು. ಕನಸನ್ನೇ ಉದಾಹರಣೆಯಾಗಿಟ್ಟು ಕೊಳ್ಳಬಹುದು. ಕನಸಿನಲ್ಲಿ ಕಂಡ ಸಂಗತಿ ಸತ್ಯವೆ? ಅಸತ್ಯವೆ? ಸತ್ಯವೆಂದರೆ ಎಚ್ಚರವಾದ ಮೇಲೂ ಇರಬೇಕು. ಅಸತ್ಯವಾದರೆ ಕನಸಿನಲ್ಲಿಯೂ ಕಾಣಿಸಬಾರದು. ಕನಸಿನಲ್ಲಿ ಮಾತ್ರ ಸತ್ಯ ಎನ್ನುವುದು ಅನುಚಿತ. ತಾತ್ಕಾಲಿಕ ಸತ್ಯವೆನ್ನುವುದು ಇಲ್ಲ. ಲೋಕವ್ಯವಹಾರದಲ್ಲಿ ಇದ್ದೀತು. ಪರಮಾರ್ಥ ದಲ್ಲಿಲ್ಲ(೪೯).

ಮಾಯೆಯು ಸತ್ ಅಲ್ಲ, ಅಸತ್ ಅಲ್ಲ ಸದಸದ್ವಿಲಕ್ಷಣವಾದದ್ದು - ಎಂದು ಹೇಳಿದೆವು. ಇದು ಬಹಳ ವಿಲಕ್ಷಣವಾಯಿತಲ್ಲವೆ? ಯಾವುದೇ ಒಂದು ವಸ್ತು ಇರುತ್ತದೆ ಅಥವಾ ಇರುವುದಿಲ್ಲ. ' ಇದೆ - ಇಲ್ಲ' ಎಂಬುದಕ್ಕೆ ಅತೀತವಾದ ಒಂದು ವಸ್ತು ಇದೆಯೆಂದರೆ ಅರ್ಥವೇನು? ಇದೆ ಇಲ್ಲಗಳಿಗೂ ಬೇರೆಯಾಗಿ ಮೂರನೆಯದಿದೆಯೆಂದರೆ ಯಾರೂ ನಂಬಲಾರರು - ಎಂಬ ಶಂಕೆ ಇಲ್ಲಿ ತಲೆದೋರುತ್ತದೆ. ಇದಕ್ಕೆ ಉತ್ತರವೇನೆಂದರೆ, ಆ ವಸ್ತುವಿದೆಯೆಂಬುದನ್ನು ಶ್ರುತಿಯೇ ಹೇಳಿದೆ. ''**ನಾಸದಾಸೀತ್ ನೋ ಸದಾಸೀತ್ ತದಾನೀಂ, ತಮ ಆಸೀತ್ ತಮಸಾ ಗೂಢಮಗ್ರೇ**'' ಇದು ಋಗ್ವೇದದಲ್ಲಿ ನಾಸದೀಯಸೂಕ್ತವೆಂದು ಪ್ರಸಿದ್ಧವಾಗಿದೆ. ''ಸೃಷ್ಟಿಯ ಆರಂಭದಲ್ಲಿ ಅಸತ್ ಇರಲಿಲ್ಲ. ಸತ್ ಎಂಬುದೂ ಇರಲಿಲ್ಲ. ಆಗ ತಮಸ್ ಇತ್ತು. ಇದೆಲ್ಲವೂ ತಮಸ್ಸಿನಿಂದ ಮುಚ್ಚಿಹೋಗಿತ್ತು'' ಎಂದು ಈ ವೇದಭಾಗದ

ಅರ್ಥ. ಅಲ್ಲಿಗೆ ತಮಸ್ ಎನ್ನುವುದು ಸದಸದ್ವಿಲಕ್ಷಣವೆಂಬುದು ಸ್ಪಷ್ಟವಾಗುತ್ತದೆ. ತಮಸ್ ಎಂದರೆ ಕತ್ತಲೆ. ಪದಾರ್ಥವನ್ನು ಮರೆಮಾಡುವ ಸ್ವಭಾವ ಕತ್ತಲೆಯದು. ಪ್ರಕೃತದಲ್ಲಿ ಕತ್ತಲೆಯೆಂದರೆ ಅಜ್ಞಾನವೆಂದರ್ಥ. ಅದೇ ಅವಿದ್ಯೆ. ಅವಿದ್ಯೆಯೇ ಮಾಯೆ. ಹಾಗಾದರೆ ಮಾಯೆ ಇತ್ತು ಎನ್ನುವುದು ಹೇಗೆ? 'ತಮ ಆಸೀತ್' ಎಂಬುದರಿಂದ ಮಾಯೆಗೆ ಸತ್ತೆಯನ್ನು ಹೇಳಿದಂತಾಯಿತಲ್ಲವೆ? ಹೌದು; ಈ ಸತ್ತೆಯು ಸದ್ವಸ್ತುವಾದ ಬ್ರಹ್ಮವಿದ್ದುದರಿಂದ ಮಾಯೆಗೆ ಬಂದ ಅಸ್ತಿತ್ವವೇ ಹೊರತು ಸ್ವತಃ ಅಲ್ಲ. ಬ್ರಹ್ಮವು ಅದ್ವಿತೀಯವೆಂದೂ ಎರಡನೆಯ ವಸ್ತುವಿಲ್ಲವೆಂದೂ ಹೇಳಿದೆ (೫೦). ಆದ್ದರಿಂದಲೇ ಮಾಯೆ ಶೂನ್ಯವಿದ್ದಂತೆ ಎಂದು ಭಾವಿಸಿ, ಅದನ್ನು ದ್ವಿತೀಯ ವಸ್ತುವೆಂದು ಗಣಿಸಿಲ್ಲ. ಉದಾಹರಣೆಗೆ, ಚೈತ್ರ ಎಂಬ ಒಬ್ಬ ಮನುಷ್ಯನಿರುತ್ತಾನೆ. ಅವನಿಗೆ ಭಾವಿಯಿಂದ ನೀರನ್ನು ಸೇದುವ ಶಕ್ತಿ ಇದೆ. ಬೇರೆ ವಿಧವಾದ ಶಕ್ತಿಯೂ ಇರಬಹುದು. ಆದರೂ ಚೈತ್ರನು ಒಬ್ಬನೆಂದು ಹೇಳುತ್ತಾರೆಯೇ ಹೊರತು, ಚೈತ್ರ ಮತ್ತು ಅವನ ಶಕ್ತಿ ಎಂಬ ಎರಡು ವಸ್ತುಗಳಿವೆಯೆಂದು ಯಾರೂ ಹೇಳುವುದಿಲ್ಲ. ಈ ಪ್ರಕರಣದ ತಾತ್ಪರ್ಯವಿಷ್ಟು:- ಪರಬ್ರಹ್ಮವಸ್ತುವಿಗೆ ಮಾಯೆಯೆಂಬ ಶಕ್ತಿಯುಂಟು. ಹಿಂದೆ ವಿವರಿಸಿರುವಂತೆ ಅದು ಸತ್ ಅಸತ್ ಎರಡೂ ಅಲ್ಲ. ಅದು ಶೂನ್ಯದಂತೆ ಗಣನೆಗೆ ಬರತಕ್ಕದ್ದಲ್ಲ. ಪರಮಾರ್ಥದಲ್ಲಿ ಅದು ಮಿಥ್ಯೆಯೇ. ಆದ್ದರಿಂದ ಬ್ರಹ್ಮವು ಅದ್ವಿತೀಯವೆಂದು ತಿಳಿಯತಕ್ಕದ್ದು (೫೧). ಚೈತ್ರನಲ್ಲಿ ಶಕ್ತಿಯಿರುವುದರಿಂದ ಅವನು ಕೆಲಸಮಾಡಿ ಹಣವನ್ನು ಸಂಪಾದಿಸುತ್ತಾನೆ. ಮನೆಯನ್ನು ಕಟ್ಟಿಕೊಳ್ಳುತ್ತಾನೆ. ಹೊಲ ಗದ್ದೆಗಳನ್ನು ಕೊಳ್ಳುತ್ತಾನೆ. ದನ ಕರುಗಳು ಬಂದು ಸೇರುತ್ತವೆ. ಹೀಗೆ ಅವನು ಅಭಿವೃದ್ಧಿ ಹೊಂದುತ್ತಾನೆ. ಶ್ರೀಮಂತ ಎನ್ನಿಸಿಕೊಳ್ಳುತ್ತಾನೆ. ಅವನನ್ನು ಶ್ರೀಮಂತನನ್ನಾಗಿ ಮಾಡಿದ ಶಕ್ತಿಯು ಚೈತ್ರನಿಗಿಂತ ಬೇರೆಯದೆಂದು ಹೇಳಬೇಕಾಗುತ್ತದಲ್ಲವೆ? ಹಾಗಲ್ಲ; ಅವನು ಶ್ರೀಮಂತನೆನಿಸಿಕೊಂಡಿದ್ದು ಶಕ್ತಿಕಾರ್ಯಗಳಾದ ಮನೆ, ಹೊಲ, ಗದ್ದೆ ಮೊದಲಾದವುಗಳಿಂದ. ಬರಿಯ ಶಕ್ತಿಯಿಂದಲ್ಲ, ಒಳ್ಳೆಯದು. ಬ್ರಹ್ಮದ ಮಾಯಾಶಕ್ತಿಯಿಂದ ಪೃಥಿವೀ, ಜಲ ಮೊದಲಾದ ಪಂಚಭೂತಗಳೂ ಅವುಗಳ ಕಾರ್ಯಗಳಾದ ಘಟ ಪಟ ಮೊದಲಾದ ಅಸಂಖ್ಯ ಪದಾರ್ಥಗಳೂ ಹುಟ್ಟಿವೆ. ಈ ಕಾರ್ಯಗಳಿಂದ ಬ್ರಹ್ಮವು ಸದ್ವಿತೀಯವೆಂದು ಹೇಳಲು ಬಾಧೆಯೇನು? ಬ್ರಹ್ಮವು ಏಕವಾಗಿದ್ದರೂ ಜಗತ್ತು ಅದರ ಶಕ್ತಿಯಿಂದ ಉದ್ಭವಿಸಿದ ಕಾರಣ

ಬ್ರಹ್ಮವು ಸದ್ವಿತೀಯವಾಯಿತೆಂದು ಅಭಿಪ್ರಾಯ. ಇದಕ್ಕೆ ಉತ್ತರವೇನು? ಉತ್ತರವೇನೆಂದರೆ, ಸೃಷ್ಟಿಯ ಪೂರ್ವಸ್ಥಿತಿಯನ್ನು ನಾವು ಹೇಳುತ್ತಿದ್ದೇವೆ. ನಾಸದೀಯ ಸೂಕ್ತದಲ್ಲಿ 'ತದಾನೀಂ' ಎಂಬ ಶಬ್ದವಿರುವುದನ್ನು ಗಮನಿಸಬೇಕು. ಮಹಾಪ್ರಳಯವಾದಾಗ ಪೃಥವೀ, ಜಲ- ಮೊದಲಾದ ಯಾವ ಪದಾರ್ಥವೂ ಇರುವುದಿಲ್ಲ. ಆಗ ಇರತಕ್ಕದ್ದು ಶಾಶ್ವತವಾದ ಬ್ರಹ್ಮ ಒಂದೇ. ಅದರಲ್ಲಿ ಮಾಯಾಶಕ್ತಿ ಇದ್ದರೂ ಬಾಧೆಯಿಲ್ಲ. ಮಾಯಾಕಾರ್ಯವಾದ ಯಾವ ವಸ್ತುವೂ ಇಲ್ಲ. ಬ್ರಹ್ಮವು ಅದ್ವಿತೀಯವೆನ್ನುವುದು ಆ ಸ್ಥಿತಿಯಲ್ಲಿದ್ದಾಗ, ವಸ್ತುತಸ್ತು ಮಾಯೆಯಂತೆ ಮಾಯಾಕಾರ್ಯವಾದ ಜಗತ್ತೂ ಮಿಥ್ಯೆಯಾದ್ದರಿಂದ ಬ್ರಹ್ಮವು ಸದಾ ಅದ್ವಿತೀಯವೇ ಎಂದು ತಿಳಿಯಬೇಕು (೫೨-೫೩). ಆಗಲಿ; ಬ್ರಹ್ಮವು ವಿಭುವೆಂದೂ ಸರ್ವವ್ಯಾಪಿಯೆಂದೂ ಅವಯವರಹಿತವಾದ ಅಖಂಡ ವಸ್ತುವೆಂದೂ ಹೇಳುತ್ತೀರಿ. ಮಾಯಾಶಕ್ತಿಯು ಆಶ್ರಯವಿಲ್ಲದೆ ಇರಲಾರದಾದ್ದರಿಂದ ಬ್ರಹ್ಮದಲ್ಲಿ ಅದು ಇದೆಯೆಂದು ಒಪ್ಪಬೇಕಾಯಿತು. ಈಗೊಂದು ಪ್ರಶ್ನೆ ಏಳುತ್ತದೆ. ಈ ಮಾಯೆಯು ಪೂರ್ಣವಾಗಿ ಬ್ರಹ್ಮವನ್ನು ವ್ಯಾಪಿಸಿಕೊಂಡಿದೆಯೋ? ಅಥವಾ ಬ್ರಹ್ಮದ ಏಕದೇಶದಲ್ಲಿದೆಯೋ? ಪೂರ್ಣವಾಗಿ ಬ್ರಹ್ಮವನ್ನು ವ್ಯಾಪಿಸಿಕೊಂಡಿದೆಯೆನ್ನುವುದು ಸರಿಯಲ್ಲ. ಆಗ ಮುಕ್ತನಾದವನು ಸೇರಿಕೊಳ್ಳುವ ಶುದ್ಧ ಬ್ರಹ್ಮವೇ ಇಲ್ಲವಾಗುತ್ತದೆ. ವೇದಾಂತದ ಸಿದ್ಧಾಂತದಂತೆ ಜ್ಞಾನಿಯಾದವನು ಪ್ರಪಂಚರಹಿತವಾದ ಶುದ್ಧ ಬ್ರಹ್ಮವಾಗಿ ಉಳಿಯುತ್ತಾನಲ್ಲವೆ? ಶುದ್ಧ ಬ್ರಹ್ಮವೇ ಇಲ್ಲದೆ ಹೋದರೆ ಜೀವನಿಗೆ ಮುಕ್ತಿಯೇ ಇಲ್ಲದೆ ಹೋಗುತ್ತದೆ. ಹಾಗಾದರೆ ಬ್ರಹ್ಮದ ಏಕದೇಶದಲ್ಲಿದೆ ಎಂದೂ ಹೇಳಲಾಗುವುದಿಲ್ಲ. ಬ್ರಹ್ಮವು ಅಖಂಡವಾದ್ದರಿಂದ ಅದಕ್ಕೆ ಅವಯವ - ಏಕದೇಶ ಎಂಬುದೇ ಇಲ್ಲ. ಈ ಶಂಕೆಗೆ ಸಮಾಧಾನವೇನು? ಸಮಾಧಾನ ಉಂಟು. ಮಣ್ಣಿನಿಂದ ಗಡಿಗೆಯಾಗುತ್ತದೆ. ಮಣ್ಣಿನಲ್ಲಿ ಗಡಿಗೆಯಾಗುವ ಶಕ್ತಿ ಇದೆ. ಇದು ಒಣಗಿದ ಮಣ್ಣಿನಲ್ಲಿಲ್ಲ. ಒದ್ದೆಯಾದ ಒಂದು ಮುಷ್ಟಿ ಮಣ್ಣಿನಲ್ಲಿದೆ. ಹಾಗೆ ಜಗತ್ತಾಗುವ ಮಾಯಾಶಕ್ತಿ ಬ್ರಹ್ಮದ ಏಕದೇಶದಲ್ಲಿದೆ (೫೪). ಬ್ರಹ್ಮವು ಅವಯವರಹಿತವಾದರೂ ಕಾಲ್ಪನಿಕವಾದ ಏಕದೇಶವು ಬರಬಹುದು. ಹೇಗೆಂದರೆ, ಆಕಾಶದಲ್ಲಿ ಮೋಡವಿರುತ್ತದೆ. ಮೋಡವು ಸಮಸ್ತ ಆಕಾಶವನ್ನು ವ್ಯಾಪಿಸಿಕೊಳ್ಳದೆ ಆಕಾಶದ ಒಂದು ಭಾಗದಲ್ಲಿದೆ ಎನ್ನುತ್ತೇವೆ. ಆಕಾಶಕ್ಕೆ ಅವಯವ ಎಲ್ಲಿದೆ? ಅದು ನಿರವಯವವಾದರೂ ಕಲ್ಪಿತವಾದ - ಕೇವಲ

ನಮ್ಮ ಬುದ್ಧಿಗೆ ಗ್ರಾಹ್ಯವಾದ ಏಕಾಂಶವು ಆಕಾಶಕ್ಕೆ ಬರುತ್ತದೆ. ಅಂತೆಯೇ ಬುದ್ಧಿ ಗ್ರಾಹ್ಯವಾದ ಬ್ರಹ್ಮದ ಒಂದು ಅತ್ಯಲ್ಪಾಂಶದಲ್ಲಿ ಮಾಯಾಶಕ್ತಿ ಇದ್ದೀತು. ಇದೇನೂ ನಮ್ಮ ಕಲ್ಪನೆಯಲ್ಲ, ವೇದವೇ ಹೀಗೆ ಹೇಳಿದೆ - ''**ಪಾದೋऽಸ್ಯ ವಿಶ್ವಾಭೂತಾನಿ, ತ್ರಿಪಾದಸ್ಯಾಮೃತಂ ದಿವಿ**'' ಎಂದು ಪುರುಷಸೂಕ್ತದಲ್ಲಿದೆ. ''ಸಮಸ್ತ ಭೂತಗಳೂ ಎಂದರೆ ಭೌತಿಕಪ್ರಪಂಚವೆನಿಸಿದ ಈ ವಿಶ್ವವು ಆ ವಿರಾಟ್ ಪುರುಷನ ಒಂದು ಪಾದ-ಕಾಲು ಭಾಗ. ಆತನ ಉಳಿದ ಮೂರು ಭಾಗವು ದೇವಲೋಕದಲ್ಲಿ ಶಾಶ್ವತವಾಗಿದೆ'' ಎಂದು ಈ ಮಂತ್ರದ ಶಬ್ದಾರ್ಥ. ಕಾಲುಭಾಗವೆಂದರೆ ರೂಪಾಯಿಯಲ್ಲಿ ನಾಲ್ಕಾಣೆಯಷ್ಟೆಂದು ಗಣಿತದ ಲೆಕ್ಕಾಚಾರವಿದಲ್ಲ. ಆ ವಿರಾಡ್ವಸ್ತುವಿನ ಒಂದು ಅತ್ಯಲ್ಪಾಂಶವು ಸಮಸ್ತವಿಶ್ವವಾಗಿದೆ. ಉಳಿದುದೆಲ್ಲ ಅಮೃತಸ್ವರೂಪವಾಗಿಯೇ ಇದೆ ಎಂದರ್ಥ. ವಿಶ್ವವು ಮಾಯಾಶಕ್ತಿಯ ಕಾರ್ಯವಾದ್ದರಿಂದ ಇಲ್ಲಿ ವಿಶ್ವವನ್ನೇ ಮಾಯಾ ಶಕ್ತಿಯೆಂದು ತಿಳಿಯಬೇಕು (೫೫). ಭಗವದ್ಗೀತೆಯಲ್ಲಿಯೂ ಸಹ '**ವಿಷ್ಟಭ್ಯಾಹಮಿದಂ ಕೃತ್ಸ್ನಮೇಕಾಂಶೇನ ಸ್ಥಿತೋ ಜಗತ್**' (ಭ.ಗೀ.೧೦-೪೨) ಎಂದು ಭಗವಂತನು ಹೇಳಿದ್ದಾನೆ. ''ಈ ಸಮಸ್ತ ವಿಶ್ವವನ್ನೂ ನನ್ನ ಏಕಾಂಶವಾದ ಒಂದು ಪಾದದಿಂದ ವ್ಯಾಪಿಸಿಕೊಂಡಿದ್ದೇನೆ'' ಎಂದರ್ಥ. ಈ ವಿಶ್ವವೆಲ್ಲವೂ ಈಶ್ವರನ ಒಂದು ಅತ್ಯಲ್ಪವಾದ ಅಂಶ. ಪುರುಷಸೂಕ್ತದಲ್ಲಿ ಹೇಳಿದ ವಿಷಯವನ್ನೇ ಗೀತೆಯಲ್ಲಿ ಹೇಳಲಾಗಿದೆ(೫೬). ಮಾಯಾಸ್ಪರ್ಶವೂ ಇಲ್ಲದ ಶುದ್ಧಬ್ರಹ್ಮವಿದೆಯೆಂಬುದಕ್ಕೆ-'**ಸ ಭೂಮಿಂ ವಿಶ್ವತೋ ವೃತ್ವಾ, ಅತ್ಯತಿಷ್ಠದ್ದಶಾಂಗುಲಮ್**' ಎಂಬ ಪುರುಷಸೂಕ್ತದ ವಚನವನ್ನೇ ಉದಾಹರಿಸಬಹುದು. ''ಆ ವಿರಾಟ್ ಪುರುಷನು ಈ ವಿಶ್ವವನ್ನು ಸರ್ವವಿಧದಲ್ಲಿ ವ್ಯಾಪಿಸಿಕೊಂಡು ಜಗತ್ತಾದರೂ, ಇನ್ನೂ ಹತ್ತು ಅಂಗುಲದಷ್ಟು ಉಳಿದುಹೋದನು!'' ಇದು ಆಲಂಕಾರಿಕವಾದ ಭಾಷೆ. ಅಭಿಪ್ರಾಯವನ್ನು ಹಿಂದೆ ಹೇಳಿದಂತೆಯೇ ಊಹಿಸಿಕೊಳ್ಳಬೇಕು. ಅಲ್ಲದೆ '**ವಿಕಾರಾವರ್ತಿ ಚ ತಥಾ ಹಿ ಶ್ರುತಿಮಾಹ**' (೪-೪-೧೯) ಎಂದು ಬ್ರಹ್ಮಸೂತ್ರ ಉಂಟು. ''ವಿಕಾರವನ್ನು ಪಡೆಯದ ಬ್ರಹ್ಮಸ್ವರೂಪವಿದೆ. ಆದ್ದರಿಂದ ಆ ರೀತಿಯಲ್ಲಿ ಶ್ರುತಿಯು ಹೇಳಿದೆ'' ಎಂದು ಸೂತ್ರಾರ್ಥ. **ಏವಂಚ ಶ್ರುತಿ, ಗೀತಾಸ್ಮೃತಿ, ಬ್ರಹ್ಮಸೂತ್ರ** ಈ ಮೂರು ಪ್ರಸ್ಥಾನಗಳೂ ವಿಕಾರವನ್ನೈದದಿರುವ ಶುದ್ಧ ಬ್ರಹ್ಮವಿದೆಯೆಂದು ಏಕಕಂಠದಿಂದ ಹೇಳುತ್ತವೆ (೫೭). ಹಾಗಾದರೆ

ಏಕದೇಶದಲ್ಲಿ ಮಾಯಾಶಕ್ತಿಯಿದೆ ಎಂದು ಒಪ್ಪಬೇಕಾಯಿತು. ಬ್ರಹ್ಮವು ಅಖಂಡ, ನಿರವಯವ, ಅಂಶರಹಿತ - ಎಂಬ ಘೋಷಣೆಗೆ ಗತಿ ಏನು? ನಿಜ; ಬ್ರಹ್ಮವು ಅಂಶರಹಿತವೇ. ಆದರೆ ಬ್ರಹ್ಮದಲ್ಲಿ ಮಾಯೆಯು ಸರ್ವತ್ರ ಇದೆಯೋ ಅಥವಾ ಏಕದೇಶದಲ್ಲಿದೆಯೋ ಎಂಬ ಪ್ರಶ್ನೆಗೆ ಉತ್ತರವಾಗಿ ಬ್ರಹ್ಮದ ಏಕದೇಶದಲ್ಲಿದೆಯೆಂದು ಕಿವಿಗೆ ಹಿತವಾಗುವಂತೆ ಹೇಳಿದೆ. ಅಂಶ ಅಥವಾ ಏಕದೇಶವು ಬ್ರಹ್ಮದಲ್ಲಿ ಆರೋಪಿತವಾಗಿದೆ. ಆಕಾಶದ ಏಕದೇಶದಲ್ಲಿ ಮೋಡವಿದೆಯೆಂಬ ದೃಷ್ಟಾಂತವನ್ನು ತೋರಿಸಿಕೊಟ್ಟಿದ್ದೇವೆ. ಅಂಶವು ಆರೋಪಿತವೇ ಹೊರತು ವಾಸ್ತವವಲ್ಲ. ಬ್ರಹ್ಮವು ಅವಯವರಹಿತವೇ ಸರಿ (೫೮).

ಈ ಮಾಯೆಯಿಂದ ಏನಾಗುತ್ತದೆ? ಇದನ್ನು ಒಪ್ಪಿದ್ದರಿಂದ ಆಗುವ ಪ್ರಯೋಜನವೇನು? ಸದ್ರೂಪವಾದ ಪರಬ್ರಹ್ಮದಲ್ಲಿ ನಾನಾರೂಪದ ಪದಾರ್ಥಗಳನ್ನು ತೋರಿಸಿಕೊಡುವುದೇ ಪ್ರಯೋಜನ. ಗೋಡೆಯ ಮೇಲೆ ನಾನಾವರ್ಣಗಳಲ್ಲಿ ಚಿತ್ರಕಾರನು ನಾನಾ ವಿಧವಾದ ಚಿತ್ರಗಳನ್ನು ಬರೆದು ತೋರಿಸುತ್ತಾನೆ. ಆ ವರ್ಣಗಳೇ ಬಗೆ ಬಗೆಯ ರೂಪಗಳಿಂದ ಕಾಣಿಸಿಕೊಳ್ಳುತ್ತವೆ. ಹಾಗೆಯೇ ಬ್ರಹ್ಮದಲ್ಲಿರುವ ಮಾಯೆಯು ನಾನಾ ವಿಕಾರಗಳನ್ನು - ಪೃಥಿವ್ಯಾದಿ ಪದಾರ್ಥಗಳನ್ನು ಸೃಜಿಸಿ ಬ್ರಹ್ಮದ ಏಕದೇಶದಲ್ಲಿರುವಂತೆ ಕಲ್ಪಿಸುತ್ತದೆ (೫೯). ಮಾಯೆಯ ಮೊದಲನೆಯ ವಿಕಾರವೇ ಆಕಾಶ. **'ಆತ್ಮನ ಆಕಾಶಃ ಸಂಭೂತಃ'** ಎಂದು ತೈತ್ತಿರೀಯೋಪನಿಷತ್ತು ಹೇಳುತ್ತದೆ. ಮಾಯೆಯು ಮೊದಲು ಕಲ್ಪಿಸಿದ್ದು ಆಕಾಶವನ್ನು. ಇತರ ವಸ್ತುಗಳಿಗೆ ಅವಕಾಶವನ್ನೀಯುವುದು ಆಕಾಶದ ಸ್ವರೂಪ. ಬ್ರಹ್ಮದ ಸ್ವರೂಪವಾದ 'ಸತ್' ಎಂಬುದು ಆಕಾಶದಲ್ಲಿ ಅನುಗತವಾಗಿ ಬರುತ್ತದೆ. ಪೃಥಿವಿಯಲ್ಲಿರುವ ಪೃಥಿವೀತ್ವವು ಘಟದಲ್ಲಿ ಅನುಗತ ವಾಗಿರುತ್ತದೆಯಲ್ಲವೆ? ಹಾಗೆಯೇ ಸತ್ತೆಯು ಆಕಾಶದಲ್ಲಿ ಅನು ವೃತ್ತವಾಗಿರುವುದರಿಂದ ಆಕಾಶವು ಅಸ್ತಿ ಎಂದು ನಾವು ಹೇಳುತ್ತೇವೆ. ಬ್ರಹ್ಮದ ವಿವರ್ತವೇ ಆಕಾಶ. ಬ್ರಹ್ಮವೇ ಆಕಾಶವಾಗಿ ಕಾಣಿಸಿಕೊಂಡಿದೆ. ಹಾಗೆ ಕಾಣಿಸುವಂತೆ ಮಾಡಿರುವುದು ಈ ಮಾಯೆ. ಏವಂಚ ಆಕಾಶದಲ್ಲಿ ಸತ್ತೆ ಮತ್ತು ಅವಕಾಶಪ್ರದತ್ವ ಎಂಬೆರಡು ಧರ್ಮಗಳು ಕಾಣಿಸಿಕೊಳ್ಳುತ್ತವೆ (೬೦). ಸದ್ವಸ್ತುವಾದ ಬ್ರಹ್ಮವು ಸತ್ತಾ ಎಂಬ ಏಕಸ್ವಭಾವವುಳ್ಳದ್ದು. ಅದರಲ್ಲಿ

ಅವಕಾಶಪ್ರದತ್ವವೆಂಬ ಧರ್ಮವಿಲ್ಲ. ಆಕಾಶವಾದರೋ ಸತ್ತಾ, ಅವಕಾಶ ಪ್ರದತ್ವ ಎಂಬ ಎರಡು ಸ್ವಭಾವಗಳುಳ್ಳದ್ದು. ಆದ್ದರಿಂದ ಆಕಾಶವು ಆತ್ಮನಿಂದ ಹುಟ್ಟಿದೆಯೆಂದು ಶ್ರುತಿಯು ಹೇಳಿದೆ. ಇನ್ನೊಂದು ಬಗೆಯಿಂದಲೂ ಆಕಾಶವು ದ್ವಿಸ್ವಭಾವವೆನ್ನಬಹುದು. ಪ್ರತಿಧ್ವನಿಯು - ಶಬ್ದವು ಆಕಾಶದ ಗುಣವೆಂದು ಹಿಂದೆ ಹೇಳಿದೆ. ಬ್ರಹ್ಮದಲ್ಲಿ ಈ ಪ್ರತಿಧ್ವನಿ ಇಲ್ಲ. ಆಕಾಶದಲ್ಲಿ ಸತ್ತಾ, ಶಬ್ದ-ಎಂಬ ಎರಡು ಧರ್ಮಗಳಿವೆಯಾದ್ದರಿಂದ ಅದು ದ್ವಿಸ್ವಭಾವವುಳ್ಳದ್ದು (೬೧-೬೨). ಇಲ್ಲೊಂದು ಪ್ರಶ್ನೆ ಹುಟ್ಟುತ್ತದೆ. ಸದ್ವಸ್ತುವಿನಿಂದ ಆಕಾಶವು ಹುಟ್ಟಿದೆಯಷ್ಟೆ. ಆಗ ಸದ್ವಸ್ತು ಆಕಾಶಕ್ಕೆ ಆಧಾರವಾಯಿತು. ಸದ್ವಸ್ತುವಿನ ಏಕದೇಶ ಆಕಾಶ. ಆದ್ದರಿಂದ ಸದ್ವಸ್ತುವನ್ನು ಧರ್ಮಿಯೆಂದೂ ಆಕಾಶವು ಅದರ ಧರ್ಮವೆಂದೂ ಸಿದ್ಧವಾಗುತ್ತದೆ. ಆದಕಾರಣ ಸತ್ತೆಯ ಆಕಾಶ ಎಂದೇ ಹೇಳಬೇಕಾಗುತ್ತದೆ. ಆದರೆ ಆಕಾಶದ ಸತ್ತಾ ಎಂದು ಹೇಳುತ್ತೇವೆ. ಆಕಾಶವೇ ಇಲ್ಲಿ ಧರ್ಮಿಯಾಗಿ ಸದ್ವಸ್ತುವೇ ಧರ್ಮವಾಗಿ ಬಿಡುತ್ತದೆ. ಆಧಾರವಾಚಕಶಬ್ದದ ಮೇಲೆ ಷಷ್ಠೀ ವಿಭಕ್ತಿ ಬರಬೇಕು. ಕಬ್ಬಿಣದ ಕಾಠಿಣ್ಯ. ಹೂವಿನ ಮೃದುತ್ವ ಎನ್ನುತ್ತಾರೆಯೇ ಹೊರತು ಕಾಠಿಣ್ಯದ ಕಬ್ಬಿಣ, ಮೃದುತ್ವದ ಹೂವು ಎಂದು ನಾವು ಹೇಳುವುದಿಲ್ಲ. ಆದ್ದರಿಂದ ಸತ್ತೆಯ ಆಕಾಶ ಎನ್ನಬೇಕಾಗುತ್ತದೆ. ಅದನ್ನು ತಲೆಕೆಳಗುಮಾಡಿ ಆಕಾಶದ ಸತ್ತಾ ಎನ್ನುತ್ತೇವೆ. ಇದಕ್ಕೆ ಕಾರಣವೇನು? ಇದು ಮಾಯಾಶಕ್ತಿಯ ಚೇಷ್ಟೆಯೇ ಹೊರತು ಬೇರೆಯಲ್ಲ! ನಿರ್ವಿಕಾರವಾದ ಬ್ರಹ್ಮದಲ್ಲಿ ಯಾವ ಶಕ್ತಿಯು ಜಗತ್ತೆಂಬ ವಿಕಾರವನ್ನು ಕಲ್ಪಿಸಿದೆಯೋ ಅದೇ ಮಾಯಾಶಕ್ತಿಯು ಲೋಕದಲ್ಲಿ ಧರ್ಮಧರ್ಮಿಭಾವವನ್ನು ತಲೆಕೆಳಗುಮಾಡಿಬಿಡುತ್ತದೆ. ಅದು ಮಾಡಬಲ್ಲ ಚೇಷ್ಟೆಗೆ ಲೆಕ್ಕವಿಲ್ಲ. ವಿಚಾರಶೀಲರೆಂದು ವಿಖ್ಯಾತರಾದ ತಾರ್ಕಿಕರೂ ಸಹ ಮಾಯೆಗೆ ವಶರಾಗಿ 'ಆಕಾಶದ ಸತ್ತಾ' ಎಂದೇ ಹೇಳುತ್ತಾರೆ. ಇದೆಲ್ಲವೂ ಮಾಯೆಗೆ ಉಚಿತವಾದದ್ದೇ (೬೩-೬೪).

ಒಂದು ಪದಾರ್ಥವು ಯಾವ ಸ್ವರೂಪವುಳ್ಳದ್ದೋ ಅದು ಅದೇ ಸ್ವರೂಪದಲ್ಲಿ ತೋರಬಹುದು. ಸರಿಯಾದ ಪ್ರಮಾಣವಿದ್ದರೆ ಹಾಗೆಯೇ ತೋರುತ್ತದೆ. ಅದು ಯಥಾರ್ಥಜ್ಞಾನವೆಂದೂ ಪ್ರಮೆಯೆಂದೂ ಹೇಳುತ್ತಾರೆ. ಕೆಲವು ಸಲ ಆ ಪದಾರ್ಥವು ಅನ್ಯಥಾ ತೋರುವುದೂ ಉಂಟು. ಕಣ್ಣಿನಲ್ಲಿ ದೋಷವಿದ್ದರೆ ಮಬ್ಬುಗತ್ತಲೆಯಾಗಿದ್ದರೆ ಹಗ್ಗವು ಹಾವಿನಂತೆ ಕಂಡು ಬಿಡುತ್ತದೆ.

ಅದಕ್ಕೆ ಭ್ರಮೆಯೆಂದು ಹೆಸರು. ಇದು ಸರ್ವರಿಗೂ ತಿಳಿದ ವಿಷಯವೇ ಆಗಿದೆ. ಶುಕ್ತಿಯು (ಕಪ್ಪೆಚಿಪ್ಪು) ಬೆಳ್ಳಿಯಂತೆ ಹೊಳೆಯುವುದರಿಂದ ಅದು ಬೆಳ್ಳಿಯೆಂದೇ ಭ್ರಮೆ ಹುಟ್ಟಬಹುದು. ಪರೀಕ್ಷಿಸಿ ನೋಡಿದಾಗ ಅದು ಶುಕ್ತಿಯೇ ಸರಿಯೆಂದು ಗೊತ್ತಾಗುತ್ತದೆ. (೬೫) . ಹಾಗೆಯೇ **'ಆತ್ಮನ ಆಕಾಶಃ ಸಂಭೂತಃ'** (ತೈ.ಉ.೨-೧) ಇತ್ಯಾದಿ ಶ್ರುತಿವಾಕ್ಯಗಳ ಅರ್ಥವನ್ನು ಸರಿಯಾಗಿ ತಿಳಿದುಕೊಳ್ಳುವುದಕ್ಕೆ ಮೊದಲು, ಸದ್ರೂಪವಾದ ಬ್ರಹ್ಮವನ್ನು ಆಕಾಶವೆಂದೇ ಜನರು ಭಾವಿಸುತ್ತಾರೆ. ಶ್ರುತ್ಯರ್ಥವನ್ನು ವಿಚಾರ ಮಾಡಿ ಸರಿಯಾಗಿ ತಿಳಿದುಕೊಂಡಾಗ ಆ ಭ್ರಾಂತಿಯು ನಿವೃತ್ತವಾಗಿ ಬಿಡುತ್ತದೆ. ಆಗ ಆಕಾಶವು ಸದ್ರೂಪವೆಂದೇ ನಿಶ್ಚಯವಾಗುತ್ತದೆ. ಸದ್ವಸ್ತು ಆಕಾಶವಾಗಿ ತೋರುವುದಕ್ಕೆ ಕಾರಣವಾದದ್ದು ಮಾಯೆ. ಜನರು ತಿಳಿದುಕೊಂಡ ಆಕಾಶದ ಸ್ವರೂಪವೇ ಬೇರೆ. ಸದ್ವಸ್ತುವಿನ ಸ್ವರೂಪವೇ ಬೇರೆ. ಸತ್-ಆಕಾಶ ಇವು ಏಕಾರ್ಥಬೋಧಕ ಶಬ್ದಗಳಲ್ಲ. ಆ ಶಬ್ದಗಳಿಂದ ಬರುವ ಅರ್ಥಜ್ಞಾನವು ಭಿನ್ನವಾದದ್ದು. **'ಆಕಾಶಾದ್ವಾಯುಃ'** (ತೈ.ಉ.೨-೧) ಎಂಬ ಶ್ರುತಿವಾಕ್ಯದಿಂದ, ಆಕಾಶದಿಂದ ವಾಯು ಹುಟ್ಟುತ್ತದೆ ಎಂದು ಗೊತ್ತಾಗುತ್ತದೆ. ವಾಯುವಿನಲ್ಲಿ 'ಸತ್' ಎಂಬ ಬುದ್ಧಿಯೂ ವಾಯುವೆಂಬ ಬುದ್ಧಿಯೂ ಇರುತ್ತದೆ. ಆದರೆ ಆಕಾಶ ಎಂಬ ಬುದ್ಧಿ ಮಾತ್ರ ವಾಯುವಿನಲ್ಲಿ ತೋರುವುದಿಲ್ಲ. ಏವಂಚ ಸತ್ ಎಂಬುದೇ ಮೂಲ ವಸ್ತು. ಆಕಾಶ ಎಂಬುದು ತಾತ್ಕಾಲಿಕವಾಗಿ ತೋರಿದ ಭ್ರಾಂತಿ ಎಂಬುದು ಸಿದ್ಧವಾಯಿತು. ಈ ರೀತಿಯಲ್ಲಿ ಅಗ್ನಿ ಮೊದಲಾದವು ಹುಟ್ಟಿದಾಗಲೂ 'ಸತ್' ಎಂಬ ಬುದ್ಧಿಗೆ ಅಪೋಹವಿಲ್ಲ (೬೬). ಒಂದು ಉದಾಹರಣೆಯಿಂದ ಇದನ್ನು ದೃಢಪಡಿಸಬಹುದು. ಬಿಳಿಯ ಕಾಗದವಿದೆ. ಇದೇ 'ಸತ್' ಎಂದು ತಿಳಿಯಿರಿ. ಇದಕ್ಕೆ ಕೆಂಪು ಬಣ್ಣ ಹಾಕಿದರೆ ಕೆಂಪು ಕಾಗದವೆನ್ನುತ್ತೇವೆ. ಕಾಗದವು ಧರ್ಮಿ, ಕೆಂಪು ಧರ್ಮ, ಹಾಗೆಯೇ ಕಪ್ಪು ಬಣ್ಣ ಹಾಕಿದಾಗ ಕರಿಯ ಕಾಗದವಾಗುತ್ತದೆ. ಅಲ್ಲಿಯೂ ಕಾಗದವು ಧರ್ಮಿ, ಕಪ್ಪು ಧರ್ಮ. ಹೀಗೆಯೇ ಹಳದಿ, ಹಸಿರು, ಚಿತ್ರವರ್ಣಗಳನ್ನು ಸೇರಿಸಿದರೆ ಕಾಗದವು ಆಯಾ ಬಣ್ಣವುಳ್ಳದ್ದಾಗುತ್ತದೆ. ಕಾಗದವು ಮಾತ್ರ ಸರ್ವತ್ರ ಇದ್ದೇ ಇರುತ್ತದೆ. ಬಣ್ಣವು ಬೇರೆ ಬೇರೆ. ಎಲ್ಲ ಸಂದರ್ಭದಲ್ಲಿಯೂ ಇರತಕ್ಕ ಕಾಗದವು ಧರ್ಮಿ, ಒಂದೊಂದೇ ಸಂದರ್ಭದಲ್ಲಿ ಇರತಕ್ಕದ್ದು ಧರ್ಮ. ಹಾಗೆಯೇ ಆಕಾಶಾದಿಗಳಲ್ಲಿ ಸರ್ವತ್ರ ಇರತಕ್ಕ 'ಸತ್' ಎಂಬುದು ಧರ್ಮಿ. ಒಂದೊಂದೇ ಸಂದರ್ಭದಲ್ಲಿ

ಆಕಾಶ, ವಾಯು ಎಂದು ತೋರತಕ್ಕ ಆಕಾಶಾದಿಗಳು ಧರ್ಮಗಳು. 'ಸತ್' ಆದದ್ದೇ ಆಕಾಶವಾಗಿಯೂ, ವಾಯುವಾಗಿಯೂ ಒಟ್ಟಿನಲ್ಲಿ ಪಂಚಮಹಾಭೂತಗಳಾಗಿಯೂ ತೋರುತ್ತದೆ ಎಂದು ತಾತ್ಪರ್ಯ. ಒಂದೇ ಮಣ್ಣು ಗಡಿಗೆಯಾಗಿ, ಹರಿವಿಯಾಗಿ, ತಟ್ಟೆಯಾಗಿ- ನಾನಾ ವಿಧವಾಗಿ ಆದಂತೆ ಇದು. ಮಣ್ಣು ಮಾತ್ರ, ಎಲ್ಲೆಡೆಯೂ ಇದೆ. ಎಲ್ಲವೂ ಮಣ್ಣೇ. 'ಮೃತ್ತಿಕೇತ್ಯೇವ ಸತ್ಯಮ್' (ಛಾಂ. ಉ.೬-೪) ಎನ್ನುತ್ತದೆ ಉಪನಿಷತ್. ಬೇಕಾದರೆ ಸತ್ತಿನ ಆಕಾಶ. ಸತ್ತಿನ ವಾಯು ಇತ್ಯಾದಿಯಾಗಿ ಹೇಳಬಹುದು. ಹಾಗೆ ನಾವು ಹೇಳುವುದಿಲ್ಲ. ಅನಾದಿಯಾದ ಭ್ರಾಂತಿಯೇ ಇದಕ್ಕೆ ಕಾರಣ. ಸತ್ ಎಂಬ ಅಂಶವನ್ನು ತೆಗೆದುಹಾಕಿಬಿಟ್ಟರೆ ಆಕಾಶವಿದೆಯೆಂದು ಹೇಳಲಾಗುವುದೇ ಇಲ್ಲ. ಹೇಳಬಹುದಾದರೆ ಅದು ಹೇಗಿರುತ್ತದೆಯೆಂದು ಹೇಳು, ನೋಡೋಣ (೬೭). ಆಕಾಶವು ಅವಕಾಶಾತ್ಮಕ ಎಂದೇಕೆ ಹೇಳಬಾರದು? ಅವಕಾಶವೇ ಆಕಾಶ ಅಥವಾ ಘಟಾದಿ ಪದಾರ್ಥಗಳು ಇರಲು ಅವಕಾಶಪ್ರದವಾದದ್ದು ಆಕಾಶ ಎಂದು ಹೇಳಬಹುದಲ್ಲವೇ? ಇಲ್ಲ; ಸತ್ ಎಂಬ ಅಂಶವನ್ನು ತೆಗೆದುಹಾಕಿದ್ದೀಯೆ. ಅದು ನೆನಪಿನಲ್ಲಿರಲಿ. ನಿನ್ನ ಮಾತು ಹೇಗಾಯಿತೆಂದರೆ -''ಆಕಾಶವು ಅವಕಾಶಾತ್ಮಕವಾಗಿ ಇದೆ, ಆದರೆ ಅಸತ್ - ಅದು ಅಸತ್ ಆಗಿದೆ ಎಂದರೆ ಇಲ್ಲ'' ಎಂದಾಯಿತು. ಆಕಾಶವು ಅವಕಾಶಾತ್ಮಕವಾಗಿ ಸತ್. ಆದರೆ ಸತ್ ಅಲ್ಲ! ಎನ್ನುವುದು ಅನ್ಯೋನ್ಯವಿರುದ್ಧವಾದ ಮಾತು. ವ್ಯಾಹತವಾದ್ದು (೬೮). ''ಸದ್ವಸ್ತುವಾದ ಆಕಾಶ, ಸದ್ವಸ್ತುವಿಗೆ ಸಂಬಂಧಿಸಿದ ಆಕಾಶ ಎಂದು ನಮಗೆ ಪ್ರತೀತವಾಗುವುದಿಲ್ಲ. ಸತ್ ಎಂಬುದರ ಸಂಬಂಧವಿಲ್ಲದೆಯೇ ಆಕಾಶವಿದೆ ಎಂದು ಮಾತ್ರ ನಮಗೆ ತೋರುತ್ತದೆ. ಇದರ ಜೊತೆಗೆ ಸತ್ ಎಂಬ ಆತ್ಮದ ಗಂಟು ಹಾಕುವುದೇಕೆ?'' ಎಂದು ಯಾರಾದರೂ ಹೇಳುವುದಾದರೆ ಅದಕ್ಕೆ ನಮ್ಮ ಉತ್ತರ ಹೀಗೆ- ಆಗಲಿ; ನಿಮಗೆ ಹಾಗೆಯೇ ತೋರಲಿ, ಬಾಧೆಯೇನು? ಮಾಯಾವಿಜೃಂಭಿತವಾದ ವಸ್ತುವಿನ ಸ್ವರೂಪವೇ ಅದು. ಅಸತ್ ಆದರೂ ಆಕಾಶವು ತೋರುವುದಾದರೆ- ಎಂದರೆ ಸತ್ ಸಂಬಂಧವಿಲ್ಲದೆಯೇ ಆಕಾಶವು ಸ್ವತಂತ್ರವಾಗಿ ತೋರುತ್ತಿರುವುದಾದರೆ ಅದು ಮಿಥ್ಯೆಯೆಂದೇ ತಿಳಿಯಬೇಕಾಗುತ್ತದೆ. ಸ್ವಪ್ನದಲ್ಲಿ ಆನೆ, ಹುಲಿ, ಮೊದಲಾದ್ದು ಕಾಣುತ್ತದೆ. ಅಲ್ಲಿ ಆನೆಯೂ ಇಲ್ಲ, ಹುಲಿಯೂ ಇರುವುದಿಲ್ಲ. ಇಲ್ಲದೆ ಇದ್ದರೂ ಸ್ವಪ್ನದಲ್ಲಿ ಕಾಣುತ್ತಿದೆಯಷ್ಟೆ? ಅದೇ ಮಾಯಿಕವೆನ್ನುವುದು. ಮಾಯೆಯ ಸ್ವಭಾವವೇ

ಇಲ್ಲದ್ದನ್ನು ತೋರಿಸುವುದು. ಆಕಾಶವೂ ಅಂತೆಯೇ ಮಿಥ್ಯೆಯೆಂದು ತಿಳಿಯಬೇಕು. ವಾಸ್ತವವಾಗಿ ಇಲ್ಲದ್ದನ್ನೂ ಇದ್ದಂತೆ ತೋರಿಸುವುದು ಮಾಯೆಗೆ ಸಹಜವಾದದ್ದು(೬೯). ಸತ್ ಮತ್ತು ಆಕಾಶ ಇವು ಭಿನ್ನಸ್ವರೂಪದವುಗಳಾಗಿದ್ದರೂ ಒಟ್ಟಿಗೇ ಇರಬಲ್ಲವು. ಜಾತಿ-ವ್ಯಕ್ತಿ ಗುಣ-ದ್ರವ್ಯ, ದೇಹ-ದೇಹಿಯಾದಆತ್ಮ ಇವು ಭಿನ್ನ ಸ್ವರೂಪವಾದರೂ ಒಟ್ಟಿಗೇ ಪ್ರತೀತವಾಗುತ್ತವೆ. ಹಾಗೆಯೇ ಸತ್ - ಆಕಾಶ ಇವು ಬೇರೆ ಬೇರೆಯಾದರೂ ಏಕಪದಾರ್ಥದಂತೆ ತೋರುತ್ತವೆ ಯಾದರೆ ಹಾಗೆಯೇ ಹಾಗಲಿ. ಅದರಲ್ಲಿ ಅಶ್ಚರ್ಯಪಡಬೇಕಾದ್ದೇನೂ ಇಲ್ಲ(೭೦). ಆದರೆ ಸದ್ವಸ್ತುವಾದ ಬ್ರಹ್ಮವೂ ಆಕಾಶವೂ ಬೇರೆ ಎಂಬುದು ಹೌದಾದರೂ ಅದು ಬುದ್ಧಿಗೆ ನಿಲುಕುವುದಿಲ್ಲವೆನ್ನುತ್ತೀಯೆ. ಹಾಗೆ ಆಗುವುದೇಕೆ? ಸತ್ ಎಂಬುದು ಆಕಾಶದಲ್ಲಿ ಪೃಥಕ್ ಆಗಿ ತೋರದಿರಲು ಕಾರಣವೇನು? ನಿನ್ನ ಚಿತ್ತವು ಏಕಾಗ್ರವಾಗಿ ಇದನ್ನು ಪರಿಶೀಲಿಸಲಾರದೆ ಹೋಗಿದೆಯೊ ಅಥವಾ ಅದರಲ್ಲಿ ಸಂಶಯ ಉಂಟೋ? ಅದನ್ನಾದರೂ ಹೇಳು(೭೧). ಏಕಾಗ್ರತೆ ಇಲ್ಲವೆನ್ನುವುದಾದರೆ, ಏಕಾಗ್ರಚಿತ್ತವನ್ನು ಪಡೆದು ಸ್ಥಿರವಾಗಿ ಧ್ಯಾನಿಸಿ ನಿಶ್ಚಯಿಸಿಕೊಳ್ಳುವುದೇ ಅದಕ್ಕೆ ಪರಿಹಾರ. ಅದಕ್ಕೆ ಬೇರೆ ಉಪಾಯವಿಲ್ಲ. ಹಾಗಲ್ಲದೆ ಸಂಶಯವೇ ಇರುವುದಾದರೆ. ಸರಿಯಾದ ಶ್ರುತಿಪ್ರಾಮಾಣ್ಯದಿಂದಲೂ ಯುಕ್ತಿಗಳಿಂದಲೂ ಸಂಶಯವನ್ನು ಹೋಗಲಾಡಿಸಿ ಕೊಳ್ಳಬೇಕು. ಹಾಗೆ ಮಾಡಿದರೆ ಸತ್ಯವು ರೂಢಮೂಲವಾಗಿ ನಿಲ್ಲುವುದು .

ಏಕಾಗ್ರತೆ ಇಲ್ಲದ್ದರಿಂದ ಆಕಾಶಕಲ್ಪನೆಗೆ ಆಧಾರವಾದ ಸತ್ ತೋರದೇ ಹೋದಲ್ಲಿ ಧ್ಯಾನಮಾಡುತ್ತ ಚಿತ್ತಕ್ಕೆ ಸ್ಥೈರ್ಯವನ್ನು ತಂದುಕೊಳ್ಳಬೇಕು. ಸ್ಥಿರತೆ ಬಂದಾಗ, ಸದ್ವಸ್ತುವಿನಲ್ಲಿ ಆಕಾಶವು ಕಲ್ಪಿತವೆಂಬುದು ತಾನಾಗಿ ಹೊಳೆಯುವುದು. ಇನ್ನು ಸಂಶಯವೇ ಉಳಿದುಕೊಂಡಿದೆಯೆಂಬುದಾದರೆ, ಹಿಂದೆ ೬೭ನೆಯ ಮತ್ತು ೬೮ನೆಯ ಶ್ಲೋಕಗಳಲ್ಲಿರುವ ಪ್ರಮಾಣ ಯುಕ್ತಿಗಳನ್ನು ಮತ್ತೆ ಮನನ ಮಾಡು. ಏನೆಂದರೆ, ಆಕಾಶ- ಸತ್ ಇವು ಬೇರೆ ಬೇರೆ ವಸ್ತುಗಳು. ಅವನ್ನು ಹೇಳತಕ್ಕ ಶಬ್ದಗಳೂ ಬೇರೆ. ಆ ಶಬ್ದಗಳನ್ನು ಹೇಳಿದಾಗ ಬುದ್ಧಿಗೆ ಹೊಳೆಯುವ ವಸ್ತುಗಳೂ ಬೇರೆ. ಆದ್ದರಿಂದ ಆಕಾಶ - ಸತ್ ಇವು ಭಿನ್ನಪದಾರ್ಥಗಳು ಎಂಬುದೊಂದು ಪ್ರಮಾಣ. ಸತ್ ಎನ್ನುವುದು ಆಕಾಶ, ವಾಯು, ಅಗ್ನಿ ಮೊದಲಾದ ವಸ್ತುಗಳ ಹಿಂದೆ ಇದ್ದೇ ಇರುತ್ತದೆ. ಆಕಾಶ, ವಾಯು ಇತ್ಯಾದಿ ಧರ್ಮಗಳು ಎಲ್ಲೆಡೆಯೂ ಇರುವುದಿಲ್ಲ. ಆದ್ದರಿಂದ ಅಧಿಕವೃತ್ತಿಯಾದ ಸತ್ ಎನ್ನು ವುದು ಧರ್ಮಿ.

ಆಕಾಶಾದಿಗಳು ಅಲ್ಪವೃತ್ತಿಗಳಾದ್ದರಿಂದ ಧರ್ಮಗಳು. ಏವಂಚ ಸತ್ತಿನಲ್ಲಿ ಆಕಾಶತ್ವವು ತೋರುತ್ತದೆ. ಸತ್ತಿನಲ್ಲಿ ವಾಯುತ್ವ ಮೊದಲಾದದ್ದೂ ತೋರುತ್ತದೆ. ಆದ್ದರಿಂದ ಸತ್ ಎಂಬುದು ಶಾಶ್ವತ. ಆಕಾಶತ್ವಾದಿಗಳು ಎಲ್ಲೆಡೆಯೂ ತೊರುವುದಿಲ್ಲವಾದ್ದರಿಂದ ಅಶಾಶ್ವತ. ಆದಕಾರಣ ಸತ್ತಿನಲ್ಲಿ ಆಕಾಶತ್ವಾದಿಗಳು ಕಲ್ಪಿತವಾದವೇ ಸರಿ ಎಂಬುದು ಯುಕ್ತಿ. ಇವೆರಡನ್ನು ಪರಿಶೀಲಿಸಿದಾಗ ಸರ್ವತ್ರ ಸತ್ ಇದೆ ಎಂಬ ಬುದ್ಧಿಯು ದೃಢವಾಗುತ್ತದೆ. ಸಂಶಯವು ಹೋಗುತ್ತದೆ (೭೨). ಹೀಗೆ ಧ್ಯಾನ, ಪ್ರಮಾಣ ಮತ್ತು ಯುಕ್ತಿಗಳಿಂದ ಆಕಾಶ-ಸತ್ ಇವು ಭಿನ್ನವಾದವುಗಳೆಂಬ ಬುದ್ಧಿಯು ದೃಢವಾಗಿ ನಿಂತೊಡನೆ, ಸತ್ತಿನಲ್ಲಿ ಆಕಾಶವು ಕಲ್ಪಿತವೇ ಹೊರತು ಅದು ಸತ್ಯವಲ್ಲ ಎಂಬ ಬುದ್ಧಿ ಹುಟ್ಟಿಬಿಡುತ್ತದೆ. ಆಕಾಶವು ರಂಧ್ರ ಸ್ವರೂಪದ್ದಾಗಿ ಅವಕಾಶಪ್ರದವಾಗಿದೆ. ಸದ್ವಸ್ತು ಇಂತಹದಲ್ಲ- ಎಂಬುದು ಗೊತ್ತಾಗುತ್ತದೆ . ಆಗ ಸತ್ ಬೇರೆ, ಅದರಲ್ಲಿ ಆಕಾಶತ್ವವಿಲ್ಲ - ಎಂಬ ಬುದ್ಧಿ ದೃಢವಾಗುತ್ತದೆ (೭೩). ಹೀಗೆ ದೃಢಬುದ್ಧಿಯಾದ ಜ್ಞಾನಿಯು ವ್ಯವಹರಿಸುವಾಗ ಆಕಾಶವು ಇದೆಯೋ ಎಂಬಂತೆ ಮಾತಾಡಿದರೂ ಅವನ ಮನಸ್ಸಿನಲ್ಲಿ ಆಕಾಶವು ಸತ್ಯವಲ್ಲ, ಇದು ತತ್ತ್ವರಹಿತವಾದ ಮಿಥ್ಯೆ ಎಂಬ ಬುದ್ಧಿ ಇದ್ದೇ ಇರುತ್ತದೆ. ಅವನಿಗೆ 'ಇದು ರಂಧ್ರವಿಲ್ಲದ ಸದ್ವಸ್ತು' ಎಂಬ ವಿಶ್ವಾಸವೂ ಇದ್ದೇ ಇರುತ್ತದೆ. ಪರಮಾರ್ಥದಲ್ಲಿ ಬ್ರಹ್ಮ ಒಂದೇ ಸತ್ಯ, ಅದಿಲ್ಲದೆ ಇನ್ನೊಂದಿಲ್ಲ ಎಂದು ಜ್ಞಾನಿಯು ತಿಳಿದಿರುತ್ತಾನೆ. ವ್ಯವಹಾರ ಕಾಲದಲ್ಲಿ ಆಕಾಶವೆಂಬುದುಂಟು ಎನ್ನುವಂತೆ ವ್ಯವಹರಿಸುತ್ತಾನೆ (೭೪). ಆಕಾಶವು ಅಸತ್ಯ. ಸತ್ ಎಂಬುದೇ ಸತ್ಯ ಎಂಬ ತತ್ತ್ವವನ್ನು ಮತ್ತೆ ಮತ್ತೆ ಮನನಮಾಡುತ್ತ ಧ್ಯಾನಿಸುತ್ತ ಇರುವಾಗ ಅದರಿಂದ ಒಂದು ಸಂಸ್ಕಾರವು ಚಿತ್ತದಲ್ಲಿ ದೃಢವಾಗಿ ನಿಲ್ಲುತ್ತದೆ. ಈ ಸಂಸ್ಕಾರವು ಗಟ್ಟಿಯಾಗಿ ನಿಂತರೆ ಅವನನ್ನೇ ಜ್ಞಾನಿ ಎನ್ನಬಹುದು. ಆ ತತ್ತ್ವಜ್ಞಾನಿಯು, ಆಕಾಶವೇ ಸತ್ಯವೆನ್ನತಕ್ಕವನನ್ನೂ, ಅದು ಕೇವಲ ಸತ್-ಆಕಾಶವಲ್ಲ ಎಂದು ತಿಳಿಯದೇ ಇರತಕ್ಕವನನ್ನೂ ಕಂಡು ಆಶ್ಚರ್ಯ ಪಡುತ್ತಾನೆ. ದೂರದಲ್ಲಿ ಹಗ್ಗವನ್ನು ನೋಡಿದಾಗ ಹಾವೆಂದು ಕಾಣುತ್ತದೆ. ಹತ್ತಿರ ಹೋಗಿ ಮುಟ್ಟಿನೋಡಿದ ಮೇಲೆ ಇದು ಹಾವಲ್ಲ ಹಗ್ಗವೇ ಸರಿ ಎಂದು ನಿಶ್ಚಯವಾದವನಿಗೆ ಅದು ಹಾವೇ ಸರಿ ಎಂದು ಹೇಳತಕ್ಕವನನ್ನು ಕಂಡು ಅಶ್ಚರ್ಯವಾಗುತ್ತದೆಯಲ್ಲವೆ? ಹಾಗೆಯೇ ಇಲ್ಲಿಯೂ ಸಹ. ಮೊದಲು ಇದು ಆಕಾಶವೇ ಸರಿ, ಸದ್ವಸ್ತುವಲ್ಲ ಎಂದು ಒಬ್ಬನು ತಿಳಿದುಕೊಂಡಿರುತ್ತಾನೆ. ಆತನ

ಸಂಸ್ಕಾರವು ಹಾಗಿರುತ್ತದೆ. ಗುರೂಪದೇಶವಾದ ಮೇಲೆ ಇದು ಆಕಾಶವಲ್ಲ, ಸದ್ವಸ್ತುವೇ ಎಂದು ಮತ್ತೆ ಮತ್ತೆ ಚಿಂತಿಸುತ್ತಾ ಹೋಗುತ್ತಾನೆ. ಹಳೆಯ ಸಂಸ್ಕಾರವು ಅಳಿಸಿದ ಮೇಲೆ ಹೊಸ ಸಂಸ್ಕಾರವು ಚಿತ್ತದಲ್ಲಿ ಹುಟ್ಟುತ್ತದೆ. ಇದು ಸದ್ವಸ್ತುವೇ ಎಂದು ನಿಶ್ಚಯವಾಗುತ್ತದೆ. ಈ ನಿಶ್ಚಯವಾದ ಮೇಲೆ ತಾನು ಹಿಂದೆ ವಾದಿಸಿದಂತೆ ಇನ್ನೊಬ್ಬ ಅಜ್ಞಾನಿಯು ವಾದಿಸುವುದನ್ನು ಕಂಡು ಆಶ್ಚರ್ಯಪಡುತ್ತಾನೆ ! ಇದು ಹಗ್ಗವೆಂಬುದು ಸ್ಪಷ್ಟವಾಗಿರುವಾಗ , ಇದು ಹಾವು ಎಂದು ಭ್ರಮಿಸತಕ್ಕವನನ್ನು ಕಂಡರೆ ಆಶ್ಚರ್ಯವೆ ! (೭೫). ಈ ಪ್ರಕಾರವಾಗಿ ಚಿಂತಿಸಿ ಆಕಾಶವು ಮಿಥ್ಯೆ, ಸತ್ ಎಂಬುದೇ ಸತ್ಯ ಎಂಬ ಸಂಸ್ಕಾರವು ದೃಢವಾದ ಮೇಲೆ, ಈ ದೃಷ್ಟಾಂತವನ್ನೇ ಅವಲಂಬಿಸಿ ಉಳಿದ ವಾಯ್ವಾದಿ ಭೂತಗಳ ಪರಿಸ್ಥಿತಿಯನ್ನು ವಿವೇಚಿಸಬೇಕು. ಸತ್ ಎಂಬುದೇ ಸತ್ಯ, ವಾಯು ಎಂಬ ಬೋಧೆ ಅಸತ್ಯ- ಮಿಥ್ಯಾ ಎಂದು ವಿವೇಕದಿಂದ ಚಿಂತಿಸುತ್ತ ಹೋಗಬೇಕು (೭೬).

ಸದ್ವಸ್ತುವಿನಲ್ಲಿ ಕಲ್ಪಿತವಾದ ಆಕಾಶವು ಮಿಥ್ಯೆಯೆಂದೂ ಆಕಾಶಕ್ಕೆ ಕಾರಣವಾದ ಸದ್ವಸ್ತುವೇ ಸತ್ಯವೆಂದೂ ತಿಳಿಸಿದ್ದಾಯಿತು. ಇದೇ ಪ್ರಕಾರವಾಗಿ ವಾಯ್ವಾದಿಗಳು ಅಸತ್ಯವೆಂದೂ ಸದ್ವಸ್ತುವೇ ಸತ್ಯವೆಂದೂ ಹಿಂದಿನ ಶ್ಲೋಕದಲ್ಲಿ ತಿಳಿಸಿದೆ. ಈಗ ಒಂದು ಶಂಕೆ ಹುಟ್ಟಬಹುದು. ಆಕಾಶದಿಂದ ವಾಯು ಹುಟ್ಟಿದೆಯೇ ಹೊರತು ಸದ್ವಸ್ತುವಿನಿಂದ ಹುಟ್ಟಿಲ್ಲ. ಸತ್ತಿಗೂ ವಾಯುವಿಗೂ ಸಂಬಂಧವೇ ಇಲ್ಲವಾದ್ದರಿಂದ ಆಕಾಶದಂತೆ ವಾಯುವನ್ನು ಪ್ರತ್ಯೇಕಿಸಿ ಸದ್ವಸ್ತುವೇ ಸತ್ಯವೆಂಬ ವಿವೇಚನೆಗೆ ಅವಕಾಶವಿಲ್ಲವಾದ್ದರಿಂದ ವಾಯುವನ್ನು ವಿವೇಚಿಸುವ ಪ್ರಶ್ನೆ ಏಳುವುದಿಲ್ಲವಲ್ಲವೆ? ಎಂದು. ಅದಕ್ಕೆ ಉತ್ತರವೇನೆಂದರೆ, ಸದ್ವಸ್ತುವಿನ ಒಂದಂಶದಲ್ಲಿರುವ ಮಾಯೆಯಿಂದ ಆಕಾಶವು ನಿರ್ಮಿತವಾಗಿದೆ. ಇಂತಹ ಆಕಾಶವು ವಾಯುವನ್ನು ತನ್ನಲ್ಲಿ ನಿರ್ಮಿಸಿಕೊಂಡಿದೆ. ಹೀಗೆ ಪರಂಪರೆಯಿಂದ ಈ ಪಂಚಭೂತಗಳಿಗೆ ಸದ್ವಸ್ತುವೇ ಮೂಲವಾಗಿದೆ. ಸತ್ತಿನಿಂದ ಅತಿರಿಕ್ತವಾದ ಆಕಾಶವಿಲ್ಲವಾದರೆ ಆಕಾಶದಿಂದ ಹುಟ್ಟಿದ ವಾಯುವೂ ಇಲ್ಲ. ಆಗ ಉಳಿಯತಕ್ಕದ್ದು ಸದ್ವಸ್ತುವೇ. ಸತ್ತಿನಲ್ಲಿ ಮಾಯೆ, ಮಾಯೆಯಲ್ಲಿ ಆಕಾಶ, ಆಕಾಶದಲ್ಲಿ ವಾಯು, ವಾಯುವಿನಲ್ಲಿ ಅಗ್ನಿ - ಈ ಪ್ರಕಾರವಾಗಿ ವಿಶ್ವದ ವಸ್ತುಗಳೆಲ್ಲವೂ ಕಲ್ಪಿತವಾಗುತ್ತಾ ಹೋಗಿವೆಯೆಂಬುದನ್ನು ಸಾದೃಶ್ಯದಿಂದ ಶ್ರುತಿಯು ವಿವರಿಸುತ್ತಾ ಹೋಗಿದೆ. ಪ್ರಥಮದಲ್ಲಿ ಕಲ್ಪಿತವಾದ ಆಕಾಶವಿಲ್ಲದೆ, ಸದ್ವಸ್ತುವೇ ಉಳಿಯುವುದಾದರೆ, ಆಕಾಶದಲ್ಲಿ ಕಲ್ಪಿತವಾದವುಗಳೂ

ಸಮೂಲವಾಗಿ ಇಲ್ಲವಾಗುತ್ತವೆ. ಈ ವಿವೇಚನೆಯಿಂದ ಸತ್ತಿಗೆ ಮಾತ್ರ ಅಸ್ತಿತ್ವವೆಂದು ಸಿದ್ಧವಾಗುತ್ತದೆ. (೭೭)

ಸದ್ವಸ್ತುವಿಗೂ, ವಾಯುವಿಗೂ ಇರುವ ಭೇದವೇನೆಂಬುದನ್ನು ನೋಡೋಣ. ವಾಯುವಿನಲ್ಲಿ ಶೋಷ( ಒಣಗಿಸುವ ಸ್ವಭಾವ), ತ್ವಗಿಂದ್ರಿಯಕ್ಕೆ ಗೋಚರ ವಾಗುವ ಸ್ಪರ್ಶ, ಗತಿ(ಚಲನೆ), ವೇಗ ( Speed, Lelocity) ಎಂಬ ನಾಲ್ಕೂ ಗುಣಗಳಿವೆ, ಇವಲ್ಲದೆ ಸತ್ತಿನ ಅಸ್ತಿತ್ವಧರ್ಮ, ಮಾಯೆಯ ಮಿಥ್ಯಾತ್ವ ಆಕಾಶದ ಶಬ್ದ- ಇವು ಮೂರು ಇವೆ. ಹೀಗೆ ವಾಯುವಿನಲ್ಲಿ ಒಟ್ಟು ಏಳು ಸ್ವಭಾವಗಳು ಕಂಡು ಬರುತ್ತವೆ. ಇವುಗಳಲ್ಲಿ ಶೋಷ-ಮೊದಲಾದ ನಾಲ್ಕು ಗುಣಗಳು ಸ್ಪಷ್ಟವಾಗಿ ತೋರುತ್ತವೆಯಷ್ಟೆ, ಇನ್ನು ಹಿಂದಿನಿಂದ ಬಂದವು ಮೂರು. ವಾಯುವಿದೆ - ಎಂಬ ಪ್ರತೀತಿ ಇರುವುದರಿಂದ ಅಸ್ತಿತ್ವರೂಪವಾದ ಸತ್ ಇರುವುದು ತಿಳಿಯುತ್ತದೆ. ಸತ್ ಎಂಬುದನ್ನು ಕಳಚಿಬಿಟ್ಟರೆ ವಾಯುವೇ ನಿಸ್ತತ್ತ್ವವಾಗಿ ಶೂನ್ಯವಾಗಿ ಬಿಡುತ್ತದೆ. ಆದ್ದರಿಂದ ಮಾಯೆಯ ಮಿಥ್ಯಾತ್ವವು ವಾಯುವಿನಲ್ಲುಂಟು. ಆಕಾಶದ ಶಬ್ದವೂ ವಾಯುವಿನಲ್ಲಿ ಅನುವೃತ್ತವಾಗಿ ಬಂದಿದೆ. ಹೀಗೆ ಮೂರು ಗುಣಗಳು ಆಕಾಶದಿಂದ ಬಂದವು. (೭೮ - ೭೯). ಇಲ್ಲೊಂದು ಶಂಕೆಯುಂಟು. ಹಿಂದೆ ೬೭ನೆಯ ಶ್ಲೋಕದಲ್ಲಿ ''ಸತ್ತಿನ ಅನುವೃತ್ತಿಯು ಆಕಾಶಾದಿಗಳಲ್ಲೆಲ್ಲಾ ಇದ್ದೇ ಇರುತ್ತದೆ. ಆ ರೀತಿ ಆಕಾಶದ ಅನುವೃತ್ತಿ ಸರ್ವತ್ರ ಇಲ್ಲ'' ಎಂದು ಹೇಳಿದ್ದಿರಿ. ಈಗ ಆಕಾಶದ ಶಬ್ದವು ವಾಯುವಿನಲ್ಲಿದೆ ಎನ್ನುತ್ತೀರಿ. ಇದು ವ್ಯಾಹತವಾದ - ಪೂರ್ವಾಪರವಿರುದ್ಧವಾದ ನುಡಿಯಲ್ಲವೆ? (೮೦) ಅಲ್ಲ; ಆಕಾಶವು ಅವಕಾಶಪ್ರದವಾದದ್ದು. ಈ ಅವಕಾಶ ಪ್ರದತ್ತ್ವವು ವಾಯು ಮುಂತಾದವುಗಳಲ್ಲಿಲ್ಲ ಎಂದು ಹೇಳಿದ್ದೇವೆ. ಈಗ ಹೇಳಿರುವುದು ಶಬ್ದದ ಅನುವೃತ್ತಿ. ಶಬ್ದದ ಅನುವೃತ್ತಿಯಾಗುವುದಿಲ್ಲವೆಂದು ನಾವು ಹೇಳಿಲ್ಲ, ನಮ್ಮ ಮಾತು ವ್ಯಾಹತವಾಗಲಿಲ್ಲ, ಪೂರ್ವಾಪರ ವಿರೋಧವೇನೂ ಇಲ್ಲ (೮೧). ಒಳ್ಳೆಯದು; ಸದ್ವಸ್ತುವಾದ ಬ್ರಹ್ಮಕ್ಕಿಂತ ವಾಯುವು ವಿಲಕ್ಷಣವಾದ್ದರಿಂದ ವಾಯುವು ಅಸತ್-ಮಾಯಾಮಯವೆಂದು ವಾದಿಸುತ್ತೀದ್ದೀರಷ್ಟೆ ಹಾಗಾದರೆ, ಅವ್ಯಕ್ತವಾದ ಮಾಯೆಗೆ ವಿಲಕ್ಷಣವಾದದ್ದರಿಂದ, ವಾಯುವು ಮಿಥ್ಯೆಯಲ್ಲ, ಸತ್ಯವೇ ಸರಿಯೆಂದು ಏಕೆ ಹೇಳಬಾರದು? (೮೨) ಹಾಗಲ್ಲ, ವಾಯುವು ಮಾಯಾಮಯವೆಂದು ಹೇಳುವುದಕ್ಕೆ ಕಾರಣವಾದದ್ದು ಅವ್ಯಕ್ತತೆ ಅಲ್ಲ, ಅದು ನಿಸ್ತತ್ತ್ವವಾದ್ದು ಎಂಬುದೇ ಕಾರಣ. ಈ ನಿಸ್ತತ್ತ್ವತೆಯು

ವ್ಯಕ್ತ ಮತ್ತು ಅವ್ಯಕ್ತಗಳನ್ನು ನಿರ್ದೇಶಿಸುವ ಶಕ್ತಿಯಲ್ಲಿಯೂ ಆ ಶಕ್ತಿಯ ಕಾರ್ಯದಲ್ಲಿಯೂ ಸಮಾನವಾಗಿಯೇ ಇದೆ. ಪ್ರಪಂಚ ಮಾಯೆಯನ್ನು ಕಳಚಿದಾಗ ವಾಯುವು ನಿಸ್ತತ್ತ್ವವಾಗಿ ಬಿಡುತ್ತದೆಯೇ ಹೊರತು ಸತ್ಯವಾಗುವುದಿಲ್ಲ. ವ್ಯಕ್ತ ಮತ್ತು ಅವ್ಯಕ್ತಗಳೆರಡೂ ಮಾಯಾರೂಪಗಳೇ, ಮಾಯೆಯು ಅವ್ಯಕ್ತ, ಅದರ ಕಾರ್ಯವು ವ್ಯಕ್ತ (೮೩). ಮತ್ತು ಅದು ವ್ಯಕ್ತವೇ ಅಥವಾ ಅವ್ಯಕ್ತವೇ ಎಂಬ ವಿಚಾರವು ಈಗ ಪ್ರಸ್ತುತವಾದ್ದಲ್ಲ. ಸತ್- ಅಸತ್ ಎಂಬಿವೆರಡರ ವಿಚಾರವೇ ಪ್ರಸ್ತುತವಾದದ್ದು. ಏಕೆಂದರೆ ಅವ್ಯಕ್ತವಾದ ಬ್ರಹ್ಮವೇ ಸತ್ ಆಗಿರುತ್ತದೆ. ವ್ಯಕ್ತಅವ್ಯಕ್ತ ಎಂಬುದೂ ಸಹ ಅಸತ್ತಿನ ಒಳಭೇದವೇ ಆಗಿದೆ. ಆದ್ದರಿಂದ ಸತ್-ಅಸತ್ ಇವುಗಳ ನಿರ್ಣಯಕ್ಕೆ ಮಾತ್ರ ನಾವು ಕೈ ಹಾಕಿದ್ದೇವೆ. ಅದನ್ನೀಗ ವಿಚಾರಿಸಿ ನಿರ್ಣಯಿಸಬೇಕು(೮೪). ಸತ್ ಎಂಬುದು ಮಾತ್ರ ಬ್ರಹ್ಮವಸ್ತು. ಉಳಿದ ಎಲ್ಲ ಅಂಶವೂ ಮಿಥ್ಯೆ. ಆದ್ದರಿಂದ ವಾಯು ಎಂಬುದು ಮಿಥ್ಯೆ. 'ಅದರಲ್ಲಿ ತೋರುವ ಸತ್ ಎಂಬುದು ಮಾತ್ರ ಸತ್ಯವಾದದ್ದು. ಇದನ್ನು ಮನಸ್ಸಿನಲ್ಲಿಮತ್ತೆ ಮತ್ತೆ ಚಿಂತಿಸಿ ಗಟ್ಟಿಮಾಡಿಕೊಂಡು, ಆ ಮೇಲೆ ವಾಯುವಿನ ವಿಚಾರವನ್ನು ಬಿಡಬೇಕು(೮೫). ಅನಂತರ ಅಗ್ನಿಯ ವಿಷಯವನ್ನು ಚಿಂತಿಸಬೇಕು. ಹಿಂದೆ ಹೇಳಿದ ಪ್ರಕಾರದಲ್ಲಿ ಅಗ್ನಿಯೂ ಮಿಥ್ಯೆಯೆಂಬುದನ್ನು ದೃಢಪಡಿಸಿಕೊಳ್ಳಬೇಕು. ಅಗ್ನಿಯು ವಾಯುವಿಗಿಂತ ಅಲ್ಪಸ್ಥಳದಲ್ಲಿದೆ. ಅಧಿಕ ಸ್ಥಳ ಅಲ್ಪಸ್ಥಳ ಎಂಬ ವಿಭಾಗವು ಸಮಸ್ತ ಬ್ರಹ್ಮಾಂಡದ ಆವರ್ತಗಳಲ್ಲಿ ಮೂಡುವ ವಿಚಾರವಾಗಿದೆ (೮೬) ಅಗ್ನಿಯು ವಾಯುವಿನ ಹತ್ತನೆಯ ಒಂದು ಭಾಗದ ಸ್ಥಳದಲ್ಲಿದೆ, ಎಂದರೆ ವಿಶ್ವದಲ್ಲಿರುವ ವಾಯುವಿನ ಹತ್ತನೇ ಒಂದು ಭಾಗ ಅಗ್ನಿ. ಹೀಗೆ ಆಕಾಶದಿಂದ ಹಿಡಿದು ಪೃಥ್ವಿಯವರೆಗೆ ಕ್ರಮವಾಗಿ ಪಂಚಭೂತಗಳೂ ಹತ್ತನೆಯ ಒಂದಂಶವಾಗಿ ನ್ಯೂನವಾಗುತ್ತಾ ಹೋಗುತ್ತವೆ. ಆಕಾಶದ ಹತ್ತನೆಯ ಒಂದು ಭಾಗ ವಾಯು. ವಾಯುವಿನ ಹತ್ತನೆಯ ಒಂದು ಭಾಗ ಅಗ್ನಿ - ಹೀಗೆ ನ್ಯೂನತೆಯಿದೆಯೆಂದು ತಿಳಿಯಬೇಕು. ಈ ತಾರತಮ್ಯವು ಪುರಾಣಗಳಲ್ಲಿ ಉಕ್ತವಾದದ್ದು. ಶ್ರುತಿಯಲ್ಲಿ ಇದರ ವಿವರವಿಲ್ಲ(೮೭) ಇನ್ನು ಅಗ್ನಿಯಾದರೋ ಉಷ್ಣವೂ ಪ್ರಕಾಶ ಸ್ವರೂಪವೂ ಆಗಿದೆ. ಹಿಂದಿನಂತೆಯೇ ಕಾರಣ ಧರ್ಮಗಳು ಇದರಲ್ಲಿವೆಯೆಂದು ತಿಳಿಯಬೇಕು. ವಾಯುವಿನಲ್ಲಿದ್ದ ಶಬ್ದವೂ ಸ್ಪರ್ಶವೂ ಇದರಲ್ಲಿಯೂ ಬಂದಿವೆ. ಉಷ್ಣತೆ, ಪ್ರಕಾಶಗಳು ಹೊಸದಾಗಿ ವ್ಯಕ್ತವಾದವು. ಇಲ್ಲಿಯೂ ಅಗ್ನಿ ಇದೆ ಎಂಬುದು ಸತ್ ತತ್ತ್ವವಿರುವುದರಿಂದ ತೋರುತ್ತದೆ. ಸತ್ ಎಂಬುದನ್ನೇ ಬಿಟ್ಟು

ಉಳಿದವೆಲ್ಲವೂ ಕಲ್ಪಿತವಾದವುಗಳು ಎಂದು ತಿಳಿಯಬೇಕು(೮೮). ವಿಶೇಷವೇನೆಂದರೆ ಅಗ್ನಿಯಲ್ಲಿ ರೂಪವು ಕಾಣಿಸಿಕೊಂಡಿದೆ. ವಾಯುವಿನಲ್ಲಿ ರೂಪವು ವ್ಯಕ್ತವಾಗಿರಲಿಲ್ಲ, ಸತ್, ಮಾಯಾ, ಆಕಾಶ, ವಾಯು- ಇವುಗಳಲ್ಲಿದ್ದ ಎಲ್ಲವೂ ಅಗ್ನಿಯಲ್ಲಿದ್ದು ರೂಪವೆಂಬದು ಹೊಸದಾಗಿ ಬಂದದ್ದು, ಹಾಗೆಯೇ ಉಷ್ಣ, ಪ್ರಕಾಶಗಳೂ ಸಹ. ವಿವೇಚನಾ ಬುದ್ಧಿಯಿಂದ ಎಲ್ಲಾ ಧರ್ಮಗಳು ಭ್ರಾಂತಿಯಿಂದ ತೋರತಕ್ಕವೆಂದೂ ಸತ್ ಎಂಬುದು ಮಾತ್ರ ಶಾಶ್ವತವಾಗಿ ಇದ್ದದೆಂದು ತಿಳಿಯಬೇಕು (೮೯) ಹೀಗೆ ಸತ್ತಿನಿಂದ ಅಗ್ನಿಯನ್ನು ವಿವೇಚಿಸಿದಾಗ ಹೊಸಧರ್ಮಗಳೆಲ್ಲವೂ ಮಿಥ್ಯೆಯೆಂದೂ ಇರತಕ್ಕದ್ದು ಸತ್ ಒಂದೇ ಎಂಬುದೂ ಮನಸ್ಸಿಗೆ ದೃಢವಾಗುತ್ತದೆ. ಅನಂತರ ಅಗ್ನಿಯ ಹತ್ತರಲ್ಲೊಂದರಷ್ಟು ನ್ಯೂನವಾಗಿರುವ ಜಲವೂ ಸಹ ಹೀಗೆಯೇ ಕಲ್ಪಿತವಾದದ್ದೆಂದು ಚಿಂತಿಸತಕ್ಕದ್ದು (೯೦). ಈ ಜಲವಾದರೋ ಹಿಂದಿನಿಂದ ಅನುವೃತ್ತವಾದ ಶಬ್ದ, ಸ್ಪರ್ಶರೂಪಗಳಿಂದ ಕೂಡಿದೆ. ಹೊಸದಾಗಿ ವ್ಯಕ್ತವಾದ ತನ್ನ ಗುಣವು ರಸ ಎಂಬುದೊಂದು ಉಂಟು. ಹೀಗೆ ಚಿಂತಿಸುತ್ತ ಹೋದಾಗ ಈ ಗುಣಗಳೆಲ್ಲವೂ ಮಿಥ್ಯೆ. ಶಾಶ್ವತವಾದದ್ದು ಸತ್ ಒಂದೇ ಎಂದು ಮನಸ್ಸಿಗೆ ಗಟ್ಟಿಯಾಗಿ ಅಂಟಿಕೊಳ್ಳುತ್ತದೆ. ಆ ಮೇಲೆ ಜಲಕ್ಕಿಂತ ಹತ್ತರಷ್ಟು ಕಡಿಮೆ ಪ್ರಮಾಣವುಳ್ಳ ಭೂಮಿಯೂ ಜಲದಲ್ಲಿ ಕಲ್ಪಿತವಾಗಿದೆ ಎಂದು ಚಿಂತಿಸತಕ್ಕದ್ದು (೯೧-೯೨). ಈ ಭೂಮಿಯೂ ತತ್ತ್ವಶೂನ್ಯವಾದದ್ದು. ಶಬ್ದ, ಸ್ಪರ್ಶ, ರೂಪ, ರಸಗಳು ಹೊರಗಿನಿಂದ ಬಂದವು. ಇದರಲ್ಲಿ ಹೊಸದಾಗಿ ಗಂಧವೆಂಬ ಗುಣವು ಸೇರಿಕೊಂಡಿದೆ ಎಂದು ಚಿಂತಿಸುತ್ತ ಈ ಭೂಮಿಯಿಂದ 'ಸತ್ತಾ' ಎಂಬುದನ್ನು ಬೇರ್ಪಡಿಸಿಕೊಂಡಾಗ ಭೂಮಿಯು ಸಂಪೂರ್ಣವಾಗಿ ಮಿಥ್ಯೆಯಾಗಿ ಬಿಡುತ್ತದೆ ! ಸತ್ ಎಂಬುದನ್ನು ಬೇರ್ಪಡಿಸಿದಾಗ ಭೂಮಿಯ ಅಸ್ತಿತ್ವವೇ ಹಾರಿಹೋಗುತ್ತದೆ. ಈ ಪ್ರಕಾರವಾಗಿ ಪಂಚಭೂತಗಳ ವಿವೇಚನೆಯನ್ನು ಮಾಡಿದ್ದಾಯಿತು. ಈ ಪಂಚ ಮಹಾಭೂತಗಳಿಂದಾದ ಭೂಲೋಕವೇ ಮೊದಲಾದ ಬ್ರಹ್ಮಾಂಡವನ್ನೀಗ ವಿಮರ್ಶಿಸೋಣ. ಪುರಾಣಗಳಲ್ಲಿ ಹೇಳಿರುವ ಪ್ರಕಾರ ಈ ಬ್ರಹ್ಮಾಂಡವು - ಭೂಲೋಕ ಮೊದಲಾದದ್ದು - ಭೂಮಿಯ ಪ್ರಮಾಣಕ್ಕೆ ಹತ್ತರಲ್ಲೊಂದಾಗಿದೆ. ಅಭಿಪ್ರಾಯವೇನೆಂದರೆ, ಪಂಚ ಮಹಾಭೂತಗಳಲ್ಲಿ ಸೇರಿದ ಭೂಮಿಯೆಂದರೆ ಈ ಭೂಲೋಕವೆಂದು ಮಾತ್ರ ತಿಳಿಯಬಾರದು. ಈ ಬ್ರಹ್ಮಾಂಡದ ಲೋಕಗಳನ್ನೆಲ್ಲ ಭೂಮಿಯ ಕಣಗಳು

ವ್ಯಾಪಿಸಿಕೊಂಡಿವೆ. ಈ ವ್ಯಾಪಕ ಭೂಮಿಕಣಗಳ ನಡುವೆ ಬ್ರಹ್ಮಾಂಡವಿದೆ. ಬ್ರಹ್ಮಾಂಡದ ಒಂದು ಬಾಗ ಈ ಭೂಲೋಕ (೯೩-೯೪). ಈ ಬ್ರಹ್ಮಾಂಡದಲ್ಲಿ ಹದಿನಾಲ್ಕು ಲೋಕಗಳಿವೆ. ಅವು ಯಾವುವೆಂದರೆ, ಭೂಮಿಯ ಕೆಳಗಿರತಕ್ಕವು ಏಳು- ಅತಲ, ವಿತಲ, ಸುತಲ, ತಲಾತಲ, ರಸಾತಲ, ಮಹಾತಲ ಮತ್ತು ಪಾತಾಳ. ಭೂಲೋಕಾದಿಗಳು ಇವುಗಳ ಮೇಲಿರತಕ್ಕವು ಏಳು -ಭೂಲೋಕ, ಭುವಃ ಸುವಃ, ಮಹಃ , ಜನಃ, ತಪಃ ಮತ್ತು ಸತ್ಯಲೋಕ . ಈ ಲೋಕಗಳಲ್ಲಿ ದೇಹ, ದಾರಿಗಳಾದ ಪ್ರಾಣಿಗಳು ಒಂದು ವ್ಯವಸ್ಥೆಗೆ ಒಳಪಟ್ಟು ವಾಸಮಾಡುತ್ತಿವೆ. ಈ ಹದಿನಾಲ್ಕು ಲೋಕಗಳೂ ಅಲ್ಲಿ ವಾಸಮಾಡುವ ಪ್ರಾಣಿ ದೇಹಗಳೂ ಮಿಥ್ಯಾಭೂತವಾದವು. ಹಿಂದೆ ಹೇಳಿದಂತೆ ಇವುಗಳಿಂದ ಸದ್ವಸ್ತುವನ್ನು ಪೃಥಕ್ಕರಿಸಿದರೆ ಇವು ಏನೇನೂ ಉಳಿಯುವುದಿಲ್ಲ( ೯೫). ಬ್ರಹ್ಮ ಒಂದೇ ಉಳಿಯುತ್ತದೆ. ಹಾಗೆ ಪೃಥಕ್ಕರಿಸಿದರೂ ಈ ಲೋಕವೂ ಪ್ರಾಣಿ ದೇಹಗಳೂ ಕಾಣುತ್ತಲೇ ಇರುತ್ತವೆಯಲ್ಲ! ಕಾಣಲಿ, ಚಿಂತೆಯಿಲ್ಲ, ಅವು ಇಲ್ಲದಿದ್ದರೂ ಅವಿದ್ಯಾಶೇಷದಿಂದ ಕಾಣುತ್ತಲೇ ಇರುತ್ತವೆ. ಅದರಿಂದ ಅದ್ವಿತೀಯವಾದ ಬ್ರಹ್ಮಕ್ಕೆ ಯಾವ ಚ್ಯುತಿಯೂ ಇಲ್ಲ. ದೂರದಲ್ಲಿ ಮರು ಮರೀಚಿಕೆಯು ಕಂಡರೂ ಸತ್ಯವೇ ಆದ ನೆಲವೂ ಇದ್ದೇ ಇರುತ್ತದೆ. ಅದಕ್ಕೆ ಯಾವ ಚ್ಯುತಿಯೂ ಇಲ್ಲ. ಹಗ್ಗವೂ ಹಾವಾಗಿ ಕಾಣಿಸುತ್ತದೆ. ಹಾವಾಗಿ ಕಾಣಿಸಿದ ಮಾತ್ರದಿಂದ ಅಧಿಷ್ಠಾನವಾದ ಹಗ್ಗವು ಇದ್ದಹಾಗೆಯೇ ಇರುತ್ತದೆ. ಹಗ್ಗವೇನೂ ಹಾವಾಗಿ ಬಿಡುವುದಿಲ್ಲ. ಹಾಗೆ ಈ ಬ್ರಹ್ಮಾಂಡವು ತೋರುವುದು ಮಿಥ್ಯಾಜ್ಞಾನದಿಂದ . ಇದು ತೋರಿದರೂ ವಾಸ್ತವವಾಗಿ ಇದಕ್ಕೆ ಅಧಿಷ್ಠಾನವಾದ ಬ್ರಹ್ಮವು ತನ್ನ ಪಾಡಿಗೆ ಸ್ವಸ್ಥವಾಗಿರುತ್ತದೆ. ಅದಕ್ಕೆ ಏನೂ ಆಗಿರುವುದಿಲ್ಲ (೯೬). ಹೀಗೆ ಪಂಚಮಹಾಭೂತಗಳು, ಅವುಗಳಿಂದಾದ ಬ್ರಹ್ಮಾಂಡ ಮತ್ತು ಪ್ರಾಣಿ ದೇಹಗಳು ಮತ್ತು ಮಾಯೆ, ಇವುಗಳಿಗೆ ವಾಸ್ತವವಾಗಿ ಅಸ್ತಿತ್ವವಿಲ್ಲ, ಇವೆಲ್ಲವೂ ಕಲ್ಪಿತವಾದವು- ಎಂಬ ಬುದ್ಧಿಯು ದೃಢಮೂಲವಾಗಬೇಕು. ಆಗ ಸದ್ವಸ್ತುವಾದ ಬ್ರಹ್ಮವು ಅದ್ವೈತವಾಗಿದೆ. ಎರಡಿಲ್ಲದ ಅದ್ವಿತೀಯವಾಗಿದೆ - ಎಂಬ ನಿಶ್ಚಯ ಜ್ಞಾನವು ಎಂದಿಗೂ ಮಾಸುವುದಿಲ್ಲ. ಈ ಅದ್ವಿತೀಯ ಜ್ಞಾನವು ಗಟ್ಟಿಯಾಗಿ ನಿಂತುಬಿಡುತ್ತದೆ (೯೭).

ಹೀಗೆ ಸದ್ವಸ್ತುವಿನಿಂದ ಆಕಾಶಾದಿ ಪಂಚಮಹಾಭೂತಗಳನ್ನು ಅವುಗಳಲ್ಲಿ ಕಾಣಿಸಿಕೊಳ್ಳುವ ಗುಣಗಳನ್ನು ಪೃಥಕ್ಕರಿಸಿದಾಗ, ಶಾಶ್ವತವಾಗಿ ಉಳಿದಿರುವುದು

ಸದ್ವಸ್ತು ಒಂದೇ ಎಂದು ಮನಸ್ಸಿಗೆ ನಾಟುತ್ತದೆ. ಆಕಾಶಾದಿಗಳೆಲ್ಲವೂ ಹೊಸದಾಗಿ ಸದ್ವಸ್ತುವಿನಲ್ಲಿ ಕಲ್ಪಿತವಾದವುಗಳೆಂದೂ ಗೊತ್ತಾಗುತ್ತದೆ. ಸದ್ವಸ್ತುವಾದ ಆತ್ಮನಿಗೆ ಉತ್ಪತ್ತಿಯನ್ನು ಯಾವ ಶ್ರುತಿಯೂ ಹೇಳಿಲ್ಲ ಯಾವ ಶಾಸ್ತ್ರವೂ ತಿಳಿಸಿಲ್ಲ. ಯಾವ ದರ್ಶನಕಾರರೂ ಆತ್ಮನು ಹುಟ್ಟುತ್ತಾನೆಂಬುದನ್ನು ಒಪ್ಪಿಲ್ಲ. ಆದ್ದರಿಂದ ಆತ್ಮನು ನಿತ್ಯ. ಆತ್ಮನಿಂದ ಆಕಾಶಾದಿಗಳು ಹುಟ್ಟಿದವೆಂದು **''ಆತ್ಮನ ಆಕಾಶಃ ಸಂಭೂತಃ''** (ತೈ. ಉ.೨-೧) ಇತ್ಯಾದಿ ಶ್ರುತಿವಾಕ್ಯಗಳೇ ತಿಳಿಸಿಕೊಟ್ಟಿವೆ. ಆತ್ಮನು ಅದ್ವಿತೀಯನೆಂದೂ ಶಾಶ್ವತವಾದ ಇನ್ನೊಂದು ವಸ್ತುವೂ ಇರಲೇ ಇಲ್ಲವೆಂದೂ **''ಏಕಮೇವಾದ್ವಿತೀಯಂ ಬ್ರಹ್ಮ, ನೇಹ ನಾನಾಸ್ತಿಕಿಂಚನ''** (ಛಾಂ. ಉ.೬-೨-೧) ಇತ್ಯಾದಿ ವೇದವಾಕ್ಯಗಳು ಸಾರುತ್ತವೆ. ಹೀಗಿರುವಾಗ ಆಕಾಶ, ವಾಯು- ಮೊದಲಾದವು ಎಲ್ಲಿಂದ ಬಂದವು? ಎಂಬ ಪ್ರಶ್ನೆ ಸಹಜವಾಗಿ ಹುಟ್ಟುತ್ತದೆ. ಅದಕ್ಕೆ ಉತ್ತರವಾಗಿ ಆಕಾಶಾದಿಗಳೆಲ್ಲವೂ ಪರಮಾತ್ಮನ ಮಾಯಾಸೃಷ್ಟಿ ಎಂಬುದನ್ನು ಒಪ್ಪಲೇ ಬೇಕಾಗುತ್ತದೆ. ಐಂದ್ರಜಾಲಿಕನು ಯಾವ ವಸ್ತುವಿನ ಸಹಾಯವೂ ಇಲ್ಲದೆ, ಹೇಗೆ ಹಣ್ಣು ಬಟ್ಟೆ ಮೊದಲಾದ್ದನ್ನು ನಿರ್ಮಿಸಿ ತೋರಿಸುತ್ತಾನೋ ಹಾಗೆ ಪರಮಾತ್ಮನು ಈ ವಿಶ್ವವನ್ನು ಸೃಷ್ಟಿಸಿದ್ದಾನೆಂದು ತಿಳಿಯಬೇಕಾಗುತ್ತದೆ. ಐಂದ್ರಜಾಲಿಕನ ಸೃಷ್ಟಿ ಹೇಗೆ ಮಿಥ್ಯೆಯೋ ಹಾಗೆ ಈ ಜಗತ್ತೂ ಮಿಥ್ಯೆಯೆಂದು ಸ್ವತಃ ಸಿದ್ಧವಾಗುತ್ತದೆ. ಒ ಳ್ಿ ಯ ಂ ದ ' ಂ ; ಅದ್ವೈತವಾದ ಸದ್ವಸ್ತುವಿನಿಂದ ಈ ದ್ವೈತ ಪ್ರಪಂಚವನ್ನು ಹಿಂದೆ ಹೇಳಿದಂತೆ ಪೃಥಕ್ಕರಿಸಿ ಭೂಮಿ - ಮೊದಲಾದದ್ದು ಮಿಥ್ಯೆಯೆಂದು ವಿದ್ವಾಂಸನು ನಿಶ್ಚಯಿಸುತ್ತಾನೆ. ಆದರೆ ಜ್ಞಾನಿಯೂ ಲೋಕವ್ಯವಹಾರವನ್ನು ನಮ್ಮಂತೆಯೇ ನಡೆಸುತ್ತಾನಲ್ಲ, ಇದು ಹೇಗೆ? ಸುಳ್ಳಾದ ವಸ್ತುವಿನಿಂದ ಲೋಕವ್ಯವಹಾರವು ಹೇಗೆ ನಡೆಯುತ್ತದೆ? ನಿಜ; ಆತ್ಮಜ್ಞಾನವಾಗುವವರೆಗೆ ಆ ಮನುಷ್ಯನು ಪೃಥ್ವಿ, ಜಲ - ಮೊದಲಾದ ಪದಾರ್ಥವು ಸತ್ಯವೆಂದು ಭ್ರಮಿಸಿದ್ದನು. ಆತ್ಮಜ್ಞಾನವಾದ ಮೇಲೆ ಅದೆಲ್ಲವೂ ಮಾಯಾಶಕ್ತಿಯಿಂದ ನಿರ್ಮಿತವಾದದ್ದೆಂದೂ ಅದು ಸತ್ಯವಲ್ಲವೆಂದೂ ಸರ್ವವೂ ಬ್ರಹ್ಮವೇ ಆಗಿದ್ದು ಭೂಜಲಾದಿ ರೂಪದಲ್ಲಿ ತೋರುತ್ತಿದೆಯೆಂದೂ ನಿಶ್ಚಯಿಸಿಕೊಳ್ಳುತ್ತಾನೆ. ಭೂಜಲಾದಿಗಳು ತಮ್ಮ ಸ್ವರೂಪದಲ್ಲಿ ಇದ್ದೇ ಇರುತ್ತವೆ. ಅವುಗಳ ಸ್ವರೂಪವೇನೂ ನಾಶವಾಗಿರುವುದಿಲ್ಲ. ಹಿಂದೆ ಇದ್ದಂತೆ ಅವು ಆಗಲೂ ಇದ್ದೇ ಇರುತ್ತವೆಯಾದ್ದರಿಂದ ಹಿಂದಿನಂತೆ ವ್ಯವಹಾರವು ನಡೆಯಬಹುದು. ಗಡಿಗೆಯು ಬರಿಯ ಮಣ್ಣೆಂದು ಗೊತ್ತಾದರೂ ನೀರನ್ನು ಹೊತ್ತು ತರಬಹುದು.

ಬಟ್ಟೆಯು ಹತ್ತಿಯ ಪಿಂಡಿಯೆಂದು ಗೊತ್ತಾದರೂ ಆ ಬಟ್ಟೆಯನ್ನು ಉಡಲು ಸಾಧ್ಯವಾಗುತ್ತದೆ (೯೮). ಸಾಂಖ್ಯಾದಿ ದರ್ಶನಕಾರರು ಜಗನ್ನಿರ್ಮಾಣವನ್ನು ಬೇರೆ ಬೇರೆ ರೀತಿಯಾಗಿ ಬಣ್ಣಿಸಿದ್ದಾರೆ. ತ್ರಿಗುಣಾತ್ಮಕವಾದ ಪ್ರಕೃತಿಯಿಂದ ಜಗತ್ತು ಹುಟ್ಟಿದೆಯೆಂದು ಸಾಂಖ್ಯರು ಹೇಳುತ್ತಾರೆ. ಪರಮಾಣುಗಳಿಂದ ಈ ಜಗತ್ತು ಹುಟ್ಟಿದೆಯೆಂದು ಕಾಣಾದರು (ವೈಶೇಷಿಕರು) ಹೇಳುತ್ತಾರೆ. ಅವರೆಲ್ಲರೂ ಜಗತ್ತು ಸತ್ಯವಾಗಿ ಇದೆಯೆಂದೇ ಹೇಳುತ್ತಾರೆ. ಬೌದ್ಧರು ಆತ್ಮವನ್ನಾಗಲಿ ಮಾಯಾಶಕ್ತಿಯನ್ನಾಗಲಿ ಒಪ್ಪುವುದಿಲ್ಲ. ಇದು ಶೂನ್ಯವೆಂದೂ ತಾತ್ಕಾಲಿಕವಾಗಿ ತೋರುತ್ತದೆಯೆಂದೂ ಹೇಳುತ್ತಾರೆ. ಅವರ ಮತಗಳೆಲ್ಲವನ್ನೂ ಇಲ್ಲಿ ವಿವರಿಸಿ, ಅನಂತರ ಖಂಡಿಸುವ ಉದ್ದೇಶ ನಮಗಿಲ್ಲ. ವ್ಯವಹಾರದಲ್ಲಿ ಅದೆಲ್ಲವೂ ನಮಗೆ ಸಂಮತವೇ ಸರಿ-ಜಗತ್ತು ವ್ಯಾವಹಾರಿಕ ಸತ್ಯವೆಂಬುದು ನಮಗೆ ಇಷ್ಟವೇ. ಅದನ್ನು ಖಂಡಿಸುವುದು ನಮಗೆ ಬೇಕಾಗಿಲ್ಲ. ಖಂಡಿಸುವುದಕ್ಕೆ ನಾನಾ ಯುಕ್ತಿವಾದಗಳನ್ನಿಲ್ಲಿ ಬಳಸಬೇಕಾಗುತ್ತದೆ. ಅದು ಪ್ರಕೃತದಲ್ಲಿ ಅನಾವಶ್ಯಕವಾಗಿ ಶ್ರೋತೃಗಳನ್ನು ಗೊಂದಲಕ್ಕೀಡು ಮಾಡುತ್ತದೆ. ಅವರ ಯುಕ್ತಿಗಳು ವ್ಯವಹಾರವನ್ನನುಸರಿಸಿದವು. ನಮಗೆ ಬೇಕಾದದು ಪರಮಾರ್ಥ(೯೯). ಆ ವಾದಿಗಳೆಲ್ಲರಿಗೂ ತಮ್ಮ ಮತವು ವೇದ ವಿರುದ್ಧವಾದದ್ದೆಂದು ಗೊತ್ತಿದೆ! ಆದರೂ ನಿರ್ದೋಷವಾದ ಅದ್ವೈತವಾದವನ್ನವರು ಯಾವ ಸಂಕೋಚವೂ ಇಲ್ಲದೆ ಉಪೇಕ್ಷಿಸಿಬಿಟ್ಟಿದ್ದಾರೆ. ಹೀಗಿರುವಾಗ ಪ್ರಮಾಣರಹಿತವಾದ ಅವರ ದ್ವೈತವಾದವನ್ನು ನಾವು ಉಪೇಕ್ಷಿಸಿದರೆ ತಪ್ಪೇನು! ನಮಗಾಗುವ ಹಾನಿಯೇನು? (೧೦೦). ಈ ಪ್ರಕಾರವಾಗಿ ಚಿಂತಿಸಿ ದ್ವೈತವನ್ನು ಉಪೇಕ್ಷಿಸಿ ಬಿಟ್ಟರೆ ಅದ್ವೈತದಲ್ಲಿ ಸಾಧಕನ ಮನಸ್ಸೂ ನಿಶ್ಚಲವಾಗಿ ನಿಂತುಬಿಡುತ್ತದೆ. ಯಾರ ಬುದ್ಧಿಯು ಅದ್ವೈತದಲ್ಲಿ ಸ್ಥಿರವಾಗಿ ನಿಂತು ಬಿಡುತ್ತದೆಯೋ ಅವನನ್ನು ''ಜೀವನ್ಮುಕ್ತ'' ಎನ್ನಬಹುದು. ಈ ವಿಷಯವನ್ನು ಭಗವಂತನು ಗೀತೆಯಲ್ಲಿ ಹೀಗೆ ನುಡಿದಿದ್ದಾನೆ-

**ಏಷಾ ಬ್ರಾಹ್ಮೀ ಸ್ಥಿತಿಃ ಪಾರ್ಥ ನೈನಾಂ ಪ್ರಾಪ್ಯ ವಿಮುಹ್ಯತಿ ।**
**ಸ್ಥಿತ್ವಾಸ್ಯಾಮಂತಕಾಲೇಽಪಿ ಬ್ರಹ್ಮನಿರ್ವಾಣಮೃಚ್ಛತಿ ॥**

(ಭ.ಗೀ. ೨-೭೨)

''ಪಾರ್ಥ, ಇದು ಬ್ರಾಹ್ಮೀ ಸ್ಥಿತಿ (ಬ್ರಹ್ಮಸ್ವರೂಪದಲ್ಲಿಯೇ ಇರುವುದು).

ಈ ಸ್ಥಿತಿಯನ್ನು ಪಡೆದ ಮೇಲೆ ಆತನು ಅಜ್ಞಾನಜನ್ಯವಾದ ಮೋಹವನ್ನು ಐದುವುದಿಲ್ಲ. ಅಂತಕಾಲದಲ್ಲಿ ಈ ಸ್ಥಿತಿಯುಂಟಾದರೆ ಆತನು ಬ್ರಹ್ಮಾನಂದ ರೂಪವಾದ ಮೋಕ್ಷವನ್ನು ಪಡೆಯುತ್ತಾನೆ'' (೧೦೧-೧೦೨). ಭಗವದ್ಗೀತೆಯ ಮೇಲ್ಕಂಡ ಶ್ಲೋಕದಲ್ಲಿ 'ಅಂತಕಾಲ' ಎಂಬ ಶಬ್ದವಿದೆಯಷ್ಟೆ, ಅಂತಕಾಲ ವೆಂದರೆ ಮರಣಕಾಲವೆಂದು ಅರ್ಥವಲ್ಲವೆಂದು ಪಂಚದಶೀಕಾರರ ಅಭಿಪ್ರಾಯವಾಗಿದೆ. ಇವರು ಹೇಳುವುದೇನೆಂದರೆ, ಸತ್ಯವಾದ ಅದ್ವೈತ, ಮಿಥ್ಯೆಯಾದ ದ್ವೈತ ಇದನ್ನು ಜನರು ವ್ಯತ್ಯಾಸವಾಗಿ ತಿಳಿದು ಮೋಹ ಗೊಂಡಿದ್ದಾರೆ. ಇದೇ ಅಧ್ಯಾಸ-ಅವಿದ್ಯೆ- ಭ್ರಮೆ. ಅದ್ವೈತವೇ ಮಿಥ್ಯೆಯೆಂದೂ ದ್ವೈತವೇ ಸತ್ಯವೆಂದೂ ಈ ಸಂಸಾರಿಗಳು ಭ್ರಮಿಸಿದ್ದಾರೆ. ಈ ಭ್ರಮೆಯು ಯಾವಾಗ ನಾಶವಾಗಿ ದ್ವೈತವೇ ಮಿಥ್ಯೆ, ಅದ್ವೈತವೇ ಸತ್ಯವೆಂಬ ಜ್ಞಾನವಾಗುವುದೋ ಅದೇ ಸಂಸಾರದ ಅಂತ್ಯಕಾಲ. ಈ ಅಂತ್ಯಕಾಲದಲ್ಲಿ ಎಂದು ಅದರ ಅರ್ಥ (೧೦೩). ಮರಣ ಕಾಲವೆಂದು ಹೇಳಿದರೂ ತಪ್ಪಲ್ಲ. ಲೋಕದಲ್ಲಿ ಅಂತಕಾಲ ಶಬ್ದಕ್ಕೆ ಆ ಅರ್ಥವೇ ಪ್ರಸಿದ್ಧವಾಗಿದೆ ಎಂದೂ ಪಕ್ಷಾಂತರವನ್ನು ಪಂಚದಶೀಕಾರರು ಒಪ್ಪುತ್ತಾರೆ. ಆದ್ದರಿಂದ ಪ್ರಾಣವಿಯೋಗಕಾಲದಲ್ಲಿ ಸಹ ಭ್ರಮೆಯು ಹೋಗಿ, 'ಬ್ರಹ್ಮವೇ ಸತ್ಯ ಅಹಂ ಬ್ರಹ್ಮಾಸ್ಮಿ,' ಎಂಬ ಜ್ಞಾನ ಉದಿಸಿದರೂ ಸಾಕು, ಆ ಭ್ರಮೆ ಮತ್ತೆ ಬರುವುದಿಲ್ಲ. ಅದು ಸತ್ಯಜ್ಞಾನದ ಮಹಿಮೆ (೧೦೪). ಈ ಆತ್ಮಜ್ಞಾನಿಗೆ ಯಾವ ಪ್ರಕಾರವಾದ ಮರಣವು ಬಂದರೂ ಅವನು ಮುಕ್ತನೆಂದೇ ತಿಳಿಯಬೇಕು. ಅವನು ಯಾವ ರೋಗವೂ ಇಲ್ಲದೆ ಸಾಯಲಿ, ಸುಮ್ಮನೆ ಕುಳಿತಿರುವಾಗ ಪ್ರಾಣತ್ಯಾಗಮಾಡಲಿ, ರೋಗದಿಂದ ಬಳಲಿ ನೆಲದಲ್ಲಿ ಹೊರಳಾಡುತ್ತ ಪ್ರಾಣವನ್ನು ತ್ಯಜಿಸಲಿ ಅಥವಾ ಮೂರ್ಛೆ ಬಂದಾಗ ಪ್ರಾಣವನ್ನು ತ್ಯಜಿಸಲಿ, ಅವನಿಗೆ ಮತ್ತೆ ದ್ವೈತ ಭ್ರಾಂತಿಯು ಬರುವುದೇ ಇಲ್ಲ. ಎಂದರೆ ಮತ್ತೆ ಸಂಸಾರಕ್ಕೆ ಅವನು ಬರುವುದಿಲ್ಲ. ಇದು ಕ್ಷೇತ್ರ-ಇದು ಅಶುದ್ಧ ದೇಶ, ಇದು ಉತ್ತರಾಯಣ- ಇದು ದಕ್ಷಿಣಾಯನ, ಒಳ್ಳೆಯವಾರ, ಕೆಟ್ಟನಕ್ಷತ್ರ - ಇತ್ಯಾದಿ ವಿಚಾರವನ್ನೇ ಆತನ ಮರಣದಲ್ಲಿ ಚಿಂತಿಸಬಾರದು. ಪ್ರಾರಬ್ಧವು ಕ್ಷಯಿಸಿದ ಕೂಡಲೇ ಅದಕ್ಕೆ ಅನುಗುಣವಾಗಿ ಮರಣವೂ ಬರುವುದರಿಂದ , ಕಾಲ, ಸ್ಥಳ, ಮುಂತಾದ ವಿಚಾರವನ್ನು ಮಾಡಲು ಅವಕಾಶವಿಲ್ಲ. ಹೇಗೆ ದೇಹವನ್ನು ತ್ಯಜಿಸಿದರೂ ಅವನು ಮುಕ್ತನೇ. ಆದರೆ ಇನ್ನು ಜ್ಞಾನಿಯಾಗದೆ ಯಾವನು ಸಾಧಕನೇ ಆಗಿರುತ್ತಾನೋ ಆತನಿಗೆ ಕಾಲದೇಶಾದಿ ವಿಚಾರವು

ಅನ್ವಯಿಸುತ್ತದೆ(೧೦೫). ಮರಣ ಕಾಲದಲ್ಲಿ ತೀವ್ರವಾದ ರೋಗ, ಮೂರ್ಛೆ-ಮೊದಲಾದವುಗಳಿಂದ ಜ್ಞಾನಿಯ ಅದ್ವೈತ ಜ್ಞಾನವು ನಷ್ಟವಾಗಬಹುದು. ಆಗ ಅವನಿಗೆ ಮತ್ತೆ ದ್ವೈತ ಭ್ರಾಂತಿಯು ಬರಬಹುದಲ್ಲವೆ? ಒಮ್ಮೆ ಜ್ಞಾನಿಯಾದರೆ ಸದಾ ಜ್ಞಾನಿಯೇ ಆಗಿ ಉಳಿಯುತ್ತಾನೆ ಎಂಬುದಕ್ಕೆ ಆಧಾರವೇನು? ಎಂದು ಯಾರಾದರೂ ಪ್ರಶ್ನೆ ಮಾಡಬಹುದು. ಅದಕ್ಕೆ ನಮ್ಮ ಉತ್ತರ ಹೀಗಿದೆ. ಒಬ್ಬನು ಪ್ರತಿದಿನವೂ ವೇದಾಧ್ಯಯನ ಮಾಡುತ್ತ ವೇದವನ್ನು ಕಂಠಪಾಠ ಮಾಡಿಕೊಂಡಿರುತ್ತಾನೆ. ವೇದವೆಲ್ಲವೂ ಅವನ ಬುದ್ಧಿಯಲ್ಲಿ ಸ್ಥಿರವಾಗಿ ನೆಲೆಸಿಬಿಟ್ಟಿರುತ್ತದೆ. ಹೀಗಿರುವಾಗಲೂ ರಾತ್ರಿ ನಿದ್ರೆಯಲ್ಲಿ ವೇದದ ಸ್ಮರಣೆ ಇರುವುದಿಲ್ಲ. ಕನಸಿನಲ್ಲಿಯೂ ವೇದವು ಮರೆತುಹೋದಂತೆ ಸ್ವಪ್ನ ಬೀಳಬಹುದು. ಮಾರನೇ ದಿನ ಹಾಸಿಗೆಯಿಂದ ಎದ್ದಾಗ ಅವನು ಕಲಿತ ವೇದವು ಮರೆತು ಹೋಗಿರುವುದೇನು? ಎಂದಿಗೂ ಇಲ್ಲ. ಹಾಗೆಯೇ ಜ್ಞಾನಿಯೂ ರೋಗಾದಿಗಳಿಂದ ಸ್ವಲ್ಪ ಕಾಲ ಅದ್ವೈತ ಸ್ಥಿತಿಯನ್ನು ಬಿಟ್ಟಿದ್ದರೂ ಅವನು ಜ್ಞಾನಿಯೇ, ದ್ವೈತಭ್ರಾಂತಿ ಮತ್ತೆ ಅವನಿಗೆ ಬರುವುದೇ ಇಲ್ಲ(೧೦೬). ತತ್ತ್ವಮಸಿ ಇತ್ಯಾದಿ ಶ್ರುತಿವಾಕ್ಯಪ್ರಮಾಣಗಳಿಂದಲೂ ಗುರೂಪದೇಶದಿಂದಲೂ ಹುಟ್ಟಿ ಯಾವ ಸಂಶಯವೂ ಇಲ್ಲದೆ ದೃಢವಾಗಿ ನಿಂತಿರುವ ಆತ್ಮಜ್ಞಾನವು ಬಡಪೆಟ್ಟಿಗೆ ಎಂದಿಗೂ ತೊಲಗುವುದಿಲ್ಲ. ಶ್ರುತಿವಾಕ್ಯ ಗುರೂಪದೇಶಗಳಿಗಿಂತ ಪ್ರಬಲವಾದ ಇನ್ನೊಂದು ಪ್ರಮಾಣವಿಲ್ಲ. ಆದ್ದರಿಂದ ಆತ್ಮಜ್ಞಾನವು ಉಂಟಾದ ಮೇಲೆ ಅದು ಹೊರಟು ಹೋಗುವುದೆಂಬ ಶಂಕೆಗೆ ಎಡೆಯೇ ಇಲ್ಲ(೧೦೭). ಆದಕಾರಣ ವೇದಾಂತದಿಂದ ಸಿದ್ಧವಾದ ಶುದ್ಧ ಅದ್ವೈತಜ್ಞಾನವು ಯಾವುದರಿಂದಲೂ ಬಾಧಿತವಾಗುವುದೇ ಇಲ್ಲ. ಅದು ಪ್ರಾಣವಿಯೋಗ ಕಾಲದಲ್ಲಿಯೂ ಇದ್ದೇ ಇರುತ್ತದೆ. ಪಂಚಭೂತಗಳಿಂದ ಪೂರ್ವೋಕ್ತಪ್ರಕಾರವಾಗಿ ಆತ್ಮನು ಬೇರೆ ಎಂಬ ವಿವೇಕೋದಯವಾದರೆ ಆತನಿಗೆ ಪರಮಾನಂದ ರೂಪವಾದ ಮುಕ್ತಿಯು ನಿಶ್ಚಯವಾಗಿ ದೊರೆಯುತ್ತದೆ (೧೦೮).

**ಇಲ್ಲಿಗೆ ಪಂಚಭೂತವಿವೇಕಪ್ರಕರಣವು ಸಮಾಪ್ತವಾಯಿತು**

---

# ೩. ಪಂಚಕೋಶವಿವೇಕಪ್ರಕರಣ

ಆನಂದವಲ್ಲಿಯ ಆರಂಭದಲ್ಲಿಯೇ ''ಬ್ರಹ್ಮವಿದಾಪ್ನೋತಿ ಪರಂ। **ತದೇಷಾಭ್ಯುಕ್ತಾ, ಸತ್ಯಂ ಜ್ಞಾನಮನಂತಂ ಬ್ರಹ್ಮ, ಯೋ ವೇದ ನಿಹಿತಂ ಗುಹಾಯಾಂ ಪರಮೇ ವ್ಯೋಮನ್''** (ತೈ.ಉ.೨-೧) ಎಂದು ಹೇಳಿದೆ. ''ಬ್ರಹ್ಮವನ್ನರಿತವನು ಶ್ರೇಷ್ಠವಾದ ಬ್ರಹ್ಮವನ್ನೇ ಪಡೆಯುತ್ತಾನೆ. ಎಂದರೆ ಬ್ರಹ್ಮವೇ ಆಗಿಬಿಡುತ್ತಾನೆ. ಆ ವಿಷಯದಲ್ಲಿ ಈ ಒಂದು ಋಕ್ ಹೀಗಿದೆ. ಸತ್ಯವೂ ಜ್ಞಾನವೂ ಅನಂತವೂ ಆದದ್ದು ಬ್ರಹ್ಮ. ಗುಹೆಯಲ್ಲಿರುವ ಪರಮಾಕಾಶದಲ್ಲಿ ಅದು ನಿಹಿತವಾಗಿದೆ. ಅದನ್ನರಿತವನು ಬ್ರಹ್ಮವೇ ಆಗಿ ಬಿಡುತ್ತಾನೆ' ಎಂದು ಆ ವಾಕ್ಯಗಳ ತಾತ್ಪರ್ಯ. ಇಲ್ಲಿ ಆ ಗುಹೆಯು ಯಾವುದು? ಎಂಬ ಪ್ರಶ್ನೆ ಸಹಜವಾಗಿ ಹುಟ್ಟುತ್ತದೆ. ಗುಹೆಯೆಂದರೆ ಕಾಡಿನಲ್ಲಿ ಮೃಗಗಳಿರಬಹುದಾದ ಗುಹೆಯಂತೂ ಅಲ್ಲವೆಂದು ಯಾರಿಗಾದರೂ ಹೊಳೆಯುತ್ತದೆ. ಹಾಗಾದರೆ ಯಾವುದನ್ನಿಲ್ಲಿ ಶ್ರುತಿಯು ಗುಹೆಯೆಂದು ಕರೆದಿದೆ? ಅನ್ನಮಯಾದಿ ಪಂಚಕೋಶಗಳೇ ಗುಹೆ. ಈ ಕೋಶಪಂಚಕಗಳ ಸ್ವರೂಪವನ್ನು ವಿವೇಚಿಸಿದರೆ ಗುಹೆಯ ಸ್ವರೂಪವು ಚೆನ್ನಾಗಿ ತಿಳಿಯುತ್ತದೆ. ಆದ್ದರಿಂದ ಈ ಪಂಚಕೋಶಗಳನ್ನು ವಿವೇಚಿಸೋಣ. ವಿವೇಚಿಸುವುದೆಂದರೆ ಪ್ರತ್ಯಗಾತ್ಮವಾದ ಬ್ರಹ್ಮಕ್ಕಿಂತಲೂ ಈ ಪಂಚಕೋಶಗಳು ಬೇರೆಯಾದವೆಂದು ವಿಮರ್ಶಿಸಿ ತಿಳಿಯುವುದು (೧).

ನಮ್ಮ ಸ್ಥೂಲ ಶರೀರ ಉಂಟಷ್ಟೆ. ಇದು ಅನ್ನದಿಂದ ಹುಟ್ಟಿ ಅನ್ನದಿಂದಲೇ ಬದುಕಿಕೊಂಡಿದೆ. ಆದ್ದರಿಂದ ಈ ದೇಹಕ್ಕೆ ಅನ್ನಮಯ ಕೋಶವೆಂದು ಹೆಸರು. ಇದರೊಳಗಡೆ ಇರತಕ್ಕದ್ದು ಪ್ರಾಣ. ಅದೇ ಪ್ರಾಣಮಯ ಕೋಶ. ಅದರೊಳಗಡೆ ಇರುವುದು ಮನೋಮಯಕೋಶ. ಅದಕ್ಕೆ ಅಂತರವಾದದ್ದು ವಿಜ್ಞಾನಮಯಕೋಶ. ಇದು ಕರ್ತಾ ಎನ್ನಿಸಿಕೊಂಡಿದೆ. ಅದಕ್ಕೂ ಅಂತರವಾದದ್ದು ಆನಂದಮಯಕೋಶ. ಇದೇ ಭೋಕ್ತಾ. ಈ ಐದು ಕೋಶಗಳು ಒಂದರೊಳಗೊಂದಿರುವ ಗುಹೆ ಎನ್ನಿಸಿಕೊಂಡಿವೆ. ಈ ಗುಹೆಯೊಳಗೆ ಆತ್ಮನಿದ್ದಾನೆಂದು ಅಭಿಪ್ರಾಯ. ಇದನ್ನು ಮನೆಯಲ್ಲಿ ಟ್ರೆಜರಿಯೊಳಗಿಟ್ಟಿರುವ ಚಿನ್ನದ ಸವರನ್ನಿಗೆ ಹೋಲಿಸಬಹುದು. ಮನೆಯೇ ಅನ್ನಮಯ ಕೋಶವಿದ್ದಂತೆ. ಅದರೊಳಗೆ ಒಂದು ಕೋಣೆ; ಪ್ರಾಣಮಯ ಕೋಶವಿದ್ದಂತೆ, ಅದರಲ್ಲಿ ಒಂದು ಕಬ್ಬಿಣದ ಬೀರು; ಇದು ಮನೋಮಯ ಕೋಶ. ಅದರೊಳಗೆ ಒಂದು ಒಳಖಾನೆ; ಇದು ವಿಜ್ಞಾನಮಯಕೋಶ.

ಇದರೊಳಗೆ ಒಂದು ಸಂಪುಟ; ಇದು ಆನಂದಮಯಕೋಶ. ಇದರೊಳಗಡೆ ಆತ್ಮನೆಂಬ ಸವರನ್, ಈ ಸವರನ್ನು ಹೊರಗಡೆ ಇನ್ನೆಲ್ಲಿಯೂ ಇಲ್ಲ. ನಮ್ಮೊಳಗೆ ಇದೆ( ೨). ತಂದೆಯು ತಿಂದ ಅನ್ನದಿಂದ ವೀರ್ಯವು ಹುಟ್ಟುತ್ತದೆ. ಅದರಿಂದ ಈ ದೇಹವು ಹುಟ್ಟಿದೆ. ಅನ್ನದಿಂದಲೇ ಇದು ಬೆಳೆಯುತ್ತಿದೆ. ಆದ್ದರಿಂದ ಇದು ಅನ್ನಮಯವೆನಿಸಿದೆ. ಅನ್ನಮಯವೆಂದರೆ ಅನ್ನದ ವಿಕಾರವೆಂದರ್ಥ. ವಿಕಾರವು ಪ್ರಕೃತಿಯ ಇನ್ನೊಂದು ಅವಸ್ಥೆ. ಪ್ರಕೃತಿಯ ರೂಪಾಂತರ. ವಿಕಾರಾರ್ಥದಲ್ಲಿ ಮಯಟ್ ಎಂಬ ಪ್ರತ್ಯಯವು ಬಂದು ಅನ್ನಮಯವೆಂಬ ರೂಪವಾಗುತ್ತದೆ. ಮೃತ್ತಿಕೆಯ ವಿಕಾರವಾದ ಗಡಿಗೆ ಮೃತ್ತಿಕಾಮಯ. ಸುವರ್ಣಮಯ ಆಭರಣ, ಸುವರ್ಣದ ವಿಕಾರವೆಂದರ್ಥ. ಈ ಶರೀರವು ಆತ್ಮವಾಗಲಾರದು. ಏಕೆಂದರೆ ಇದಕ್ಕೆ ಜನ್ಮವಿದೆ, ಹುಟ್ಟುವುದಕ್ಕೆ ಮೊದಲು ಇದು ಇರಲಿಲ್ಲ. ಸತ್ತಮೇಲೆ ಇರುವುದೂ ಇಲ್ಲ. ಈ ದೇಹಕ್ಕೆ ಆದ್ಯಂತಗಳಿವೆ ಇದು ನಿತ್ಯವಲ್ಲ. ಆತ್ಮವಾದರೋ ಆದ್ಯಂತರಹಿತವೂ ನಿತ್ಯವೂ ಆದದ್ದು. ಇದರಿಂದ ಅನ್ನಮಯ ಕೋಶವಾದ ಈ ಶರೀರವು ಆತ್ಮವಲ್ಲವೆಂದು ಸಿದ್ಧವಾಗುತ್ತದೆ (೩). ಈಗೊಂದು ಪ್ರಶ್ನೆ . ಈ ದೇಹಕ್ಕೆ ಆದ್ಯಂತಗಳಿವೆ . ಇದು ನಿತ್ಯವಲ್ಲ- ಎಂಬ ಕಾರಣವನ್ನೊಡ್ಡಿ ಈ ದೇಹವು ಆತ್ಮವಲ್ಲ ಎಂದು ಹೇಳುತ್ತಿದ್ದೀರಿ. ಈ ಕಾರಣವು ಸರಿಯಾದ್ದಲ್ಲ. ಆತ್ಮವು ನಿತ್ಯವೆಂದೇಕೆ ಹೇಳಬೇಕು! ಅದಕ್ಕೂ ಹುಟ್ಟು ಸಾವುಗಳಿವೆ ಎಂದು ಹೇಳುತ್ತೇವೆ . ಪ್ರತ್ಯಕ್ಷವಾಗಿ ದೇಹವಿರುವಾಗ ಕಣ್ಣಿಗೆ ಕಾಣದ ಆತ್ಮವಿದೆಯೆಂದೂ ಅದು ನಿತ್ಯವೆಂದೂ ವಾದಿಸುವುದು ಯುಕ್ತವಲ್ಲ. ದೇಹಕ್ಕಿಂತ ಬೇರೆ ಆತ್ಮವಿದೆಯೆಂದು ಹೇಳುವುದು ಯುಕ್ತವಲ್ಲ. ದೇಹಕ್ಕಿಂತ ಬೇರೆಯಾದ ಆತ್ಮವಿದೆಯೆಂದು ಹೇಳುವುದಕ್ಕೆ ಆಧಾರವೇ ಇಲ್ಲ. ಆದ್ದರಿಂದ ದೇಹವೇ ಆತ್ಮವೆಂದೊಪ್ಪಿದರೆ ಬಾಧೆಯೇನು? ಇದಕ್ಕೆ ಉತ್ತರವೇನೆಂದರೆ, ಈ ದೇಹವು ಗಂಡಾಗಿಯೋ ಹೆಣ್ಣಾಗಿಯೋ ಮನುಷ್ಯನಾಗಿಯೋ ಮೃಗವಾಗಿಯೋ ಬೇರೆ ಬೇರೆ ಆಕಾರದಲ್ಲಿ ಹುಟ್ಟಲು ನಿಮಿತ್ತವೇನು? ಅಲ್ಲದೆ ಮಾನವನು ನಾನಾ ವಿಧವಾದ ಸುಖ ದುಃಖಗಳನ್ನು ಅನುಭವಿಸುತ್ತಾನೆ. ಒಬ್ಬನ ಸುಖದುಃಖಗಳಂತೆ ಇನ್ನೊಬ್ಬನದಿರುವುದಿಲ್ಲ. ಒಬ್ಬನು ಬಡವ. ಇನ್ನೊಬ್ಬನು ಶ್ರೀಮಂತ. ಒಬ್ಬನು ಕುರುಡನಾದರೆ ಇನ್ನೊಬ್ಬನು ಕಿವುಡ. ಮತ್ತೊಬ್ಬನು ಕುಂಟ, ಮಗದೊಬ್ಬನ ಅಂಗಗಳೆಲ್ಲವೂ ಪರಿಪೂರ್ಣವಾಗಿರುತ್ತವೆ. ಹೀಗೆ ಮನುಷ್ಯರಲ್ಲಿಯೇ ನೂರಾರು ಸಾವಿರಾರು ಭೇದಗಳಾಗಲು ಆತನು ಮಾಡಿದ ಕರ್ಮವೇ ಕಾರಣವೆನ್ನಬೇಕು.

ಶರೀರಾತಿರಿಕ್ತನಾದ ಆತ್ಮನು ಹಿಂದಿನ ಜನ್ಮಗಳಲ್ಲಿ ಮಾಡಿದ ಕರ್ಮಕ್ಕೆ ಫಲವಾಗಿ ಈ ಭೇದಗಳಾಗುತ್ತವೆ ಎಂದೊಪ್ಪಲೇಬೇಕಾಗುತ್ತದೆ. ದೇಹಾತಿರಿಕ್ತನಾದ ಆತ್ಮನಿಲ್ಲವಾದರೆ ಯಾವ ಕರ್ಮದ ಫಲ ಇವನಿಗಂಟುತ್ತದೆ? ಈ ದೇಹವು ಹುಟ್ಟುವ ಮುಂಚೆ ಇರಲಿಲ್ಲ. ಆದ್ದರಿಂದ ತಾನು ಮಾಡದೇ ಇರುವ ಪುಣ್ಯ ಪಾಪಗಳ ಫಲವು ಬಂದಿದೆ ಎನ್ನಬೇಕಾದೀತು. ಇದಕ್ಕೆ ಅಕೃತಾಭ್ಯಾಗಮವೆಂದು ಹೆಸರು. ಅಕೃತವಾದದ್ದಕ್ಕೆ ಅಭ್ಯಾಗಮ ಪ್ರಾಪ್ತಿ ಇದೊಂದು ದೊಡ್ಡ ದೋಷ. ಶಾಸ್ತ್ರದಲ್ಲಿ ಮಾತ್ರವಲ್ಲ. ಲೋಕದಲ್ಲಿಯೂ ಇದು ದೋಷವೇ. ಅಭ್ಯಾಸ ಮಾಡದೆಯೇ ವಿದ್ಯೆ ಬರುವುದನ್ನಾಗಲಿ, ಅಪರಾಧ ಮಾಡದೆಯೇ ಶಿಕ್ಷೆಯನ್ನು ವಿಧಿಸುವುದನ್ನಾಗಲಿ ಲೋಕದಲ್ಲಿ ಕಂಡಿಲ್ಲ. ಅಲ್ಲದೆ ಕೃತವಿಪ್ರಣಾಶವೆಂಬ ಇನ್ನೊಂದು ದೋಷವೂ ಅಂಟಿಕೊಳ್ಳುತ್ತದೆ. ನಾವು ಮಾಡುವ ಪಾಪಪುಣ್ಯಗಳಿಗೆ ಫಲವೇ ಇಲ್ಲವಾಗುತ್ತದೆ. ಪಾಪಿಯಾಗಲಿ ಪುಣ್ಯವಂತನಾಗಲಿ ಸತ್ತಮೇಲೆ ಅವನ ಪಾಪಪುಣ್ಯಗಳೂ ನಾಶವಾದವೆಂದೇ ಹೇಳಬೇಕಾಗುತ್ತದೆ. ಆಗ ಧರ್ಮ ಅಧರ್ಮಗಳಿಗೆ ಯಾವ ಬೆಲೆಯೂ ಇಲ್ಲವೆಂದಾದೀತು. ಆದ್ದರಿಂದ ಶರೀರಾತಿರಿಕ್ತನಾದ ಆತ್ಮನನ್ನು ಅವನು ಹುಟ್ಟು ಸಾವುಗಳಿಲ್ಲದವನೆಂಬುದನ್ನು ಒಪ್ಪಲೇಬೇಕು. ಏವಂಚ ಅನ್ನಮಯ ಕೋಶವು ಆತ್ಮನಲ್ಲವೆಂದು ಸಿದ್ಧವಾಯಿತು. ನಾವು ಮಾಡಿದ ಪುಣ್ಯ ಪಾಪಕರ್ಮಗಳು ಸಂಸ್ಕಾರರೂಪದಲ್ಲಿ ಉಳಿದುಕೊಂಡಿರುತ್ತವೆ. ಸಂಸ್ಕಾರರೂಪದಲ್ಲಿ ಉಳಿದುಕೊಳ್ಳುವ ಈ ಕರ್ಮಗಳು ಪ್ರಾರಬ್ಧ, ಸಂಚಿತ, ಆಗಾಮಿ ಎಂದು ಮೂರು ವಿಧ. ಯಾವ ಕರ್ಮದ ಫಲವನ್ನು ಈಗ ಅನುಭವಿಸುತ್ತಿದ್ದೇವೋ ಅದಕ್ಕೆ ಪ್ರಾರಬ್ಧವೆಂದು ಹೆಸರು. ಪ್ರಾರಬ್ಧವೆಂದರೆ ಫಲವನ್ನು ಕೊಡಲು ಪ್ರಾರಂಭಿಸಿರುವ ಕರ್ಮ. ಪೂರ್ವಜನ್ಮದ ಕರ್ಮವೇ ಸಂಚಿತ. ಸಂಚಿತವೇ ಫಲವನ್ನು ಕೊಡಲು ಪ್ರಾರಂಭಿಸಿದಾಗ ಪ್ರಾರಬ್ಧವೆನಿಸುತ್ತದೆ. ಸಂಚಿತದಲ್ಲಿ ಕೆಲವು ಉಳಿದುಕೊಂಡು ಮುಂದಿನ ಜನ್ಮದಲ್ಲಿ ಫಲವನ್ನು ನೀಡಬಹುದು. ಈ ಜನ್ಮದಲ್ಲಿ ಮತ್ತು ಮುಂದಿನ ಜನ್ಮದಲ್ಲಿ ಮಾಡತಕ್ಕವೆಲ್ಲವೂ ಆಗಾಮಿ ಎನ್ನಿಸುತ್ತವೆ. ಏವಂಚ ಹಿಂದೆ ಮಾಡಿದ್ದು ಸಂಚಿತ, ಈಗ ಅನುಭವಿಸುತ್ತಿರುವುದು ಪ್ರಾರಬ್ಧ ಮುಂದೆ ಮಾಡತಕ್ಕದ್ದು ಆಗಾಮಿ. ಶರೀರವೇ ಆತ್ಮವಾದರೆ ಸಂಚಿತವೂ ಸಹ ಫಲವನ್ನೀಯದೆ ನಾಶ ವಾಗುತ್ತದೆಯೆಂದು ಹೇಳಬೇಕಾದೀತು (೪).

ಇನ್ನು ಪ್ರಾಣಮಯಕೋಶ. ವಾಯುವು ಈ ದೇಹದಲ್ಲಿ ಪಾದದಿಂದ

ಶಿರಸ್ಸಿನವರೆಗೆ ಪೂರ್ಣವಾಗಿ ವ್ಯಾಪಿಸಿಕೊಂಡಿದೆ. ಬೇರೆ ಬೇರೆ ಸ್ಥಳಗಳಲ್ಲಿದ್ದು ಪ್ರಾಣ, ಅಪಾನ, ವ್ಯಾನ, ಉದಾನ, ಸಮಾನ ಎಂಬ ಹೆಸರುಗಳನ್ನು ಪಡೆದು ದೇಹವು ಬೇರೆ ಬೇರೆ ಕ್ರಿಯೆಗಳನ್ನು ನಡೆಸಲು ಬೇಕಾದ ಬಲವನ್ನು ಕೊಡುತ್ತದೆ. ಜ್ಞಾನೇಂದ್ರಿಯ, ಕರ್ಮೇಂದ್ರಿಯಗಳಿಗೆ ಶಕ್ತಿಯನ್ನು ನೀಡುತ್ತದೆ. ಅವು ತಮ್ಮ ತಮ್ಮ ಕಾರ್ಯಗಳನ್ನು ಮಾಡಲು ಪ್ರೇರಿಸುತ್ತದೆ. ಆದ್ದರಿಂದ ಈ ಪ್ರಾಣಮಯ ಕೋಶವೇ ಆತ್ಮವೆಂದು ಕೆಲವರು ಭ್ರಮಿಸಿದ್ದಾರೆ. ಅದು ಆತ್ಮವಲ್ಲ. ಏಕೆಂದರೆ ಈ ವಾಯುವಿಗೆ ಚೈತನ್ಯವಿಲ್ಲ. ಇದು ಜಡ, **'ಸತ್ಯಂ ಜ್ಞಾನಮನಂತಂ ಬ್ರಹ್ಮ'** (ತೈ.ಉ.೨-೧-೧) ಇತ್ಯಾದಿ ಶ್ರುತಿಗಳಾದರೋ ಆತ್ಮನು ಜ್ಞಾನ ಸ್ವರೂಪನೆಂದೇ ಹೇಳುತ್ತವೆ. ಜಡವೆಂದರೆ ಜ್ಞಾನರಹಿತವೆಂದರ್ಥ. ಜಡದಲ್ಲಿಯೂ ಕ್ರಿಯೆ ಇರಬಹುದು. ನೀರು ಹರಿಯುತ್ತದೆ. ಯಂತ್ರವು ಚಲಿಸುತ್ತದೆ. ಅಷ್ಟು ಮಾತ್ರದಿಂದ ಅವೆಲ್ಲವೂ ಚೇತನವಸ್ತುಗಳಾಗುವುದಿಲ್ಲ. ಚೈತನ್ಯವಿಲ್ಲದ್ದು ಆತ್ಮವಲ್ಲವೆಂದು ಸುಲಭವಾಗಿ ಗ್ರಹಿಸಬಹುದು (೫). ಮನೋಮಯಕೋಶವೂ ಆತ್ಮವಲ್ಲ. ನಾನು, ನನ್ನದು - ಎಂಬ ಅಭಿಮಾನವನ್ನು ಹುಟ್ಟಿಸಿ ಮೆರೆಯುತ್ತಿರುವ ಮನಸ್ಸನ್ನು ಮನೋಮಯವೆನ್ನುತ್ತಾರೆ. ಕಾಮ, ಕ್ರೋಧ, ದ್ವೇಷ, ಅಸೂಯೆ ಮೊದಲಾದ ದುರ್ಗುಣಗಳ ತವರು ಮನೆ ಇದು. ಪ್ರೀತಿ, ವಾತ್ಸಲ್ಯ, ಮುಂತಾದ ಸದ್ಗುಣಗಳಿಗೂ ಇದು ಆಶ್ರಯವಾಗಿರಬಹುದು. ಹೇಗಿದ್ದರೂ ಈ ವೃತ್ತಿಗಳು ಶಾಶ್ವತವಾಗಿ ನಿಂತಿರುವುದಿಲ್ಲ. ನಾನಾನಿಮಿತ್ತಗಳಿಂದ ಈ ಗುಣಗಳು ಬೇರೆ ಬೇರೆಯಾಗಿ ಬಿಡುತ್ತವೆ. ಪ್ರೀತಿಗೆ ಅಡ್ಡಿಯಾದೊಡನೆ ಕ್ರೋಧ ಹುಟ್ಟುತ್ತದೆ. ಕ್ರೋಧವು ದ್ವೇಷವಾಗಿ ಪರಿಣಮಿಸಬಹುದು. ಒಂದು ದಿನದಲ್ಲಿ ಹಲವಾರು ಕಾರಣಗಳಿಂದ ಮನೋವ್ಯಾಪಾರವು ವಿಭಿನ್ನವಾಗುವುದು ಎಲ್ಲರ ಅನುಭವದಲ್ಲಿದೆ. ಕಾಮಾದ್ಯವಸ್ಥೆಗಳು ಹುಟ್ಟುವುದರಿಂದ ಮನಸ್ಸು ರೂಪಾಂತರಗೊಂಡು ವಿಕಾರಿಯಾಗುತ್ತದೆ. ಆತ್ಮನು ವಿಕಾರಿಯಲ್ಲ, ಸದಾ ಒಂದೇ ಸ್ಥಿತಿಯಲ್ಲಿ ಇರತಕ್ಕವನು. ಆನಂದೈಕಸ್ವರೂಪನು. ಇತ್ಯಾದಿ ಕಾರಣಗಳಿಂದ ಮನೋಮಯಕೋಶವು ಆತ್ಮನಲ್ಲವೆಂದು ಸಿದ್ಧವಾಗುತ್ತದೆ(೬). ಅದಕ್ಕಿಂತ ಆಂತರವಾದದ್ದು ವಿಜ್ಞಾನಮಯ ಕೋಶ. ವಿಜ್ಞಾನವೆಂದರೆ ಬುದ್ಧಿ. ಇದು ಮನಸ್ಸಿನ ಒಂದು ವೃತ್ತಿಭೇದವಾದ್ದರಿಂದ ಪ್ರತ್ಯೇಕಿಸಿ ಹೇಳಲಾಗಿದೆ. ಅಂತಃಕರಣದ ಸಂಕಲ್ಪವಿಕಲ್ಪಾತ್ಮಕವಾದ ವೃತ್ತಿಗೆ ಮನಸ್ಸೆಂದೂ ನಿಶ್ಚಯಾತ್ಮಕವಾದ

ವೃತ್ತಿಗೆ ಬುದ್ಧಿ- ವಿಜ್ಞಾನವೆಂದೂ ಹೆಸರು. ಹೀಗೆ ವೃತ್ತಿಯ ಅವಸ್ಥಾಭೇದದಿಂದ ಎರಡು ಕೋಶಗಳೆಂದು ಕಲ್ಪಿಸಲಾಗಿದೆ. ಇದೇ ಕರ್ತಾ. ನಾನು ಮಾಡುತ್ತೇನೆ, ನಾನು ಹೋಗುತ್ತೇನೆ ಮುಂತಾದ ವಾಕ್ಯಗಳಲ್ಲಿ 'ನಾನು' ಎಂದರೆ ವಾಸ್ತವವಾಗಿ ಬುದ್ಧಿಯೇ. ಆತ್ಮಚೈತನ್ಯದ ಪ್ರತಿಬಿಂಬದಿಂದ ಕೂಡಿದ ಬುದ್ಧಿಯೇ ನಾನು - ನಾನು ಎಂದುಕೊಳ್ಳುತ್ತದೆ. ಶಾಸ್ತ್ರೀಯವಾಗಿ ಹೇಳುವುದಾದರೆ ಚಿದಾಭಾಸ ಯುಕ್ತವಾದ ಬುದ್ಧಿಯೇ ನಾನು. ಕೇವಲ ಬುದ್ಧಿಯು ಜಡವಾದ್ದರಿಂದ ಕರ್ತೃವಾಗದು. ಶುದ್ಧ ಚೈತನ್ಯದಲ್ಲಿ ಯಾವ ಕ್ರಿಯೆಯೂ ಇರುವುದಿಲ್ಲವಾದ್ದರಿಂದ ಅದು ಕರ್ತೃವಾಗದು. ಈ ಕಾರಣದಿಂದ ಚೈತನ್ಯ ಪ್ರತಿಬಿಂಬವನ್ನು ಪಡೆದಿರುವ ಬುದ್ಧಿಯು ಕರ್ತೃವೆಂದು ಶಾಸ್ತ್ರವು ತಿಳಿಸಿದೆ. ಈ ಬುದ್ಧಿಯು ಜಾಗ್ರದವಸ್ಥೆಯಲ್ಲಿ ದೇಹವನ್ನು ವ್ಯಾಪಿಸಿಕೊಂಡು ಜಾಗೃತವಾಗಿರುತ್ತದೆ. ನಿದ್ರೆ ಬಂದಾಗ ಎಲ್ಲಿಯೂ ಕಾಣಿಸದೆ ಲೀನವಾಗಿ ಬಿಡುತ್ತದೆ. ಇದಕ್ಕೆ ಲಯಾದ್ಯವಸ್ಥಾಭೇದವಿರುವುದರಿಂದ ಈ ವಿಜ್ಞಾನಮಯವೂ ಆತ್ಮನಲ್ಲ(೭). ಹಿಂದೆ ಹೇಳಿದಂತೆ ಮನೋಮಯವೂ ವಿಜ್ಞಾನಮಯವೂ ವಾಸ್ತವವಾಗಿ ಅಂತಃಕರಣವೇ ಆದರೂ ಅವುಗಳಲ್ಲಿರುವ ಕ್ರಿಯಾಭೇದದಿಂದ ಅವಸ್ಥಾಭೇದವಾಗುತ್ತದೆ ಯೆಂದು ಹಿಂದೆ ತಿಳಿಸಿದೆ. ಅಲ್ಲದೆ ಬುದ್ಧಿಯು ಕರ್ತೃವೂ ಮನಸ್ಸು ಕರಣವೂ ಆಗಿದೆ. ಕರಣವೆಂದರೆ ಸಾಧನ. ಚೈತ್ರನು ಲೇಖನಿಯಿಂದ ಬರೆಯುತ್ತಾನೆ ಎಂಬಲ್ಲಿ ಚೈತ್ರನು ಕರ್ತಾ. ಲೇಖನಿಯು ಕರಣ(Instrument). ಎರಡರಲ್ಲಿಯೂ ಇರುವ ಕ್ರಿಯೆಗಳು ಬೇರೆ ಬೇರೆ ಸ್ವರೂಪದವು. ಈ ಕಾರಣದಿಂದಲೂ ಇವೆರಡು ಬೇರೆ ಬೇರೆ ಕೋಶಗಳೆಂದು ಇಲ್ಲಿ ವ್ಯವಹರಿಸಿದ್ದಾರೆ (೮). (ದುಃಖದ ಭೋಕ್ತೃ ಬುದ್ಧಿಯೇ ಆದರೂ ಪ್ರಕೃತದಲ್ಲಿ ಗಣಿಸಿಲ್ಲ). ನಾವು ಒಂದು ಸುಂದರವಸ್ತುವನ್ನು ನೋಡಿದಾಗ, ಇಂಪಾದ ಸಂಗೀತವನ್ನು ಕೇಳಿದಾಗ, ರುಚಿಕರವಾದ ಭಕ್ಷ್ಯವನ್ನು ತಿಂದಾಗ ನಮಗೆ ಆನಂದವಾಗುತ್ತದೆಯಷ್ಟೆ ಈ ಆನಂದವು ಬುದ್ಧಿಯ ಒಂದು ವೃತ್ತಿ-ವ್ಯಾಪಾರ. ಎಲ್ಲ ಬಗೆಯ ವಿಷಯ ಸುಖವೂ ಅಂತಃಕರಣವೃತ್ತಿಯೇ. ಈ ಆನಂದವುಂಟಾದಾಗ ಬುದ್ಧಿವೃತ್ತಿಯು ಬಾಹ್ಯವಿಚಾರವನ್ನು ಬಿಟ್ಟು ಅಂತರ್ಮುಖವಾಗಿರುತ್ತದೆ. ಆಗ ಆನಂದಸ್ವರೂಪವಾದ ಆತ್ಮನ ನೆರಳು ಅಂತಃಕರಣದಲ್ಲಿ ಮೂಡಿರುತ್ತದೆ. ಆತ್ಮನ ನೆರಳಿನಿಂದಲೇ ನಮಗೆ ಆನಂದವಾಗುತ್ತದೆ. ಇದೊಂದು ಪುಣ್ಯದ ಫಲ. ಈ ಪುಣ್ಯಭೋಗವು

ಶಾಂತವಾದಾಗ ಆ ಪುಣ್ಯವೇ ಸಂಸ್ಕಾರ ರೂಪದಿಂದ ಉಳಿದು ನಿದ್ರೆ ಬರುತ್ತದೆ. ಹೀಗೆ ನಿದ್ರಾರೂಪದಲ್ಲಿ ಲೀನವಾಗುವ ಆನಂದಮಯವೃತ್ತಿಗೆ ಆನಂದಮಯಕೋಶವೆಂದು ಹೆಸರು(೯). ಇದು ಆನಂದಮಯವಾದರೂ ಆತ್ಮವಲ್ಲ, ಈ ಆನಂದವು ಯಾವಾಗಲೋ ಬರುತ್ತದೆ, ಹೋಗುತ್ತದೆ. ಸದಾ ಇರುವುದಿಲ್ಲ, ಈ ವಿಷಯಾನಂದವು ಆನಂದಸ್ವರೂಪನಾದ ಪರಮಾತ್ಮನ ಪ್ರತಿಬಿಂಬ-ಪಡಿನೆಳಲು. ಇದು ಆತ್ಮವಲ್ಲ, ಈ ಪ್ರತಿಬಿಂಬಕ್ಕೆ ಬಿಂಬವಾಗಿ ಇರತಕ್ಕವನೇ ಶಾಶ್ವತ. ಆತನೇ ಆತ್ಮ. ಆತನು ಸರ್ವದಾ ಏಕರೂಪನಾಗಿ ಇರುತ್ತಾನೆ. ವಿಷಯ ಸುಖಗಳು ಅನಿತ್ಯ. ಅವು ನಿಜವಾದ ಆತ್ಮನ ನೆರಳುಗಳಿದ್ದಂತೆ. ಉಪಾಧಿ ನಿಮಿತ್ತವಾಗಿ ಕಾಣಿಸಿಕೊಂಡು ಲಯಿಸಿ ಹೋಗುತ್ತವೆ. ಅವು ಅನಿತ್ಯವಾದವು. ನಿತ್ಯನಾದ ಆನಂದ ಸ್ವರೂಪನೇ ಆತ್ಮನೆಂದು ತಿಳಿಯಬೇಕು.(೧೦) ಒಳ್ಳೆಯದು. ಅನ್ನ, ಪ್ರಾಣ, ಮನಸ್ಸು, ಬುದ್ಧಿ ವಿಷಯಾನಂದ - ಇವಿಷ್ಟು ನಮಗೆ ಅನುಭವ ಗೋಚರವಾದವುಗಳು. ಇವು ಯಾವುವೂ ಆತ್ಮನಲ್ಲ ಎಂದು ನಿರಾಕರಿಸಿದರೆ, ಈ ದೇಹದಲ್ಲಿ ಉಳಿದಿರತಕ್ಕದ್ದು ಯಾವುದು? ಆತ್ಮನನ್ನು ಈ ದೇಹದಲ್ಲಿಯೇ, ಹೃದಯದಲ್ಲಿಯೇ ಕಂಡುಕೊಳ್ಳಬೇಕೆಂದು ಶ್ರುತಿಯು ಬೋಧಿಸುತ್ತದೆ. ಈಗ ನಮಗೆ ಕಾಣತಕ್ಕದ್ದು ಯಾವುದೂ ಆತ್ಮನಲ್ಲವೆಂದು ನಿರಾಕರಿಸಿಬಿಟ್ಟರೆ ಇನ್ನು ಉಳಿಯತಕ್ಕದ್ದಾದರೂ ಯಾವುದು? ಇನ್ನು ನಿದ್ರೆಯಲ್ಲಿ ವಿಷಯವಿಲ್ಲದೆಯೇ ಆನಂದವಿದೆಯೆಂದು ಒಪ್ಪಿದರೂ ನಿದ್ರಾನಂದವೂ ಆತ್ಮನಲ್ಲವೆಂದು ಹೇಳಿದ್ದಾಗಿದೆಯಲ್ಲವೆ? ಹೌದು; ಈ ಪ್ರಶ್ನೆಗೆ ಸರಿಯಾದ ಉತ್ತರವುಂಟು. ಅನ್ನದಿಂದ ಹಿಡಿದು ಆನಂದದವರೆಗೆ ಐದು ವಸ್ತುಗಳು ಉಂಟೆಂದು ನೀವು ಒಪ್ಪಿದ್ದೀರಲ್ಲವೆ? ಇವು ಅನುಭವಕ್ಕೆ ಬರುತ್ತವೆಯೆಂದು ಹೇಳಿದ್ದೀರಲ್ಲವೆ? ಸರಿ, ಈ ಪಂಚಕೋಶಗಳು ಇವೆಯೆಂದು ಯಾರ ಬಲದಿಂದ ಅನುಭವಕ್ಕೆ ಬರುತ್ತದೆಯೋ ಆತನೊಬ್ಬನಿದ್ದಾನೆಂದು ಒಪ್ಪಲೇಬೇಕಾಗುತ್ತದೆ. ಈ ಪಂಚಕೋಶಗಳಿಗೆ ಸಾಕ್ಷಿಯಾದವನೊಬ್ಬನಿದ್ದಾನೆ. ಅವನಿಲ್ಲವೆಂದು ಯಾವನೂ ಹೇಳಲಾರ(೧೧-೧೨). ಆದರೆ ಅಂತಹವನೊಬ್ಬನಿದ್ದಾನೆಂಬುದು ನಮ್ಮ ಅನುಭವಕ್ಕೆ ಮಾತ್ರ ಬರುವುದಿಲ್ಲವಲ್ಲ! ತರ್ಕದ ಬಲದಿಂದ ನಮ್ಮ ಬಾಯಿಕಟ್ಟಿಸುತ್ತಿದ್ದೀರಿ! ಹಾಗಲ್ಲ; ಆತ್ಮನೇ ಸ್ವತಃ ಅನುಭೂತಿ ಸ್ವರೂಪನಾಗಿದ್ದಾನೆ. ಅವನನ್ನು ತಿಳಿಯತಕ್ಕವರು ಬೇರೆ ಯಾರೂ ಇಲ್ಲ. ಆತ್ಮನು ಇನ್ನೊಂದರಿಂದ ಅನುಭಾವ್ಯನಲ್ಲ, ಆತ್ಮನನ್ನು ಅರಿಯಬಲ್ಲ

ಜ್ಞಾತೃವಾಗಲಿ ಅರಿವು ಎಂಬ ಜ್ಞಾನವಾಗಲಿ ಇಲ್ಲದ್ದರಿಂದ ಆತ್ಮನು ಎಂದೂ ಇನ್ನೊಬ್ಬರಿಂದ ಜ್ಞೇಯನಾಗುವುದೇ ಇಲ್ಲ. ಆತನು ಅಜ್ಞೇಯನಾಗಿರುವುದು ಆತ್ಮನಿಗಿಂತ ಪೃಥಕ್ ಆದ ಜ್ಞಾತೃಜ್ಞಾನಗಳಿಲ್ಲದ್ದರಿಂದಲೇ ಹೊರತು ಆತ್ಮನ ಅಭಾವದಿಂದಲ್ಲ. ನಿದ್ರಾನಂದವೂ ಸಹ ತಿಳಿಯುತ್ತದೆಯೆಂದ ಮೇಲೆ ಅದನ್ನು ತಿಳಿಯತಕ್ಕ ಆತ್ಮನಿರಲೇಬೇಕಲ್ಲವೆ? (೧೩). ಇದಕ್ಕೊಂದು ಉದಾಹರಣೆಯನ್ನು ಕೊಡಬಹುದು. ಬೆಲ್ಲದ ಸ್ವಭಾವ ಸಿಹಿ. ಹುಣಿಸೆಯ ಸ್ವಭಾವ ಹುಳಿ. ಮೆಣಸಿನ ಸ್ವಭಾವ ಖಾರ. ಈ ಬೆಲ್ಲವೇ ಮೊದಲಾದವು ಅನ್ನ, ಬೇಳೆ ಮೊದಲಾದವುಗಳಿಗೆ ತಮ್ಮ ಸ್ವಭಾವವನ್ನು ನೀಡುತ್ತವೆ. ಎಂದರೆ ಅನ್ನ ಮೊದಲಾದವನ್ನು ಸಿಹಿ, ಹುಳಿ, ಖಾರ ಮೊದಲಾದ ಗುಣಗಳಿಂದ ಕೂಡಿದ್ದನ್ನಾಗಿ ಮಾಡುತ್ತವೆ. ಎಂದರೆ ಬೆಲ್ಲ ಮೊದಲಾದವುಗಳಿಂದ ಅನ್ನ ಮೊದಲಾದದ್ದು ಸಿಹಿ ಮುಂತಾದ ಗುಣವನ್ನು ಪಡೆಯುತ್ತದೆ. ಆದರೆ ಬೆಲ್ಲಕ್ಕೆ ಸಿಹಿಯನ್ನು ಕೊಡತಕ್ಕದ್ದು ಯಾವುದು? ಹುಣಿಸೆಗೆ ಹುಳಿ ಬೇರೆ ಯಾವುದರಿಂದ ಬರುತ್ತದೆ? ಉಪ್ಪು ಯಾವುದನ್ನು ಸೇರಿಸಿದ್ದರಿಂದ ಉಪ್ಪಾಗಿದೆ? ಅವೆಲ್ಲವೂ ಸ್ವಯಂ ಸಿಹಿ, ಸ್ವಯಂ ಹುಳಿ, ಸ್ವಯಂ ಉಪ್ಪು. ಅವುಗಳು ಸಿಹಿಯನ್ನು ಇನ್ನೊಂದು ವಸ್ತುವಿನಿಂದ ಪಡೆದಿಲ್ಲ. ಹಾಗೆ ಪಡೆಯಲು ಇನ್ನೊಂದು ವಸ್ತುವೂ ಇಲ್ಲ(೧೪). ಬೆಲ್ಲಕ್ಕೆ ಸಿಹಿಯನ್ನು ಕೊಡುವ ಇನ್ನೊಂದು ವಸ್ತುವಿಲ್ಲದಿದ್ದರೂ ಬೆಲ್ಲವು ಸಿಹಿಯಾಗಿಯೇ ಇರುತ್ತದೆ. ಹಾಗೆಯೇ ಆತ್ಮನು ಇನ್ನೊಂದು ವಸ್ತುವಿನ ಅನುಭವಕ್ಕೆ ನಿಮಿತ್ತನೇ ಹೊರತು ತಾನು ಅನುಭವಕ್ಕೆ ಗೋಚರನಾಗುವುದಿಲ್ಲ. ಬೆಲ್ಲವು ಇನ್ನೊಂದನ್ನು ಸಿಹಿ ಮಾಡುತ್ತದೆಯೇ ಹೊರತು ತಾನು ಇನ್ನೊಂದರಿಂದ ಸಿಹಿಯಾಗುವುದಿಲ್ಲ. ಅಂತೆಯೇ ಆತ್ಮನು ಇನ್ನೊಂದನ್ನು ಅನುಭವ ಗೋಚರನನ್ನಾಗಿಸುತ್ತಾನೆಯೇ ಹೊರತು ತಾನು ಅನುಭವಗೋಚರನಾಗುವುದಿಲ್ಲ. ತಾನೇ ಅನುಭವ ಸ್ವರೂಪನಾಗಿರುತ್ತಾನೆ (೧೫). ಗಡಿಗೆ ಮೊದಲಾದ್ದನ್ನು ಬೆಳಗಿಸಲು ದೀಪ ಬೇಕು. ದೀಪವನ್ನು ಬೆಳಗಿಸಲು ಇನ್ನೊಂದು ದೀಪ ಬೇಕಾಗಿಲ್ಲ. ಅದು ಸ್ವಯಂ ಪ್ರಕಾಶ. ಹಾಗೆಯೇ ಆತ್ಮಜ್ಞಾನವಾಗಿದೆಯೆಂದರೆ ಆತ್ಮನು ಸ್ವಯಂ ಪ್ರಕಾಶಗೊಂಡನು ಎಂದಷ್ಟೇ ಅರ್ಥ. ಉಪನಿಷತ್ತು ಹೇಳುತ್ತದೆ - ''**ಅತ್ರಾಯಂ ಪುರುಷಃ ಸ್ವಯಂ ಜ್ಯೋತಿರ್ಭವತಿ**'' (ಬೃ.ಉ.೪-೩-೯)- ಸ್ವಪ್ನಾವಸ್ಥೆಯಲ್ಲಿ ಈ ಪುರುಷನು (ಆತ್ಮನು) ಸ್ವಯಂ ಪ್ರಕಾಶನಾಗಿರುತ್ತಾನೆ. ''**ಅಸ್ಮಾತ್ ಸರ್ವಸ್ಮಾತ್ ಪುರತಃ ಸುವಿಭಾತಿ**'' (ನೃ.ಉ.ತಾ.೨)- ಇದೆಲ್ಲದಕ್ಕೂ

ಮೊದಲು ತಾನೇ ಪ್ರಕಾಶಿಸುತ್ತಾನೆ. **"ತಮೇವ ಭಾಂತಮನುಭಾತಿ ಸರ್ವಂ, ತಸ್ಯ ಭಾಸಾ ಸರ್ವಮಿದಂ ವಿಭಾತಿ"** (ಶ್ವೇ.ಉ.೬-೧೪; ಮುಂ.ಉ.೨-೨-೧೦; ಕಠ.ಉ.೫-೧೪)- "ಸ್ವಯಂ ಪ್ರಕಾಶಿಸುವ ಆತ್ಮನನ್ನನುಸರಿಸಿ ಸಮಸ್ತ ಜಗತ್ತೂ ಪ್ರಕಾಶಿತವಾಗುವುದು. ಆತನ ಪ್ರಕಾಶದಿಂದಲೇ ಈ ವಿಶ್ವವೆಲ್ಲವೂ ಬೆಳಗುತ್ತದೆ"(೧೬) ಬೃಹದಾರಣ್ಯಕದಲ್ಲಿ ಹೀಗಿದೆ -**"ಯೇನೇದಂ ಸರ್ವಂ ವಿಜಾನಾತಿ ತಂ ಕೇನ ವಿಜಾನೀಯಾತ್, ವಿಜ್ಞಾತಾರಮರೇ ಕೇನ ವಿಜಾನೀಯತ್ "** (೪-೫-೧೫) ಇದರ ತಾತ್ಪರ್ಯವೇನೆಂದರೆ, ಯಾವ ಸಾಕ್ಷಿ ಚೈತನ್ಯರೂಪನಾದ ಆತ್ಮನಿಂದ ಪ್ರಾಣಿಗಳು ಈ ಸಮಸ್ತ ದ್ವೈತರಾಶಿಯನ್ನೂ ತಿಳಿಯಬಲ್ಲರೋ ಅಂತಹ ಆತ್ಮಚೈತನ್ಯವನ್ನು ತಿಳಿಯುವ ಇನ್ನೊಬ್ಬ ಸಾಕ್ಷಿ ಯಾರು? ಆತ್ಮನನ್ನುಳಿದು ಇತರ ವಸ್ತುವೆಲ್ಲವೂ ಜಡವಾದದ್ದು. ಜಡವಾದ ವಸ್ತು ಚೈತನ್ಯವನ್ನು ತಿಳಿಯುವ ಸಾಕ್ಷಿಯಾದೀತೆ? ಆದ್ದರಿಂದ ಆತ್ಮಕ್ಕೆ ಸಾಕ್ಷಿಯಾಗಬಲ್ಲ ಇನ್ನೊಂದು ವಸ್ತುವೇ ಇಲ್ಲ. ಈಗೊಂದು ಪ್ರಶ್ನೆ ಹುಟ್ಟಬಹುದು. ಮನಸ್ಸಿನಿಂದ ತಿಳಿಯಬಹುದಲ್ಲವೆ?- ಎಂದು. ನಿಜ; ಆದರೆ ಮನಸ್ಸು ಇನ್ನೊಂದನ್ನರಿಯಲು ಸಾಧನವೇ ಹೊರತು ಕರ್ತೃವಲ್ಲ. ಅದೇ ಜ್ಞಾತೃವಲ್ಲ. ಆದ್ದರಿಂದಲೇ ಶ್ರುತಿಯು **"ನೈವ ವಾಚಾ ನ ಮನಸಾ"** (ಕ.ಠ.ಉ.೩-೧೨) ಇತ್ಯಾದಿ ವಚನಗಳಿಂದ ಮನಸ್ಸಿಗೂ ಆತ್ಮನು ಅಗಮ್ಯನೆಂದು ಹೇಳಿದೆ. **"ಮನಸೈವಾನುದ್ರಷ್ಟವ್ಯಃ"** (ಕಠ.ಉ.೩-೧೨) - ಮನಸ್ಸಿನಿಂದ ಆತ್ಮನನ್ನು ತಿಳಿಯಬೇಕು - ಎಂದೂ ಶ್ರುತಿಯಿದೆಯಲ್ಲವೇ? ಹೌದು; ಸಂಸ್ಕಾರ ಹೊಂದಿದ ಮನಸ್ಸೆಂಬ ಸಾಧನವು ಆತ್ಮದರ್ಶನಕ್ಕೆ ಉಪಕಾರ ಮಾಡುತ್ತದೆ. ಮನಸ್ಸು ಇಲ್ಲಿಯೂ ಕರಣವೇ, ಕರ್ತೃವಲ್ಲ. ಶಾಸ್ತ್ರಾಚಾರ್ಯೋಪದೇಶದಿಂದ ಮನಸ್ಸು ಸಂಸ್ಕಾರ ಹೊಂದಿ ಶುದ್ಧವಾದಾಗ ಆತ್ಮನು ಸ್ವಯಂ ಪ್ರಕಾಶನಾಗುತ್ತಾನೆ ಎಂದು **'ಅನುದ್ರಷ್ಟವ್ಯಃ'** ಎಂಬುದರ ಅರ್ಥ. ಸರ್ವವನ್ನೂ ತಿಳಿಯತಕ್ಕ ಚೈತನ್ಯವನ್ನು ತಿಳಿಯಬಲ್ಲ ಇನ್ನೊಂದು ವಸ್ತುವಿದೆಯೆಂದು ಹೇಳುವುದೇ ಅಸಂಗತ (೧೭). ಆ ಆತ್ಮನು ವೇದ್ಯವಾದ ಯಾವ ಯಾವ ವಸ್ತು ಉಂಟೋ ಅದೆಲ್ಲವನ್ನೂ ತಿಳಿದಿರುತ್ತಾನೆ. ಆದರೆ ಆತನನ್ನು ತಿಳಿಯಬಲ್ಲ ಇನ್ನೊಬ್ಬ ವೇದಿತೃವೇ ಇಲ್ಲ. ಆತ್ಮನು ಜ್ಞಾನಕ್ಕೆ ವಿಷಯವಾಗತಕ್ಕ ವಿದಿತನೂ ಅಲ್ಲ, ಅವಿದಿತನೂ ಅಲ್ಲ! ವಿದಿತಾವಿದಿತಗಳಿಗೆ ವಿಲಕ್ಷಣವಾದ ಜ್ಞಾನ ಸ್ವರೂಪನೇ ಆಗಿದ್ದಾನೆ. ಆದ್ದರಿಂದ ಉಪನಿಷತ್ತು

ಘೋಷಿಸುತ್ತದೆ - **''ಅನ್ಯದೇವ ತದ್ವಿದಿತಾದಥೋ ಅವಿದಿತಾದಧಿ''** (ಕೇ.ಉ.೧-೩) ಎಂದು. ಸರ್ವವನ್ನೂ ಬೆಳಗುವ ಸ್ವಯಂ ಪ್ರಕಾಶವಾದ ಜ್ಯೋತಿಯೇ ಆತ್ಮನೆಂದು ತಿಳಿಯಬೇಕು (೧೮). ಇದೇನಿದು? ಯಾವುದೇ ಪದಾರ್ಥವು ವಿದಿತವಾಗಬೇಕು, ಇಲ್ಲವೇ ಅವಿದಿತವಾಗಬೇಕು. ಇದೆರಡೂ ಅಲ್ಲದ್ದೆಂದರೆ ನಮಗೆ ಅರ್ಥವಾಗುವುದೇ ಇಲ್ಲವಲ್ಲ! ಏಕೆ ಆಗುವುದಿಲ್ಲ? ವಿದಿತವೆಂದರೆ ಜ್ಞಾನಕ್ಕೆ ಗೋಚರವೆಂದರ್ಥ. ಆ ಪದಾರ್ಥದಲ್ಲಿ ಜ್ಞಾನವು ವಿಶೇಷಣವಾಗಿದೆ. ಜ್ಞಾನವೆಂದರೇನೆಂಬುದು ನಿನಗೆ ತಿಳಿಯದಿದ್ದರೆ ವಿದಿತವೂ ನಿನಗೆ ತಿಳಿಯದು. ಅವಿದಿತವೆಂದರೇನೆಂಬುದೂ ನಿನಗೆ ಅರ್ಥವಾಗದು ! ಜ್ಞಾನವೆಂದರೇನೆಂಬುದೇ ಯಾವನಿಗೆ ಗೊತ್ತಿಲ್ಲವೋ ಆತನು ಮನುಷ್ಯಾಕಾರದ ಜಡವಸ್ತುವೆಂದು ಭಾವಿಸಬೇಕಾಗುತ್ತದೆ! ಅಂಥವನಿಗೆ ಶಾಸ್ತ್ರವು ಏನನ್ನು ತಿಳಿಸಿಕೊಟ್ಟೀತು?(೧೯). ''ನನಗೆ ಜ್ಞಾನವೆಂದರೇನೆಂದು ತಿಳಿಯದು ! ಇನ್ನು ಮೇಲೆ ಅದನ್ನು ತಿಳಿದುಕೊಳ್ಳಬೇಕು!'' ಎಂದು ನೀನು ಹೇಳುವುದಾದರೆ, 'ನನಗೆ ನಾಲಿಗೆ ಇಲ್ಲ' ಎಂದು ಹೇಳಿದ ಹಾಗೆ ಲಜ್ಜಾಸ್ಪದವಾಗುತ್ತದೆ. ನಾಲಗೆಯಿಂದಲೇ ಅಕ್ಷರವನ್ನು ಉಚ್ಚರಿಸಬೇಕು. 'ನನಗೆ ನಾಲಿಗೆ ಇಲ್ಲ' ಎಂದು ಹೇಳಬಲ್ಲವನಿಗೆ ನಾಲಿಗೆ ಇರುವುದಿಲ್ಲವೆ? ''ನನಗೆ ಕನ್ನಡ ಗೊತ್ತಿಲ್ಲ'' ಎಂದು ಕನ್ನಡದಲ್ಲಿಯೂ ''ನನಗೆ ಇಂಗ್ಲೀಷ್ ಗೊತ್ತಿಲ್ಲ'' ಎಂದು ಇಂಗ್ಲೀಷ್‌ನಲ್ಲಿಯೂ ಹೇಳಿದಂತೆಯೇ ಇದು. ಜ್ಞಾನವನ್ನರಿಯುವ ಇನ್ನೊಂದು ಜ್ಞಾನವಿರುವುದಿಲ್ಲ. ಸರ್ವವನ್ನೂ ತಿಳಿಯುವ ಪರಮಜ್ಞಾನವೇ ಆತ್ಮ. ಅದು ಸ್ವಯಂ ಪ್ರಕಾಶ. ಅದನ್ನರಿಯುವ ಇನ್ನೊಂದು ಜ್ಞಾನವಿಲ್ಲವಾದ್ದರಿಂದ ಅವಿದಿತ. ಸ್ವಯಂ ಪ್ರಕಾಶವಾದ್ದರಿಂದ ವಿದಿತ ಎಂದು ಪಾಕ್ಷಿಕವಾಗಿ ಹೇಳಬಹುದು. ವಸ್ತುತಃ ಇನ್ನೊಂದು ಜ್ಞಾನವಿಲ್ಲವಾದ್ದರಿಂದ ಆತ್ಮನು ಜ್ಞಾನಕ್ಕೆ ವಿಷಯನಲ್ಲ(೨೦).

ಘಟಪಟಾದಿಗಳನ್ನು ನೋಡಿದಾಗ ''ನನಗೆ ಘಟವು ವಿದಿತವಾಯಿತು ಪಟವೂ ವಿದಿತವಾಯಿತು,'' ಎಂಬ ಅನುಭವವು ಸರ್ವರಿಗೂ ಆಗುತ್ತದೆ. ಅದನ್ನು ಅಲ್ಲಗಳೆಯಲು ಸಾಧ್ಯವಿಲ್ಲ. ಘಟಜ್ಞಾನ ಎಂಬಲ್ಲಿ ಘಟವು ವಿಷಯವಾಗಿದೆ. ಅದನ್ನು ವಿಷಯೀಕರಿಸಿದ ಜ್ಞಾನವು ವಿಷಯಿ. ''ನನಗೆ ಘಟಜ್ಞಾನವು ಆಗಿದೆ'' - ಎಂಬ ಅನುಭವದಲ್ಲಿ ಘಟಜ್ಞಾನವೇ ವಿಷಯವಾಗಿದೆ. ಇದಕ್ಕೆ ವೃತ್ತಿಜ್ಞಾನವೆಂದು ಹೆಸರು. ಅಂತಃಕರಣದ ವೃತ್ತಿರೂಪವಾದ ಜ್ಞಾನವಿದು. ವೃತ್ತಿಯೆಂದರೆ ವ್ಯಾಪಾರ. ಇದೇ ಪ್ರಕೃತದಲ್ಲಿ ಬುದ್ಧಿ ಜ್ಞಾನ, ಎನಿಸಿಕೊಂಡಿದೆ.

ಈ ಅಂತಃಕರಣವು ಜಡವಾದ್ದರಿಂದ ಆತ್ಮಚೈತನ್ಯವು ಇದರಲ್ಲಿ ಪ್ರತಿಫಲಿಸಿದಾಗ ಇದಕ್ಕೆ ಘಟವನ್ನು ತಿಳಿಯುವ ವ್ಯಾಪಾರ ಉಂಟಾಗುತ್ತದೆ. ಈ ವ್ಯಾಪಾರವೇ ಘಟಜ್ಞಾನವೆಂದು ಲೋಕದಲ್ಲಿ ಪ್ರಸಿದ್ಧವಾಗಿದೆ. ಇದೇ ವೃತ್ತಿಜ್ಞಾನ. ಅಂತಃಕರಣಕ್ಕೆ ಸ್ಫುರಣವುಂಟುಮಾಡಿರುವ ಚೈತನ್ಯವೇ ನಿಜವಾದ ಜ್ಞಾನ. ಇದೇ ಆತ್ಮ. ಶಾಸ್ತ್ರಗಳಲ್ಲಿ ಇದನ್ನು ಸಾಕ್ಷಿ ಎನ್ನುತ್ತಾರೆ. ಸಾಕ್ಷಿ ಎಂದರೆ ತನ್ನಲ್ಲಿ ಯಾವ ವಿಕಾರವೂ ಇಲ್ಲದೆ ಎಲ್ಲವನ್ನೂ ನೋಡುವ ಆತ್ಮ. ಈ ಸಾಕ್ಷಿಯು ಯಾವಾಗಲೂ ವಿಷಯಿಯಾಗಿರುತ್ತದೆ. ಇದಕ್ಕೆ ಇನ್ನೊಂದು ಸಾಕ್ಷಿ ಇಲ್ಲ. ಜಗತ್ತಿನಲ್ಲಿರ ತಕ್ಕದ್ದೆಲ್ಲವೂ ಇದಕ್ಕೆ ವಿಷಯವಾಗುತ್ತದೆ.ಪ್ರಕೃತದಲ್ಲಿ ಘಟಜ್ಞಾನ ಪಟಜ್ಞಾನ ಎಂಬುದಾಗಿ ಯಾವ ಯಾವ ಜ್ಞಾನಗಳುಂಟೋ ಅಲ್ಲಿ ವಿಷಯವಾಗಿರ ತಕ್ಕದ್ದೆಲ್ಲವನ್ನೂ ಕಳಚಿ ಹಾಕಿದರೆ, ಅದರ ಹಿಂದೆ ಅನುಸ್ಯೂತವಾಗಿ ಯಾವ ವಿಷಯದ ಸೋಂಕೂ ಇಲ್ಲದ ಏಕರೂಪವಾದ ಸ್ಫುರಣವೆಂಬ ಬೋಧರೂಪ ಚೈತನ್ಯವಿದೆಯೋ ಅದೇ ಬ್ರಹ್ಮವೆಂಬ ನಿಶ್ಚಯಕ್ಕೆ ಬ್ರಹ್ಮಜ್ಞಾನವೆಂದು ಹೆಸರು. ಪಂಚದಶಿಯಲ್ಲಿ ಪ್ರಕೃತವಾದ ಈ ೨೧ನೆಯ ಶ್ಲೋಕ ಹೀಗಿದೆ-

**ಯಸ್ಮಿನ್ ಯಸ್ಮಿನ್ನಸ್ತಿ ಲೋಕೇ ಬೋಧಸ್ತತ್ತದುಪೇಕ್ಷಣೇ ।**
**ಯದ್‌ಬೋಧಮಾತ್ರಂ ತದ್ಬ್ರಹ್ಮೇತ್ಯೇವಂ ಧೀರ್ಬ್ರಹ್ಮನಿಶ್ಚಯಃ ॥**

ಆಪಾತವಾಗಿ ನೋಡಿದಾಗ ಘಟಜ್ಞಾನ ಪಟಜ್ಞಾನ ಮುಂತಾದ ಜ್ಞಾನಗಳಲ್ಲಿ ಘಟಾದಿ ವಿಷಯಗಳನ್ನು ತೆಗೆದು ಹಾಕಿದಾಗ ಉಳಿಯುವ ವೃತ್ತಿ ಜ್ಞಾನವೇ ಆತ್ಮ ಎಂಬ ಭ್ರಮೆಯುಂಟಾಗುತ್ತದೆ. ವೃತ್ತಿಜ್ಞಾನವು ಆತ್ಮವಲ್ಲ, ಅದನ್ನು ವಿಷಯವಾಗಿಟ್ಟುಕೊಂಡು ಅದಕ್ಕೂ ಅಸ್ತಿತ್ವವನ್ನು ನೀಡುವ ಸಾಕ್ಷಿಯಾದ ಚೈತನ್ಯವೇ ಆತ್ಮವೆಂದು ತಿಳಿಯಬೇಕು. ನಾನು ನೋಡುತ್ತೇನೆ, ನಾನು ತಿಳಿಯುತ್ತೇನೆ - ಎಂಬಲ್ಲಿ ಅಹಂಪ್ರತ್ಯಯಗಮ್ಯನಾದವನು ಆತ್ಮವೆಂದು ಕೆಲವರು ಹೇಳುವುದುಂಟು. ಅದು ತಪ್ಪು. ಆತ್ಮನು ಯಾವ ಪ್ರತ್ಯಯಕ್ಕೂ ಗಮ್ಯನಲ್ಲ. ಅಹಂ ಪ್ರತ್ಯಯಗಮ್ಯನಾದವನು ಜೀವಾತ್ಮ. ಪರಮಾತ್ಮನಲ್ಲ(೨೧). ಹಿಂದೆ ಪಂಚಕೋಶಗಳನ್ನು ವಿವರಿಸುವಾಗ ಮನೋಮಯಕೋಶ, ವಿಜ್ಞಾನಮಯ ಕೋಶ, ಎಂದು ಎರಡು ಕೋಶಗಳನ್ನು ಹೇಳಲಾಯಿತಷ್ಟೆ. ೨೧ನೆಯ ಶ್ಲೋಕದಲ್ಲಿ ''ಘಟಜ್ಞಾನ ಪಟಜ್ಞಾನ - ಎಂದು ಯಾವ ಯಾವ ಜ್ಞಾನ ಉಂಟೋ'' ಎಂದಾಗ ಈ ಮನೋಮಯ ವಿಜ್ಞಾನಮಯಕೋಶಗಳು ಅದರಲ್ಲಿ

ಸೇರಿಹೋಗುತ್ತವೆ. ಆನಂದಮಯಕೋಶವೂ ವಿಷಯವಾಗಿರುವುದರಿಂದ ಸೇರಿಹೋಗುತ್ತದೆ. ಇವೆಲ್ಲವನ್ನು ವಿಷಯೀಕರಿಸುವ ಸಾಕ್ಷಿಚೈತನ್ಯವನ್ನು ಹಿಂದಿನ ಶ್ಲೋಕದಲ್ಲಿ ಆತ್ಮವೆಂದು ಪ್ರತಿಪಾದಿಸಲಾಗಿದೆ - ಎಂದು ತಿಳಿಯಬೇಕು. ಪೂರ್ವಾಪರ ವಿಚಾರ ಮಾಡದೆ ಶ್ಲೋಕವನ್ನು ಮಾತ್ರ ನೋಡತಕ್ಕವರಿಗೆ ತಪ್ಪು ಅರ್ಥವಾಗುತ್ತದೆಯೆಂದು ಇಷ್ಟು ಲಂಬಿಸಿ ಹೇಳಬೇಕಾಯಿತು. ಈ ಪ್ರಕಾರವಾಗಿ ಪಂಚಕೋಶಗಳು ವಿಷಯಗಳಾದ್ದರಿಂದ ಅವೆಲ್ಲವನ್ನೂ ತಳ್ಳಿ ಹಾಕಿದರೆ ಉಳಿಯುವುದು ಶೂನ್ಯವೇ. ಯಾವುದನ್ನು ಆತ್ಮವೆನ್ನುತ್ತೀರಿ? ಎಂಬ ಶಂಕೆ ಇಲ್ಲಿ ಹುಟ್ಟುತ್ತದೆ. ಅದಕ್ಕೆ ಉತ್ತರವೇನೆಂದರೆ, ನಾವು ಹಿಂದೆ ವಿವರಿಸಿದಂತೆ ಈ ಪಂಚಕೋಶಗಳನ್ನೂ ವಿಷಯೀಕರಿಸುವ ಸಾಕ್ಷಿಚೈತನ್ಯವು ನಿರ್ಬಾಧವಾಗಿ ಉಳಿದುಕೊಂಡಿರುತ್ತದೆ. ಅದೇ ಸತ್ಯವಾದದ್ದು. ಪಂಚಕೋಶಗಳು ಪರಮಾರ್ಥದಲ್ಲಿ ಅಸತ್ಯ. ಅಸತ್ಯವನ್ನು ತಳ್ಳಿ ಹಾಕಿ ಸತ್ಯವನ್ನು ತಿಳಿಸುವುದೇ ನಮ್ಮ ಧ್ಯೇಯವಾಗಿರುತ್ತದೆ. ಈ ಸಾಕ್ಷಿಚೈತನ್ಯವೇ ಸತ್ಯವಾದ ಬ್ರಹ್ಮ(೨೨).

''ಸ್ವಯಂ'' ಎಂಬ ಶಬ್ದವು ಸ್ವಸ್ವರೂಪವನ್ನು ಬೋಧಿಸುತ್ತದೆ. ಸ್ವಯಂ ಎಂದರೆ ''ಅಹಂ'' (ನಾನು). 'ಅಹಂ' ಎಂಬ ಪದಾರ್ಥವು ಅಹಂ ಪ್ರತ್ಯಯಗಮ್ಯವಲ್ಲದಿದ್ದ 'ಅಹಂ' ಆಗಿದೆ. ಇದನ್ನೇ ನಾವು ಸರ್ವಸಾಕ್ಷಿಯಾದ ಬ್ರಹ್ಮ ಎಂದು ಹೇಳಿದ್ದು. ಯಾವಾತನೂ 'ನಾನು ಇಲ್ಲ' ಎಂದು ಹೇಳುವುದಿಲ್ಲ! ಇದು ವಿವಾದಗ್ರಸ್ತವೇ ಅಲ್ಲ. 'ನಾನು ಇಲ್ಲ' ಎಂದು ಹೇಳಿಕೊಳ್ಳುತ್ತ ಪ್ರತಿವಾದಿಯಾಗಿ ಬರತಕ್ಕವನು ಯಾರು? (೨೩). 'ನಾನು ಇಲ್ಲ' ಎಂದು ಹೇಳಿಕೊಳ್ಳಲು ಯಾವನೂ ಇಷ್ಟಪಡುವುದಿಲ್ಲ! ಹುಚ್ಚು ಹಿಡಿದವನು ಭ್ರಾಂತಿಯಿಂದ ಹಾಗೆ ಹೇಳಿಕೊಂಡಾನು! ಆದ್ದರಿಂದಲೇ ಶ್ರುತಿಯು ಅಸತ್ತ್ವವಾದಿಯನ್ನು (ನಾನು ಇಲ್ಲ ಎಂದು ಹೇಳಿಕೊಳ್ಳುವ ಶೂನ್ಯವಾದಿಯನ್ನು) ಖಂಡಿಸುತ್ತದೆ. ಅದು ಯಾವುದೆಂದರೆ - **ಅಸನ್ನೇವ ಸ ಭವತಿ । ಅಸದ್ ಬ್ರಹ್ಮೇತಿವೇದಚೇತ್ । ಅಸ್ತಿಬ್ರಹ್ಮೇತಿಚೇದ್ವೇದ, ಸಂತಮೇನಂ ತತೋವಿದುಃ** (ತೈ.ಉ.೨-೬) - ಇದರ ಅರ್ಥ ಹೀಗೆ - ಬ್ರಹ್ಮವು ನಾಸ್ತಿ- ಎಂದು ಯಾವನು ಹೇಳುತ್ತಾನೋ ಆತನೇ ಸ್ವಯಂ 'ನಾಸ್ತಿ' ಆಗಿಬಿಡುತ್ತಾನೆ! ಬ್ರಹ್ಮವೇ ತಾನಾದ್ದರಿಂದ 'ನಾನು ಇಲ್ಲ' ಎಂದು ಹೇಳಿಕೊಂಡಂತಾಯಿತು. ಇಂತಹ ನಾಸ್ತಿಕನಿಗೆ ಧರ್ಮಾದಿಪುರುಷಾರ್ಥ-ಗಳಾವುವೂ ಇಲ್ಲದೆ ಆತನು ಹಾಳಾಗುತ್ತಾನೆ. 'ಬ್ರಹ್ಮವಿದೆ, ನಾನೂ ಇದ್ದೇನೆ'

ಎಂದು ಯಾವನು ಹೇಳುತ್ತಾನೋ ಆತನು ಸತ್ಪುರುಷನೆಂದು ಶಿಷ್ಟರು ಅಂಗೀಕರಿಸುತ್ತಾರೆ. ಅವನಿಗೆ ಎಲ್ಲ ಪುರುಷಾರ್ಥಗಳೂ ಸಿದ್ಧಿಸುತ್ತವೆ. ಆತನು ಆಸ್ತಿಕ. ಬ್ರಹ್ಮವು ಅಸ್ತಿ ಎಂದು ಹೇಳತಕ್ಕವನು ಆಸ್ತಿಕ - ನಾಸ್ತಿ ಎಂದು ಹೇಳತಕ್ಕವನು ನಾಸ್ತಿಕ. ಆದ್ದರಿಂದ ಆತ್ಮನು ಜ್ಞಾನಕ್ಕೆ ಗೋಚರನಾಗದಿದ್ದರೂ 'ನಾನು ಇದ್ದೇನೆ. ನಾನೇ ಆತ್ಮನಾದ್ದರಿಂದ ಆತ್ಮನು ಇದ್ದಾನೆ' ಎಂದು ದೃಢವಾಗಿ ನಿಶ್ಚಯಿಸಿಕೊಳ್ಳಬೇಕು (೨೪-೨೫). ಆತ್ಮನು ಸರ್ವಕಾಲದಲ್ಲಿಯೂ ವಿಷಯಿಯಾಗಿಯೇ ಇರುತ್ತಾನೆ. ಜ್ಞಾನಕ್ಕೆ ವಿಷಯನಲ್ಲ, ಆದ್ದರಿಂದ ಆತ್ಮನು ಸ್ವಯಂಪ್ರಕಾಶನೆಂದು ಪ್ರತಿಪಾದಿಸಲಾಗುತ್ತದೆ. ಆತ್ಮನು ಈ ಪ್ರಕಾರವಾಗಿದ್ದಾನೆ ಅಥವಾ ಆ ಪ್ರಕಾರವಾಗಿದ್ದಾನೆ - ಎಂದು ಹೇಗೆ ಹೇಳಿದರೂ ಆ ಒಂದು ಪ್ರಕಾರವನ್ನು ಹೇಳಬೇಕಾಗುತ್ತದೆ. ಆ ಪ್ರಕಾರವೇ ಧರ್ಮವಾಗುವುದರಿಂದ ಒಂದಾನೊಂದು ಧರ್ಮವಿಶಿಷ್ಟನೆಂದು ತಿಳಿಸಬೇಕಾಗುತ್ತದೆ. ಆದರೆ ಆತ್ಮನು ನಿರ್ವಿಶೇಷನೂ ನಿರಂಜನನೂ ಆಗಿದ್ದಾನೆಂದು ಶ್ರುತಿಯು ತಿಳಿಸುವುದರಿಂದ ಯಾವ ಧರ್ಮವನ್ನೂ ಆತ್ಮನಲ್ಲಿ ಹೇಳುವುದಕ್ಕಾಗುವುದಿಲ್ಲ. ಆದ್ದರಿಂದ ಆತ್ಮನು ಸರ್ವಧರ್ಮ ರಹಿತನೆಂಬುದೇ ನಿಶ್ಚಯ. ಹಾಗಾದರೆ ಈ ಪ್ರಶ್ನೆ ಹುಟ್ಟುತ್ತದೆ. ಸರ್ವಧರ್ಮ ರಹಿತನಾಗಿದ್ದಾನೆ -ಎಂದು ಹೇಳಿದ ಮಾತ್ರದಿಂದ ವಸ್ತು ಸಿದ್ಧಿಯಾಗುವುದಿಲ್ಲವಲ್ಲ? ಎಂದು. ನಿಜ; ಇಂದ್ರಿಯಗಳಿಗೆ ಗೋಚರನಾಗಿದ್ದರೆ ಹೀಗಿದ್ದಾನೆ ಎಂದು ಹೇಳಬಹುದು. ಪ್ರತ್ಯಕ್ಷವಾದ ಘಟ ಪಟಾದಿಗಳು ಹೀಗಿವೆಯೆಂದು ಹೇಳಲು ಸಾಧ್ಯ. ಅವನು ಪರೋಕ್ಷನಾಗಿದ್ದರೆ, ಹಾಗಿದ್ದಾನಂತೆ ಎಂದು ಹೇಳಬಹುದು. ಇಂದ್ರಿಯಗೋಚರನಲ್ಲದ್ದರಿಂದ ಪ್ರತ್ಯಕ್ಷನಲ್ಲ, ಪರೋಕ್ಷನೆಂದೂ ಹೇಳುವಂತಿಲ್ಲ, ಎಲ್ಲರ ಆತ್ಮನೂ ಆಗಿರುವುದರಿಂದ 'ನಾನು ಪರೋಕ್ಷ'ನೆಂದು ಹೇಳಿದಂತಾದೀತು ! ತಾನೇ ತನಗೆ ಪರೋಕ್ಷನಲ್ಲವಷ್ಟೆ? ಆದ್ದರಿಂದ ಯಾವ ಧರ್ಮವನ್ನು ಹೇಳಲಾದೀತು? (೨೬-೨೭) ಪ್ರಪಂಚ ತಾನೇ ಆತ್ಮನಾದ್ದರಿಂದ, ಪೂರ್ವೋಕ್ತರೀತಿಯಲ್ಲಿ ಆತ್ಮನು ಶೂನ್ಯನಾಗುವುದೇ ಇಲ್ಲ, ಆತ್ಮನಿಲ್ಲವೆಂದು ಹೇಳುವುದಕ್ಕಾಗುವುದೇ ಇಲ್ಲ, ಆದ್ದರಿಂದ ಆತ್ಮನು ಅಪರೋಕ್ಷನೆಂದು ಮಾತ್ರ ಹೇಳಬಹುದು. ನೇತ್ರ, ಶ್ರೋತ್ರಾದಿ ಇಂದ್ರಿಯಗಳಿಗೆ ಗೋಚರನಲ್ಲವಾದ್ದರಿಂದ ಪ್ರತ್ಯಕ್ಷನಲ್ಲವಾದರೂ 'ನಾನು ಇದ್ದೇನೆ' ಎಂಬುದು ಇನ್ನೊಂದರ ನೆರವಿಲ್ಲದೆ ತಾನಾಗಿ ತಿಳಿಯುವುದರಿಂದ ಆತ್ಮನು ಅಪರೋಕ್ಷ ನೆಂದೂ ಸ್ವಯಂಪ್ರಕಾಶನೆಂದೂ ನಿಶ್ಚಯವಾಗಿ ಹೇಳಬಹುದು. ಆತ್ಮನ

ಲಕ್ಷಣವೇನೆಂದರೆ, "ಸತ್ಯಂ ಜ್ಞಾನಮನಂತಂ ಬ್ರಹ್ಮ" (ತೈ.ಉ.೨-೧-೧) ಎಂದು ಉಪನಿಷತ್ತೇ ಆತ್ಮನ ಸ್ವರೂಪ ಲಕ್ಷಣವನ್ನು ಹೇಳಿದೆ(೨೮). ಆತ್ಮನು ಸತ್ಯನೆಂಬುದನ್ನು ಹೀಗೆ ನಿಶ್ಚಯಿಸಬೇಕು. ಸತ್ಯವೆಂದರೇನು? ಯಾವುದು ಯಾವಾಗಲೂ ಬಾಧಿತ - ವಾಗದೆ ಸ್ವಸ್ವರೂಪದಲ್ಲಿಯೇ ಇರುವುದೋ ಅದು ಸತ್ಯವೆಂದು ಪೂರ್ವಾಚಾರ್ಯರು ಹೇಳಿದ್ದಾರೆ. ಜಗತ್ತೆಲ್ಲವೂ ಬಾಧಿತವಾಗುವುದರಿಂದ ಅದು ಸತ್ಯವಲ್ಲ. ಆತ್ಮನು ಜಗತ್ತಿನಂತೆ ಬಾಧಿತನಾಗುವುದೇ ಇಲ್ಲ. ಹೇಗೆಂದರೆ, ಜಾಗ್ರತ್ತಿನಲ್ಲಿ ನಮಗೆ ತೋರುವ ಈ ಜಗತ್ತಿಗೆ ಸಾಕ್ಷಿಯು 'ನಾನು' ಎಂಬ ಆತ್ಮನು ಇದ್ದಾನೆಂಬುದು ಸ್ಪಷ್ಟವಾಗಿಯೇ ಇದೆ. ಸ್ವಪ್ನದಲ್ಲಿ ಮನಸ್ಸು ಕಾಣುವ ಜಗದ್ವ್ಯವಹಾರಕ್ಕೂ ಸಾಕ್ಷಿಯಾದವನು ಆತ್ಮನೇ. ಸ್ವಪ್ನದಲ್ಲಿ ಜಗದ್ವ್ಯವಹಾರವು ನಾನಾ ರೂಪವನ್ನು ತಳೆದಿರುತ್ತದೆ. ಸುಷುಪ್ತಿಯಲ್ಲಿ ಜಗತ್ತು ಇರುವುದೇ ಇಲ್ಲ. ಆದರೆ ಸಾಕ್ಷಿಯಾದ ಆತ್ಮನಲ್ಲಿ ಯಾವ ವೈಲಕ್ಷಣ್ಯವೂ ಇಲ್ಲ. ಸೂರ್ಯನಂತೆ ಅವನು ತನ್ನ ಪಾಡಿಗೆ ಪ್ರಕಾಶೈಕಸ್ವರೂಪನಾಗಿರುತ್ತಾನೆ. ಈ ಶ್ಲೋಕದಲ್ಲಿ ಜಗತ್ತೆಂದರೆ ಸ್ಥೂಲಶರೀರ, ಸೂಕ್ಷ್ಮಶರೀರವೆಂದೂ ಅರ್ಥ ಹೇಳಬಹುದು. ಆತ್ಮನು ಶರೀರಾತಿರಿಕ್ತನೆಂಬುದಕ್ಕೆ ಇದು ಒಂದು ಹೆಗ್ಗುರುತು. ಆತನ ಸ್ವರೂಪಕ್ಕೆ ಯಾವ ಚ್ಯುತಿಯೂ ಆಗುವುದಿಲ್ಲ. ಹಾಗಾಗುತ್ತದೆಯೆಂಬುದಕ್ಕೆ ಇನ್ನೊಂದು ಸಾಕ್ಷಿ ಇಲ್ಲ. ಸಾಕ್ಷಿ ಇಲ್ಲದ ಯಾವ ಅಭಿಪ್ರಾಯವೂ ನಮಗೆ ಸಂಮತವಲ್ಲ. ಈ ಶ್ಲೋಕದಲ್ಲಿ ಒಂದು ಶಂಕೆ ಹುಟ್ಟಬಹುದು. ಮನುಷ್ಯನು ಬದುಕಿರುವಾಗ ಜೀವಿತಕಾಲದಲ್ಲಿ ಆತ್ಮನಿಗೆ ಬಾಧೆಯಿಲ್ಲವೆಂಬುದನ್ನು ಒಪ್ಪಬಹುದು. ಮರಣವಾದ ಮೇಲೆ ಅವನು ಬಾಧೆಯಿಲ್ಲದೆ ಇದ್ದಾನೆಂಬುದಕ್ಕೆ ಪ್ರಮಾಣವೇನು? ಸತ್ಯವು ತ್ರಿಕಾಲಗಳಲ್ಲಿಯೂ ಅಬಾಧಿತವಾಗಿರಬೇಕಲ್ಲವೆ? ಉತ್ತರ ಹೀಗಿರಬಹುದು - ಒಬ್ಬ ವ್ಯಕ್ತಿ ಮೃತನಾದಾಗ ಅವನ ಪ್ರತ್ಯಗಾತ್ಮವೂ ನಾಶವಾಯಿತೆಂಬುದಕ್ಕೆ ಸಾಕ್ಷಿ ಇಲ್ಲ. ಸಾಕ್ಷಿ ಇಲ್ಲದ್ದನ್ನು ಒಪ್ಪಲಾಗದು. ಮತ್ತು ಈ ಆತ್ಮನು ಒಂದು ಶರೀರಕ್ಕೆ ಮಾತ್ರ ಆತ್ಮನಲ್ಲ, ಜಗತ್ತಿನ ಸರ್ವ ಪ್ರಾಣಿಗಳಿಗೂ ಒಬ್ಬನೇ ಆತ್ಮನಾಗಿದ್ದಾನೆ. ಮೃತಶರೀರದಲ್ಲಿ ಗೋಚರಿಸದಿದ್ದರೂ ಅನ್ಯಶರೀರಗಳಲ್ಲಿ ಪ್ರಕಟನಾಗುತ್ತಲೇ ಇದ್ದಾನೆ - ಎಂದು(೨೯). ಈ ಕಾರಣದಿಂದಲೂ ಆತ್ಮನು ಬಾಧರಹಿತ. ಒಂದು ಮನೆಯಲ್ಲಿರುವ ಘಟಪಟಾದಿಗಳೆಲ್ಲವನ್ನೂ ತೆಗೆದು ಮನೆಯನ್ನು ಖಾಲಿ ಮಾಡಿ ಮೂರ್ತ ವಸ್ತುಗಳನ್ನು ಮಾತ್ರ ಹೊರಗೆ ತರಲಾದೀತು. ಆದರೆ ಅಮೂರ್ತವಾದ ಆಕಾಶವು ಮಾತ್ರ ಮನೆಯಲ್ಲಿಯೇ ಉಳಿದಿರುತ್ತದೆ!

ಹಾಗೆಯೇ 'ನೇತಿ ನೇತಿ' ಇತ್ಯಾದಿ ಶ್ರುತಿವಚನಗಳಿಂದ ಇಂದ್ರಿಯ ಮನಸ್ಸುಗಳಿಗೆ ಗೋಚರವಾಗುವ ಎಲ್ಲ ವಸ್ತುಗಳನ್ನೂ ತಳ್ಳಿದ ಮೇಲೆ ಉಳಿಯುವ ಆಕಾಶಸಮಾನವಾದ ವಸ್ತುವೇ ಆತ್ಮವೆಂದು ತಿಳಿಯಬೇಕು (೩೦).

**'ಸತ್ಯಂ ಜ್ಞಾನಮನಂತಂಬ್ರಹ್ಮ'** (ತೈ.ಉ.೨-೧-೧) ಎಂದು ಬ್ರಹ್ಮಲಕ್ಷಣವನ್ನು ಶ್ರುತಿಯು ಹೇಳಿದೆ. ಬ್ರಹ್ಮವು ಸತ್ಯವಾದದ್ದು ಅಥವಾ ಯಾವುದು ಸತ್ಯವೋ ಅದು ಬ್ರಹ್ಮ ಎಂದು ನಿಶ್ಚಿತವಾಗಿದೆ. ಯಾವುದಕ್ಕೆ ಯಾವ ಕಾಲದಲ್ಲಿಯೂ ಬಾಧೆಯೇ ಇಲ್ಲವೋ ಸದಾ ತನ್ನ ಸ್ವರೂಪದಲ್ಲಿಯೇ ಇದ್ದುಕೊಂಡಿರುವುದೋ ಅದು ಸತ್ಯ. ಪೂರ್ವೋಕ್ತ ರೀತಿಯಲ್ಲಿ ಅನ್ನಮಯಕೋಶದಿಂದ ಜ್ಞಾನಮಯ ಕೋಶದವರೆಗೆ ಎಲ್ಲ ಕೋಶಗಳೂ ಬಾಧಿತವಾಗುವುದರಿಂದ ಅವು ಬ್ರಹ್ಮವಲ್ಲವೆಂದು ನಿಶ್ಚಿತವಾಯಿತು. ಮೂರ್ತ-ಅಮೂರ್ತಗಳಾದ ಶರೀರ, ಪ್ರಾಣ, ಇಂದ್ರಿಯ, ಮನಸ್ಸು, ಬುದ್ಧಿ ಬಾಧಿತವಾದವು. ಇವು ಬಾಧಿತವಾದ ಮೇಲೆ, ಯಾವುದು ಉಳಿಯುತ್ತದೆಯೋ ಅದೇ ಬ್ರಹ್ಮವೆಂದು ತಿಳಿಯಬೇಕು. ಸರ್ವವೂ ಬಾಧಿತವಾದ ಮೇಲೆ ಯಾವುದೂ ಉಳಿಯುವುದೇ ಇಲ್ಲ! ಎಂದರೆ, ಹಾಗಲ್ಲ. 'ಸರ್ವವೂ ಬಾಧಿತವಾಯಿತು' ಎಂಬುದು ತಿಳಿಯುತ್ತದೆಯಲ್ಲವೆ? ಆಗ 'ತಿಳಿವು' ಎಂಬುದೊಂದು ಉಳಿದೇ ಇರಬೇಕು! ಅದು ಮೂರ್ತಾಮೂರ್ತಗಳಾದ ಸಕಲಪದಾರ್ಥಗಳ ಅಭಾವವನ್ನು ಗ್ರಹಿಸುವ ಜ್ಞಾನ. ಅದೇ ಸರ್ವಸಾಕ್ಷಿಯಾದ ಆತ್ಮವೆಂದು ನಿಶ್ಚಿತವಾಗುತ್ತದೆ. ಈಗೊಂದು ಪ್ರಶ್ನೆ ಹುಟ್ಟುತ್ತದೆ. ಸರ್ವವೂ ಬಾಧಿತವಾದ ಮೇಲೆ ಏನೂ ಉಳಿಯುವುದಿಲ್ಲ- ಎಂದಾಗ ಅದೇ ಆತ್ಮವೆನ್ನುತ್ತೀರಿ. 'ಏನು ಉಳಿಯುವುದಿಲ್ಲ' ಎಂದರೆ ಅಭಾವ ಎಂದಾಗುತ್ತದೆ. ಅಭಾವವು ಆತ್ಮವೇ? ಹಾಗಲ್ಲ! ಮಾತನಾಡುವ ಶೈಲಿ ಅದು. ಏನೂ ಉಳಿಯುವುದಿಲ್ಲ ಎಂಬುದಕ್ಕೆ ಸಾಕ್ಷಿಯಾದ ಜ್ಞಾನ ಉಳಿಯುತ್ತದೆ ಎಂದರ್ಥ. ಜ್ಞಾನವು ಬಾಧಿತವಾಗದೇ ಇರುವುದರಿಂದ ಅಂತಹ ಜ್ಞಾನವೇಆತ್ಮವೆಂದು ಅಭಿಪ್ರಾಯ (೩೧). ಆದ್ದರಿಂದ ಉಪನಿಷತ್ತು **'ಸಏಷ ನೇ ತಿನೇತ್ಯಾತ್ಮಾ'** (ಬೃ.ಉ.೩-೯-೨೬) ಎನ್ನುತ್ತದೆ. ಇದಲ್ಲ ಇದಲ್ಲ ಎನ್ನುವುದು ಆತ್ಮವೆಂದು ಶಬ್ದಾರ್ಥ. ನಾವು ಹೇಳಿದಂತೆ ಲೋಕದಲ್ಲಿರುವ ಸಕಲಪದಾರ್ಥಗಳನ್ನೂ ಇದಲ್ಲ ಇದಲ್ಲವೆಂದು ಶ್ರುತಿಯು ನಿರಾಕರಿಸುತ್ತ, ಹಾಗೆ ನಿರಾಕರಿಸುವ ವಸ್ತುವನ್ನು ಮಾತ್ರ ನಿರಾಕರಿಸದೆ ಉಳಿಸಿ ಬಿಡುತ್ತದೆ. ಏಕೆಂದರೆ ನಿರಾಕರ್ತನನ್ನೇ ನಿರಾಕರಿಸುವುದಕ್ಕೆ ಆಗುವುದಿಲ್ಲ.

ಉಳಿದುದನ್ನು ವ್ಯಾವೃತ್ತಿಗೊಳಿಸಿದ ಮೇಲೆ ಉಳಿಯುವ ತಾನು ಎಂಬುದೇ ಆತ್ಮ. ಇದು ಅದು ಎಂದು ಹೇಳಬಹುದಾದ ಸಮಸ್ತಪದಾರ್ಥವನ್ನೂ 'ನ ನ' ಎಂದು ನಿಷೇಧಿಸಿ ತಳ್ಳಿಬಿಡಲು ಸಾಧ್ಯವಿದೆ. ಏಕೆಂದರೆ ಅದರ ಸ್ವರೂಪವು ನಮಗೆ ತಿಳಿದಿರುತ್ತದೆ. ಪ್ರತ್ಯಗಾತ್ಮನಾದ ತನ್ನ ಸ್ವರೂಪವು ತಿಳಿಯದೇ ಇರುವುದರಿಂದ ಅದನ್ನು ಇದು - ಅದು ಎಂದು ತೋರಿಸುವುದಕ್ಕೆ ಆಗುವುದಿಲ್ಲ. ನಿಷೇಧಿಸುವುದಕ್ಕೂ ಆಗುವುದಿಲ್ಲ. ಅಹಂಕಾರಾದಿಗಳನ್ನು ದೃಶ್ಯವಾದ್ದರಿಂದ ನಿರಾಕರಿಸಬಹುದು. ನಿರಾಕರಿಸತಕ್ಕದ್ದು ಬಾಧೆಯಿಲ್ಲದ ಸಾಕ್ಷಿಯೇ ಆಗಿರುವುದರಿಂದ ಸತ್ಯವಾಗಿರುವುದೇ ಅದು ಎಂದು ಸಿದ್ಧವಾಗುತ್ತದೆ (೩೨-೩೩). ಹೀಗೆ ಈ ಆತ್ಮನು ನಿರ್ಬಾಧನಾದ್ದರಿಂದ ಸತ್ಯನೆಂದು ತಿಳಿಯಬೇಕು. ಅದೇ ಅನುಭೂತಿಸ್ವರೂಪವೆಂದೂ ಅದು ಯಾವುದಕ್ಕೂ ವಿಷಯವಾಗುವುದಿಲ್ಲವೆಂದೂ ಹಿಂದೆ ಉಪಪಾದಿಸಿದ್ದೇವೆ. ಆದ್ದರಿಂದ ಆತ್ಮನು ಜ್ಞಾನಸ್ವರೂಪನೆಂದೂ ನಿಶ್ಚಿತವಾಗುತ್ತದೆ. ಇನ್ನು ಆತ್ಮನು ಅನಂತನೆಂಬುದನ್ನು ತೋರಿಸಬೇಕಾಗಿದೆ. ಆನಂತ್ಯವು ದೇಶ ಕಾಲ ವಸ್ತುಗಳಿಗೆ ಸಂಬಂಧಿಸಿ ಮೂರು ವಿಧವಾಗಿರುತ್ತದೆ. ದೇಶದಿಂದ ಆನಂತ್ಯ, ಕಾಲದಿಂದ ಆನಂತ್ಯ, ವಸ್ತುವಿನಿಂದ ಆನಂತ್ಯ ಎಂದು. ಉದಾಹರಣೆಗಳಿಂದ ಇದನ್ನು ಸ್ಪಷ್ಟಪಡಿಸಬಹುದು. ಇಲ್ಲೊಂದು ಘಟವಿದೆಯೆಂದಿಟ್ಟುಕೊಳ್ಳೋಣ. ಇದು ತಾನಿರುವುದಕ್ಕೆ ಒಂದಿಷ್ಟು ಸ್ಥಳವನ್ನು ಬಯಸುತ್ತದೆ. ಈ ಸ್ಥಳವೇ ದೇಶ. ಘಟಕ್ಕೆ ಬೇಕಾದದ್ದು ನಾಲ್ಕೂ ದಿಕ್ಕುಗಳಿಗೆ ಸೇರಿದ ಸ್ವಲ್ಪ ಜಾಗ. ಅಷ್ಟನ್ನು ವ್ಯಾಪಿಸಿಬಿಟ್ಟರೆ ಸಾಕು. ಉಳಿದ ದೇಶವು ವಿಪುಲವಾಗಿರುತ್ತದೆ. ಹೀಗೆ ದೇಶದ ದೃಷ್ಟಿಯಿಂದ ಅದು ಅನಂತವಲ್ಲ. ಎಂದರೆ ಸರ್ವಸ್ಥಳವನ್ನೂ ವ್ಯಾಪಿಸುವ ವಿಭುವಲ್ಲ. ಆದ್ದರಿಂದ ಘಟವು ದೇಶದ ದೃಷ್ಟಿಯಿಂದ ಸಾಂತವಾಯಿತು. ಇನ್ನು ಕಾಲದ ಅಪೇಕ್ಷೆಯಿಂದಲೂ ಅದು ಅನಂತವಲ್ಲ. ಅದು ಹುಟ್ಟುವುದಕ್ಕೆ ಪೂರ್ವದಲ್ಲಿ - ಎಂದರೆ ಕುಂಬಾರನು ಅದನ್ನು ಮಾಡುವುದಕ್ಕೆ ಮೊದಲು ಘಟವಿರಲಿಲ್ಲ. ಅದನ್ನು ಒಡೆದರೆ ನಾಶವಾಗಿ ಬಿಡುತ್ತದೆ. ಆದ್ದರಿಂದ ನಾಶವಾದ ಮೇಲೆ ಇರುವುದಿಲ್ಲ. ಹಿಂದೆ ಇರಲಿಲ್ಲ, ಮುಂದೆ ಇರುವುದಿಲ್ಲ. ಆದ್ದರಿಂದ ಅದು ಕಾಲದ ದೃಷ್ಟಿಯಿಂದಲೂ ಅನಂತವಲ್ಲ. ಘಟಕ್ಕೆ ಬೇರೆಯಾದ ಪಟ, ವೃಕ್ಷ-ಮೊದಲಾದವು ಇರುವುದರಿಂದ ವಸ್ತು ದೃಷ್ಟಿಯಿಂದಲೂ ಘಟಕ್ಕೆ ಅಂತ್ಯವಿದೆ. ಸರ್ವವೂ ಘಟವಲ್ಲವಾದ್ದರಿಂದ ಅದು ವಸ್ತುತಃ ಕೂಡ ಸಾಂತವೇ. ಹೀಗೆ

ಮೂರು ವಿಧದ ಅಂತ್ಯತ್ವವಿಲ್ಲದ್ದು ಅನಂತ. ಅದು ಬ್ರಹ್ಮವೇ ಹೊರತು ಇನ್ನೊಂದಲ್ಲ. ಬ್ರಹ್ಮವು ಸರ್ವವ್ಯಾಪಿಯಾದ ವಿಭುವಾದ್ದರಿಂದ ದೇಶತಃ ಅದಕ್ಕೆ ಅಂತ್ಯವಿಲ್ಲ. ನಿತ್ಯವಾದ್ದರಿಂದ ಕಾಲತಃ ಅಂತ್ಯವಿಲ್ಲ. ಸರ್ವವೂ ಬ್ರಹ್ಮವೇ ಆದ್ದರಿಂದ ವಸ್ತುದೃಷ್ಟಿಯಿಂದಲೂ ಅಂತ್ಯವಿಲ್ಲ. ಹೀಗೆ ಬ್ರಹ್ಮದಲ್ಲಿ ಮೂರು ಬಗೆಯ ಆನಂತ್ಯವೂ ಇದೆ (೩೪-೩೫). ಮತ್ತು ದೇಶಕಾಲಗಳೂ ಬ್ರಹ್ಮೇತರವಾಗಿ ತೋರುವ ವಸ್ತುಗಳೂ ಮಾಯೆಯಿಂದ ಕಲ್ಪಿತವಾದವುಗಳು. ಹೀಗೆ ಇಂದ್ರಜಾಲದಂತೆ ಕಲ್ಪಿತಪದಾರ್ಥಗಳಿಂದ ಪರಿಚ್ಛೇದವನ್ನು (ಅಳತೆಯನ್ನು) ಮಾಡಲಾಗುವುದಿಲ್ಲ. ಆದ್ದರಿಂದ **'ದಿಕ್ಕಾಲಾದ್ಯನವಚ್ಛಿನ್ನಾನಂತಚಿನ್ಮಾತ್ರಮೂರ್ತಯೇ'** ಮುಂತಾದ ವರ್ಣನೆಗಳನ್ನು ಕವಿಗಳು ಮಾಡಿರುತ್ತಾರೆ (೩೬). ಇಲ್ಲೊಂದು ಶಂಕೆಯುಂಟು. ಚೇತನಾತ್ಮಕವಾದ ಬ್ರಹ್ಮದಲ್ಲಿ ಜಡವಾದ ಜಗತ್ತು ಆರೋಪಿತವಾಗಿದೆಯೆಂದೂ ಕಲ್ಪಿತವಾಗಿದೆಯೆಂದೂ ಒಪ್ಪಿಕೊಳ್ಳೋಣ. ಆದರೆ ಈಶ್ವರ, ಜೀವ - ಇವರು ಯಾರು? ಇವರೂ ಚೇತನಾತ್ಮಕರೇ. ಆದ್ದರಿಂದ ಇವರು ಕಲ್ಪಿತ ರೆನ್ನಲಾಗುವುದಿಲ್ಲ. ಚೇತನವನ್ನು ಕಲ್ಪಿಸುವುದು ಶಕ್ಯವಾದ್ದಲ್ಲ. ಆದ್ದರಿಂದ ಬ್ರಹ್ಮವು ಈಶ್ವರ, ಜೀವರಿಂದ ವಸ್ತುತಃ ಪರಿಚ್ಛಿನ್ನವಾಗುತ್ತದೆ. **''ಸತ್ಯಂ ಜ್ಞಾನಮನಂತಂ ಬ್ರಹ್ಮ''** (ತೈ.ಉ.೨-೧-೧) ಎಂಬ ಲಕ್ಷಣದಲ್ಲಿ ಹೇಳಿದ ಆನಂತ್ಯವು ಬ್ರಹ್ಮದಲ್ಲಿ ಕೂಡುವುದಿಲ್ಲ. ಬ್ರಹ್ಮೇತರ ವಸ್ತುವಿದ್ದ ಮೇಲೆ ಪೂರ್ವದಲ್ಲಿ ಹೇಳಿದ ಆನಂತ್ಯವು ಹೇಗೆ ಸಿದ್ಧಿಸುತ್ತದೆ? ಈ ಶಂಕೆಗೆ ಉತ್ತರವೇನೆಂದರೆ, ಪರಬ್ರಹ್ಮ ಒಂದೇ ಇರತಕ್ಕದ್ದು. **''ಏಕಮೇವಾದ್ವಿತೀಯಂ ಬ್ರಹ್ಮ''** ಮುಂತಾದ ಶ್ರುತಿಗಳು ಇದಕ್ಕೆ ಆಧಾರ. ಲೋಕದಲ್ಲಿ ಈಶ್ವರ, ಜೀವ - ಎಂಬ ವಸ್ತುಗಳು ಪ್ರಸಿದ್ಧವಾಗಿರುವುದು ವ್ಯವಹಾರದಲ್ಲಿ ಮಾತ್ರ. ಪರಮಾರ್ಥದಲ್ಲಾದರೋ ಅವೂ ಕಲ್ಪಿತವಾದವೇ. ಕಲ್ಪಿತವೆಂದರೆ ಇಲ್ಲಿ ಮಾಯಾನಿರ್ಮಿತವೆಂದು ಅರ್ಥವಲ್ಲ. ಉಪಾಧಿಗಳಿಂದ ಕಲ್ಪಿತಗಳೆಂದರ್ಥ. ಈ ಉಪಾಧಿಗಳು ಅನ್ಯವಸ್ತುಗಳೆಂಬ ಭ್ರಾಂತಿಯನ್ನುಂಟು ಮಾಡುತ್ತವೆ. ಸೋಮಯ್ಯನು ನಾಟಕದಲ್ಲಿ ವೇಷವನ್ನು ಹಾಕಿಕೊಂಡು ಬಂದಾಗ, ಅವನು ಸೋಮಯ್ಯನಲ್ಲವೆಂದೂ ಬೇರೊಬ್ಬ ವ್ಯಕ್ತಿಯೆಂದೂ ಪ್ರೇಕ್ಷಕರು ತಿಳಿಯುತ್ತಾರೆ. ಇಲ್ಲಿ ವೇಷವೇ ಉಪಾಧಿ. ವೇಷವನ್ನು ಹಾಕಿದಾಗ ಅವನು ಬೇರೆ ವ್ಯಕ್ತಿಯೆಂದು ಭ್ರಾಂತಿಯುಂಟಾಗುತ್ತದೆ. ಆದರೆ ಸೋಮಯ್ಯನು ಬೇರೆ ವ್ಯಕ್ತಿಯಲ್ಲ. ಸೋಮಯ್ಯನು ಸೋಮಯ್ಯನೇ (೩೭). ಆ ಉಪಾಧಿ

ಯಾವುದೆಂದರೆ, ಒಂದಾನೊಂದು ಪ್ರಬಲವಾದ ಶಕ್ತಿಯು ಈಶ್ವರನಿಗೆ ಉಪಾಧಿಯಾಗಿರುತ್ತದೆ. ಆನಂದಮಯಕೋಶದಿಂದ ಹಿಡಿದು ಬ್ರಹ್ಮಾಂಡಗಳವರೆಗಿರುವ ಸಮಸ್ತವಸ್ತುಗಳಲ್ಲಿಯೂ ಅದು ಗೂಢವಾಗಿ ವ್ಯಾಪಿಸಿದೆ. ಸಕಲವಸ್ತುಗಳನ್ನು ನಿಯಮಿಸತಕ್ಕದ್ದು ಅದು. ಆ ಶಕ್ತಿಯ ಸ್ವರೂಪವು ಹೀಗೆ ಎಂದು ನಿಶ್ಚಯಿಸಲಾಗುವುದಿಲ್ಲ. ಅದು ಅನಿರ್ವಚನೀಯವಾದ ಶಕ್ತಿ ಎಂದಿಷ್ಟೇ ಹೇಳಬಹುದು (೩೮). ನೆಲ, ಜಲ, ಬೆಂಕಿ - ಮುಂತಾದ ಸಕಲ ವಸ್ತುಗಳ ಧರ್ಮಗಳು ಎಂದರೆ ಸ್ವಭಾವಗಳು ಇಷ್ಟೇ ಹೀಗೆಯೇ ಎಂದು ನಿಯಂತ್ರಣಕ್ಕೆ ಒಳಪಟ್ಟಿವೆ. ಈ ನಿಯಂತ್ರಣವನ್ನು ಮಾಡತಕ್ಕದ್ದು ಈಶ್ವರನ ಈ ಶಕ್ತಿಯೇ. ಈ ನಿಯಂತ್ರಣವಿಲ್ಲದೇ ಹೋದರೆ ವಸ್ತುಧರ್ಮಗಳು ಅನ್ಯೋನ್ಯಸಂಕರವಾಗಿ ಲೋಕವ್ಯವಸ್ಥೆಯೇ ಹಾಳಾಗಿ ಹೋದೀತು. ನೆಲವು ಇದಕ್ಕಿದ್ದಂತೆ ನೀರಾಗಿ ಹರಿಯಲಾರಂಭಿಸಿದರೆ? ನೀರು ಬೆಂಕಿಯಂತೆ ಸುಡುವುದಕ್ಕೂ, ಬೆಂಕಿಯು ಗಾಳಿಯಂತೆ ಬೀಸುವುದಕ್ಕೂ ತೊಡಗಿದರೆ ಜಗತ್ತಿನ ಪರಿಸ್ಥಿತಿ ಏನಾದೀತು? ಕಲ್ಲು, ಇಟ್ಟಿಗೆ, ಕಬ್ಬಿಣ, ಮರ - ಮೊದಲಾದವು ಕಾಠಿಣ್ಯ ಗುಣವುಳ್ಳವು. ಗಟ್ಟಿಯಾಗಿ ನಿಂತಿರುತ್ತವೆ - ಎಂಬ ನಿಶ್ಚಯವಿದೆಯಾದುದರಿಂದ ಇವುಗಳನ್ನು ಮನೆ ಕಟ್ಟಲು ಬಳಸುತ್ತಾರೆ. ಇವು ತಮ್ಮ ಕಾಠಿಣ್ಯಗುಣವನ್ನು ಬಿಟ್ಟು ಮೃದುವಾದರೆ? ನೀರಾಗಿ ಹರಿಯತೊಡಗಿದರೆ? ಜಗದ್ವ್ಯವಹಾರವೆಲ್ಲವೂ ಮುಗಿದು ಪ್ರಳಯವೇ ಆಗಿಹೋದೀತು. ಆದ್ದರಿಂದ ಈಶ್ವರನಲ್ಲಿ ಈ ವಸ್ತುಧರ್ಮಗಳನ್ನು ನಿಯಂತ್ರಿಸುವ ಶಕ್ತಿಯಿದೆಯೆಂದು ಒಪ್ಪಲೇಬೇಕು (೩೯). ಶಕ್ತಿಯೂ ಜಡವಾದ್ದರಿಂದ ಜಗನ್ನಿಯಮವನ್ನು ಅದು ಮಾಡುವುದು ಹೇಗೆಂದರೆ, ಚಿದ್ವಸ್ತುವಾದ ಬ್ರಹ್ಮದ ಸಂಬಂಧದಿಂದ ಆ ಶಕ್ತಿಯೂ ಚೈತನ್ಯವನ್ನು ಪಡೆಯುತ್ತದೆ. ಇಂತಹ ಮಾಯಾಶಕ್ತಿಯು ಉಪಾಧಿಯಾದಾಗ ಬ್ರಹ್ಮವೇ ಈಶ್ವರನೆನಿಸಿಕೊಳ್ಳುತ್ತದೆ (೪೦). ಹಿಂದೆ ಹೇಳಿದ ಪಂಚಕೋಶಗಳು ಉಪಾಧಿಯಾದಾಗ ಬ್ರಹ್ಮವೇ ಜೀವಭಾವವನ್ನು ತಳೆಯುತ್ತದೆ. ಈಶ್ವರನ ಶಕ್ತಿ ಅಪಾರವಾದದ್ದು. ಜೀವಾತ್ಮನ ಶಕ್ತಿಯು ಅತ್ಯಲ್ಪವಾಗಿದ್ದು ಲೆಕ್ಕಕ್ಕೆ ಬರುವುದೇ ಇಲ್ಲ. ಒಂದೇ ವಸ್ತು ಜೀವವಾಗಿದ್ದು ಈಶ್ವರನೂ ಆಗಿದೆಯೆಂದರೆ ನಂಬುವುದು ಹೇಗೆ? ಎಂದರೆ ಹಾಗಲ್ಲ. ಉಪಾಧಿಭೇದದಿಂದ ವಸ್ತುಶಕ್ತಿಯು ಅತ್ಯಲ್ಪವೂ ಆಗಬಹುದು. ಒಂದೇ ವಿದ್ಯುಚ್ಛಕ್ತಿಯು ಉಪಾಧಿಭೇದದಿಂದ ಅತ್ಯಲ್ಪವಾದ ಬೆಳಕನ್ನು ನೀಡುತ್ತದೆ. ಜಗಜಗಿಸುವ ದೀಪವೂ ಆಗಿಬಿಡುತ್ತದೆ. ಒಂದೇ ವಸ್ತು

ಸಂಬಂಧಭೇದದಿಂದ ಭಿನ್ನವಾಗುವುದು ಲೋಕದಲ್ಲಿ ಕಂಡು ಬಂದಿದೆ. ಒಬ್ಬನೇ ದೇವದತ್ತನು ಪುತ್ರನಿಗೆ ಸಂಬಂಧಿಸಿ ತಂದೆಯಾಗುತ್ತಾನೆ, ಪೌತ್ರನಿಗೆ ಸಂಬಂಧಿಸಿ ಅಜ್ಜ ಎನಿಸುತ್ತಾನೆ. ಹಾಗೆಯೇ ಬ್ರಹ್ಮವು ಕೋಶೋಪಾಧಿಗೆ ಒಳಗಾಗಿ ಜೀವವೆನಿಸುತ್ತದೆ. ಮಾಯಾಶಕ್ತಿಯ ಉಪಾಧಿಗೆ ಸಂಬಂಧಿಸಿ ಈಶ್ವರ ಎನಿಸುತ್ತದೆ. ಉಪಾಧಿಭೇದದಿಂದ ಜ್ಞಾನ, ಸಾಮರ್ಥ್ಯ ಎಲ್ಲವೂ ಬೇರೆಯಾಗುವುದು ಸಹಜವೇ (೪೧). ಪುತ್ರ, ಪೌತ್ರರ ಸಂಬಂಧವನ್ನು ಕಳಚಿದಾಗ ದೇವದತ್ತನು ತಂದೆಯೂ ಅಲ್ಲ, ಅಜ್ಜನೂ ಅಲ್ಲ. ಅವನು ಬರಿಯ ದೇವದತ್ತ. ಅಂತೆಯೇ ಪೂರ್ವೋಕ್ತ ಉಪಾಧಿಗಳನ್ನು ಕಳಚಿದಾಗ ಬ್ರಹ್ಮ ಬ್ರಹ್ಮವೇ, ಈಶ್ವರನೂ ಅಲ್ಲ, ಜೀವನೂ ಅಲ್ಲ. ಈ ಪ್ರಕಾರ ಯಾವಾತನು ಪರಮಾರ್ಥದಲ್ಲಿ ಉಪಾಧಿಯೊಂದೂ ಇಲ್ಲದ ಬ್ರಹ್ಮವೇ ನಾನು ಎಂದು ಸಮ್ಯಗ್ ಜ್ಞಾನವನ್ನು ಪಡೆಯುತ್ತಾನೋ ಆತನು ಬ್ರಹ್ಮವೇ ಆಗಿಬಿಡುತ್ತಾನೆ. ಬ್ರಹ್ಮಕ್ಕೆ ಹುಟ್ಟುವುದು ಎಂಬುದಿಲ್ಲ. ಆದ್ದರಿಂದ ಬ್ರಹ್ಮವೇ ಆದ - ಎಂದರೆ ಬ್ರಹ್ಮವೇ ನಾನೆಂದು ತಿಳಿದ ಮಾನವನಿಗೆ ಪುನರ್ಜನ್ಮವಿಲ್ಲ. ಅವನು ಮುಕ್ತನೇ ಸರಿ. (೪೨-೪೩).

**ಇಲ್ಲಿಗೆ ಪಂಚಕೋಶವಿವೇಕವೆಂಬ ಪ್ರಕರಣವು ಸಮಾಪ್ತವಾಯಿತು**

---

# ೪. ದ್ವೈತವಿವೇಕಪ್ರಕರಣ

ಮನುಷ್ಯನ ಸಂಸಾರ ಬಂಧಕ್ಕೆ ಕಾರಣವೇನೆಂಬುದು ನಿಶ್ಚಿತವಾದರೆ, ಮುಮುಕ್ಷುವಾದವನು ಅದನ್ನು ತ್ಯಜಿಸಲು ಪ್ರಯತ್ನಿಸುತ್ತಾನೆ. ತಾನು ಹೇಗೆ ಮುಕ್ತನಾಗಬೇಕೆಂಬುದು ಅವನಿಗೆ ಸ್ಪಷ್ಟವಾಗುತ್ತದೆ. ಬಂಧನಕ್ಕೆ ಕಾರಣವಾದದ್ದು ಪ್ರಪಂಚದ ವ್ಯಾಮೋಹ. ನನ್ನ ಮನೆ, ನನ್ನ ಹೆಂಡತಿ, ನನ್ನ ಗಂಡ, ನನ್ನ ಮಕ್ಕಳು - ಇತ್ಯಾದಿಭಾವನೆಗಳಿಂದ ಪ್ರಪಂಚವ್ಯಾಮೋಹವು ದೃಢವಾಗಿಬಿಟ್ಟಿದೆ. ಇದಕ್ಕೆ ಮೂಲ ಕಾರಣ ದ್ವೈತವೇ. ಎಂದರೆ ತನಗಿಂತ ಬೇರೆಯಾಗಿ ನಾನಾ ವಸ್ತುಗಳಿವೆ. ಅವು ನನಗೆ ಬೇಕು. ಇನ್ನು ಕೆಲವು ಬೇಡ ಎಂಬ ರಾಗದ್ವೇಷಗಳಿಗೆ ಮೂಲಹೇತುವಾದದ್ದು ದ್ವೈತಪ್ರಪಂಚ. ಈ ದ್ವೈತಪ್ರಪಂಚವನ್ನು ಬಿಡಿಸಿ ತೋರಿಸಿದಾಗಲೇ, ಯಾವುದು ಹೇಗೆ ತ್ಯಾಜ್ಯ ಎಂಬುದು ಗೊತ್ತಾಗುತ್ತದೆ. ಆದ್ದರಿಂದ ದ್ವೈತವಿವೇಕವನ್ನೀಗ ಮಾಡಿ ಇದರ ಸ್ವರೂಪವನ್ನು ತೋರಿಸುತ್ತೇವೆ. ಜಗತ್ತಿನ ಸೃಷ್ಟಿಯಾದ ಮೇಲೆ ಈ ದ್ವೈತವು ಕಾಣಿಸಿಕೊಂಡಿದೆ. ಈ ಸೃಷ್ಟಿ ಎರಡು ವಿಧ. ಒಂದು ಈಶ್ವರನ ಸೃಷ್ಟಿ ಇನ್ನೊಂದು ಜೀವನ ಸೃಷ್ಟಿ ಎಂದರೆ ಜೀವನೇ ಸೃಷ್ಟಿಸಿಕೊಂಡದ್ದು. ಹೀಗೆ ಜೀವೇಶ್ವರರಿಬ್ಬರಿಂದ ದ್ವೈತಪ್ರಪಂಚವು ಉದಿಸಿತು(೧). ಈಶ್ವರನು ಸೃಷ್ಟಿಸಿದನೆಂಬುದನ್ನು ಮೊದಲು ಪರಿಶೀಲಿಸೋಣ. ಶ್ವೇತಾಶ್ವತರೋಪನಿಷತ್ತು ಹೇಳುತ್ತದೆ. ''**ಮಾಯಾಂ ತು ಪ್ರಕೃತಿಂ ವಿದ್ಯಾತ್ ಮಾಯಿನಂ ತು ಮಹೇಶ್ವರಮ್** '' (ಶ್ವೇ.ಉ.೪-೧೦)- ಎಂದು ಆರಂಭಿಸಿ ''**ಅಸ್ಮಾನ್ ಮಾಯೀ ಸೃಜತೇ ವಿಶ್ವಮೇತತ್**'' (ಶ್ವೇ.ಉ.೪-೯) ಎಂದು. ''ಪ್ರಕೃತಿಯನ್ನು ಮಾಯೆಯೆಂದು ತಿಳಿಯತಕ್ಕದ್ದು. ಪರಮೇಶ್ವರನು ಮಾಯೆಯನ್ನು ಉಪಾಧಿಯಾಗಿ ಉಳ್ಳ ಮಾಯಿ. ಈ ಮಾಯಿಯು ಈ ವಿಶ್ವವನ್ನು ಸೃಜಿಸುತ್ತಾನೆ'' ಎಂದು ಈ ಶ್ರುತಿಯ ಅರ್ಥ (೨) ಋಕ್ ಶಾಖೆಗೆ ಸೇರಿದ ಐತರೇಯೋಪನಿಷತ್ತಿನಲ್ಲಿ ''**ಆತ್ಮಾ ವಾ ಇದಮೇಕ ಏವಾಗ್ರ ಆಸೀತ್**'' (ಐ.ಉ.೧-೧) ಇತ್ಯಾದಿ ವಚನಗಳಿವೆ. ''ಸೃಷ್ಟಿಗೆ ಪೂರ್ವದಲ್ಲಿ ಆತ್ಮ ಎಂಬುದೊಂದೇ ಇದ್ದಿತು, ಇನ್ನೊಂದು ವಸ್ತುವೂ ಇರಲಿಲ್ಲ. ಅದು ಈ ಲೋಕಗಳನ್ನು ನಾನು ಸೃಜಿಸಬೇಕೆಂದು ಪರ್ಯಾಲೋಚಿಸಿ ಇವೆಲ್ಲವನ್ನು ಸೃಷ್ಟಿಸಿತು'' ಎಂದು ಆ ವಚನಗಳ ಅರ್ಥ (೩) ತೈತ್ತಿರೀಯೋಪನಿಷತ್ತಿನಲ್ಲಿ ''**ಆತ್ಮನ ಆಕಾಶಃ ಸಂಭೂತಃ** '' (ತೈ.ಉ.೨-೧) ಇತ್ಯಾದಿ ವಾಕ್ಯಗಳು ಆಕಾಶ, ವಾಯು, ಅಗ್ನಿ, ಜಲ, ಪೃಥ್ವಿ, ಓಷಧಿ, ಅನ್ನ, ಪ್ರಾಣ, ದೇಹ- ಇವು ಆತ್ಮನಿಂದ ಕ್ರಮವಾಗಿ

ಸೃಷ್ಟವಾದವು - ಎಂಬುದನ್ನು ತಿಳಿಸುತ್ತವೆ. ಅಲ್ಲದೆ ಆ ತೈತ್ತರೀಯೋಪನಿಷತ್ತು "ಸತ್ಯಂ ಜ್ಞಾನಮನಂತಂ ಬ್ರಹ್ಮ" (ತೈ.ಉ.೨-೧-೧) ಎಂದು ಆರಂಭಿಸಿ "ನಾನು ಬಹುವಾಗಬೇಕು. ನಾನು ಬಹುವಾಗಿ ಹುಟ್ಟಬೇಕು" ಎಂದು ಬ್ರಹ್ಮವು ತಪಸ್ಸು ಮಾಡಿ - ಎಂದರೆ ಆಲೋಚನೆ ಮಾಡಿ ಈ ಜಗತ್ತೆಲ್ಲವನ್ನೂ ಸೃಷ್ಟಿಸಿತು ಎಂದು ಹೇಳಿದೆ (೪-೫). ಸಾಮವೇದದ ಛಾಂದೋಗ್ಯವು "ಸದೇವ ಸೌಮ್ಯೇದಮಗ್ರ ಆಸೀತ್" (ಛಾಂ.ಉ.೬-೨-೧) ಎಂದು ಆರಂಭಿಸಿ, ತೇಜಸ್ಸು ಜಲ ಅನ್ನಗಳನ್ನು ಬ್ರಹ್ಮವು ಸೃಜಿಸಿ "ಅಂಡಜ, ಜೀವಜ, ಉದ್ಭಿಜ - ಇವೇ ಮೊದಲಾದ ಶರೀರಗಳನ್ನು ನಿರ್ಮಿಸಿತು - ಎಂದು ವರ್ಣಿಸಿದೆ. ಜೀವಜ = ಜರಾಯುಜ (೬). ಅಥರ್ವಣ ವೇದದ ಮುಂಡಕೋಪನಿಷತ್ತು ಸಹ ಬೆಂಕಿಯಿಂದ ಕಿಡಿಗಳು ಹುಟ್ಟುವಂತೆ ಅಕ್ಷರನಾದ ಆತ್ಮನಿಂದ ಚೇತನಗಳೂ ಜಡವಸ್ತುಗಳೂ ಉದ್ಭವಿಸಿ ಆತ್ಮನಲ್ಲಿಯೇ ಲಯಿಸುತ್ತವೆ ಎಂದು ಹೇಳಿದೆ(೭). ಬೃಹದಾರಣ್ಯಕವೂ ಸಹ ಈ ರೀತಿಯಲ್ಲಿ ಜಗತ್ತಿನ ಸೃಷ್ಟಿಯನ್ನು ಹೇಳುತ್ತದೆ - "ಈ ಜಗತ್ತು ಮೊದಲು ಅವ್ಯಾಕೃತವಾಗಿತ್ತು. ಅನಂತರ ನಾಮ ರೂಪಗಳನ್ನು ಪಡೆದು ವ್ಯಾಕೃತವಾಯಿತು.' ಇದರ ರೂಪ ಹೀಗಿರಬೇಕು, ಇದಕ್ಕೆ ಈ ಹೆಸರಿರಬೇಕು' ಎಂದು ವ್ಯವಸ್ಥೆಯಾಯಿತು. ಇದೆಲ್ಲವೂ ಅವ್ಯಾಕೃತದಿಂದ ಆದದ್ದು. ಅವ್ಯಾಕೃತವೆಂದರೆ ಮಾಯೋಪಾಧಿಕವಾದ ಬ್ರಹ್ಮ. ಅದರಿಂದ ವಿರಾಟ್, ಮನು, ಮಾನವ, ಗೋವು, ಕತ್ತೆ ಕುದುರೆ, ಮೇಕೆ, ಕುರಿ ಮುಂತಾದ ಪ್ರಾಣಿಗಳು, ಇರುವೆ ಪರ್ಯಂತವಾದ ಕೀಟಗಳು ಹೆಣ್ಣು ಗಂಡು ಎಂಬ ಭೇದಗಳು ನಿರ್ಮಿಸಲ್ಪಟ್ಟವು" (೮-೯). ಅನಂತರ **'ತತ್ ಸೃಷ್ಟ್ವಾ ತದೇವಾನುಪ್ರಾವಿಶತ್'** (ತೈ.ಉ.೨-೬-೭) ಎಂದು ಅನುಪ್ರವೇಶವನ್ನೂ ಸಹ ಶ್ರುತಿಗಳೇ ಹೇಳುತ್ತವೆ. ಈಶ್ವರನು ಈ ಪ್ರಾಣಿಗಳನ್ನು ಸೃಷ್ಟಿಸಿ ಅವುಗಳೊಂದಿಗೆ ವಿಲಕ್ಷಣವಾದ ಜೀವರೂಪದಿಂದ ಪ್ರವೇಶಿಸಿದನು. ಜೀವನೆಂದರೆ ಪ್ರಾಣವಾಯುಗಳನ್ನು ಹಿಡಿದು ಧರಿಸಿದವನೆಂದು ಅರ್ಥ(೧೦). ಅಂತಃಕರಣವೆಂಬ ಲಿಂಗದೇಹವು ಪ್ರಾಣಿ ಶರೀರದಲ್ಲಿದೆ. ಈ ಲಿಂಗದೇಹಕ್ಕೆ ಆಧಾರಭೂತವಾದ ಚೈತನ್ಯ (ಬ್ರಹ್ಮ), ಕಲ್ಪಿತವಾದ ಲಿಂಗದೇಹ, ಅದರಲ್ಲಿ ಪ್ರತಿಫಲಿಸಿದ ಚಿದಾಭಾಸ - ಈ ಮೂರರ ಸಮೂಹಕ್ಕೆ ಜೀವವೆಂದು ಹೆಸರು ★(೧೧). **'ಮಾಯಿನಂ ತು ಮಹೇಶ್ವರಂ'** (ಶ್ವೇ.ಉ.೪-೧೦)

★ ಘಟದಂತೆ ಶರೀರ, ಘಟಾಕಾಶದಂತೆ ಚೈತನ್ಯ, ಘಟಜಲದಂತೆ ಅಂತಃಕರಣ, ಘಟಜಲದಲ್ಲಿರುವ ಮಹಾಕಾಶದ ಪ್ರತಿಬಿಂಬದಂತೆ ಚಿದಾಭಾಸ.

ಎಂಬ ಶ್ರುತಿವಚನದಂತೆ ಮಹೇಶ್ವರನಲ್ಲಿರುವ ಮಾಯಾ ಶಕ್ತಿಗೆ ಈ ಅದ್ಭುತವಾದ ಜಗತ್ತನ್ನು ನಿರ್ಮಿಸುವ ಶಕ್ತಿಯುಂಟು. ಹಾಗೆಯೇ ಆ ಮಾಯೆಗೆ ಜೀವರನ್ನು ಮೋಹಗೊಳಿಸುವ ಸಾಮರ್ಥ್ಯವೂ ಉಂಟು. ಈ ಮೋಹನ ಶಕ್ತಿಯು ಜೀವವನ್ನು ಮೋಹಗೊಳಿಸಿ ಅಜ್ಞಾನವನ್ನು ಉಂಟುಮಾಡುವುದರಿಂದ ಜೀವನು ತನ್ನ ಚಿದಾನಂದಾದಿ ಸ್ವರೂಪವನ್ನು ತಿಳಿದುಕೊಳ್ಳದೆ ಹೋಗಿದ್ದಾನೆ (೧೨). ಹೀಗೆ ಈಶ್ವರನ ಮಾಯೆಯಿಂದ ಅಜ್ಞಾನಿಯಾಗಿ ಈ ದೇಹದಲ್ಲಿ ಸೇರಿಕೊಂಡು ದೇಹವೇ ತಾನೆಂದು ಭ್ರಮಿಸಿ ಶೋಕಕ್ಕೆ ಒಳಗಾಗಿದ್ದಾನೆ. **''ಸಮಾನೇ ವೃಕ್ಷೇ ಪುರುಷೋ ನಿಮಗ್ನೋಽನೀಶಯಾ ಶೋಚತಿ ಮುಹ್ಯಮಾನಃ''** (ಶ್ವೇ.ಉ.೪; ಮುಂ.ಉ. ೩-೧-೨) ಎಂಬ ಶ್ರುತಿಯನ್ನಿಲ್ಲಿ ಸ್ಮರಿಸಿಕೊಳ್ಳಬೇಕು. ಇವಿಷ್ಟು ಈಶ್ವರನು ಸೃಷ್ಟಿಸಿದ ದ್ವೈತ ಪ್ರಪಂಚವೆಂದು ಸಂಕ್ಷೇಪವಾಗಿ ತಿಳಿಸಲಾಯಿತು (೧೩). ಸಪ್ತಾನ್ನ ಬ್ರಾಹ್ಮಣವೆಂದು ಪ್ರಸಿದ್ಧವಾದ ವೇದ ವಿಭಾಗದಲ್ಲಿ ಜೀವನಿಂದ ಸೃಷ್ಟವಾದ ವಸ್ತುಗಳ ವಿವರಣೆ ಇದೆ. **'ಯತ್ ಸಪ್ತಾನ್ನಾನಿ ಮೇಧಯಾ ತಪಸಾ ಕರ್ಮಣಾಽಜನಯತ್ ಪಿತಾ'** (ಬೃ.ಉ.೧-೫-೧) ಎಂದು ಶ್ರುತಿಯು ಹೇಳುತ್ತದೆ. ಪಿತಾ ಎಂದರೆ ಸಪ್ತಾನ್ನಗಳನ್ನು ಸೃಷ್ಟಿಸಿ ಜಗತ್ತನ್ನು ಪಾಲಿಸತಕ್ಕ ತಂದೆಯಾದ ಜೀವನೆಂದರ್ಥ. ಈ ಜೀವನು ತನ್ನ ಬುದ್ಧಿಶಕ್ತಿಯಿಂದಲೂ ತಪಃಶಕ್ತಿಯಿಂದಲೂ ಈ ಅನ್ನಗಳನ್ನು ನಿರ್ಮಿಸಿದನು (೧೪). ಈ ಅನ್ನಗಳು ಯಾವುವೆಂದರೆ ಸರ್ವ ಮಾನವರಿಗೂ ಸಾಧಾರಣವಾದ ಮರ್ತ್ಯಾನ್ನ. ಎರಡು ದೇವಾನ್ನಗಳು, ನಾಲ್ಕನೆಯದಾದ ಪಶ್ವನ್ನ, ಆತ್ಮಾರ್ಥವಾದ ಉಳಿದ ಮೂರು ಅನ್ನಗಳು. ಹೀಗೆ ಒಟ್ಟು ಸಪ್ತಾನ್ನಗಳು (೧೫). ಅವುಗಳ ವಿವರ ಹೀಗೆ- ಭತ್ತ, ಗೋಧಿ ಮೊದಲಾದದ್ದು ಮರ್ತ್ಯಾನ್ನ, ದರ್ಶಪೂರ್ಣ ಮಾಸಗಳೆರಡು ದೇವಾನ್ನಗಳು, ಕ್ಷೀರವು ಪಶುಗಳ ಅನ್ನ, ಮನಸ್ಸು ವಾಕ್, ಪ್ರಾಣ ಇವು ಮೂರು ಆತ್ಮಾರ್ಥವಾದವು (೧೬). ಭತ್ತ-ಮೊದಲಾದವೆಲ್ಲವೂ ವಸ್ತುತಃ ಈಶ್ವರ ನಿರ್ಮಿತಗಳೇ ಹೌದು. ಆದರೂ ಮನುಷ್ಯನು ವಿಧಿಪ್ರತಿಷೇಧಗಳ ಜ್ಞಾನದಿಂದಲೂ, ವಿಹಿತವಾದ ಕರ್ಮದ ಆಚರಣೆ, ಪ್ರತಿಷಿದ್ಧವಾದ ಕರ್ಮದ ತ್ಯಾಗ ಇವುಗಳಿಂದ ಭತ್ತ ಮೊದಲಾದ್ದನ್ನು ತನಗೆ ಭೋಗ್ಯ ವಸ್ತುವನ್ನಾಗಿ ಮಾರ್ಪಡಿಸಿಕೊಂಡಿದ್ದಾನೆ. ವಸ್ತುಗಳನ್ನು ಮೂಲದಲ್ಲಿ ಈಶ್ವರನೇ ಸೃಷ್ಟಿಸಿದ್ದು. ಮನುಷ್ಯನು ಅದನ್ನು ಪರಿಷ್ಕರಿಸಿ ತಾನು ಭೋಗಿಸುವುದಕ್ಕೆ ತಕ್ಕಂತೆ ಪರಿವರ್ತಿಸಿಕೊಂಡಿದ್ದಾನೆ. ಆದ್ದರಿಂದ ಇವು ಜೀವ

ನಿರ್ಮಿತಗಳೆಂದು ಹೇಳಲಾಗಿದೆ (೧೭). ಈ ಜಗತ್ತು ಈಶ್ವರನಿರ್ಮಿತ, ಜೀವ ಭೋಗ್ಯವೆಂದು ತಿಳಿಯಬೇಕು. ಮಹಿಳೆಯು ಪಿತೃಜನ್ಯ, ಪತಿಭೋಗ್ಯೆ ಆಗಿರುತ್ತಾಳಲ್ಲವೆ? ಹಾಗೆಯೇ ಇದು ಎಂದು ತಿಳಿಯಬೇಕು. ಮಾಯಾವೃತ್ತಿಯೆನ್ನಬಹುದಾದ ಈಶ್ವರ ಸಂಕಲ್ಪವು ಈ ಪದಾರ್ಥಗಳ ಉತ್ಪತ್ತಿಗೆ ಕಾರಣ. ಮನೋವೃತ್ತಿಯೆಂಬ ಜೀವ ಸಂಕಲ್ಪವು ಆ ಪದಾರ್ಥಗಳ ಭೋಗಕ್ಕೆ ಕಾರಣ (೧೮-೧೯). ಈಶ್ವರನಿಂದ ಸೃಷ್ಟವಾದದ್ದೇ ಭೋಗ್ಯವಾಗಿದೆ. ಅದರಲ್ಲಿ ಜೀವನ ಕೈವಾಡ ಏನಿದೆ? ಭೋಗ್ಯವು ಜೀವಸೃಷ್ಟವೆನ್ನಲು ಕಾರಣವೇನು? ಎಂದರೆ ಹಾಗಲ್ಲ. ಈಶ್ವರನು ಸೃಷ್ಟಿಸಿದ ವಜ್ರ ಮುಂತಾದದ್ದು ಏಕರೂಪವಾಗಿರುತ್ತದೆ. ಅದನ್ನು ಅನುಭವಿಸುವ ಭೋಕ್ತೃವಾದ ಜೀವನಿದ್ದಾನಲ್ಲ, ಆತನು ಅದನ್ನು ತನ್ನ ಬುದ್ಧ್ಯನುಸಾರವಾಗಿ ನಾನಾ ರೀತಿಯಲ್ಲಿ ಭೋಗಿಸುತ್ತಾನೆ. ಆದ್ದರಿಂದ ಭೋಗ್ಯ ಸ್ವರೂಪವು ಭಿನ್ನವಾಗುತ್ತದೆ. ಆದ್ದರಿಂದ ಅದು ಜೀವಕಲ್ಪಿತವೆಂದು ವಿಭಾಗಿಸಿ ತೋರಿಸಿದ್ದೇವೆ (೨೦).

ಈ ಪ್ರಕರಣದಲ್ಲಿ ಇದುವರೆಗೆ ಹೇಳಿದುದರ ಸಾರಾಂಶವಿಷ್ಟು, ಈಶ್ವರನು ದ್ವೈತಾತ್ಮಕವಾದ ಈ ಜಗತ್ತನ್ನು ಸೃಜಿಸಿದ್ದಾನೆ. ಇದರಲ್ಲಿರುವ ವಸ್ತುವನ್ನೇ ಜೀವನು ತನ್ನ ಇಚ್ಛೆಯಂತೆ ವಿಭಾಗಿಸಿ ಹೊಸ ವಸ್ತ್ರ ಎಂಬಂತೆ ಮಾಡಿಕೊಂಡು ಭೋಗಿಸುತ್ತಿದ್ದಾನೆ. ಜಗನ್ನಿರ್ಮಾಣಕ್ಕೆ ಮಾಯಾವೃತ್ತಿರೂಪವಾದ ಈಶ್ವರ ಸಂಕಲ್ಪವು ಸಾಧನ. ಇದರ ಭೋಗಕ್ಕೆ ಮನೋವೃತ್ತಿರೂಪವಾದ ಜೀವನ ಸಂಕಲ್ಪವು ಸಾಧನ. ಈಶ್ವರನು ನಿರ್ಮಿಸಿದ ವಜ್ರವೇ ಮೊದಲಾದ ವಸ್ತು ಒಂದೇ ಬಗೆಯಾದರೂ ಭೋಕ್ತೃವಾದ ಜೀವನು ಬಹು ವಿಧವಾದ ಸಂಕಲ್ಪದಿಂದ ಅದನ್ನು ನಾನಾವಿಧದಲ್ಲಿ ಬಳಸಿಕೊಂಡು ಭೋಗಿಸುತ್ತಿದ್ದಾನೆ. ಮಲ್ಲಿಗೆಯ ಹೂ ಒಂದೇ ಜಾತಿಯಾದರೂ ಅದನ್ನು ಬಿಡಿ ಬಿಡಿಯಾಗಿ ಹರಡಿ ಆನಂದಿಸಬಹುದು. ಮಾಲೆಯಾಗಿ ಕಟ್ಟಿ ಕೊರಳಿಗೆ ಹಾಕಿಕೊಳ್ಳಬಹುದು. ಇನ್ನೊಂದು ರೀತಿಯಲ್ಲಿ ಪೋಣಿಸಿ ತಲೆಯಲ್ಲಿ ಮುಡಿಯಬಹುದು. ಕೈಯಲ್ಲಿ ಹಿಡಿಯುವ ಹೂವಿನ ಕೋಲನ್ನಾಗಿ ಮಾಡಿಕೊಳ್ಳಬಹುದು. ಅಲ್ಲದೆ ಒಂದೇ ವಸ್ತು ಮನುಷ್ಯರಲ್ಲಿ ನಾನಾ ವಿಧದ ಭಾವನೆಗಳನ್ನುಂಟು ಮಾಡಬಲ್ಲದು. ವಜ್ರವು ಸಿಕ್ಕಿತೆಂದು ಒಬ್ಬನಿಗೆ ಹರ್ಷವಾದರೆ, ತನಗೆ ದೊರಕದೆ ತಪ್ಪಿಹೋಯಿತೆಂದು ಇನ್ನೊಬ್ಬನಿಗೆ ಸಿಟ್ಟು ಬರಬಹುದು. ಹೊಟ್ಟೆಕಿಚ್ಚು ಉಂಟಾಗಬಹುದು. ವಿರಕ್ತನಾದ ಸನ್ಯಾಸಿಯು ಅದನ್ನು ಒಂದು ಕಲ್ಲು ಹರಳೆಂದು ಉಪೇಕ್ಷೆಯಿಂದ

ಕಾಣಬಹುದು. ಹೀಗೆ ಒಂದೇ ವಜ್ರಮಣಿಯು ಹರ್ಷ, ಕೋಪ, ಅಸೂಯೆ, ಉಪೇಕ್ಷೆಗಳಿಗೆ ನಿಮಿತ್ತವಾಗುತ್ತದೆ(೨೧-೨೨). ಈಶ್ವರನು ಸೃಷ್ಟಿಸಿದ ವಜ್ರದ ರೂಪವು ಏಕಪ್ರಕಾರವಾದರೂ ಮನುಷ್ಯನು ಸೃಷ್ಟಿಸಿಕೊಂಡ ಹರ್ಷಾದಿಗಳು ಅನೇಕ ಪ್ರಕಾರವಾಗಿ ಬಿಡುತ್ತವೆ. ಇದಕ್ಕೆ ಇನ್ನೊಂದು ಉದಾಹರಣೆಯನ್ನು ಕೊಡಬಹುದು. ಒಬ್ಬ ಸ್ತ್ರೀಯನ್ನೇ ಬೇರೆ ಬೇರೆ ಜನರು ತಮ್ಮ ತಮ್ಮ ದೃಷ್ಟಿಭೇದದಿಂದ ಅನೇಕ ರೀತಿಯಲ್ಲಿ ಕಾಣುತ್ತಾರೆ. ಗಂಡನು ಅವಳನ್ನು ಮಡದಿಯೆಂದೂ, ಮಾವನು ಸೊಸೆಯೆಂದೂ, ಗಂಡನ ತಂಗಿಯು ಅವಳನ್ನು ನಾದಿನಿಯೆಂದೂ, ಆತನ ಸೋದರನ ಹೆಂಡತಿಯು ಓರಗಿತ್ತಿಯೆಂದೂ ತಿಳಿಯುತ್ತಾರಲ್ಲವೇ? ಹೀಗೊಂದು ನೀತಿ ಶ್ಲೋಕವಿದೆ -

**ಪರಿವ್ರಾಟ್ಕಾಮುಕಶುನಾಮೇಕಸ್ಯಾಂ ಪ್ರಮದಾತನೌ ।**
**ಕುಣಪಃ ಕಾಮಿನೀ ಭಕ್ಷ್ಯಮಿತಿ ತಿಸ್ರೋ ವಿಕಲ್ಪನಾಃ ॥**

''ಒಬ್ಬ ತರುಣಿಯ ದೇಹವನ್ನೇ ಸಂನ್ಯಾಸಿಯು ಹೆಣವೆಂದೂ, ಕಾಮುಕನು ಕಾಮಿನಿಯೆಂದೂ, ನಾಯಿಯು ಭಕ್ಷ್ಯವೆಂದೂ ತಿಳಿಯುತ್ತಾರೆ. ಮಾನವರಿಗೆ ಮೂರು ಬಗೆಯ ಭಾವನೆಗಳು ಒಂದೇ ವಸ್ತುವಿನಲ್ಲಿ ಉದಿಸುತ್ತವೆ'' (೨೩). ಒಳ್ಳೆಯದು, ಇವೆಲ್ಲವೂ ಪ್ರತಿಯೋಗಿಗಳಾದ ಜನರ ವಿಕಲ್ಪ ಜ್ಞಾನಗಳು. ಜ್ಞಾನಗಳು ಬೇರೆ ಬೇರೆಯಾದರೂ ವಸ್ತುವಿನ ಆಕಾರ ಒಂದೇ ಸರಿಯಷ್ಟೆ. ಆ ತರುಣಿಯ ದೇಹವು ಈಶ್ವರ ನಿರ್ಮಿತವಾಗಿ ಏಕರೂಪವಾಗಿರುತ್ತದೆ. ಅದರಲ್ಲಿ ಮನುಷ್ಯನು ಯಾವುದನ್ನೂ ಸೃಷ್ಟಿಸಿಲ್ಲ, ಯಾವುದನ್ನೂ ನಿರ್ಮಿಸಿಲ್ಲ, ಮನುಷ್ಯನಿಗಾದ ಭಾವನೆಗಳು ಭಿನ್ನವಾದ ಮಾತ್ರದಿಂದ ದೇಹದಲ್ಲಿ ಯಾವ ರೂಪ ಭೇದವೂ ಆಗುವುದಿಲ್ಲ. ಹೀಗಿರುವಾಗ ಮನುಷ್ಯನ ಸೃಷ್ಟಿ ಯಾವುದಿದೆ? (೨೪) ಹಾಗಲ್ಲ; ಭಾವನೆಯೆನ್ನುವುದು ಜ್ಞಾನವೇ ಸರಿಯಷ್ಟೆ. ಜ್ಞಾನವು ಭಿನ್ನವಾದ ಮೇಲೆ ಜ್ಞಾನಕ್ಕೆ ವಿಷಯವಾದ ಜ್ಞೇಯವೂ ಭಿನ್ನವಾಗುತ್ತದೆ. ಮಾಂಸ ಮೂಳೆ ಚರ್ಮಾದಿಗಳಿಂದ ಕೂಡಿದ ತರುಣಿಯೇ ಬೇರೆ. ಅವಳು ಚಕ್ಷುರಾದಿ ಇಂದ್ರಿಯಗಳಿಗೆ ಗೋಚರಳು. ಮನಸ್ಸಿಗೆ ಮಾತ್ರ ಗೋಚರವಾಗುವ ಮನೋಮಯಿಯಾದ ತರುಣಿಯೇ ಬೇರೆ. ಈ ಮನೋಮಯಿಯಾದ ತರುಣಿಯನ್ನು ನಿರ್ಮಿಸತಕ್ಕವನು ಮನುಷ್ಯ. ಅವನೇ ಜೀವಾತ್ಮ. ಮಾಂಸಮಯಿಯಾದವಳು ಒಬ್ಬಳೇ. ಮನೋಮಯಿಯಾದವಳು ಅನೇಕ

(೨೫). ಇರಲಿ, ಭ್ರಾಂತಿ, ಸ್ವಪ್ನ, ಮನೋರಾಜ್ಯದ ಕಲ್ಪನೆ, ಸ್ಮೃತಿ ಇವುಗಳಲ್ಲಿ ಮಾಂಸಮಯೀಮೂರ್ತಿ ಇರುವುದಿಲ್ಲ. ಅಲ್ಲಿ ಮನೋಮಯವಸ್ತುವನ್ನು ಒಪ್ಪಬಹುದು. ಆದರೆ ಜಗತ್ತಿನಲ್ಲಿ ಬೇರೆ ಬೇರೆ ಜನರು ನೋಡುವಾಗ ಈಶಸೃಷ್ಟವಾದ ವಸ್ತು ಒಂದೇ ಆಗಿರುತ್ತದೆ. ವಿರಕ್ತನಾದ ಸಂನ್ಯಾಸಿ, ಕಾಮುಕ, ನಾಯಿಗಳು ನೋಡಿದಾಗ ಅವರ ಭಾವನೆಗಳು ಭಿನ್ನವಾಗುವುದೇ ಹೊರತು ಭಾವನೆಗೆ ವಿಷಯವಾದ ತರುಣಿ ಒಬ್ಬಳೇ ಸರಿ (೨೬). ಅದೇನೋ ನಿಜ; ಆದರೆ ಜ್ಞೇಯವಾದ ವಸ್ತುವನ್ನು ಕಂಡಾಗ ನೋಡುವವನ ಮನಸ್ಸು ಆ ವಸ್ತುವಿನ ಎಂದರೆ ಜ್ಞಾನವಿಷಯದ ಆಕೃತಿಯನ್ನು ಧರಿಸುತ್ತದೆ. ಮನಸ್ಸು ಆಯಾ ವಸ್ತುವಿನ ಆಕಾರವಾಗಿ ಪರಿಣಮಿಸುತ್ತದೆ. ಇದನ್ನು ಭಾಷ್ಯಕಾರರಾದ ಶ್ರೀಶಂಕರಾಚಾರ್ಯರೂ, ವಾರ್ತಿಕಕಾರರಾದ ಸುರೇಶ್ವರಾಚಾರ್ಯರೂ ಹೇಳಿದ್ದಾರೆ. ಇದು ನಮ್ಮ ಕಪೋಲ ಕಲ್ಪಿತವಾದ್ದಲ್ಲ (೨೭). ಭಾಷ್ಯಕಾರರು ಹೇಳಿರುವುದು ಹೀಗೆ - ಕರಗಿಸಿದ ತಾಮ್ರವನ್ನು ಒಂದು ಅಚ್ಚಿಗೆ ಹೊಯ್ದರೆ, ಆ ತಾಮ್ರವು ಅಚ್ಚಿನ ಆಕಾರವನ್ನೇ ಧರಿಸಿಬಿಡುತ್ತದೆ. ಹಾಗೆಯೇ ರೂಪಾದಿ ವಿಷಯಗಳನ್ನು ಕಂಡಾಗ ಚಿತ್ತವು ಆ ವಸ್ತುವಿನ ಆಕಾರವನ್ನು ಧರಿಸಿಬಿಡುತ್ತದೆ. ಅದೇ ಆ ವಸ್ತುವಿನ ಪ್ರತ್ಯಕ್ಷತೆ. ಇಲ್ಲೊಂದು ಶಂಕೆಯುಂಟು. ದೃಷ್ಟಾಂತವಾಗಿ ಹೇಳಿದ ತಾಮ್ರವು ಮೂರ್ತವಸ್ತು. ಅದನ್ನು ಕಣ್ಣಿಂದ ನೋಡಬಹುದು, ಮುಟ್ಟಬಹುದು. ಅದು ಬೆಂಕಿಯಿಂದ ಕರಗುತ್ತದೆ. ಕರಗಿದ ದ್ರವವನ್ನು ಅಚ್ಚಿನಲ್ಲಿ ಹೊಯ್ದರೆ ಅಚ್ಚು ಆ ತಾಮ್ರವನ್ನು ಅಲ್ಲಲ್ಲಿ ತಡೆದು ಘಾತಿಸುತ್ತದೆ. ಅನಂತರ ತಾಮ್ರವು ತಣ್ಣಗಾಗಿ ಅಚ್ಚಿನ ಆಕಾರವನ್ನು ತಳೆಯುತ್ತದೆ. ನಮ್ಮ ಮನಸ್ಸು - ಚಿತ್ತ - ಬುದ್ಧಿ ಯಾವುದಾದರೂ ಮೂರ್ತವಸ್ತುವಲ್ಲ. ಅದೇನೂ ಕಾಣುವುದಿಲ್ಲ. ಅದನ್ನು ಮುಟ್ಟಲು ಶಕ್ಯವಿಲ್ಲ. ಅದು ಕರಗಿ ತಾಮ್ರದಂತೆ ಅಚ್ಚಿನಲ್ಲಿ ಹರಿದು ತಣ್ಣಗಾಗಿ ವಿಷಯಾಕಾರದ ಮೂರ್ತಿಯಾಗುತ್ತದೆಯೆ? ಇದು ಸರಿಯಾದ ದೃಷ್ಟಾಂತವಲ್ಲ - ಎಂದರೆ - ಇನ್ನೊಂದು ದೃಷ್ಟಾಂತವನ್ನು ನೋಡೋಣ. ಬೆಳಕು ರೂಪದ ವ್ಯಂಜಕ. ಅದು ಮೂರ್ತವಾದ ಘಟದ ಮೇಲೆ ಬಿದ್ದು ಘಟಾಕಾರವನ್ನು ತಳೆದು ಘಟವನ್ನು ಜ್ಞೇಯವನ್ನಾಗಿ ಮಾಡುತ್ತದೆ. ಬೆಳಕು ಘಟದ ವ್ಯಂಜಕ. ಹಾಗೆಯೇ ಬುದ್ಧಿಯು ಸರ್ವಾರ್ಥಪ್ರಕಾಶಕವಾಗಿದೆ. ಇಲ್ಲಿ ಬೆಳಕು ಘಟದ ಆಕಾರವನ್ನು ಪ್ರಕಾಶಿಸಿ ಅದರ ಆಕಾರವನ್ನು ತಾನು ತಳೆಯುತ್ತದೆ. ಇದರಲ್ಲಿ ಯಾವ ಸಂದೇಹವೂ ಇಲ್ಲವಷ್ಟೆ (೨೮-೨೯).

ಈ ಅಭಿಪ್ರಾಯವನ್ನೇ ವಾರ್ತಿಕಕಾರರು ಸ್ಪಷ್ಟಪಡಿಸಿದ್ದಾರೆ. ಜೀವನು ಪ್ರಮಾತೃ. ಆತನ ಮಾನವು ( ಆಭಾಸವಾದ ಅಂತಃಕರಣ ಪ್ರವೃತ್ತಿಯು) ಮೇಯವಾದ -ಜ್ಞೇಯವಾದ - ಮೇಯದೊಡನೆ ಸಂಬದ್ಧವಾಗಿ ಮೇಯದ ಆಕಾರವನ್ನು ತಳೆದು ಬಿಡುತ್ತದೆ ಎಂದರೆ - ಮೇಯವಾದ ಘಟಾದ್ಯಾಕಾರಕ್ಕೆ ಸಮವಾದ ಆಕಾರವನ್ನು ತಳೆಯುತ್ತದೆ: ಇಲ್ಲಿ ವ್ಯತ್ಯಾಸವೇನೆಂದರೆ, ಜ್ಞಾನವು ಜ್ಞೇಯವಾದ ವಿಷಯದ ಆಕಾರವನ್ನು ತಳೆಯುತ್ತದೆಯೆಂದು ಹಿಂದೆ ಹೇಳಿದೆ. ಈಗಲಾದರೋ ಜ್ಞಾನವು ಜ್ಞೇಯವಾದ ವಿಷಯಕ್ಕೆ ಸದೃಶವಾದ ಆಕಾರವನ್ನು ತಳೆಯುತ್ತದೆ ಎಂದಿದೆ(೩೦). ಹೀಗಿರುವಾಗ ಫಲಿತವಾದದ್ದು ಇಷ್ಟು- ಘಟಾದಿ ವಿಷಯಗಳು ಎರಡು. ಒಂದು ಮೃನ್ಮಯ. ಇನ್ನೊಂದು ಮನೋಮಯ. ಮೃನ್ಮಯ ಘಟವು ಪ್ರಮಾಣವಾದ ಚಕ್ಷುರಿಂದ್ರಿಯಕ್ಕೆ ಗೋಚರಿಸುತ್ತದೆ. ಮನೋಮಯವು ಸಾಕ್ಷಿಚೈತನ್ಯಕ್ಕೆ ಗೋಚರಿಸುತ್ತದೆ. ಇದೇ ಸಾಕ್ಷಿಭಾಸ್ಯ. ಇವುಗಳಲ್ಲಿ ಜೀವನ ಬಂಧನಕ್ಕೆ ಕಾರಣವಾದದ್ದು ಮನೋಮಯ ಪ್ರಪಂಚ. ಬುದ್ಧಿಗೆ ಗೋಚರವಾದ್ದರಿಂದಲ್ಲವೆ ಅದು ನಮಗೆ ವ್ಯಾಮೋಹವನ್ನು ಉಂಟುಮಾಡುತ್ತದೆ? ಬುದ್ಧಿ ಗೋಚರವಾಗದಿದ್ದರೆ ಅದು ನಮಗೆ ಏನನ್ನೂ ಮಾಡುವುದಿಲ್ಲ. ಹೀಗೆ ಅನ್ವಯ ವ್ಯತಿರೇಕಗಳಿಂದ ಪರ್ಯಾಲೋಚಿಸಿದಾಗ ಜೀವಸೃಷ್ಟ ಜಗತ್ತೇ ಬಂಧನಕಾರಿಯೆಂಬುದು ಸ್ಪಷ್ಟವಾಗಿದೆ. ಸುಖದುಃಖಗಳು ಹುಟ್ಟುವುದು ಮನೋಮಯದಿಂದ. ಇದಿಲ್ಲದಿದ್ದರೆ ಸುಖವೂ ಇಲ್ಲ, ದುಃಖವೂ ಇಲ್ಲ(೩೧-೩೨). ಇದನ್ನು ಇನ್ನೊಂದು ರೀತಿಯಲ್ಲಿ ದೃಢಪಡಿಸಬಹುದು. ಸ್ವಪ್ನದಲ್ಲಿ ಕಾಣಿಸುವ ಕಾಮಿನೀ - ಮುಂತಾದವು ಸುಖ ದುಃಖಗಳನ್ನುಂಟು ಮಾಡುತ್ತವೆ. ಆಗ ಬಾಹ್ಯಾರ್ಥವು ಇರುವುದಿಲ್ಲ. ಸುಷುಪ್ತಿ, ಸಮಾಧಿ, ಮೂರ್ಛಾವಸ್ಥೆಗಳಲ್ಲಿ ಬಾಹ್ಯಾರ್ಥಗಳಿದ್ದರೂ ಸುಖದುಃಖಗಳಾಗುವುದಿಲ್ಲ. ಇನ್ನೊಂದು ದೃಷ್ಟಾಂತವನ್ನು ನೋಡೋಣ. ಪ್ರೀತಿಪಾತ್ರನಾದ ಮಗನು ದೂರ ದೇಶಕ್ಕೆ ಹೋಗಿದ್ದಾನೆಂದು ತಿಳಿಯಿರಿ. ಆಗ ಮನೆಯಲ್ಲಿರುವ ತಂದೆಯು ಅವನ ವಿಷಯವನ್ನೇ ಚಿಂತಿಸುತ್ತಿರುತ್ತಾನೆ. ಯಾವನಾದರೊಬ್ಬ ವಂಚಕನು ಬಂದು '' ನಿನ್ನ ಮಗನು ಒಂದು ಅಪಘಾತಕ್ಕೆ ಸಿಕ್ಕಿ ಸತ್ತುಹೋದನು'' ಎಂದು ಸುಳ್ಳು ಹೇಳುತ್ತಾನೆ. ಆ ಮಾತನ್ನು ಕೇಳಿ ತಂದೆಯು ಅಳುತ್ತಾನೆ. ಅವನ ದುಃಖಕ್ಕೆ ಎಣೆಯೇ ಇರುವುದಿಲ್ಲ. ಇವನ ದುಃಖಕ್ಕೆ ಬಾಹ್ಯಾರ್ಥವು ಕಾರಣವಾಗಲಿಲ್ಲ. ಅದೇ ಮಗನು ಒಂದು ವೇಳೆ ಸತ್ತು ಹೋಗಿದ್ದರೂ ಆ ಸುದ್ದಿಯು

ತಿಳಿಯದಿದ್ದರೆ ತಂದೆಯು ಅಳುವುದಿಲ್ಲ. ಏಕೆಂದರೆ ಮನೋಮಯನಾದ ಪುತ್ರನು ಇವನಿಗೆ ಇದ್ದೇ ಇರುತ್ತಾನೆ. ಆದ್ದರಿಂದ, ಬಂಧಕ್ಕೆ ಕಾರಣವಾದದ್ದು ಮನೋಮಯ ಪ್ರಪಂಚವೇ ಸರಿ(೩೩-೩೫). ಹಾಗಾದರೆ ಬೌದ್ಧರ ವಿಜ್ಞಾನ ವಾದವನ್ನೇಕೆ ಒಪ್ಪಬಾರದು? ಬಂಧ ಹೇತುವಾದದ್ದು ವಿಜ್ಞಾನವೇ ಹೊರತು ಬಾಹ್ಯವಸ್ತುವಲ್ಲವೆಂದು ನೀವು ಹೇಳುತ್ತೀರಿ. ಆಗ ಬಾಹ್ಯವಸ್ತುವನ್ನೊಪ್ಪುವುದೇ ಬೇಡ. ವಿಜ್ಞಾನವಾದದ ಪ್ರಕಾರ ಜಗತ್ತೆಲ್ಲವೂ ಮಾನಸ ಪ್ರಪಂಚವೇ ಆಗಿದೆ. ಅದನ್ನೇ ವೇದಾಂತಿಗಳೂ ಅಂಗೀಕರಿಸಬಹುದಲ್ಲವೆ? ಇಲ್ಲ, ಬಾಹ್ಯಾರ್ಥಗಳೇ ಇಲ್ಲದಿದ್ದರೆ ಮನೋಮಯ ವಸ್ತುಗಳು ಎಲ್ಲಿಂದ ಬರುತ್ತವೆ? ಈಶ್ವರ ಸೃಷ್ಟವಾದ ಬಾಹ್ಯಪ್ರಪಂಚ ಇದೆ. ಆದ್ದರಿಂದ ಜೀವನು ಕಲ್ಪಿಸಿಕೊಂಡ ಮಾನಸಪ್ರಪಂಚವು ಬಂಧನಕಾರಿ. ಆದ್ದರಿಂದ, ವೇದಾಂತಿಗಳು ವಿಜ್ಞಾನವಾದಕ್ಕೆ ಇಳಿಯುವ ಪ್ರಸಂಗವೇ ಇಲ್ಲ(೩೬). ಇಲ್ಲೊಂದು ಶಂಕೆ ಹುಟ್ಟಬಹುದು. ಹೃದಯದಲ್ಲಿ ಮಾನಸಪ್ರಪಂಚವನ್ನು ಸಾಧಿಸುವುದಕ್ಕಾಗಿ ಮಾತ್ರ ಬಾಹ್ಯಪ್ರಪಂಚವನ್ನು ಒಪ್ಪಿಕೊಂಡಂತಾಯಿತು. ಮಾನಸಪ್ರಪಂಚವು ಅನಾದಿಯಾದ ಪೂರ್ವ ಸಂಸ್ಕಾರಗಳಿಂದ ಹುಟ್ಟುತ್ತದೆ ಎನ್ನುತ್ತೇವೆ. ಆಗ ಬಾಹ್ಯ ಪ್ರಪಂಚವು ವ್ಯರ್ಥವೇ ಆಗುವುದಲ್ಲವೆ? ಹಾಗಲ್ಲ; ಬಾಹ್ಯಪ್ರಪಂಚವಿದೆಯೆನ್ನುವುದು ಶ್ರುತಿ ಸಿದ್ಧವಾಗಿದೆ. ಪ್ರತ್ಯಕ್ಷಸಿದ್ಧವೂ ಆಗಿದೆ. ಹಿಂದೆ ಹೇಳಿದ ತೈತ್ತಿರೀಯಶ್ರುತಿಯಲ್ಲಿ ಆಕಾಶ, ವಾಯು - ಮುಂತಾದವು ಹುಟ್ಟಿದವು ಎಂದು ಸ್ಫುಟವಾಗಿ ತಿಳಿಸಿದೆ. ಆದ್ದರಿಂದ, ಬಾಹ್ಯಪ್ರಪಂಚವಿಲ್ಲವೆನ್ನುವುದಾಗುವುದಿಲ್ಲ. **''ಮಾನಾಧೀನಾ ಮೇಯಸಿದ್ಧಿಃ''** - ಎಂಬ ಶಾಸ್ತ್ರೀಯ ನ್ಯಾಯ ಉಂಟು. ಪ್ರಮಾಣವಿದೆ ಯಾದ್ದರಿಂದ ಬಾಹ್ಯ ಪ್ರಪಂಚವಿದೆ ಎನ್ನುತ್ತೇವೆ. ಅದಕ್ಕೆ ಪ್ರಯೋಜನವೇನು? ಎಂಬ ಆಕ್ಷೇಪ ಸರಿಯಲ್ಲ. ಹಾಗೆ ಆಲೋಚಿಸಿದರೆ ಮಾನಸ ಪ್ರಪಂಚದಲ್ಲಿಯೂ ಇಷ್ಟೊಂದು ಪ್ರಾಣಿಗಳು, ಜಡವಸ್ತುಗಳೂ ಅವುಗಳ ನಾನು ವೈವಿಧ್ಯಗಳು ಏಕೆ ಇವೆಯೆಂಬ ಪ್ರಶ್ನೆಗೆ ಉತ್ತರವಿರುವುದಿಲ್ಲ(೩೭).

ಇದುವರೆಗಿನ ವಿಚಾರದಿಂದ ಸಿದ್ಧವಾದದ್ದು ಇಷ್ಟು, ಈಶ್ವರನಿಂದ ಬಾಹ್ಯ ಪ್ರಪಂಚವು ಮಾಯಾಶಕ್ತಿಯನ್ನಾಶ್ರಯಿಸಿ ನಿರ್ಮಿತವಾಗಿದೆ. ಮನುಷ್ಯನು ಅದನ್ನು ನೋಡಿ ಪ್ರೀತಿದ್ವೇಷಗಳಿಂದ ಬಂಧನದಲ್ಲಿ ಸಿಕ್ಕಿಕೊಳ್ಳುತ್ತಾನೆಂದು ವೇದಾಂತ ಗ್ರಂಥಗಳು ಸಾರುತ್ತವೆ. ಸೂಕ್ಷ್ಮವಾಗಿ ಪರಿಶೀಲಿಸಿದರೆ ಈ ಬಾಹ್ಯ ಪ್ರಪಂಚವು ನೇರವಾಗಿ ಬಂಧಕಾರಣವಲ್ಲ. ಇದರಲ್ಲಿ ವ್ಯಾಮೋಹವನ್ನಿಟ್ಟು ಮಾನವನು

ತನ್ನಲ್ಲಿಯೇ ಒಂದು ಮಾನಸಸೃಷ್ಟಿಯನ್ನು ಮಾಡಿಕೊಳ್ಳುತ್ತಾನೆ. ಈ ಮಾನಸಸೃಷ್ಟಿ ಜೀವನದೇ. ಇದೇ ಬಂಧ ಹೇತು - ಎಂದು. ಇದರ ಮೇಲೆ ಇನ್ನೊಂದು ಪ್ರಶ್ನೆ ಹುಟ್ಟುತ್ತದೆ. ಮನೋಮಯ ಪ್ರಪಂಚವೇ ಸಂಸಾರಕ್ಕೆ ಹೇತುವಾದರೆ ಆತ್ಮಜ್ಞಾನದಿಂದ ಉಪಯೋಗವೇನೂ ಇಲ್ಲ. ಯೋಗಾಭ್ಯಾಸದಿಂದ ಸಮಾಧಿಯನ್ನು ಪಡೆಯಲಾದೀತು. ಸಮಾಧಿ ಸ್ಥಿತಿಯಲ್ಲಿ ಈ ಮಾನಸಪ್ರಪಂಚವು ಇರುವುದಿಲ್ಲ. ಏವಂಚ ಯೋಗಾಭ್ಯಾಸದಿಂದ ನಮಗೆ ಮೋಕ್ಷವು ಸಿಗುವುದಾದರೆ ಜ್ಞಾನಪರ್ಯಂತ ಏಕೆ ಹೋಗಬೇಕು? ಎಷ್ಟಾದರೂ ಆತ್ಮಜ್ಞಾನವನ್ನು ಸಂಪಾದಿಸುವುದು ಅತ್ಯಂತ ಕಠಿನವಾದದ್ದು. ಅದಕ್ಕಿಂತ ಯೋಗ ಸಾಧನೆಯೇ ಸುಲಭ. "**ಅರ್ಕೇ ಚೇತ್ ಮಧು ವಿಂದೇತ ಕಿಮರ್ಥಂ ಪರ್ವತಂ ವ್ರಜೇತ್**" - 'ಹತ್ತಿರದಲ್ಲಿಯೇ ಜೇನುತುಪ್ಪವು ಸಿಗುವಾಗ ಪರ್ವತಕ್ಕೆ ಹೋಗಿ ಅಲೆದಾಡುವುದೇಕೆ?' ಈ ಪ್ರಶ್ನೆಗೆ ಉತ್ತರವೇನು?(೩೮). ಅದಕ್ಕೆ ಉತ್ತರ ಇದು. ಯೋಗಸಾಧನೆಯಿಂದ ಪ್ರಾಪ್ತವಾಗುವ ಸಮಾಧಿಯಲ್ಲಿ ದ್ವೈತವು ಅಡಗಿಹೋಗುವುದು ನಿಜ. ಆದರೆ ಇದರಿಂದ ದೊರಕುವ ಶಾಂತಿಯು ತಾತ್ಕಾಲಿಕವಾದದ್ದೋ - ಶಾಶ್ವತವಾದದ್ದೋ? ತಾತ್ಕಾಲಿಕವೆಂಬುದು ಸ್ಪಷ್ಟವಾಗಿದೆ. ಸಮಾಧಿ ಮುಗಿದ ಮೇಲೆ ಮತ್ತೆ ದ್ವೈತಪ್ರಪಂಚಕ್ಕೆ ಇಳಿಯಲೇ ಬೇಕು. ಆದ್ದರಿಂದ ಮತ್ತೆ ಸಂಸಾರ ಪುನರ್ಜನ್ಮ ಮುಂತಾದದ್ದು ತಪ್ಪುವುದೇ ಇಲ್ಲ. ನಾವು ಗಳಿಸಬೇಕಾದದ್ದು ಶಾಶ್ವತವಾದ ಮುಕ್ತಿ, ಪುನರ್ಜನ್ಮವಿಲ್ಲದ ಸ್ಥಿತಿ. ಅದು ಮಾತ್ರ ಬ್ರಹ್ಮಜ್ಞಾನವಾಗದೇ ಲಭಿಸುವುದೇ ಇಲ್ಲವೆಂದು ವೇದಾಂತವು ಉದ್ಘೋಷಿಸಿದೆ.

**ಜ್ಞಾತ್ವಾ ದೇವಂ ಮುಚ್ಯತೇ ಸರ್ವಪಾಶೈಃ,** (ಶ್ವೇ.ಉ.೧-೮;೨-೧-೧೨.೧೩)
**ಜ್ಞಾತ್ವಾ ಶಿವಂ ಶಾಂತಿಮತ್ಯಂತಮೇತಿ ॥** (ಶ್ವೇ.ಉ.೪-೧೪)
**ಯದಾ ಚರ್ಮವದಾಕಾಶಂ ವೇಷ್ಟಯಿಷ್ಯಂತಿ ಮಾನವಾಃ ।**
**ತದಾ ದೇವಮವಿಜ್ಞಾಯ ದುಃಖಸ್ಯಾಂತೋ ಭವಿಷ್ಯತಿ ॥**
(ಶ್ವೇ.ಉ.೬-೨೦)

(ಜನರು ಯಾವಾಗ ಆಕಾಶವನ್ನು ಬಟ್ಟೆಯಂತೆ ಉಟ್ಟುಕೊಳ್ಳುತ್ತಾರೋ ಆಗ ಬ್ರಹ್ಮವನ್ನರಿಯದೇ ದುಃಖವು ಶಾಂತವಾಗುತ್ತದೆ ಎಂದು ತಾತ್ಪರ್ಯ)

ಮುಂತಾದ ವೇದಾಂತ ವಾಕ್ಯಗಳು ಈ ವಿಷಯದಲ್ಲಿ ಡಿಂಡಿಮ ಬಾರಿಸಿವೆ

(೩೯). ಬ್ರಹ್ಮಜ್ಞಾನವಾದರೂ ಈಶಸೃಷ್ಟವಾದ ಈ ಜಗತ್ತೇನೂ ಕರಗಿ ಹೋಗುವುದಿಲ್ಲ! ಇದು ಇದ್ದೇ ಇರುತ್ತದೆ. ಆದರೆ "ಇದು ಸತ್ಯವಾದ್ದಲ್ಲ, ಇದು ಮಿಥ್ಯೆ" ಎಂಬುದು ದೃಢವಾಗಿ ಚಿತ್ತದಲ್ಲಿ ನೆಲೆಸಿದರೆ ಸಾಕು. ಅದರಿಂದ ಪರಬ್ರಹ್ಮವು ಅದ್ವಯವಾದದ್ದು ಎಂಬ ಜ್ಞಾನವು ಹುಟ್ಟುವುದಕ್ಕೆ ಬಾಧೆ ಇಲ್ಲ. ಅದ್ವೈತವಾದಿಯ ಅಭಿಪ್ರಾಯವು ಇದೇ ಆಗಿರುತ್ತದೆ (೪೦). ದ್ವೈತವು ಮಿಥ್ಯೆಯೆಂದು ತಿಳಿಸಿಕೊಡುವುದೇ ಅದ್ವೈತ ಶಾಸ್ತ್ರದ ಉದ್ದೇಶವಾಗಿರುತ್ತದೆ. ದ್ವೈತವನ್ನು ನಿವಾರಿಸುವುದಲ್ಲ. ಏಕೆಂದರೆ, ಪ್ರಳಯಕಾಲದಲ್ಲಿ ದ್ವೈತವು ತಾನಾಗಿಯೇ ನಿವೃತ್ತವಾಗಿಬಿಡುತ್ತದೆ. ಅನಂತರ ಪುನಃ ದ್ವೈತದ ಸೃಷ್ಟಿಯಾಗುತ್ತದೆ. ಅದ್ವೈತ ಶಾಸ್ತ್ರವಿಲ್ಲದಿದ್ದರೆ ಆಗ ಅದನ್ನು ಬೋಧಿಸುವ ಶಾಸ್ತ್ರವೂ ಇಲ್ಲ, ಗುರುವೂ ಇಲ್ಲ- ಎಂಬ ಪರಿಸ್ಥಿತಿಯುಂಟಾಗುತ್ತದೆ. ಆದ್ದರಿಂದ ಶ್ರುತಿಯು ದ್ವೈತದ ಮಿಥ್ಯಾತ್ವವನ್ನು ಮಾತ್ರ ಬೋಧಿಸುತ್ತದೆ. ಅದರ ತಳಹದಿಯ ಮೇಲೆ ಅದ್ವೈತ ಶಾಸ್ತ್ರವೂ ಹೊರಟಿದೆ. ಶಾಸ್ತ್ರವೂ ಗುರುವೂ ಇಲ್ಲದೇ ಹೋದಲ್ಲಿ ಈ ದ್ವೈತವು ಮಿಥ್ಯೆ ಎನ್ನುವುದು ಎಂದಿಗೂ ಮುಮುಕ್ಷುವಿಗೆ ತಿಳಿಯದೇ ಹೋಗುವುದು. ಮಿಥ್ಯೆಯೆಂದು ತಿಳಿಯಲು ಮಾನವಪ್ರಯತ್ನವು ನಡೆಯುವುದೇ ಇಲ್ಲ. ಪ್ರಯತ್ನವು ನಡೆದರೂ ಗುರು ಶಾಸ್ತ್ರಗಳಿಲ್ಲದೆ ನಿಶ್ಚಯ ಜ್ಞಾನವಾಗುವುದೇ ಇಲ್ಲ(೪೧). ದ್ವೈತವು ತನ್ನ ಪಾಡಿಗೆ ಇದ್ದುಕೊಂಡಿರಲಿ. ಅದು ಮಿಥ್ಯೆಯೆಂದು ತಿಳಿಯಲು ಅದೇನೂ ಬಾಧಕವಲ್ಲ. ಆ ದ್ವೈತವು ಇದ್ದುದರಿಂದಲೇ ಗುರು ಶಿಷ್ಯ ಪರಂಪರೆ ಇರುತ್ತದೆ. ಶಾಸ್ತ್ರ ಗ್ರಂಥಗಳೂ ಇರುತ್ತವೆ. ದ್ವೈತವಿಲ್ಲದೆ ಗುರು ಎಲ್ಲಿರುತ್ತಾನೆ? ಆದ್ದರಿಂದ, ಈ ದ್ವೈತವು ಅದ್ವೈತ ಜ್ಞಾನಕ್ಕೆ ಉಪಯುಕ್ತವೇ ಆಗಿದೆ. ಅದನ್ನು ಎಂದಿಗೂ ನಾವು ದ್ವೇಷಿಸುವುದಿಲ್ಲ(೪೨). ಇದಿಷ್ಟು ಈಶ್ವರ ನಿರ್ಮಿತ ದ್ವೈತದ ವಿಷಯವಾಯಿತು. ಜೀವನು ನಿರ್ಮಿಸಿಕೊಂಡಿರುವ ದ್ವೈತವು ಶಾಸ್ತ್ರೀಯ, ಅಶಾಸ್ತ್ರೀಯ - ಎಂದು ಎರಡು ವಿಧವಾಗಿದೆ. ಬ್ರಹ್ಮತತ್ತ್ವವನ್ನು - ಪರಮಾರ್ಥವನ್ನು ಅರಿಯುವವರೆಗೆ ಶಾಸ್ತ್ರೀಯವಾದ ದ್ವೈತವನ್ನು ಸ್ವೀಕರಿಸಲೇ ಬೇಕು (೪೩). ಪ್ರತ್ಯಗಾತ್ಮನಾಗಿರುವ ಜೀವಾತ್ಮನೇ ಪರಬ್ರಹ್ಮವೆಂಬುದನ್ನು ವಿವೇಚಿಸುವ ಶಾಸ್ತ್ರವು ಶಾಸ್ತ್ರೀಯವಾದ ದ್ವೈತ. ಇದು ಮಾನಸವಾದ ದ್ವೈತ ಜಗತ್ತು. ಪರಮಾರ್ಥತತ್ತ್ವ ತಿಳಿದ ಮೇಲೆ ಈ ವಿವೇಚನೆಯನ್ನೂ ತ್ಯಜಿಸಿಬಿಡಬೇಕು ಎಂದು ಶ್ರುತಿಯು ಹೇಳಿದೆ. ವಿವಿಧ ವೇದಾಂತ

ಶಾಸ್ತ್ರಗಳನ್ನೋದಿ ಮತ್ತೆಮತ್ತೆ ವಿಚಾರಮಾಡಿ ತತ್ತ್ವಜ್ಞಾನಿಯಾದವನು ಆ ಶಾಸ್ತ್ರವೆಲ್ಲವೂ ಇನ್ನು ಪ್ರಯೋಜನಕಾರಿಯಲ್ಲವೆಂದು ತ್ಯಜಿಸಿಬಿಡಬೇಕು. ರಾತ್ರಿಯ ಹೊತ್ತು ದಾರಿಯನ್ನು ತಿಳಿಯುವುದಕ್ಕಾಗಿ ಸೌದೆಯ ಸೀಳುಗಳನ್ನು ಕಟ್ಟೆಮಾಡಿದ ದಂದಿಯನ್ನು ಪ್ರಯಾಣಿಕರು ಬೆಂಕಿ ಹೊತ್ತಿಸಿ ಹಿಡಿದುಕೊಂಡು ಹೋಗುತ್ತಾರೆ. ಬೆಳಗಾದ ಮೇಲೆ ಆ ದಂದಿಗಳಿಂದ ಪ್ರಯೋಜನವೇನು? ಅದನ್ನು ಎಸೆದು ಬಿಡುತ್ತಾರಲ್ಲವೇ? ತತ್ತ್ವಜ್ಞಾನವಾದ ಮೇಲೆ ಈ ಶಾಸ್ತ್ರ ಗ್ರಂಥಗಳಿಂದ ಯಾವ ಫಲವೂ ಇಲ್ಲ(೪೪-೪೫).

**ಗ್ರಂಥಮಭ್ಯಸ್ಯ ಮೇಧಾವೀ ಜ್ಞಾನವಿಜ್ಞಾನತತ್ಪರಃ ।**
**ಪಲಾಲಮಿವ ಧಾನ್ಯಾರ್ಥೀ ತ್ಯಜೇದ್ ಗ್ರಂಥಮಶೇಷತಃ ॥**

(ಬ್ರಂ.ಬಿಂ.ಉ.೧೮)

ಶಾಸ್ತ್ರಗ್ರಂಥಗಳನ್ನು ಅಭ್ಯಾಸ ಮಾಡಿ ಶಾಸ್ತ್ರಜ್ಞಾನದೊಡನೆ ಬ್ರಹ್ಮಜ್ಞಾನವನ್ನು ಸಂಪಾದಿಸಿಕೊಂಡಿರುವ ಬುದ್ಧಿಶಾಲಿಯು ಆ ಗ್ರಂಥಗಳೆಲ್ಲವನ್ನೂ ತ್ಯಜಿಸಿಬಿಡಬೇಕು. ಬತ್ತವನ್ನು ಕುಟ್ಟಿ ಅಕ್ಕಿಯನ್ನು ತೆಗೆದುಕೊಂಡ ಮೇಲೆ ಬತ್ತದ ಹೊಟ್ಟನ್ನು ಎಸೆಯುವಂತೆ ಗ್ರಂಥಗಳನ್ನು ದೂರಕ್ಕೆ ತಳ್ಳಬೇಕು (೪೬)

**ತಮೇವ ಧೀರೋ ವಿಜ್ಞಾಯ ಪ್ರಜ್ಞಾಂ ಕುರ್ವೀತ ಬ್ರಾಹ್ಮಣಃ ।**
**ನಾನುಧ್ಯಾಯಾದ್ ಬಹೂನ್ ಶಬ್ದಾನ್ ವಾಚೋವಿಗ್ಲಾಪನಂ ಹಿ ತತ್॥**

(ಮುಂ.ಉ.೨-೨-೫)

ಧೀಮಂತನಾದ ಪುರುಷನು ಆ ಪರಮಾತ್ಮನ ಸ್ವರೂಪವನ್ನರಿತು ಬ್ರಹ್ಮಜ್ಞಾನಿಯಾದ ಮೇಲೆ ಆತ್ಮಜ್ಞಾನತತ್ಪರನಾಗಿ ಇದ್ದು ಬಿಡಬೇಕು. ವಾದ ವಿವಾದಗಳಿಗಾಗಿ ಬಹಳ ಶಬ್ದಗಳನ್ನು ಬಳಸಬಾರದು. ಯಾರೊಡನೆಯೂ ವಾದಕ್ಕೆ ಇಳಿಯಬಾರದು. ವಾದ ಮಾಡುವುದೆಂದರೆ ವಾಗ್ದೇವಿಗೆ ವೃಥಾ ಆಯಾಸವನ್ನು ಕೊಟ್ಟಂತೆಯೇ ಸರಿ (೪೭).

ಅದ್ವೈತಾತ್ಮನನ್ನು ತಿಳಿದು ಕೃತ್ಯಕೃತ್ಯನಾಗಬೇಕಾದ ಸಾಧಕನು ಕ್ರಮವಾಗಿ ದ್ವೈತದ ಗೊಂದಲದಿಂದ ತನ್ನನ್ನು ಬಿಡುಗಡೆಮಾಡಿಕೊಳ್ಳಬೇಕಾಗುತ್ತದೆ. ಈ ದ್ವೈತವು ಈಶ್ವರ ನಿರ್ಮಿತ, ಜೀವನಿರ್ಮಿತ - ಎಂದು ಎರಡು ವಿಧ. ಈಶ್ವರ ನಿರ್ಮಿತ ದ್ವೈತವೆಂದರೆ ಈ ಜಗತ್ತು. ಶರೀರ ಮೊದಲಾದದ್ದೆಲ್ಲವೂ ಸೇರುತ್ತದೆ. ಅದರಿಂದ ಬಿಡುಗಡೆಯಾಗಲು ಶಕ್ಯವಿಲ್ಲ. ಅದು ತನ್ನ ಪಾಡಿಗೆ ಇದ್ದುಕೊಳ್ಳಲಿ.

ಅದನ್ನು ದ್ವೇಷಿಸುವುದೇಕೆ? - ಎಂದು ಇದುವರೆಗೆ ಹೇಳಿದ್ದಾಗಿದೆ. ಅನಂತರ ಜೀವನಿರ್ಮಿತ ದ್ವೈತವು ಶಾಸ್ತ್ರೀಯ, ಅಶಾಸ್ತ್ರೀಯ - ಎಂದು ಎರಡು ವಿಧ. ಗುರು, ಶಿಷ್ಯ, ಉಪದೇಶ, ವೇದಾಂತಶಾಸ್ತ್ರ- ಇವೆಲ್ಲವೂ ಜೀವನಿರ್ಮಿತವಾದ ದ್ವೈತ. ಇದರಲ್ಲಿ ಗಟ್ಟಿಯಾಗಿ ಅಂಟಿಕೊಂಡಿರುವುದು ಶಾಸ್ತ್ರಗ್ರಂಥ. ಇದು ಆತ್ಮಜ್ಞಾನಪರ್ಯಂತ ಆವಶ್ಯಕ. ಆತ್ಮಜ್ಞಾನವಾದ ಮೇಲೆ **''ಫಲಾಲಮಿವ ಧಾನ್ಯಾರ್ಥೀತ್ಯಜೇದ್ ಗ್ರಂಥಾನಶೇಷತಃ''** (ಪಂ.೪-೪೭) ಎಂದು ಹೇಳಿದ್ದಾಯಿತು. ಇದಕ್ಕೆ ಆಧಾರವಾಗಿ ಇನ್ನೊಂದು ಶ್ರುತಿವಾಕ್ಯವನ್ನೀಗ ಉದಾಹರಿಸಲಾಗುವುದು. ಮುಂಡಕೋಪನಿಷತ್ತು ಹೇಳುತ್ತದೆ. **''ತಮೇವೈಕಂ ಜಾನಥ ಆತ್ಮಾನಮ್, ಅನ್ಯಾ ವಾಚೋ ವಿಮುಂಚಥ, ಅಮೃತಸ್ಯೈಷ ಸೇತುಃ''** (ಮುಂ.ಉ. ೨-೨-೫). ಆ ಪ್ರತ್ಯಗಾತ್ಮನೊಬ್ಬನನ್ನು ತಿಳಿಯಿರಿ. ಆಮೇಲೆ ಅದರ ವಿದ್ಯೆಯಾದ ಶಾಸ್ತ್ರವೆಲ್ಲವನ್ನೂ ಪರಿತ್ಯಜಿಸಿರಿ. ಈ ಆತ್ಮನು ಮೋಕ್ಷಕ್ಕೆ ಸೇತುವಿದ್ದಂತೆ - ಎಂದು ಇದರ ಅರ್ಥ. ಪ್ರತ್ಯಗಾತ್ಮನೆಂದರೆ ನಮ್ಮ ನಿಮ್ಮ ಎಲ್ಲರ ಆತ್ಮನಾದವನು. ಆತ್ಮಜ್ಞಾನವೇ ಮನುಷ್ಯನ ಪರಮ ಲಕ್ಷ್ಯ. ಅದು ದೊರಕಿದ ಮೇಲೆ ಇನ್ನಾವುದರಿಂದಲೂ ಆಗಬೇಕಾದ್ದೇನೂ ಇಲ್ಲ. ಅಲ್ಲದೆ ಆತ್ಮಜ್ಞಾನಕ್ಕೆ ಉಪಕಾರಿಗಳಾಗಲೆಂದು ವಿದ್ವಾಂಸರು ನಿರ್ಮಿಸಿದ ಗ್ರಂಥಗಳೇ ಈ ಶಾಸ್ತ್ರಗಳು. ಇವೆಲ್ಲವೂ ಜೀವ ಕಲ್ಪಿತ ದ್ವೈತಕ್ಕೆ ಸೇರುತ್ತವೆ. ಆದ್ದರಿಂದಲೇ **'ಯಚ್ಛೇದ್ ವಾಙ್ಮನಸೀ ಪ್ರಾಜ್ಞಃ'** (ಕಠ. ಉ. ೧-೩-೧) - ಎನ್ನುತ್ತದೆ ಕಠೋಪನಿಷತ್ತು. **ವಾಕ್** = ವಾಣಿಯನ್ನೂ ಇತರ ಇಂದ್ರಿಯಗಳನ್ನೂ ಸಹ ಮನಸ್ಸಿನಲ್ಲಿ ಲಯಿಸಬೇಕು - ಎಂದು ಈ ವಾಕ್ಯದ ಅರ್ಥ. ಅನಂತರ ಮನಸ್ಸು ಮೊದಲಾದ್ದನ್ನು ಶಾಂತವಾದ ಆತ್ಮನಲ್ಲಿ ಲಯಗೊಳಿಸಬೇಕು - ಎಂದು ವಿಸ್ತೃತವಾದ ವಿಷಯವಿದೆ. ಪ್ರಕೃತದಲ್ಲಿ ನಮಗೆ ಬೇಕಾದದ್ದು - ಮಾತಾಡುವುದನ್ನು ಜ್ಞಾನಿಯು ನಿಲ್ಲಿಸಿಬಿಡುತ್ತಾನೆ. ಅನಾವಶ್ಯಕವಾಗಿ ಒಂದು ಮಾತನ್ನೂ ಆಡುವುದಿಲ್ಲ - ಎಂಬುವುದು. ಈ ರೀತಿಯಲ್ಲಿ ಇನ್ನೂ ಅನೇಕ ಶ್ರುತಿ ವಚನಗಳನ್ನು ಉದಾಹರಿಸಬಹುದು (೪೮). ಇನ್ನು ಜೀವಕಲ್ಪಿತವಾದ ಅಶಾಸ್ತ್ರೀಯ ದ್ವೈತವಿದೆಯಲ್ಲ, ಅದು ತೀವ್ರ, ಮಂದ - ಎಂದು ಎರಡು ವಿಧ. ಕಾಮ, ಕ್ರೋಧ, ದ್ವೇಷ, ಅಸೂಯೆ, ಲೋಭ - ಮುಂತಾದ ಕೆಟ್ಟ ಗುಣಗಳು ತೀವ್ರವಾದವು. ಇವೆಲ್ಲವೂ ಜೀವನಿಗೆ ಅಧೀನವಾದವು. ಆದರೆ ಇವನ್ನು ಜಯಿಸುವುದು ಕಷ್ಟ ಅಲ್ಲದೆ ಇವು ಕೂಡಲೇ ನಾನಾ ವಿಧವಾದ

ಅನಿಷ್ಟ ಫಲಗಳನ್ನು ತಂದೊಡ್ಡಿಬಿಡುತ್ತವೆ. ಈ ಕಾರಣದಿಂದ ಇವನ್ನು ತೀವ್ರವೆಂದು ಗಣಿಸಿದ್ದಾರೆ. ಮಂದವಾದ ದ್ವೈತವೆಂದರೆ ಮನೋರಾಜ್ಯ! ಮನಸ್ಸಿನಲ್ಲಿಯೇ ಗುಣಿಸಿ ಹೀಗಾಗಬೇಕು, ಹೀಗೆ ಮಾಡಬೇಕು - ಎಂದು ಕಲ್ಪಿಸಿಕೊಳ್ಳುವುದು ಮನುಷ್ಯನ ಸ್ವಭಾವ. ಅದು ಫಲವನ್ನು ನೀಡಬಹುದು ಅಥವಾ ನೀಡದಿರಬಹುದು. ಅದು ಕೂಡಲೇ ಸಿದ್ಧವಾದ್ದಲ್ಲ. ಭವಿಷ್ಯತ್ತಿಗೆ ಸೇರಿದ ಮನೋರಾಜ್ಯ. ಅದೇನೂ ಅಷ್ಟು ಅನರ್ಥಕಾರಿಯಲ್ಲವಾದ್ದರಿಂದ ಮಂದವಾದ ದ್ವೈತವೆನ್ನಬಹುದು (೪೯). ಇದುವರೆಗೆ ಹೇಳಿದ ಶಾಸ್ತ್ರೀಯ, ಅಶಾಸ್ತ್ರೀಯ - ಎಂಬ ಎರಡು ಬಗೆಯ ದ್ವೈತವೂ ತ್ಯಾಜ್ಯವಾದದ್ದು. ಇದು ತತ್ತ್ವಬೋಧಕ್ಕೆ ವಿಘ್ನಕಾರಿ. ಮುಮುಕ್ಷುವಾದವನು ಶಮದಮಾದಿಸಾಧನ ಸಂಪತ್ತುಗಳನ್ನು ಗಳಿಸಿಕೊಳ್ಳಲೇಬೇಕು. ಆತನು ಶಾಂತನೂ ಸಮಾಹಿತನೂ ಆಗಿರುವುದು ಅತ್ಯಾವಶ್ಯಕ. ಕಾಮ ಕ್ರೋಧಾದಿಗಳು ಮನಸ್ಸಿನ ದುರ್ಗುಣಗಳು. ಶಾಂತನಾಗಬೇಕೆಂದರೆ ಈ ಕಾಮ ಕ್ರೋಧಾದಿಗಳನ್ನು ಗೆದ್ದಿರಬೇಕೆಂದು ಅರ್ಥ. ಯಾವಾತನು ಸಮಾಹಿತನಾಗಿ ತೃಪ್ತನಾಗಿರುವನೋ ಆತನು ಮನೋರಾಜ್ಯವನ್ನು ಗೆದ್ದವನೇ ಸರಿ. ಪ್ರಪಂಚ ಈಶ್ವರ ಕಲ್ಪಿತವಾದ ಜಗತ್ತೆಂಬ ದ್ವೈತವು ನಮಗೆ ಅಜೇಯವಾದದ್ದು. ಅದು ಇದ್ದುಕೊಂಡಿರಲಿ. ಬಾಧೆ ಏನೂ ಇಲ್ಲ. ಮುಮುಕ್ಷುವು ಮಾತ್ರ ಅದರ ಗೊಡವೆಯನ್ನು ಹಚ್ಚಿಕೊಳ್ಳದೆ ದೂರ ಉಳಿಯಬೇಕು - ಎಂದರೆ ತನಗೆ ಅಧೀನವಾದ ಜೀವಕಲ್ಪಿತದ್ವೈತವನ್ನು ದೂರ ಮಾಡಬೇಕೆಂದು ತಾತ್ಪರ್ಯ (೫೦). ''ಆತ್ಮಜ್ಞಾನವಾಗಬೇಕಾದರೆ ಮೊದಲು ಈ ಜೀವಕಲ್ಪಿತ ದ್ವೈತವನ್ನು ತ್ಯಜಿಸಬೇಕೆಂದು ಹೇಳಿದ್ದೀರಿ. ಆತ್ಮಜ್ಞಾನವಾದ ಮೇಲೆ, ಅನಂತರ ಮತ್ತೆ ಈ ಕಾಮ, ಕ್ರೋಧಗಳಿಗೆ ಒಳಗಾಗಿರಬಹುದಲ್ಲವೆ?'' - ಎಂದು ಯಾರಾದರೂ ಕೇಳಬಹುದು. ಓಹೊ! ಹಾಗಲ್ಲ, ಆತ್ಮಜ್ಞಾನವಾದ ಮೇಲೆ ಈ ಕಾಮ, ಕ್ರೋಧಾದಿಗಳಿರುವುದೇ ಇಲ್ಲ. ಆತ್ಮಜ್ಞಾನಿಗೆ ಇವೆಲ್ಲವೂ ಅಂಟಿಕೊಳ್ಳುವ ಪ್ರಶ್ನೆಯೇ ಇಲ್ಲ. ಅವು ಇನ್ನೂ ಉಳಿದಿದ್ದರೆ ಅವನು ಮುಕ್ತನಲ್ಲವೆಂದೇ ಹೇಳಬಹುದು. ಮುಕ್ತಿಯೆನ್ನುವುದು ಸತ್ತ ಮೇಲೆಯೇ ದೊರಕತಕ್ಕದ್ದಲ್ಲ. ಬದುಕಿರುವಾಗಲೇ ಮುಕ್ತನಾಗಬಹುದು. ಅವನನ್ನು ಜೀವನ್ಮುಕ್ತನೆನ್ನುತ್ತಾರೆ. ಜೀವನ್ಮುಕ್ತಿಯು ಶಾಸ್ತ್ರಸಂಮತವಾದದ್ದು. ಜೀವನ್ಮುಕ್ತನಿಗೆ ಕಾಮಕ್ರೋಧಾದಿಗಳ ಕ್ಲೇಶವೇ ಇರುವುದಿಲ್ಲ. ಈ ಕ್ಲೇಶಗಳಿನ್ನೂ ಇದ್ದರೆ ಅವನು ಜೀವನ್ಮುಕ್ತನಲ್ಲವೆಂದೇ ತಿಳಿಯಬೇಕು (೫೧). ''ನನಗೆ ಈ ಜೀವನ್ಮುಕ್ತಿಯು

ಬೇಕಾಗಿಲ್ಲ. ಮುಖ್ಯವಾಗಿ ನನಗೆ ಈ ಸಂಸಾರದ ಕೋಟಲೆ ತಪ್ಪಬೇಕು. ಪುನಃ ನನಗೆ ಈ ಜನ್ಮ ಬೇಡ. ಆದ್ದರಿಂದ ನನಗೆ ವಿದೇಹ ಮುಕ್ತಿಯೊಂದೆ ಸಾಕು'' - ಎಂದೊಬ್ಬನು ಹೇಳಬಹುದು. ಅವನಿಗೆ ನಾವು ಹೇಳುವುದೇನೆಂದರೆ - ''ಅಯ್ಯಾ, ನಿನಗೆ ಈ ಕಾಮಕ್ರೋಧಗಳನ್ನು ಬಿಡಲು ಇಷ್ಟವಿಲ್ಲ. ಆದ್ದರಿಂದ ಜೀವನ್ಮುಕ್ತಿಬೇಡವೆಂದೂ ಸಾಯುವವರೆಗೂ ಸಂಸಾರವಿರಲಿ, ಕಾಮೋಪ ಭೋಗಗಳಿರಲಿ - ಎಂದೂ ಹೇಳುತ್ತೀಯೆ. ನಿನ್ನ ಅಭಿಪ್ರಾಯ ತಿಳಿಯಿತು. ನಿನಗೆ ಭೋಗತೃಷ್ಣೆ ಬಹಳ ಇದೆ. ನೀನು ಸ್ವರ್ಗವನ್ನು ಬಯಸತಕ್ಕವನು, ಮುಕ್ತಿಯನ್ನಲ್ಲ! ಇಷ್ಟನ್ನು ತಿಳಿದುಕೊ. ಸ್ವರ್ಗವೂ ಶಾಶ್ವತವಲ್ಲ. ''**ಕ್ಷೀಣೇ ಪುಣ್ಯೇ ಮರ್ತ್ಯಲೋಕಂ ವಿಶಂತಿ**'' ಎನ್ನುತ್ತದೆ ಶಾಸ್ತ್ರ. ಪುಣ್ಯವು ಕ್ಷಯಿಸಿದ ಕೂಡಲೇ ಸ್ವರ್ಗದಿಂದ ಕೆಳಗಿಳಿಯಲೇಬೇಕು. ಮತ್ತೆ ಈ ಭೂಲೋಕದಲ್ಲಿ ಹುಟ್ಟುವುದು ಎಂದಿಗೂ  ನಿನಗೆ ತಪ್ಪುವುದಿಲ್ಲ. ಜೀವನ್ಮುಕ್ತಿ ಯಾಕೆ ಬೇಡ ನಿನಗೆ? ನಿನಗೆ ಸಂಸಾರದ ವ್ಯಾಮೋಹ ತಪ್ಪಿಲ್ಲವೆಂದು ಸ್ಪಷ್ಟವಾಗುತ್ತದೆ (೫೨). ಒಂದು ವೇಳೆ ನೀನು ಹೀಗೆನ್ನಬಹುದು. ''ಸ್ವಾಮಿ ನನಗೆ ಸ್ವರ್ಗವೂ ಬೇಡ. ನೀವು ಹೇಳಿದಂತೆ ಪುಣ್ಯಕ್ಷಯವಾದೊಡನೆ ಸ್ವರ್ಗದಿಂದ ಕೆಳಗೆ ಇಳಿಯಬೇಕಾಗುತ್ತದೆ. ಅಲ್ಲದೆ ಸ್ವರ್ಗದಲ್ಲಿಯೂ ತಾರತಮ್ಯವಿದೆಯೆಂದು ಕೇಳಿದ್ದೇನೆ. ಅಲ್ಲಿಯೂ ಪುಣ್ಯಾತಿಶಯದಿಂದ ''ಅತಿಶಯ'' ಎಂಬ ದೋಷ ಇದ್ದೇ ಇರುತ್ತದೆಯಂತೆ. ದೇವತೆಗಳಿಗಿಂತ ದೇವೇಂದ್ರನ ಸುಖ ನೂರರಷ್ಟು ಅಧಿಕ. ದೇವೇಂದ್ರನ ಸುಖಕ್ಕಿಂತ ಬೃಹಸ್ಪತಿಯ ಸುಖ ಇನ್ನೂ ನೂರರಷ್ಟು ಅಧಿಕ. ಹೀಗಿರುವುದರಿಂದ ಸ್ವರ್ಗಕ್ಕೆ ಹೋದರೂ ಮನಸ್ಸಿಗೆ ತೃಪ್ತಿ ಇರುವುದಿಲ್ಲ. ಇನ್ನೂ ಅತಿಶಯವಾದ ಸುಖವು ಬೇಕೆನಿಸುತ್ತದೆ. ಆದ್ದರಿಂದ ನನಗೆ ಸ್ವರ್ಗವೂ ಬೇಡ. ಪುನರ್ಜನ್ಮವೂ ಬೇಡ. ಸತ್ತ ಮೇಲೆ ನನಗೆ ಮೋಕ್ಷವಾಗಬೇಕು. ನನಗೆ ''ವಿದೇಹ ಮುಕ್ತಿಯೊಂದೇ ಇಷ್ಟ'' - ಎಂದು. ಹಾಗಾದರೆ ಈ ಕಾಮ, ಭೋಗ, ಲಾಲಸೆ ಸ್ವಯಂದುಷ್ಟವಾದದ್ದೆಂದು ನಿನಗೆ ಗೊತ್ತೇ ಇದೆ. ಈ ಕಾಮಕ್ರೋಧಾದಿ ದೋಷಗಳು ತೊಲಗಿ ಹೋಗಲಿ. ಆದಷ್ಟು ಬೇಗ ಇವು ನಾಶವಾಗಲಿ - ಎಂದೇಕೆ ಹೇಳುವುದಿಲ್ಲ? ಜೀವನ್ಮುಕ್ತಿ ಯಾಕೆ ಬೇಡ ನಿನಗೆ?(೫೩). ಇದಕ್ಕೆ ಉತ್ತರವಾಗಿ ಒಬ್ಬನು ತತ್ತ್ವಜ್ಞಾನವಾದ ಮೇಲೆ ಕಾಮಲೋಭಾದಿಗಳನ್ನು ನಿಃಶೇಷವಾಗಿ ಏಕೆ ತೊಡೆಯಬೇಕು? ಅತ್ಯಾಸೆ ಬೇಡವೆಂದು ಒಪ್ಪುತ್ತೇನೆ. ದೇಹವಿರುವವರೆಗೆ ಸ್ವಲ್ಪಮಟ್ಟಿಗೆ ಸುಖಭೋಗ -

ಗಳನ್ನೇಕೆ ಅನುಭವಿಸಬಾರದು? - ಈ ಪ್ರಶ್ನೆಗೆ ಉತ್ತರವೇನೆಂದರೆ, ಆತ್ಮತತ್ತ್ವವನ್ನರಿತ ಮೇಲೂ ನೀನು ಯಥೇಷ್ಟವಾಗಿ ನಡೆಯತಕ್ಕವನು ಎಂದು ಹೇಳಿದಂತಾಗುತ್ತದೆ. ಈ ಆಚರಣೆಯು ಧರ್ಮಶಾಸ್ತ್ರಕ್ಕೆ ವಿರುದ್ಧವಾದುದು. ನೀನು ವಿಧಿ ನಿಷೇಧಗಳನ್ನು ಗೊತ್ತು ಮಾಡಿರುವ ಧರ್ಮಶಾಸ್ತ್ರವನ್ನು ಮೀರಿ ನಡೆಯತಕ್ಕವನು ಎಂದು ಸಿದ್ಧವಾಗುತ್ತದೆ. ಅದ್ವೈತಸ್ವರೂಪವಾದ ಬ್ರಹ್ಮದ ಸತ್ಯತೆಯನ್ನರಿತವನೂ ಯಥೇಷ್ಟವಾಗಿ ನಡೆಯುತ್ತಾನೆ - ಎಂದಾದರೆ ಅಶುಚಿ ವಸ್ತುಗಳನ್ನು ತಿನ್ನುವ ನಾಯಿಗಳಿಗೂ ತತ್ತ್ವಜ್ಞಾನಿಗಳಿಗೂ ವ್ಯತ್ಯಾಸವೇನೆಂದು ಕೇಳಬೇಕಾದೀತು? - ಇದಿಷ್ಟು ಈ ಪ್ರಕರಣದ ೫೪-೫೫ನೇ ಶ್ಲೋಕಗಳ ತಾತ್ಪರ್ಯ. ಇಲ್ಲಿ ಕೆಲವು ವಿಷಯಗಳನ್ನು ಹೇಳಬೇಕಾದ್ದಿದೆ. ಬ್ರಹ್ಮಜ್ಞಾನವು ಪರೋಕ್ಷ, ಅಪರೋಕ್ಷ ಎಂದು ಎರಡು ವಿಧ. ವೇದಾಂತಶಾಸ್ತ್ರವನ್ನು ಕೂಲಂಕಷವಾಗಿ ಅಧ್ಯಯನ ಮಾಡಿದವರಿಗೆ ಸಿದ್ಧಾಂತದ ಸ್ವರೂಪವೇನೆಂದು ಸ್ಪಷ್ಟವಾಗಿ ಗೊತ್ತಾಗುತ್ತದೆ. ಬುದ್ಧಿಯ ಕಸರತ್ತಿನಿಂದ ಗಳಿಸಿಕೊಂಡ ಜ್ಞಾನವಿದು. ಇದು ಹೃದಯಕ್ಕೆ ನಾಟಿ ನರ ನಾಡಿಗಳಲ್ಲಿ ಇಳಿದಿರುವುದಿಲ್ಲ. ಈ ಜ್ಞಾನವು ಪರೋಕ್ಷವಾದದ್ದು. ವಿದ್ವತ್ ಸಭೆಗಳಲ್ಲಿ ವಾದಮಾಡಿ ಜಯಗಳಿಸಲು ಉಪಯುಕ್ತವಾದದ್ದು. ಈ ಜ್ಞಾನವನ್ನು ಪಡೆದವನು ಪರೋಕ್ಷಜ್ಞಾನಿ. ಅವನ ನಡತೆಯಲ್ಲಿ ಕಾಮಕ್ರೋಧ, ಸ್ವಾರ್ಥಾದಿಗಳು ತುಂಬಿಕೊಂಡಿದ್ದರೆ ಆಶ್ಚರ್ಯವಿಲ್ಲ. ಈ ಎರಡು ಶ್ಲೋಕಗಳಲ್ಲಿ ಬ್ರಹ್ಮಜ್ಞಾನಿಯೆಂದರೆ ಇಂತಹ ಪರೋಕ್ಷ ಜ್ಞಾನಿಯೆಂದು ತಿಳಿಯಬೇಕು. ಯಾವಾತನಿಗೆ ಗುರು ದೇವತಾನುಗ್ರಹದಿಂದ ಬ್ರಹ್ಮಜ್ಞಾನವು ಪ್ರಾಪ್ತವಾಗುತ್ತದೆಯೋ, ಹೃದಯದ ಆಳಕ್ಕೆ ಇಳಿದು ಅನುಭವಕ್ಕೆ ಬಂದಿರುತ್ತದೆಯೋ ಅವನು ಅಪರೋಕ್ಷ ಜ್ಞಾನಿ. ಆತನು ಹಿಂದೆ ಹೇಳಿದ ಶಂಕೆಗಳನ್ನು ಎತ್ತುವುದೇ ಇಲ್ಲ. ಆತನು ಶಾಂತನೂ ಸಮಾಹಿತನೂ ಆಗಿರುತ್ತಾನೆ. ಕಾಮಕ್ರೋಧಾದಿಗಳನ್ನು ಅವನು ತ್ಯಜಿಸುತ್ತಾನೆ ಎನ್ನುವುದಕ್ಕಿಂತ ಅವೆಲ್ಲವೂ ತಾನಾಗಿಯೇ ಅವನನ್ನು ಬಿಟ್ಟು ಓಡಿಹೋಗುತ್ತವೆ ಎನ್ನುವುದೇ ಸರಿ. ಆತನಿಗೆ ಯಾವ ವಿಧಿನಿಷೇಧಗಳು ಇಲ್ಲ. ವಿಧಿನಿಷೇಧಗಳಿಗೆ ಅವನು ಪಾತ್ರನೇ ಅಲ್ಲ. ಅವನಲ್ಲಿ ಯಥೇಷ್ಟಾಚರಣೆಯೂ ಇರುವುದಿಲ್ಲ. ಯಾವ ಕೆಟ್ಟಕೆಲಸವೂ ಅವನಿಂದ ನಡೆಯುವುದಿಲ್ಲ. ಎಲ್ಲ ಬಯಕೆಗಳೂ ನೀಗಿ ಹೋದಾಗ, ಅಹಂಕಾರಾದಿಗಳು ತೊಲಗಿ ಹೋದಾಗ, ಅವನು ಯಾವ ಉದ್ದೇಶದಿಂದ ಕೆಟ್ಟಕೆಲಸವನ್ನು ಮಾಡುತ್ತಾನೆ? ತತ್ತ್ವಜ್ಞಾನಿಗೆ ಯಾವ

ಉದ್ದೇಶವೂ ಇರುವುದಿಲ್ಲ. ಪ್ರಾರಬ್ಧಕರ್ಮವು ಸ್ವಲ್ಪ ಉಳಿದಿರುವುದರಿಂದ ಜೀವನ್ಮುಕ್ತನು ದೇಹಯಾತ್ರೆಯೊಂದನ್ನು ನಡೆಸ ಬೇಕಾಗುತ್ತದೆ. ಇನ್ನು ಲೋಕಸಂಗ್ರಹಕ್ಕಾಗಿ ಜ್ಞಾನಿಯು ಕಾರ್ಯೋನ್ಮುಖನಾಗುವುದುಂಟು. ಆದರೂ ಅವನು ದುಷ್ಕೃತ್ಯಗಳಲ್ಲಿ ಎಂದಿಗೂ ತೊಡಗುವುದಿಲ್ಲ.

ಇಲ್ಲೊಂದು ಪ್ರಶ್ನೆ ಹುಟ್ಟುತ್ತದೆ. ಜೀವನ್ಮುಕ್ತನೆಂದ ಮೇಲೆ ಅವನು ಅಪರೋಕ್ಷ ಜ್ಞಾನಿಯೆಂದೇ ಆಗುತ್ತದೆ. ಆತನು ನಿಜವಾಗಿಯೂ ಬ್ರಹ್ಮಜ್ಞಾನಿಯೇ. ಪ್ರಾರಬ್ಧದ ಅವಶೇಷದಿಂದ ದೇಹ ಉಳಿದಿರುತ್ತದೆ. ಜೀವನ್ಮುಕ್ತನೂ ಸಹ ಪ್ರಾರಬ್ಧವಶದಿಂದ ರೋಗಾದಿಕ್ಲೇಶಗಳನ್ನು ಅನುಭವಿಸುತ್ತಾನೆಂಬುದು ಶಾಸ್ತ್ರಸಿದ್ಧವಾಗಿದೆ. ಹಾಗಿರುವಾಗ ಪ್ರಾರಬ್ಧಕರ್ಮದ ವಾಸನಾಬಲದಿಂದಲೇ ಆತನಿಗೆ ಕಾಮ, ಕ್ರೋಧಾದಿಗಳು ಉಂಟಾಗಲು ಅಡ್ಡಿ ಏನಿದೆ? ವಿಷಯಸುಖಾಭಿಲಾಷೆಯೂ ಏಕೆ ಹುಟ್ಟಬಾರದು? ಇದು ಸಮೀಚೀನವಾದ ಪ್ರಶ್ನೆಯೇ ಹೌದು. ಇದಕ್ಕೆ ಯೋಗವಾಸಿಷ್ಠದಲ್ಲಿ ಸಮಾಧಾನವನ್ನು ನೀಡಿದ್ದಾರೆ. ಪ್ರಾರಬ್ಧ, ಆಗಾಮಿ, ಸಂಚಿತ - ಎಂಬ ಮೂರು ಬಗೆಯ ಕರ್ಮಸಂಸ್ಕಾರಗಳನ್ನೂ ಮನುಷ್ಯನೇ ಗಳಿಸಿಕೊಂಡಿರುತ್ತಾನೆ. ಪೂರ್ವಜನ್ಮದ ಸಂಸ್ಕಾರಕ್ಕೆ ದೈವವೆನ್ನುತ್ತಾನೆ. ಅದು ಪುರುಷ ಪ್ರಯತ್ನದಿಂದ ಬಂದದ್ದೇ ಸರಿ. ಆದರೆ ಅದು ಪರೋಕ್ಷ. ಈಗ ನಾವು ಮಾಡುವ ಕರ್ಮವು ಪ್ರತ್ಯಕ್ಷ. ಈ ಪ್ರತ್ಯಕ್ಷವು ದೈವವೆಂಬ ಪ್ರಾಚೀನ ಕರ್ಮಕ್ಕಿಂತ ಪ್ರಬಲವಾದುದು. ಈ ಪೌರುಷದಿಂದ ಪ್ರಾಚೀನ ಕರ್ಮವೆಂಬ ದೈವವನ್ನು ಗೆಲ್ಲಬೇಕು. ಆದ್ದರಿಂದ ಜೀವವಿರುವಾಗಲೇ ಜ್ಞಾನೋದಯ ವಾಗುತ್ತದೆ. ಆಗ ತನ್ನ ಪ್ರಯತ್ನದಿಂದ ಪ್ರಾಚೀನ ಕರ್ಮವನ್ನು ಜಯಿಸಬೇಕು. ಹೀಗೆ ಜೀವನ್ಮುಕ್ತಿಯ ಸ್ಥಿತಿಯಲ್ಲಿಯೇ ಪ್ರಾರಬ್ಧಕರ್ಮವು ಕಾಮಕ್ರೋಧಗಳನ್ನು ಉಂಟುಮಾಡುವ ಸಂದರ್ಭ ಉಂಟು. ಆಗ ಪುರುಷಕಾರದಿಂದ ಆ ಕರ್ಮವಾಸನೆಯನ್ನು ತಳ್ಳಿಹಾಕಬೇಕು - ಎಂಬ ಅಭಿಪ್ರಾಯದಿಂದ ಈ ಎರಡು ಶ್ಲೋಕಗಳು (ಶ್ಲೋಕ ೫೪, ೫೫) ಉಕ್ತವಾಗಿವೆಯೆಂದು ಯೋಚಿಸಲು ಸಾಧ್ಯವಿದೆ. ಆದ್ದರಿಂದಲೇ ಮುಂದಿನ ಶ್ಲೋಕಗಳೂ ಸಮಂಜಸವಾಗಿ ಹೊಂದಿಕೊಳ್ಳುತ್ತವೆ.

ತತ್ತ್ವಜ್ಞಾನವು ಹುಟ್ಟುವ ಮೊದಲು ಕಾಮಕ್ರೋಧಗಳೇ ಮೊದಲಾದ ಮನೋದೋಷಗಳಿಂದ ನೀನು ಕ್ಲೇಶಗಳನ್ನು ಅನುಭವಿಸುತ್ತಿದ್ದೆ. ಈಗ ತತ್ತ್ವಜ್ಞಾನವಾದ ಮೇಲೆ ನೀನು ಕಾಮಕ್ರೋಧಗಳಿಗೆ ಒಳಗಾಗುವುದಾದರೆ

ಆ ಕ್ಲೇಶಗಳೊಡನೆ ಯಥೇಷ್ಟವಾಗಿ ನಡೆಯುತ್ತಿದ್ದೀಯೆ -ಎಂಬ ಲೋಕನಿಂದೆಗೊಳಗಾಗಿ ಹಾಸ್ಯಾಸ್ಪದನಾಗುತ್ತೀಯೆ ! ಈಗ ಅಪಹಾಸ್ಯವನ್ನು ಸಹಿಸಬೇಕಾದ ಇನ್ನೊಂದು ಕ್ಲೇಶ ಗಂಟು ಬೀಳುತ್ತದೆ. ''ಓಹೋ, ನೋಡಿರಿ ಈ ವೇದಾಂತಿಯನ್ನು! ಇವನಿಗೆ ತಲೆ ಕೆಟ್ಟಿದೆ. ಹುಚ್ಚು ಹುಚ್ಚಾಗಿ ನಡೆಯುತ್ತಾನೆ!'' ಎಂದು ಜನರು ನಿನ್ನನ್ನು ನೋಡಿ ಗೇಲಿ ಮಾಡದೇ ಇದ್ದಾರೆ? ಅವರು ನಗುವುದಿಲ್ಲವೆ? ಇದೇ ನಿನ್ನ ಜ್ಞಾನ ವೈಭವದ ಫಲವೆ? (೫೬). ಎಲೈ ಮಾನವ, ಬಹುಕ್ಲೇಶಗಳನ್ನನುಭವಿಸಿ, ಗುರು ಸೇವೆ ಮಾಡಿ ಈಗ ತತ್ತ್ವ-ಜ್ಞಾನಿಯಾಗಿದ್ದೀಯೆ. ಮತ್ತೆ ಪ್ರಾರಬ್ಧಕರ್ಮವಾಸನೆಗೆ ಒಳಗಾಗಿ ಮನಬಂದಂತೆ ನಡೆಯಬೇಡ. ಮಲವನ್ನು ತಿನ್ನುವ ಹಂದಿಯಂತೆ ನಾಯಿಯಂತೆ ಆಗಬೇಡ! ಹಾಗಾಗಲು ಬಯಸಬೇಡ ! ಈ ಕಾಮಕ್ರೋಧಾದಿಗಳನ್ನು ತುಳಿದು ನಿಂತು ಸ್ವತಃ ದೇವತೆಯಾಗಿ ಬಿಡು ! ಜನರು ನಿನ್ನನ್ನು ದೇವರಂತೆ ಪೂಜಿಸುತ್ತಾರೆ (೫೭). ಮೋಕ್ಷಶಾಸ್ತ್ರಗಳಲ್ಲಿ ಇಂದ್ರಿಯಗಳನ್ನು ಗೆಲ್ಲಬೇಕು. ವಿಷಯ ಭೋಗಗಳನ್ನು ತೊರೆಯಬೇಕು ಎಂದು ಬೋಧಿಸಿದ್ದಾರಲ್ಲವೆ? ಕಾಮಾದಿ ವಿಷಯಗಳಲ್ಲಿ ಯಾವ ಯಾವ ದೋಷಗಳಿವೆಯೆಂಬುದನ್ನು ವಿಸ್ತಾರವಾಗಿ ಬಣ್ಣಿಸಿದ್ದಾರೆ. ಆ ದೋಷಗಳೇನೆಂಬುದನ್ನು ಮತ್ತೆ ನೆನೆಸಿಕೊಂಡು ಅವೆಲ್ಲವನ್ನೂ ತೊರೆದು ಸುಖಿಯಾಗು. ಜೀವನ್ಮುಕ್ತನಾಗಿದ್ದೀಯೆ. ಜ್ಞಾನಿಯಾಗಿದ್ದೀಯೆ. ಮತ್ತೆ ದಾರಿ ತಪ್ಪಬೇಡ. ಬ್ರಹ್ಮಾನಂದವನ್ನನುಭವಿಸುತ್ತ ನಿಶ್ಚಿಂತನಾಗಿ ಆತ್ಮಾನಂದದಲ್ಲಿ ಮುಳುಗಿರು (೫೮). ಏವಂಚ ಜೀವನಿರ್ಮಿತವಾದ ಎಂದರೆ ನೀನೇ ನಿರ್ಮಿಸಿಕೊಂಡಿರುವ ಈ ವಿಷಯಗಳೆಂಬ ದ್ವೈತವನ್ನು ಪೂರ್ತಿಯಾಗಿ ತೊರೆದು ಬಿಡು. ಇನ್ನು ಮನೋರಾಜ್ಯವೆಂಬ ದ್ವೈತವಿದೆಯಲ್ಲ! ಸಾಕ್ಷಾತ್ತಾಗಿ ಭೋಗವನ್ನು ತ್ಯಜಿಸಿದರೂ ಮನಸ್ಸಿನಲ್ಲಿ ಕಲ್ಪಿಸಿಕೊಂಡು ಸುಖಿಸಬಹುದೊ? ಈ ಮನೋರಾಜ್ಯವು ತೀವ್ರವಾದ್ದಲ್ಲವೆಂದೂ ಮಂದವೆಂದೂ ನೀವೇ ಹೇಳಿದ್ದೀರಲ್ಲ- ಎಂದರೆ, ಹಾಗಲ್ಲ, ಮನೋರಾಜ್ಯವು ಆ ಕ್ಷಣದಲ್ಲಲ್ಲದಿದ್ದರೂ ಕಾಲಾಂತರದಲ್ಲಿ ಅನರ್ಥಕಾರಿಯೇ. ಇದನ್ನು ಭಗವಂತನು ಗೀತೆಯಲ್ಲಿ ಹೇಳಿದ್ದಾನೆ. ಏನೆಂದರೆ -

**ಧ್ಯಾಯತೋ ವಿಷಯಾನ್ ಪುಂಸಃ ಸಂಗಸ್ತೇಷೂಪಜಾಯತೇ।**

**ಸಂಗಾತ್ ಸಂಜಾಯತೇ ಕಾಮಃ ಕಾಮಾತ್ ಕ್ರೋಧೋಽಭಿಜಾಯತೇ ॥**

(ಭ.ಗೀ. ೩-೯)

ಮನುಷ್ಯನು ಶಬ್ದಾದಿ ವಿಷಯಗಳನ್ನು ಚಿಂತಿಸುತ್ತಿದ್ದರೆ, ಅವುಗಳಲ್ಲಿ ಆಸಕ್ತಿ ಹುಟ್ಟುತ್ತದೆ. ಆಸಕ್ತಿಯೊಡನೆ ಅವು ಬೇಕೆಂಬ ಆಸೆ ಜನಿಸುತ್ತದೆ. ಆಸೆಗೆ ಏನಾದರೂ ಅಡ್ಡಿ ಬಂದೊಡನೆ ಸಿಟ್ಟು ಬರುತ್ತದೆ! ಸಿಟ್ಟು ಬಂದಾಗ ವಿವೇಕ ಮೂಲೆಗೆ ಸರಿಯುತ್ತದೆ. ವಿವೇಕವು ಹೋದ ಮೇಲೆ ಕಲಿತ ಗ್ರಂಥಗಳೂ ಗುರೂಪದೇಶವೂ ಮರೆತು ಹೋಗುತ್ತವೆ. ಅವು ಮರೆತ ಮೇಲೆ ಇನ್ನೇನು ಉಳಿದೀತು? ಬುದ್ಧಿನಾಶವಾದಂತೆಯೇ. ಬುದ್ಧಿನಾಶವಾದ ಮೇಲೆ ಸರ್ವನಾಶ (೫೯). ಹೀಗೆ ಈ ಮನೋರಾಜ್ಯವು ಮಂದವೆನಿಸಿದರೂ ಸರ್ವಾನರ್ಥಗಳಿಗೆ ಮೂಲವಾದದ್ದು. ಇದು ಕಾಮ ಕ್ರೋಧಾದಿಗಳ ಬೀಜ. ಬೀಜಕ್ಕೆ ನೀರೆರೆದರೆ ಅದು ಮೊಳೆತು ಬೆಳೆಯದೇ ಇದ್ದೀತೆ? ಆದ್ದರಿಂದ ಈ ಮನೋರಾಜ್ಯವೆಂಬ ಬೀಜವನ್ನೇ ಕುಟ್ಟಿ ಸುಟ್ಟು ಹಾಕಬೇಕು (೬೦). ಈ ಮನೋರಾಜ್ಯವನ್ನು ಜಯಿಸುವುದಕ್ಕೆ ಉಪಾಯವಿದೆ. ನಿರ್ವಿಕಲ್ಪಕ ಸಮಾಧಿಯೇ ಮನೋ ರಾಜ್ಯವನ್ನು ಜಯಿಸುವ ಮಾರ್ಗ. ಆ ಸಮಾಧಿಯನ್ನೇರುವುದು ಕಠಿಣವೇನೋ ಹೌದು. ಆದರೆ ಸವಿಕಲ್ಪಕ ಸಮಾಧಿಯೇನೂ ಅಷ್ಟು ಕಠಿಣವಾದ್ದಲ್ಲ. ಅದನ್ನು ಅಭ್ಯಾಸಮಾಡುತ್ತಾ ಹೋದರೆ ಕ್ರಮವಾಗಿ ಕಾಮಾದಿಗಳನ್ನು ತಳ್ಳಿ ಹಾಕಿ ನಿರ್ವಿಕಲ್ಪಕಸಮಾಧಿಯನ್ನೇರಲು ಸಾಧ್ಯ. ಮುಖ್ಯವಾಗಿ ಅದನ್ನುಸಾಧಿಸಬೇಕೆಂಬ ದೃಢನಿಶ್ಚಯ ಬೇಕು. ಅಂತಹ ನಿಶ್ಚಯವನ್ನು ಮಾಡಿದರೆ ಮನುಷ್ಯನಿಗೆ ಸಾಧ್ಯವಾಗದೆ ಇರತಕ್ಕದ್ದು ಯಾವುದಿದೆ? (೬೧). ಯಾವಾತನು ದ್ವೈತವನ್ನು ತಳ್ಳಿ ಹಾಕಿ **'ಅಹಂ ಬ್ರಹ್ಮಾಸ್ಮಿ'** ಎಂಬ ತತ್ತ್ವವನ್ನು ತಿಳಿದಿದ್ದಾನೋ ಅಂತಹ ತತ್ತ್ವಜ್ಞಾನಿಗೆ ಕಾಮ ಕ್ರೋಧಾದಿಗಳ ಸುಳಿವಿಲ್ಲದೆ ಚಿತ್ತವು ಶುದ್ಧವಾಗಿರುತ್ತದೆ. ಆತನು ಏಕಾಂತದಲ್ಲಿ ಕುಳಿತು ದೀರ್ಘವಾಗಿ ಪ್ರಣವವನ್ನು ಉಚ್ಚರಿಸುತ್ತಾ ಮನೋರಾಜ್ಯವನ್ನು ಜಯಿಸಬಹುದು. ಮಾತಾಡುವುದು, ನೋಡುವುದು, ಕೇಳುವುದು ಮುಂತಾದವು ಸಮಾಧಿಗೆ ವಿಘ್ನಕಾರಿಗಳು. ಆದ್ದರಿಂದ ಸಾಧಕನಿಗೆ ಏಕಾಂತವಾಸವು ಆವಶ್ಯಕ. ಏಕಾಂತದಲ್ಲಿದ್ದಾಗ ಈ ವಿಘ್ನಗಳ ಕಾಟವಿರುವುದಿಲ್ಲ. ದೀರ್ಘವಾದ ಪ್ರಣವವೆಂದರೆ 'ಓಂಕಾರ'ದ ಉಚ್ಚಾರಣೆಯನ್ನು ದೀರ್ಘಗೊಳಿಸುವುದು. ೬-೮-೧೦-೧೨ ಮಾತ್ರೆಗಳಷ್ಟು ಎಳೆದು ಓಂಕಾರವನ್ನು ಉಚ್ಚರಿಸಿದರೆ ದೀರ್ಘಪ್ರಣವವಾಗುತ್ತದೆ. ಹ್ರಸ್ವಸ್ವರವನ್ನು ಉಚ್ಚರಿಸಲು ಬೇಕಾದ ಕಾಲಕ್ಕೆ ಒಂದು ಮಾತ್ರೆಯೆಂದು ಹೆಸರು. ದೀರ್ಘ ಸ್ವರಕ್ಕೆ ಎರಡು ಮಾತ್ರೆ. ಅದನ್ನು ಎಳೆದು ೧೨ ಮಾತ್ರೆಗಳವರೆಗೂ ಒಯ್ಯಬಹುದು. ಮಕಾರವು

ಅರ್ಧಮಾತ್ರೆ. ಅದಿಲ್ಲಿ ಲೆಕ್ಕಕ್ಕೆ ಬರುವುದಿಲ್ಲ. ದೀರ್ಘಪ್ರಣವದಲ್ಲಿಯೂ ಮಕಾರವು ಅರ್ಧಮಾತ್ರೆಯಾಗಿಯೇ ಇರುತ್ತದೆ (೬೨). ಈ ಪ್ರಕಾರವಾಗಿ ನಿರ್ವಿಕಲ್ಪಕ ಸಮಾಧಿಯನ್ನುಅಭ್ಯಾಸ ಮಾಡುತ್ತಿದ್ದರೆ ಆ ಸಮಯದಲ್ಲಿ ಮನಸ್ಸಿನ ವೃತ್ತಿಗಳೆಲ್ಲವೂ ಅಡಗಿ ಹೋಗುವುದರಿಂದ ಮನೋರಾಜ್ಯವು ಜಿತವಾಗುತ್ತದೆ. ಮೂಕನು ಮಾತಾಡದೆ ಹೇಗಿರುವನೋ ಆ ಸ್ಥಿತಿಯು ಮನಸ್ಸಿಗೆ ಪ್ರಾಪ್ತವಾಗಿ ಅದು ವೃತ್ತಿಶೂನ್ಯವಾಗುತ್ತದೆ. ಈ ವಿಷಯವನ್ನು ಯೋಗವಾಸಿಷ್ಠವೆಂಬ ಗ್ರಂಥದಲ್ಲಿ ವಸಿಷ್ಠರು ವಿಸ್ತಾರವಾಗಿ ವರ್ಣಿಸಿದ್ದಾರೆ (೬೩). (೬೪-೬೫ ನೇ ಶ್ಲೋಕಗಳು ಯೋಗವಾಸಿಷ್ಠದವು). ''ನೇಹ ನಾನಾಸ್ತಿ ಕಿಂಚನ'' (ಬೃ.ಉ.೪-೪-೧೯; ಕಠ.ಉ.೪-೧೧)ಎಂದು ಶ್ರುತಿಯೂ ಹೇಳುತ್ತದೆ. ಅದ್ವಿತೀಯವಾದ ಬ್ರಹ್ಮವನ್ನುಳಿದು ಈ ಜಗತ್ತು ಯಾವುದೂ ಇಲ್ಲವೇ ಇಲ್ಲವೆಂದು ಅದರ ಅರ್ಥ. ಆದ್ದರಿಂದ ಮನೋಗೋಚರವಾದ ಜಗತ್ತೆಲ್ಲವೂ ಇಲ್ಲವಾಗಿ ದೃಶ್ಯಮಾರ್ಜನವಾಯಿತೆಂದರೆ, ಅದೇ ಪರಮೋತ್ಕೃಷ್ಟವಾದ ಸುಖವೆಂದು ತಿಳಿಯಬೇಕು(೬೪). ನಾವು ವೇದಾಂತಶಾಸ್ತ್ರವನ್ನು ತಳಮುಟ್ಟಿ ವಿಚಾರ ಮಾಡಿದ್ದೇವೆ. ಗುರು-ಶಿಷ್ಯರ ಸಂವಾದ ರೂಪದಲ್ಲಿ ಚಿರಕಾಲ ಬೋಧಿಸಿ ತತ್ತ್ವವನ್ನು ತಿಳಿಸಿಕೊಟ್ಟಿದ್ದೇವೆ. ಒಟ್ಟಿನಲ್ಲಿ ಕಾಮಾದಿವಾಸನೆಗಳನ್ನು ಸಂಪೂರ್ಣವಾಗಿ ತೊರೆದು ಶಾಂತನಾಗಿ ಮೌನವನ್ನು ಅವಲಂಬಿಸು. ಮೌನವಾಗಿರುವುದಕ್ಕಿಂತ ಅಧಿಕವಾದ ಪುರುಷಾರ್ಥವು ಇನ್ನೊಂದಿಲ್ಲ ಎನ್ನುವುದು ನಿಶ್ಚಿತ (೬೫). ಇಷ್ಟಾದರೂ ಪ್ರಾರಬ್ಧಕರ್ಮದ ಬಲದಿಂದ ಒಂದೊಂದು ಸಲ ಮನಸ್ಸು ವಿಕ್ಷಿಪ್ತವಾಗಿ ಜಗತ್ತಿನ ಕಡೆಗೆ ತಿರುಗಬಹುದು. ಆಗ ಯೋಗಿಯು ಅಭ್ಯಾಸಪಾಟವದಿಂದ ಮನೋವೃತ್ತಿಯನ್ನು ತಳ್ಳಿ ಮತ್ತೆ ನಿರ್ವಿಕಲ್ಪಕ ಸಮಾಧಿಯನ್ನು ಪಡೆಯಬಹುದು. ಪುರುಷಕಾರದಿಂದ ಮನೋವ್ಯಾಪಾರವನ್ನು ನಿಗ್ರಹಿಸಿ ಮೌನವನ್ನವಲಂಬಿಸಲು ಸಾಧ್ಯವಿದೆ (೬೬). ಯಾರ ಮನಸ್ಸು ವಿಕ್ಷಿಪ್ತಗೊಳ್ಳುವುದಿಲ್ಲವೋ ಮನೋವ್ಯಾಪಾರಗಳೆಲ್ಲವೂ ಲಯಿಸಿಬಿಟ್ಟಿವೆಯೋ ಆತನು ಬ್ರಹ್ಮವಿದನೆನ್ನುವುದು ಔಪಚಾರಿಕ. ಆವನು ಬ್ರಹ್ಮವಿದನಲ್ಲ, ಸ್ವತಃ ಬ್ರಹ್ಮವೇ ಆಗಿರುತ್ತಾನೆ. ಬ್ರಹ್ಮವಿತ್ = ಬ್ರಹ್ಮವನ್ನು ತಿಳಿದವನು. ಈ ಮಾತಿನಿಂದ ಬ್ರಹ್ಮವು ಬೇರೆ. ಬ್ರಹ್ಮವಿದನು ಬೇರೆಯೆಂದಾಗಿ ದ್ವೈತವೇ ಎದ್ದುಕೊಳ್ಳುತ್ತದೆ. ಆದ್ದರಿಂದ ಆತನು ಬ್ರಹ್ಮವೇ ಎಂದು ತಿಳಿಯಬೇಕು. ''ಬ್ರಹ್ಮವೇದ, ಬ್ರಹ್ಮೈವ ಭವತಿ'' (ಮುಂ.ಉ. ೩-೨-೯)

ಎಂದು ಉಪನಿಷತ್ತು ಹೇಳುತ್ತದೆ (೬೭). ಈ ಮಾತನ್ನು ಸ್ವತಃ ವಸಿಷ್ಠರೇ ಹೇಳಿದ್ದಾರೆ. ಏನೆಂದರೆ, ಯಾವಾತನು 'ಬ್ರಹ್ಮವನ್ನರಿತಿದ್ದೇನೆ - ಬ್ರಹ್ಮವನ್ನರಿತಿಲ್ಲ' ಎಂಬ ಎರಡು ಮಾತುಗಳನ್ನೂ ತೊರೆದು ಕೇವಲ ಚೈತನ್ಯಸ್ವರೂಪನಾಗಿ ನಿಲ್ಲುವನೋ ಅವನು ಬ್ರಹ್ಮವೇ ಆಗಿರುತ್ತಾನೆ. ಅವನನ್ನು ಬ್ರಹ್ಮವಿತ್ ಎಂದು ಸಹ ಹೇಳತಕ್ಕದ್ದಲ್ಲ (೬೮). ಏವಂಚ ಜೀವಸೃಷ್ಟವಾದ ಎರಡು ವಿಧ ದ್ವೈತಗಳನ್ನು ತೊರೆದು ಬಿಟ್ಟರೆ ಜೀವನ್ಮುಕ್ತಿಯ ಪರಮಾವಧಿಯನ್ನು ತಲುಪಿದಂತಾಗುವುದು. ಆದ್ದರಿಂದ ಈ ಪ್ರಕರಣದಲ್ಲಿ ಈಶ್ವರ ಸೃಷ್ಟದ್ವೈತ - ಜೀವ ಸೃಷ್ಟ ದ್ವೈತಗಳಿಗಿರುವ ಭೇದವನ್ನು ವಿವೇಚನೆ ಮಾಡಲಾಯಿತು. ಈಶ್ವರ ನಿರ್ಮಿತ ದ್ವೈತವು ತನ್ನ ಪಾಡಿಗೆ ಇದ್ದುಕೊಂಡಿರಲಿ, ನಮಗೆ ಬಾಧೆಯೇನೂ ಇಲ್ಲ. ನಾವೇ ಸೃಷ್ಟಿಸಿಕೊಂಡಿರುವ ಜೀವನಿರ್ಮಿತದ್ವೈತವನ್ನು ತೊರೆದರೆ ಸಾಕು. ಅವನು ಜೀವನ್ಮುಕ್ತನೇ ಸರಿ ಎಂದು ನಿರ್ಣಯಿಸಿಲಾಯಿತು (೬೯).

**ಇಲ್ಲಿಗೆ ದ್ವೈತವಿವೇಕಪ್ರಕರಣವು ಸಮಾಪ್ತವಾಯಿತು**

---

# ೫. ಮಹಾವಾಕ್ಯವಿವೇಕಪ್ರಕರಣ

ಹಿಂದಿನ ಪ್ರಕರಣದಲ್ಲಿ ಜೀವನ್ಮುಕ್ತಿಯ ವಿಚಾರವನ್ನು ಮಾಡಿದ್ದಾಯಿತು. ವೇದಾಂತದಲ್ಲಿ ಪ್ರಸಿದ್ಧವಾದ ನಾಲ್ಕು ಮಹಾವಾಕ್ಯಗಳ ಅರ್ಥವು ಯಾರಿಗೆ ಸ್ಫುಟವಾಗಿ ತಿಳಿದಿದೆಯೋ ಯಾರು ಅದನ್ನು ನಿಃಸಂಶಯವಾಗಿ ತಮ್ಮ ಅನುಭವಕ್ಕೆ ತಂದುಕೊಂಡಿದ್ದಾರೋ ಅವರು ಜೀವನ್ಮುಕ್ತರು. ಅವರಿಗೆ ಜೀವಕಲ್ಪಿತದ್ವೈತವು ಮಿಥ್ಯೆಯೆಂದು ನಿಶ್ಚಯವಾಗಿರುವುದರಿಂದ, ಅದನ್ನು ಸರ್ವವಿಧದಲ್ಲಿಯೂ ಜೀವನ್ಮುಕ್ತರು ತ್ಯಜಿಸಿ ಬಿಟ್ಟಿರುತ್ತಾರೆ. ಆ ಮಹಾವಾಕ್ಯಗಳು ಯಾವುವು? ಅವುಗಳ ಅರ್ಥವೇನೆಂಬುದನ್ನು ತಿಳಿಸುವುದಕ್ಕಾಗಿ ಈ ಪ್ರಕರಣವು ಹೊರಟಿದೆ.

**ಪ್ರಜ್ಞಾನಂ ಬ್ರಹ್ಮ** (ಐ. ಉ. ೫-೧), **ಅಹಂ ಬ್ರಹ್ಮಾಸ್ಮಿ** (ಬೃ. ಉ. ೧-೪-೧೦), **ತತ್ತ್ವಮಸಿ** (ಛಾಂ. ಉ. ೬-೩-೧), **ಅಯಮಾತ್ಮಾ ಬ್ರಹ್ಮ** (ಮಾಂ. ಉ. ೨) ಈ ನಾಲ್ಕು ವಾಕ್ಯಗಳಿಗೆ ಮಹಾವಾಕ್ಯಗಳೆಂದು ಹೇಳುತ್ತಾರೆ. ಈಗ ಮೊದಲು 'ಪ್ರಜ್ಞಾನಂ ಬ್ರಹ್ಮ' (ಐ. ಉ. ೫-೧) ಎಂಬ ವಾಕ್ಯದ ಅರ್ಥವನ್ನು ವಿವರಿಸಲಾಗುವುದು.

ಮನುಷ್ಯನು ಕಾರಣವಾದ ಯಾವ ಮೂಲವಸ್ತುವಿನಿಂದ ಕಣ್ಣಿನ ಮೂಲಕ ನೋಡುವನೋ, ಕಿವಿಯ ಮೂಲಕ ಕೇಳುವನೋ, ಮೂಗಿನಿಂದ ಆಘ್ರಾಣಿಸುವನೋ, ವಾಗಿಂದ್ರಿಯದಿಂದ ಮಾತಾಡುವನೋ, ರಸನೇಂದ್ರಿಯ ದಿಂದ ರುಚಿ - ಅರುಚಿಗಳನ್ನು ತಿಳಿಯುವನೋ ಆ ಮೂಲ ವಸ್ತುವಿಗೆ ಪ್ರಜ್ಞಾನವೆಂದು ಹೆಸರು - ಇಷ್ಟು ಮೊದಲನೆಯ ಶ್ಲೋಕದ ತಾತ್ಪರ್ಯ. ನಾವು ಪಂಚಜ್ಞಾನೇಂದ್ರಿಯಗಳ ಮೂಲಕ ಶಬ್ದಸ್ಪರ್ಶಾದಿವಿಷಯಗಳನ್ನೂ ಪದಾರ್ಥದ ಆಕಾರ, ಗುಣ-ಸ್ವಭಾವಗಳನ್ನೂ ಅರಿಯುತ್ತೇವೆ. ಹಾಗೆಯೇ ಕೇವಲ ಮನಸ್ಸಿನಿಂದಲೇ ಪದಾರ್ಥಗಳನ್ನು ಸ್ಮರಿಸಿಕೊಳ್ಳುತ್ತೇವೆ. ಬುದ್ಧಿಯಿಂದ ವಿಚಾರ ಮಾಡುತ್ತೇವೆ. ಹೀಗೆ ಮನಸ್ಸು ಮತ್ತು ಇಂದ್ರಿಯಗಳ ಮೂಲಕ ನಮಗೆ ನಾನಾ ಜ್ಞಾನಗಳು ಹುಟ್ಟುತ್ತವೆ. ಈ ಜ್ಞಾನಗಳೆಲ್ಲವೂ ಅಂತಃಕರಣದ (ಮನಸ್ಸಿನ) ವೃತ್ತಿಗಳು, ವ್ಯಾಪಾರಗಳು. ಈ ಬಗೆಯ ಜ್ಞಾನವನ್ನು ವೃತ್ತಿಜ್ಞಾನವೆನ್ನುತ್ತಾರೆ. ವೃತ್ತಿಜ್ಞಾನಕ್ಕೆ ಕಾರಣವಾದದ್ದು ಬ್ರಹ್ಮಚೈತನ್ಯ - ಇದೇ ಪರಬ್ರಹ್ಮ. ಇದೇ ಪ್ರಜ್ಞಾನ-ಪ್ರಕೃಷ್ಟಜ್ಞಾನ. ಈ ಚೈತನ್ಯವು ಅಂತಃಕರಣಾವಚ್ಛಿನ್ನವಾಗಿ ವೃತ್ತಿಯನ್ನು ಪ್ರೇರಿಸಿದಾಗ ನೇತ್ರವೇ ಮೊದಲಾದ ಇಂದ್ರಿಯವು ನೋಡುತ್ತದೆ, ಕೇಳುತ್ತದೆ, ನಡೆಯುತ್ತದೆ, ಮಾತಾಡುತ್ತದೆ. ಈ ಇಂದ್ರಿಯಗಳಿಂದಾಗುವ ಜ್ಞಾನಕ್ಕೆ

ಮೂಲಕಾರಣವಾದದ್ದು ಪ್ರಜ್ಞಾನ. ಈ ಪ್ರಜ್ಞಾನವೇ ಬ್ರಹ್ಮ(೧). ಬ್ರಹ್ಮವೆಂದರೆ ಯಾವುದು? ಚತುರ್ಮುಖನೆಂದು ಪ್ರಸಿದ್ಧನಾದ ಬ್ರಹ್ಮ, ದೇವೇಂದ್ರ, ದೇವತೆಗಳೆಂಬ ಉತ್ತಮರಲ್ಲಿಯೂ, ಮನುಷ್ಯರಾದ ಮಧ್ಯಮರಲ್ಲಿಯೂ ಕುದುರೆ, ಗೋವು - ಮೊದಲಾದ ಪಶು-ಪಕ್ಷಿ-ಕೀಟಗಳೆಂಬ ಕನಿಷ್ಠರಲ್ಲಿಯೂ, ಹಾಗೆಯೇ ಆಕಾಶಾದಿ ಪಂಚಭೂತಗಳಲ್ಲಿಯೂ ಏಕಪ್ರಕಾರವಾಗಿ ವ್ಯಾಪಿಸಿರುವ ಯಾವ ಚೈತನ್ಯ ಉಂಟೋ ಅದೇ ಬ್ರಹ್ಮ. ಬ್ರಹ್ಮಾದಿ ದೇವತೆಗಳು ಮನುಷ್ಯರಿಗಿಂತ ಅಧಿಕಸುಖವನ್ನು ಅಧಿಕಜ್ಞಾನವನ್ನು ಅಧಿಕಶಕ್ತಿಯನ್ನು ಪಡೆದವರು. ಅವರು ಸಂಪಾದಿಸಿರುವ ಪುಣ್ಯ ನಮಗಿಂತ ಅಧಿಕವಾದದ್ದು. ಅವರಲ್ಲಿಯೂ ಅರ್ಹತೆಯಲ್ಲಿ ತಾರತಮ್ಯವಿದೆ. ಆದರೂ ಮನುಷ್ಯರ ದೃಷ್ಟಿಯಿಂದ ಅವರು ಹೆಚ್ಚಿನವರಾದ್ದರಿಂದ ಜೀವಿಗಳಲ್ಲಿ ಅವರು ಉತ್ತಮರ ಗುಂಪಿಗೆ ಸೇರಿದವರು. ಮನುಷ್ಯರು ಮಧ್ಯಮರು. ಇವರಲ್ಲಿ ಪುಣ್ಯ-ಪಾಪಗಳ ಸಂಮಿಶ್ರಣವಿದೆ. ಆದ್ದರಿಂದ ಇವರು ದುಃಖವನ್ನು ಹೆಚ್ಚಾಗಿ ಅನುಭವಿಸ ಬೇಕಾಗುತ್ತದೆ. ಇವರ ಜ್ಞಾನ ಶಕ್ತಿಗಳೂ ಅಲ್ಪ. ಇವರು ಮಧ್ಯಮರು. ಉಳಿದ ಪ್ರಾಣಿಗಳೆಲ್ಲವೂ ಮನುಷ್ಯರಿಗಿಂತ ಕೆಳಮಟ್ಟದವು. ಗಿಡ, ಮರ, ಬಳ್ಳಿ ಮೊದಲಾದವನ್ನು ಇಲ್ಲಿ ಸೇರಿಸಿಕೊಳ್ಳಬೇಕು. ಇದಲ್ಲದೆ ಪಂಚ ಮಹಾಭೂತಗಳಿವೆ. ಇದು - ಅದು ಎಂಬ ಭೇದವಿಲ್ಲದೆ ಜಗತ್ತಿನಲ್ಲಿರುವ ಸಕಲ ವಸ್ತುಗಳಲ್ಲಿಯೂ ಈ ಪ್ರಜ್ಞಾನವೆಂಬ ಚೈತನ್ಯವು ವ್ಯಾಪಿಸಿಕೊಂಡಿದೆ. ಇದು ಸರ್ವತ್ರ ಇರುವುದರಿಂದ ಸರ್ವರಲ್ಲಿ ನಾನೂ ಒಬ್ಬನಾದ್ದರಿಂದ ನನ್ನಲ್ಲಿರುವ ಈ ಪ್ರಜ್ಞಾನವೇ ಬ್ರಹ್ಮವೆಂದು ಸಿದ್ಧವಾಗುತ್ತದೆ. ಐತರೇ-ಯೋಪನಿಷತ್ತಿನಲ್ಲಿ ಇದೆಲ್ಲವೂ ವಿಸ್ತಾರವಾಗಿ ಬಂದಿದೆ. ''ಸರ್ವಾಣ್ಯೇವೈತಾನಿ ಪ್ರಜ್ಞಾನಸ್ಯ ನಾಮಧೇಯಾನಿ ಭವಂತಿ''(ಐ.ಉ.೫-೨). ''ಸರ್ವಂ ತತ್ ಪ್ರಜ್ಞಾನೇತ್ರಂ ಪ್ರಜ್ಞಾನೇ ಪ್ರತಿಷ್ಠಿತಂ'' ಇತ್ಯಾದಿ ವಾಕ್ಯಗಳಿಂದ ಪ್ರತಿಪಾದಿತವಾದದ್ದನ್ನು ಈ ಶ್ಲೋಕದಲ್ಲಿ ಸಂಗ್ರಹಿಸಲಾಗಿದೆ. ಪ್ರಜ್ಞಾನ, ಬ್ರಹ್ಮ, ಚೈತನ್ಯ, ಆತ್ಮ - ಇವು ಒಂದೇ ಅರ್ಥದ ಶಬ್ದಗಳು. ಸಕಲ ಜೀವಾತ್ಮಗಳೂ ಪರಮಾರ್ಥದಲ್ಲಿ ಬ್ರಹ್ಮವೇ ಎಂದು ತಾತ್ಪರ್ಯ (೨).

ಚೈತನ್ಯವು ಬ್ರಹ್ಮವೆಂದೂ ಅದೇ ಪ್ರಜ್ಞಾನವೆಂದೂ ಅದು ಸರ್ವತ್ರ ಇದೆಯಾದ್ದರಿಂದ ನನ್ನಲ್ಲಿಯೂ ಇದೆಯೆಂದೂ ಹೇಳಿದ್ದಾಯಿತು. ಈಗ ''ನಾನು'' ಎಂದರೆ ಯಾರೆಂಬುದನ್ನು ಹೇಳಬೇಕಾಗಿದೆ. ಆದ್ದರಿಂದ **'ಅಹಂ**

ಬ್ರಹ್ಮಾಸ್ಮಿ' ಎಂಬ ವಾಕ್ಯದಲ್ಲಿರುವ '**ಅಹಂ**' ಶಬ್ದದ ಅರ್ಥವನ್ನು ತಿಳಿಸ ಬೇಕಾಗಿದೆ. ಒಬ್ಬ ಸಾಮಾನ್ಯ ಮನುಷ್ಯನೂ "**ಅಹಂ ಬ್ರಹ್ಮಾಸ್ಮಿ**" ಎಂದು ಹೇಳಿಕೊಂಡು ತಿರುಗಾಡುತ್ತಿದ್ದರೆ ಅನರ್ಥವಾದೀತು. ದೇಹೇಂದ್ರಿಯಾದಿಗಳು ಆತ್ಮನೆಂದೂ ಆತನೇ ನಾನೆಂದೂ ಸಾಮಾನ್ಯ ಜನರು ಭಾವಿಸುತ್ತಾರೆ. ಅಂತಹವರಿಗೆ "**ಅಹಂ ಬ್ರಹ್ಮಾಸ್ಮಿ**" ಎಂದು ಬೋಧಿಸಲಾಗದು. ಅದನ್ನು ಅರಗಿಸಿಕೊಳ್ಳುವ ಶಕ್ತಿಯೂ ಅವರಿಗಿರುವುದಿಲ್ಲ. ಈ ಮಹಾವಾಕ್ಯದ ಅರ್ಥವನ್ನರಿಯಲು ಅಧಿಕಾರಿ ಯಾರು? ಯಾರು ಗುರೂಪದೇಶದಿಂದಲೂ, ಶಾಸ್ತ್ರಾಧ್ಯಯನದಿಂದಲೂ ವಿಚಾರ ಮಾಡಿ ಒಂದು ನಿರ್ಣಯಕ್ಕೆ ಬಂದಿರುತ್ತಾರೋ ಅವರು ಈ ವಾಕ್ಯದ ಅರ್ಥವನ್ನು ಗ್ರಹಿಸಲು ಅರ್ಹರಾಗಿರುತ್ತಾರೆ. ಆ ಅಧಿಕಾರಿಯಾದರೋ ಈ ಜಗತ್ತೆಲ್ಲವೂ ಮಾಯಾಕಲ್ಪಿತವಾದದ್ದೆಂದೂ ಅದರಲ್ಲೊಂದಾದ ನನ್ನ ಈ ದೇಹವು ಮಾಯಾಕಲ್ಪಿತವೆಂದೂ ಮೊದಲು ತಿಳಿದಿರುತ್ತಾನೆ. ಆ ದೇಹವು ದೇಹಾಂಶವೇ ಆದ ಚಿತ್ತದೊಡನೆ ಸೇರಿ ಶಮದಮಾದಿಗಳನ್ನು ಅನುಷ್ಠಾನ ಮಾಡಿ ಆತ್ಮವಿದ್ಯಾಲಾಭಕ್ಕೆ ಅರ್ಹವಾಗಿರುತ್ತದೆ. ಶ್ರವಣ ಮನನ ನಿದಿಧ್ಯಾಸನಗಳಿಂದ ಈ ಸ್ಥೂಲ ಶರೀರಕ್ಕೆ ಅತಿರಿಕ್ತವಾಗಿ ಬುದ್ಧಿಯೂ ಸೇರಿದ ಸೂಕ್ಷ್ಮ ಶರೀರವಿದೆಯೆಂದು ಗೊತ್ತಾಗಿರುತ್ತದೆ. ಅಂತಹ ಅಧಿಕಾರಿಗೆ ಹೇಳತಕ್ಕದ್ದೇ-ನೆಂದರೆ, ಪರಮಾತ್ಮನು ದೇಶ, ಕಾಲ, ವಸ್ತುಗಳ ಅಳತೆಗೆ ಸಿಗದೆ ಅನವಚ್ಛಿನ್ನವಾಗಿ ಪರಿಪೂರ್ಣನಾಗಿದ್ದಾನೆ. ಸೂಕ್ಷ್ಮಶರೀರಕ್ಕೆ ಸೇರಿದ ಬುದ್ಧಿಯು ಘಟಪಟಾದಿಗಳನ್ನು ಅರಿತುಕೊಳ್ಳುತ್ತದೆಯಷ್ಟೆ, ಘಟಪಟಾದಿಗಳ ಅರಿವು ಬಂದಿದೆ ಎಂದು ಹೇಗೆ ಗೊತ್ತಾಗುತ್ತದೆ? "ನಾನು ಘಟವನ್ನು ತಿಳಿದಿದ್ದೇನೆ" ಎಂದುಕೊಳ್ಳುವಾಗ ತಿಳಿದುಕೊಂಡಿದ್ದಕ್ಕೆ ಸಾಕ್ಷಿ ಯಾರು? ನನ್ನ ಬುದ್ಧಿಗೆ ತಿಳಿದಿದೆ ಎಂದುಕೊಳ್ಳುವ ಇನ್ನೊಬ್ಬ ಸಾಕ್ಷಿ ಇರಲೇ ಬೇಕು. ಯಾವನು ಬುದ್ಧಿಗೆ ಸಾಕ್ಷಿಯೋ ಅವನೇ ನಾನು - ಎಂದು ಆತ್ಮವಿದ್ಯಾಧಿಕಾರಿಯು ಸ್ಪಷ್ಟವಾಗಿ ತಿಳಿದುಕೊಂಡು ಬಿಡುತ್ತಾನೆ. ಏವಂಚ "**ಅಹಂಬ್ರಹ್ಮಾಸ್ಮಿ**" ಎಂಬ ವಾಕ್ಯದಲ್ಲಿರುವ "ಅಹಂ" ಪದದ ಅರ್ಥವು ಈ ದೇಹಾದಿಗಳ ಸಂಬಂಧವನ್ನು ಕಳೆದುಕೊಂಡು ಅಹಂ ಪದದಿಂದ ಲಕ್ಷಿತವಾದ ಚೈತನ್ಯವೆಂದೂ, ಪ್ರಜ್ಞಾನವೆಂದೂ, ಬ್ರಹ್ಮವೆಂದೂ ತಿಳಿಯತಕ್ಕದ್ದು(೩). ಈ ಮಹಾವಾಕ್ಯ ದಲ್ಲಿರುವ ಬ್ರಹ್ಮಶಬ್ದಕ್ಕೂ ದೇಶ, ಕಾಲ, ವಸ್ತುಗಳಿಂದ ಅಪರಿಚ್ಛಿನ್ನನೂ ಸ್ವಯಂ ಪೂರ್ಣನೂ ಆದ ಪರಮಾತ್ಮನೆಂದೇ ಲಕ್ಷ್ಯಾರ್ಥ. '**ಅಹಂ**' ಶಬ್ದಕ್ಕೂ ಅದೇ

ಅರ್ಥವೆಂದು ಹೇಳಿದ್ದಾಗಿದೆ. ಈಗ ''**ಅಸ್ಮಿ** - ಆಗಿದ್ದೇನೆ'' ಎಂಬ ಪದವು ಐಕ್ಯವನ್ನು ಬೋಧಿಸುತ್ತದೆ. ಏವಂಚ ''ನಾನು ಬ್ರಹ್ಮವಾಗಿದ್ದೇನೆ'' ಎಂಬುದು ಅಬಾಧಿತವಾಗಿ ತಿಳಿದುಬರುತ್ತದೆ (೪).

ಈಗ ''**ತತ್ತ್ವಮಸಿ**'' ಎಂಬ ಮಹಾವಾಕ್ಯಾರ್ಥವನ್ನು ವಿಚಾರಿಸೋಣ. ಇಲ್ಲಿ ''ತತ್'' ಎಂಬುದು ಸರ್ವನಾಮ. ಅದು - ಎಂದರ್ಥ. ಅದು ಎಂದರೆ ಯಾವುದು? ಈ ಸರ್ವನಾಮವು ಯಾವುದನ್ನು ಪರಾಮರ್ಶಿಸುತ್ತದೆ? ಹಿಂದೆ ಪ್ರಸ್ತುತವಾದದ್ದನ್ನು ಪರಾಮರ್ಶಿಸುತ್ತದೆ. ಹಿಂದೆ ''**ಸದೇವ ಸೋಮ್ಯೇದಮಗ್ರ ಆಸೀತ್ ಏಕಮೇವಾದ್ವಿತೀಯಂ**'' ''**ತತ್ ಸತ್ಯಂ ಸ ಆತ್ಮಾ**'' (ಛಾಂ.ಉ.೬-೨-೧)- ಎಂದು ಸೃಷ್ಟಿಗೆ ಪೂರ್ವದಲ್ಲಿ ನಾಮರೂಪಾದಿರಹಿತವೂ ಅದ್ವಿತೀಯವೂ ಆದ, ಒಂದೇ ಒಂದು ''ಸತ್'' ಎಂದು ಹೇಳಬಹುದಾದ ವಸ್ತುವಿತ್ತು ಎಂದು ಶ್ರುತಿ ಹೇಳಿದೆ. ಸತ್ ಎಂದರೆ ''ಇರುವುದು'' ಎಂದಿಷ್ಟೇ ಅರ್ಥ. ಅದಕ್ಕೆ ಅಸ್ತಿತ್ವವಿದೆಯೇ ಹೊರತು ಅದಕ್ಕೆ ನಾಮ, ರೂಪ, ಅಳತೆ, ತೂಕ ಮುಂತಾದ್ದೇನೂ ಇಲ್ಲ. ಆ ಸದ್ವಸ್ತುವೇ ಹಿಂದೆ ಪ್ರಸ್ತುತವಾದ ಪರಬ್ರಹ್ಮ. ಅದು ಎಂದರೆ ಪರಬ್ರಹ್ಮ. ಅದು ಸತ್ಯವಾದದ್ದು. ಸತ್ಯವೆಂದರೆ ಯಾವ ಪರಿಸ್ಥಿತಿಯಲ್ಲಿಯೂ ಬದಲಾವಣೆಯನ್ನು ಹೊಂದದ ಶಾಶ್ವತವಸ್ತು. 'ತತ್' ಪದವು ಲಕ್ಷಣೆಯಿಂದ ಆ ಅರ್ಥವನ್ನು ಬೋಧಿಸುತ್ತದೆ (೫). ಈಗ ''**ತ್ವಂ**'' ಎಂದರೆ ಯಾರೆಂಬುದನ್ನು ಪರಿಶೀಲಿಸಬೇಕು. ಉದ್ದಾಲಕಮಹರ್ಷಿಯು ತನ್ನ ಮಗನಾದ ಶ್ವೇತಕೇತುವನ್ನು ಕುರಿತು ಈ ಮಾತನ್ನು ಹೇಳಿದ್ದಾನೆ. 'ತ್ವಂ' ಎಂಬುದರಿಂದ ದೇಹಧಾರಿಯಾದ ಶ್ವೇತಕೇತುವಾದರೆ ತತ್‌ಪದಾರ್ಥದೊಡನೆ ಅಭೇದವು ಹೊಂದುವುದಿಲ್ಲ. ಆದ ಕಾರಣ ದೇಹೇಂದ್ರಿಯಾದಿ ಶರೀರತ್ರಯಗಳಿಗೆ ಅತೀತನಾಗಿ ಹಿಂದೆ ಹೇಳಿದ ಬುದ್ಧಿ ಸಾಕ್ಷಿಯಾದ ಸದ್‌ವಸ್ತುವನ್ನು ಲಕ್ಷಣೆಯಿಂದ ಗ್ರಹಿಸಬೇಕು. ಅಸಿ ಎಂಬ ಪದವು ತತ್ ಪದಗೃಹೀತವಾದದ್ದೂ 'ತ್ವಂ' ಪದ ಗೃಹೀತವಾದದ್ದೂ ಅಭಿನ್ನವೆಂದು ತಿಳಿಸುತ್ತದೆ. ಏವಂಚ ನೀನು ಸಾಕ್ಷಾತ್ ಪರಬ್ರಹ್ಮವೇ ಆಗಿದ್ದೀಯೆ - ಎಂದು ವಾಕ್ಯಾರ್ಥವಾಗುತ್ತದೆ. ಮುಮುಕ್ಷುಗಳು ಈ ಪ್ರಕಾರವಾಗಿ ಪರಬ್ರಹ್ಮದೊಡನೆ ಏಕತೆಯನ್ನು ಅನುಭವಕ್ಕೆ ತಂದುಕೊಳ್ಳಬೇಕು (೬).

ಈಗ ನಾಲ್ಕನೆಯ ಮಹಾವಾಕ್ಯವಾದ '**ಅಯಮಾತ್ಮಾ ಬ್ರಹ್ಮ**'

(ಮಾಂ.ಉ.೨) ಎಂಬುದರ ಅರ್ಥವನ್ನು ತಿಳಿಯೋಣ. ಈ ವಾಕ್ಯವು ಮಾಂಡೂಕ್ಯೋಪನಿಷತ್ತಿನಲ್ಲಿದೆ. ಅಂತೆಯೇ ಬೃಹದಾರಣ್ಯಕದಲ್ಲಿಯೂ ಬಂದಿದೆ (ಬೃ.ಉ.೨-೫-೧೯). ಈ ವಾಕ್ಯದ ಹಿಂದೆ ಮಾಂಡೂಕ್ಯದಲ್ಲಿ **'ಸರ್ವಂ ಹ್ಯೇತದ್ ಬ್ರಹ್ಮ'** (ಮಾಂ.ಉ.೨) ಎಂಬ ವಚನವಿದೆ. ಭೂತ, ವರ್ತಮಾನ, ಭವಿಷ್ಯತ್ತುಗಳಲ್ಲಿರತಕ್ಕ ಸರ್ವ ಪದಾರ್ಥಗಳೂ ಬ್ರಹ್ಮವೇ ಸರಿ ಎಂದು ಆ ವಚನದ ತಾತ್ಪರ್ಯ. ಈ ವಿಶ್ವವೆಲ್ಲವೂ ಬ್ರಹ್ಮವೇ ಹೊರತು ಇನ್ನೊಂದಲ್ಲ ಎಂದು ಹೇಳಿದ್ದಾಯಿತು. ಈ ವಿಶ್ವವೇನೋ ನಮಗೆ ಕಾಣುತ್ತದೆ. ಆದರೆ ಬ್ರಹ್ಮವು ಕಾಣುವುದಿಲ್ಲವಲ್ಲ! ಅದು ಯಾವುದೋ ಪರೋಕ್ಷ ವಸ್ತುವಾಗಿರ ಬೇಕು. ಅದನ್ನು ಪ್ರಕಾಶಪಡಿಸತಕ್ಕ ಇನ್ನೊಂದು ಪದಾರ್ಥವಿರಬೇಕು ಎಂಬ ಭಾವನೆ ಮೂಡುತ್ತದೆ. ಇದೆಲ್ಲವನ್ನೂ ನಿರಾಕರಿಸುವುದಕ್ಕಾಗಿ **'ಅಯಮಾತ್ಮಾ ಬ್ರಹ್ಮ'** ಎಂದು ಶ್ರುತಿಯು ಹೇಳಿದೆ. ''ವಿಶ್ವವೆಲ್ಲವೂ ಈ ಆತ್ಮನೇ, ಆತ್ಮನೇ ಬ್ರಹ್ಮ'' ಎಂದು ಈ ಮಹಾವಾಕ್ಯದ ಅರ್ಥ. 'ಅಯಮಾತ್ಮಾ' ಎಂಬ ಮಾತಿನಿಂದ ಹಿಂದೆ ಹೇಳಿದ ವಿಶ್ವವನ್ನು ಪರಾಮರ್ಶಿಸಲಾಗಿದೆ. ಬ್ರಹ್ಮವು ಪರೋಕ್ಷವಾದ ಇನ್ನೊಂದು ವಸ್ತುವಲ್ಲ, ಸ್ವಯಂಪ್ರಕಾಶನಾದ ಆತ್ಮನೇ ಬ್ರಹ್ಮ ಎಂಬು ತಾತ್ಪರ್ಯ. 'ನಾನು' ಎಂಬ ಶಬ್ದದ ಪರಮಾರ್ಥವೇ ಆತ್ಮನೆಂದು **'ಅಹಂ ಬ್ರಹ್ಮಾಸ್ಮಿ'** ಎಂಬಲ್ಲಿ ತಿಳಿಸಲಾಗಿದೆ. 'ನಾನು' ಎಂಬುದು ಎಂದಿಗೂ ಪರೋಕ್ಷವಲ್ಲ, ಅದನ್ನು ಪ್ರಕಾಶಪಡಿಸಲು ಇನ್ನೊಂದು ವಸ್ತುವೂ ಬೇಕಿಲ್ಲ, ಬುದ್ಧಿ ದೇಹಾದಿಗಳನ್ನು ದಾಟಿ ನಮ್ಮ ವೃತ್ತಿಜ್ಞಾನಕ್ಕೆ ಸಾಕ್ಷಿಯಾದ ಅಂತರ್ಯಾಮಿಯೇ ಆತ್ಮ. ಆದ್ದರಿಂದ, ನಾನೇ ಸರ್ವವೂ ಆದ ಬ್ರಹ್ಮ (ಅಹಂ ಬ್ರಹ್ಮಾಸ್ಮಿ) ಎಂಬುದನ್ನೀಗ ಸ್ಥಿರಗೊಳಿಸಲಾಯಿತು. ನಾನು ಎಂದರೆ ಅಂತರ್ಯಾಮಿಯಾದ ಪ್ರತ್ಯಗಾತ್ಮನೆಂದು ತಿಳಿಯಬೇಕು. ಏವಂ ಚ ಅಪರೋಕ್ಷವೂ ಸ್ವಯಂಪ್ರಕಾಶವೂ ಆದ, ಮತ್ತು ಅಹಂಪ್ರತ್ಯಯ ಗೋಚರವಾದ ಆತ್ಮವೇ ಬ್ರಹ್ಮ ಎಂಬ ಸಿದ್ಧಾಂತವು ಏರ್ಪಟ್ಟಿತು (೭).

ದೃಶ್ಯಮಾನವಾದ ಈ ಜಗತ್ತೆಲ್ಲವೂ ತನ್ನ ಸ್ವರೂಪವನ್ನು ಬದಲಾಯಿಸಿಕೊಳ್ಳುತ್ತಲೇ ಇರುವುದರಿಂದ ಇದು ಸತ್ಯವಲ್ಲ, ಯಾವುದು ಸತ್ಯವಲ್ಲವೋ ಅದು ಮಿಥ್ಯೆ. ಆದ್ದರಿಂದ ಮಿಥ್ಯಾಭೂತವಾದ ಈ ಜಗತ್ತಿಗೆ ಯಾವುದು ಅಧಿಷ್ಠಾನವೋ, ಯಾವುದರ ಆಧಾರದಿಂದ ಈ ಜಗತ್ತು

ಕಾಣಿಸುತ್ತಿದೆಯೋ, ಇದರ ನಾಮರೂಪಗಳೆಲ್ಲವೂ ಬಾಧಿತವಾದ್ದರಿಂದ ಅವನ್ನು ತಳ್ಳಿಹಾಕಿದರೆ ಯಾವುದು ಸ್ಥಿರವಾಗಿ ಉಳಿಯುತ್ತದೆಯೋ ಅದೇ ಬ್ರಹ್ಮ. ಇದು ಈ ಜಗತ್ತಿನ ತತ್ತ್ವವೆನಿಸುತ್ತದೆ. ಈ ಬ್ರಹ್ಮವು ಸ್ವಯಂ ಪ್ರಕಾಶವೂ ನಮ್ಮೆಲ್ಲರ ಆತ್ಮವೂ ಆಗಿದೆ (೮).

ಈ ಎಂಟು ಶ್ಲೋಕಗಳಲ್ಲಿ ಮಹಾವಾಕ್ಯ ವಿವೇಕವು ಮುಗಿಯುತ್ತದೆ. ಹಿಂದಿನ ಯಾರೋ ಮಹಾತ್ಮರು ವೇದಾಂತ ಸಿದ್ಧಾಂತದ ಸಾರವಾದ ಈ ನಾಲ್ಕು ವಾಕ್ಯಗಳನ್ನು ಆರಿಸಿ ತೆಗೆದಿದ್ದಾರೆ. ಗಭೀರಾರ್ಥವನ್ನು ಒಳಗೊಂಡ ಈ ವಾಕ್ಯಗಳಿಗೆ ಮಹಾವಾಕ್ಯಗಳೆಂಬ ಹೆಸರು ಸಹಜವಾಗಿ ಬಂದಿದೆ.

ತತ್ತ್ವವಿವೇಕ, ಪಂಚಭೂತವಿವೇಕ, ಪಂಚಕೋಶವಿವೇಕ, ದ್ವೈತವಿವೇಕ, ಮಹಾವಾಕ್ಯವಿವೇಕ - ಈ ಪಂಚವಿವೇಕಗಳಲ್ಲಿ ವೇದಾಂತದ ಪ್ರಮೇಯಗಳೆಲ್ಲವನ್ನೂ ತಿಳಿಸಿದಂತಾಯಿತು. ಗಹನವಾದ ಅದ್ವೈತತತ್ತ್ವವನ್ನು ಮನವರಿಕೆ ಮಾಡಿಕೊಡುವುದಕ್ಕಾಗಿ ಪ್ರಾಚೀನವಿದ್ವಾಂಸರು ಹಲವು ಮಾರ್ಗೋಪಾಯಗಳನ್ನು ಆಶ್ರಯಿಸಿ ಬೋಧಿಸಿದ್ದಾರೆ. ಅವೆಲ್ಲವೂ ಶ್ರೀಶಂಕರ ಭಗವತ್ಪಾದರ ಪ್ರಸ್ಥಾನತ್ರಯಭಾಷ್ಯಗಳಲ್ಲಿ ಬೇರೆ ಬೇರೆ ಸಂದರ್ಭಗಳೊದಗಿದಾಗ ಸೂಚಿತವಾಗಿವೆ.

ಮುಮುಕ್ಷುಗಳಾದ ಅಧಿಕಾರಿಗಳು ಶಮದಮಾದಿ ಸಂಪತ್ತನ್ನು ಗಳಿಸಿದವರಾದರೂ ಯೋಗ್ಯತೆಯಲ್ಲಿ ತಾರತಮ್ಯವಿರುತ್ತದೆ. ಅವರ ಪ್ರಾಚೀನ ಸಂಸ್ಕಾರಗಳೂ ಬುದ್ಧಿಶಕ್ತಿಯ ಔನ್ನತ್ಯದ ಮಟ್ಟವೂ ಅದಕ್ಕೆ ಕಾರಣ. ಆದ್ದರಿಂದ ಅಧಿಕಾರಿಗಳ ಅರ್ಹತೆಗೆ ತಕ್ಕಂತೆ ಬೋಧನೆಗೆ ಉಪಾಯಗಳನ್ನು ಆಶ್ರಯಿಸಬೇಕಾಗುತ್ತದೆ. ಹೀಗಾಗಿ ಅದ್ವೈತವೇದಾಂತದಲ್ಲಿ ಕಾಣಿಸಿಕೊಂಡ ಮಾರ್ಗೋಪಾಯಗಳು, ತಾರ್ಕಿಕ ಪಂಡಿತರ ಗ್ರಂಥಗಳಲ್ಲಿ ಬೇರೆ ಬೇರೆ ವಾದಗಳಾಗಿ ಪರಿಣಮಿಸಿದವು.

**ಇಲ್ಲಿಗೆ ಮಹಾವಾಕ್ಯಾರ್ಥಪ್ರಕರಣವು ಸಮಾಪ್ತವಾಯಿತು**

---

# ೬. ಚಿತ್ರದೀಪಪ್ರಕರಣ

**"ಅಧ್ಯಾರೋಪಾಪವಾದಾಭ್ಯಾಂ ನಿಷ್ಪ್ರಪಂಚಂ ಪ್ರಪಂಚ್ಯತೇ"** ಎಂಬ ನ್ಯಾಯವು ವೇದಾಂತದಲ್ಲಿ ಬಹುಮುಖ್ಯವಾದದ್ದು. ಉಪನಿಷತ್ತುಗಳು ಅನುಸರಿಸಿರುವುದು ಈ ಮಾರ್ಗವನ್ನು. ನೀರೂಪನೂ ನಿರಂಜನನೂ ಆದ ಪರಮಾತ್ಮನಲ್ಲಿ ಈ ಜಗತ್ತಿನ ಧರ್ಮಗಳನ್ನಾರೋಪಿಸಿ ನಿರಾಕರಿಸುವುದು ಅಧ್ಯಾರೋಪಾಪವಾದಗಳು. ಪರಮಾತ್ಮನು "ಸಹಸ್ರಬಾಹು, ಸಹಸ್ರಾಕ್ಷ, ಸಹಸ್ರಪಾತ್" ಎಂದು ಆರೋಪಿಸಿ **"ಅಪಾಣಿಪಾದೋ ಜವನೋಗ್ರಹೀತಾ, ಪಶ್ಯತ್ಯಚಕ್ಷುಃ"** ಎಂದು ನಿರಾಕರಿಸುವುದು. ಈ ಮಾರ್ಗದಿಂದ ನಿರೂಪಿಸಿದರೆ ಪ್ರತಿಪಾದ್ಯವು ಸ್ಪಷ್ಟವಾಗಿ ತಿಳಿದು ಬರುತ್ತದೆ. ಇದನ್ನು ವಿವರಿಸುವುದಕ್ಕಾಗಿ ಚಿತ್ರದೀಪ ಪ್ರಕರಣವು ಹೊರಟಿದೆ.

ಚಿತ್ರಪಟವೆಂದರೆ ಬಣ್ಣದ ಚಿತ್ರವನ್ನು ಬರೆದಿರುವ ವಸ್ತ್ರ. ಈ ಚಿತ್ರಪಟದಲ್ಲಿ ನಾವು ನಾಲ್ಕು ಅವಸ್ಥಾಪ್ರಕಾರಗಳನ್ನು ಕಾಣಬಹುದು. ಹಾಗೆಯೇ ಪರಮಾತ್ಮನಲ್ಲಿ ನಾಲ್ಕು ಅವಸ್ಥಾ ಪ್ರಕಾರಗಳಿವೆ ಎಂಬುದನ್ನು ತಿಳಿಸಬೇಕಾಗಿದೆ. ವಸ್ತ್ರವು ಧೌತ, ಘಟ್ಟಿತ, ಲಾಂಛಿತ, ರಂಜಿತ - ಎಂಬ ನಾಲ್ಕು ಪ್ರಕಾರಗಳನ್ನು ಪಡೆದು ಚಿತ್ರಪಟವಾಗಿರುತ್ತದೆ. ಅಂತೆಯೇ ಪರಮಾತ್ಮನಲ್ಲಿ ಚಿತ್, ಅಂತರ್ಯಾಮಿ, ಸೂತ್ರಾತ್ಮ, ವಿರಾಟ್ - ಎಂಬ ನಾಲ್ಕು ಪ್ರಕಾರಗಳಿವೆಯೆಂದು ತಿಳಿಯಬೇಕು. (೧-೨). ತೊಳೆದು ಸ್ವಚ್ಛವಾಗಿರುವ ಬಿಳಿಯ ಬಟ್ಟೆ ಧೌತ. ಚಿತ್ರವನ್ನು ಬರೆಯುವುದಕ್ಕಾಗಿ ಈ ಧೌತಕ್ಕೆ ಅನ್ನದ ಗಂಜಿಯನ್ನು ಸೇರಿಸಿ, ತೂತುಗಳಿಲ್ಲದೆ ದಪ್ಪವಾದ ಕಾಗದದಂತೆ ಮಾಡಿದ ಬಟ್ಟೆಗೆ ಘಟ್ಟಿತವೆಂದು ಹೆಸರು. ಅದರ ಮೇಲೆ ಚಿತ್ರಕಾರನು ಮಸಿಯಿಂದ ಚಿತ್ರಾಕಾರದ ರೇಖೆಗಳನ್ನು ಮೊದಲು ಗುರುತಿಸುತ್ತಾನೆ. ಈ ರೇಖೆಗಳಿಂದ ವಸ್ತ್ರವು ಲಾಂಛಿತ. ಅನಂತರ ಚಿತ್ರಕಾರನು ಆ ರೇಖೆಗಳೊಳಗೆ ಯೋಗ್ಯವಾದ ನಾನಾ ಬಣ್ಣಗಳನ್ನು ಹಚ್ಚುತ್ತಾನೆ. ಆಗ ಚಿತ್ರವು ಪೂರ್ಣವಾಗಿ ಚಿತ್ರಪಟವಾಗುತ್ತದೆ. ಬಣ್ಣ ತುಂಬಿದ ಈ ವಸ್ತ್ರವು ರಂಜಿತವೆನಿಸುತ್ತದೆ. ಇವನ್ನೀಗ ಹೊಂದಿಸಿಕೊಳ್ಳಬಹುದು. ಶುಭ್ರವಸ್ತ್ರವೇ ಚಿತ್ (ಚೈತನ್ಯ - ಪರಬ್ರಹ್ಮ) ಎಂದು ಭಾವಿಸಿಕೊಳ್ಳಬೇಕು. ಈ ವಸ್ತ್ರವೇ ಧೌತ. ಘಟ್ಟಿತವು ಅಂತರ್ಯಾಮಿ. ಲಾಂಛಿತವು ಸೂತ್ರಾತ್ಮ, ರಂಜಿತವು ವಿರಾಟ್ - ಎಂದು ಪ್ರಕೃತದಲ್ಲಿ ಭಾವಿಸಿಕೊಳ್ಳಬಹುದು (೩). ಪರಮಾತ್ಮನು ಮಾಯೆ ಮತ್ತು ಕಾರ್ಯಗಳ ಸಂಬಂಧವಿಲ್ಲದೆ ಸ್ವಸ್ವರೂಪದಲ್ಲಿದ್ದಾಗ ಚಿತ್ ಎನ್ನಿಸುತ್ತಾನೆ.

ಮಾಯಾಸಂಬಂಧವಾದಾಗ ಆತನಿಗೆ ಅಂತರ್ಯಾಮಿಯೆಂದು ಹೆಸರು. ಅಪಂಚೀಕೃತಪಂಚಭೂತಗಳಿಂದಾದ ಸೂಕ್ಷ್ಮಪ್ರಪಂಚವು ಉಪಾಧಿಯಾದಾಗ ಸೂತ್ರಾತ್ಮನೆನಿಸುತ್ತಾನೆ. ಪಂಚೀಕೃತ ಪಂಚಭೂತಗಳ ಕಾರ್ಯವಾದ ಸಮಷ್ಟಿ ಸ್ಥೂಲಶರೀರವು ಉಪಾಧಿಯಾದಾಗ ವಿರಾಟ್ ಎನಿಸುತ್ತಾನೆ (೪). ಈ ಪರಮಾತ್ಮನಿಗೆ ಚಿತ್ರಪಟದ ಸ್ಥಾನವನ್ನು ಹೇಳಿದ್ದಾಯಿತು. ಆದರೆ ಈ ಪಟದಲ್ಲಿರುವ ಚಿತ್ರಗಳು ಯಾವುವು? ಪಟವನ್ನಾಶ್ರಯಿಸಿಕೊಂಡಿರುವ ಚಿತ್ರಗಳಂತೆ ಪರಮಾತ್ಮನನ್ನೇ ಆಶ್ರಯಿಸಿ ಕೊಂಡಿರತಕ್ಕವು ಯಾವುವು? ಚತುರ್ಮುಖಬ್ರಹ್ಮನಿಂದ ಹಿಡಿದು ಹುಲ್ಲುಕಡ್ಡಿಯವರೆಗೆ ಇರುವ ಸಮಸ್ತ ಪ್ರಾಣಿಗಳೂ ಗಿರಿನದಿಗಳೇ ಮೊದಲಾದ ಜಡವಸ್ತುಗಳೂ ಸಮಸ್ತ ಪ್ರಪಂಚವೂ ಪರಮಾತ್ಮನನ್ನು ಆಶ್ರಯಿಸಿಕೊಂಡಿವೆ. ಇವೆಲ್ಲವೂ ಪಟದಲ್ಲಿ ಚಿತ್ರಗಳಿದ್ದಂತೆ ಪರಮಾತ್ಮನನ್ನು ಆಶ್ರಯಿಸಿಕೊಂಡಿವೆ. ಚಿತ್ರಗಳಲ್ಲಿರುವಂತೆ ಈ ಸ್ಥಾವರ ಜಂಗಮಗಳಲ್ಲಿ ಉಚ್ಚನೀಚಭಾವಗಳೂ ಉಂಟು (೫). ಅದರಲ್ಲಿ ಮನುಷ್ಯರ ಚಿತ್ರಗಳೂ ಇರುತ್ತವೆ. ಆ ಮನುಷ್ಯರಿಗೆ ಬೇರೆ ಬೇರೆ ಬಣ್ಣದ ವಸ್ತುಗಳನ್ನು ಉಡಿಸಿದಂತೆ ಚಿತ್ರವನ್ನು ಬರೆದಿರುತ್ತಾರೆ. ಅವು ವಸ್ತ್ರಗಳಂತೆ ಕಾಣುತ್ತವೆಯೇ ಹೊರತು ನಿಜವಾದ ವಸ್ತುಗಳಲ್ಲ. ಅವು ಚಳಿಯನ್ನು ಹೋಗಲಾಡಿಸಲಾರವು. ನಿಜವಾದ ವಸ್ತುಗಳಂತೆ ಅವನ್ನು ಬಿಚ್ಚಿ ನೀರಿನಿಂದ ತೊಳೆಯಲಾಗುವುದಿಲ್ಲ. ಆದ್ದರಿಂದ ಅವು ವಸ್ತ್ರಾಭಾಸಗಳು - ವಸ್ತುಗಳಂತೆ ತೋರತಕ್ಕವು. ನಿಜವಾದ ವಸ್ತುಗಳಲ್ಲ(೬). ಚಿತ್ರದಲ್ಲಿ ದೇವತೆಗಳೂ ಮನುಷ್ಯರೂ ಇರುತ್ತಾರಷ್ಟೆ ಅವರ ಶರೀರಗಳು ಚಿತ್ರದಲ್ಲಿ ಕಲ್ಪಿತವಾದವು. ಹಾಗೆಯೇ ಪರಮಾತ್ಮನಲ್ಲಿ ದೇವತೆಗಳ ಶರೀರಗಳೂ ಮನುಷ್ಯಾದಿಗಳ ಶರೀರಗಳೂ ಕಲ್ಪಿತವಾಗಿವೆ - ಅಧ್ಯಸ್ತವಾಗಿವೆ. ಚಿತ್ರದ ವಸ್ತ್ರಗಳಂತೆ ಇವರಲ್ಲಿ ಜೀವವೆಂಬ ಚೈತನ್ಯವನ್ನು ತುಂಬಲಾಗಿದೆ. ಚಿತ್ರದ ವಸ್ತ್ರಾಭಾಸಗಳಂತೆ ಈ ಜೀವರು ಚೈತನ್ಯಾಭಾಸಗಳು. ಇವು ನಾನಾವಿಧದ ಸುಖದುಃಖಗಳನ್ನು ಅನುಭವಿಸುತ್ತ ಸಂಸಾರದಲ್ಲಿ ತೊಳಲುತ್ತವೆ. ನಿಜವಾಗಿ ಚೈತನ್ಯವಾದ ಪರಮಾತ್ಮನಿಗೆ ಸಂಸಾರದ ಸಂಬಂಧವೇ ಇಲ್ಲ(೭). ಹಾಗೆಯೇ ಚಿತ್ರದ ವಸ್ತ್ರಾಭಾಸಗಳಿಗೆ ಬಣ್ಣಗಳುಂಟು. ಇದು ಹಳದಿ ಬಟ್ಟೆ, ಇದು ಕೆಂಪು ಬಟ್ಟೆ, ಇದು ಕಪ್ಪು ಬಟ್ಟೆ ಎಂದು ಅಜ್ಞರು ಹೇಳಿಕೊಳ್ಳುತ್ತಾರೆಯೇ ಹೊರತು ನಿಜವಾದ ಬಟ್ಟೆಗೆ ಆ ಬಣ್ಣದ ಲೇಪವಿರುವುದಿಲ್ಲ. ಹಾಗೆಯೇ ಚಿದಾಭಾಸಗಳಾದ ಜೀವರಿಗೆ ಸಂಸಾರ ವೆಂಬುದನ್ನರಿಯದೆ ಆತ್ಮನಿಗೇ ಸಂಸಾರವಿದೆಯೆಂದು ಹೇಳಿಕೊಳ್ಳುತ್ತಾರೆ. ಇವರು ಭ್ರಾಂತರು (೮).

ಚಿತ್ರದಲ್ಲಿ ವ್ಯಕ್ತಿಗೆ ಉಡಿಸಿದ ವಸ್ತ್ರಗಳಂತೆ ಬರೆದ ರೇಖೆಗಳು ವಸ್ತ್ರಾಭಾಸಗಳೇ ಹೊರತು ನಿಜವಾದ ವಸ್ತ್ರಗಳಲ್ಲ. ವಸ್ತ್ರಾಭಾಸ=ವಸ್ತ್ರದಂತೆ ಬರೆದ ರೇಖಾವಿನ್ಯಾಸ. ಈ ವಸ್ತ್ರಾಭಾಸಗಳಲ್ಲಿ ಹಾಕಿದ ಕಪ್ಪು, ಕೆಂಪು ಮುಂತಾದ ಬಣ್ಣಗಳು ಈ ವಸ್ತ್ರಾಭಾಸಗಳಿಗೆ ಸೇರಿದವಲ್ಲ. ಆದರೂ ಅಜ್ಞರು ವಸ್ತ್ರದಲ್ಲಿರುವ ಬಣ್ಣಗಳೆಂದು ಭ್ರಮಿಸುವುದುಂಟು. ಅಂತೆಯೇ ಸುಖದುಃಖರೂಪವಾದ ಸಂಸಾರವು ಜೀವ ಎಂಬುದಕ್ಕೇ ಹೊರತು ಆತ್ಮನಿಗಲ್ಲ. ಚಿದ್ರೂಪನಾದ ಆತ್ಮನಿಗೆ ಸಂಸಾರವಿಲ್ಲ - ಎಂಬುದನ್ನು ಅರಿಯದೆ ಆತ್ಮನೇ ಸಂಸಾರದಲ್ಲಿ ತೊಳಲುತ್ತಿದ್ದಾನೆಂದು ಅಜ್ಞಾನಿಗಳು ತಿಳಿದುಕೊಂಡಿದ್ದಾರೆ -ಎಂಬುದನ್ನು ಹೀಗೆ ತಿಳಿಸಲಾಗಿದೆ. ಜೀವನೆಂದರೆ ಚಿದಾಭಾಸವೇ ಹೊರತು ಚಿತ್ ಅಲ್ಲ. ಹಾಗಾದರೆ ಭೂಮಿ, ಜಲ-ಮೊದಲಾದವುಗಳಲ್ಲಿಯೂ ಚಿದಾಭಾಸವಾದ ಜೀವವಿದೆಯೇ? ಅದನ್ನೇಕೆ ಹೇಳಲಿಲ್ಲ? ಎಂಬ ಪ್ರಶ್ನೆ ಹುಟ್ಟುತ್ತದೆ. ಉತ್ತರವೇನೆಂದರೆ, ಅದರಿಂದ ನಮ್ಮ ವಿಚಾರಕ್ಕೆ ಯಾವ ಪ್ರಯೋಜನವೂ ಇಲ್ಲ. ಚಿತ್ರದಲ್ಲಿರುವ ಪರ್ವತ, ನದಿ, ವೃಕ್ಷ- ಮುಂತಾದವುಗಳಿಗೆ ಯಾವ ಚಿತ್ರಕಾರನೂ ವಸ್ತ್ರಗಳನ್ನು ತೊಡಿಸಿದಂತೆ ವಸ್ತ್ರಾಭಾಸಗಳನ್ನು ಚಿತ್ರಿಸುವುದಿಲ್ಲವಷ್ಟೆ? ಹಾಗೆಯೇ ಮಣ್ಣು, ನೀರು - ಮುಂತಾದ ಜಡವಸ್ತುಗಳಲ್ಲಿ ಚಿದಾಭಾಸವನ್ನು ಶಾಸ್ತ್ರಕಾರರು ಪ್ರಸ್ತಾಪಿಸುವುದಿಲ್ಲ. ಅದರಿಂದ ಯಾವ ಉಪಯೋಗವೂ ಇಲ್ಲ (೯). ಏವಂಚ 'ಈ ಸಂಸಾರವು ಪರಮಾರ್ಥವಾಗಿ ಇದೆಯೆಂದೂ ಅದು ಆತ್ಮನಿಗೆ ಸಂಬಂಧಿಸಿ ಅವನಿಗೆ ಗಂಟುಬಿದ್ದಿದೆಯೆಂದೂ ತಿಳಿಯುವುದು ಭ್ರಾಂತಿಯೇ ಸರಿ. ಅವಿದ್ಯೆಯಿಂದ ಈ ಬಗೆಯ ತಪ್ಪು ತಿಳಿವಳಿಕೆ ಜನರಲ್ಲಿ ದೃಢವಾಗಿ ಕುಳಿತಿದೆ. ಇದು ಹೋಗಬೇಕು. ಇದು ಹೋಗತಕ್ಕದ್ದು ವಿದ್ಯೆಯಿಂದ, ಆತ್ಮಜ್ಞಾನದಿಂದಲೇ ತೊಲಗುತ್ತದೆ (೧೦). ಜೀವವು ಆತ್ಮಾಭಾಸ (ಚಿದಾಭಾಸ)ವೆಂದೂ ವಸ್ತುತಃ ಚಿದ್ರೂಪನಾದ ಆತ್ಮನಲ್ಲವೆಂದೂ ತಿಳಿಯಬೇಕು ಮತ್ತು ಸಂಸಾರವು ಆತ್ಮಾಭಾಸನಾದ ಜೀವನಿಗೆ ಹೊರತು, ನಿಜವಾದ ಆತ್ಮನಿಗೆ ಇಲ್ಲ- ಎಂದು ತಿಳಿಯುವುದೇ ವಿದ್ಯೆ. ಅದೇ ಆತ್ಮಜ್ಞಾನ. ಆತ್ಮಜ್ಞಾನವು ಸಮೀಚೀನವಾದ ವಿಚಾರದಿಂದ ಪ್ರಾಪ್ತವಾಗುತ್ತದೆ (೧೧). ಆದ್ದರಿಂದ ಮೋಕ್ಷಾರ್ಥಿಯಾದವನು ಜಗತ್ತು, ಜೀವ, ಪರಮಾತ್ಮ, ಈ ಮೂವರ ವಿಷಯವನ್ನು ಸದಾ ವಿಚಾರಮಾಡುತ್ತಲೇ ಇರಬೇಕು. ವಿಚಾರಮಾಡದೆ ತತ್ತ್ವ ಬೋಧವಾಗುವುದೇ ಇಲ್ಲ. ಜಗತ್ತೆಂದರೆ ಯಾವುದು? ಇದರ ಸ್ವಭಾವವೇನು? ಜೀವವೆಂದರೆ ಯಾವುದು? ಜಡವಾದ ಜಗತ್ತಿಗಿಂತ ಇದರಲ್ಲಿರುವ

ವಿಶೇಷವೇನು? ಪರಮಾತ್ಮನಿಗೂ ಈ ಜೀವ ಜಗತ್ತುಗಳಿಗೂ ಯಾವ ವಿಷಯದಲ್ಲಿ ವ್ಯತ್ಯಾಸವಿದೆ? - ಎಂದು ವಿಚಾರ ಮಾಡಬೇಕು. ಹಾಗೆ ವಿಚಾರಮಾಡಿದಾಗ ಜೀವಜಗತ್ತುಗಳು ಬಾಧಿತವಾಗಿ ಬಿಡುತ್ತವೆ. ಪರಮಾತ್ಮನೊಬ್ಬ ಇರತಕ್ಕವನೆಂದು ನಿಶ್ಚಿತವಾಗುತ್ತದೆ(೧೨). ಜೀವಜಗತ್ತುಗಳು ಬಾಧಿತವಾಗುತ್ತವೆಯೆಂದರೆ, ಅವು ಪ್ರತೀತವಾಗುವುದೇ ಇಲ್ಲ - ಕಾಣಿಸುವುದೇ ಇಲ್ಲ ಎಂದರ್ಥವಲ್ಲ. ವಿಚಾರ ಮಾಡಿ ವೇದಾಂತ ಸಿದ್ಧಾಂತವನ್ನರಿತರೂ ಜೀವ ಜಗತ್ತು ಎಂಬ ವ್ಯವಹಾರವಿದ್ದೇ ಇರುತ್ತದೆ. ಜಗತ್ತು ಕಾಣಿಸುತ್ತಲೇ ಇರುವುದು. ಆದ್ದರಿಂದ ಬಾಧೆಯೆಂದರೆ ಅವು ಮಿಥ್ಯೆಯೆಂದು ತಿಳಿಯುವುದು. ಅವು ಶಾಶ್ವತವಲ್ಲ. ಪರಮಾರ್ಥದಲ್ಲಿ ಇಲ್ಲ. ಅವು ಕಲ್ಪಿತವಾದವು. ನಮ್ಮ ಅಜ್ಞಾನದಿಂದ ಪ್ರತೀತವಾಗುತ್ತವೆ. ಅವು ಸತ್ಯವಲ್ಲ ಎಂಬ ನಿಶ್ಚಯವೇ ಬಾಧೆ ಎನಿಸುತ್ತದೆ. ಆದ್ದರಿಂದ ಲೋಕವ್ಯವಹಾರ ನಡೆದೇ ನಡೆಯುತ್ತದೆ. ಪ್ರತೀತವಾಗದಿರುವುದೇ ಬಾಧೆಯೆಂದಾದರೆ, ಸುಷುಪ್ತಿ, ಮೂರ್ಛೆ - ಮುಂತಾದ ಸ್ಥಿತಿಯಲ್ಲಿಯೂ ಪ್ರತೀತವಾಗುವುದಿಲ್ಲವಾದ್ದರಿಂದ ಎಲ್ಲರೂ ಮುಕ್ತರಾಗಬೇಕಾದೀತು ! ಯಾವ ಪ್ರಯತ್ನವೂ ಇಲ್ಲದೆ ಎಲ್ಲರಿಗೂ ಮುಕ್ತಿ ದೊರಕೀತು ! ಆದ್ದರಿಂದ ಪ್ರಯತ್ನವು ಅವಶ್ಯ ಬೇಕು. ಪ್ರಯತ್ನವಿಲ್ಲದೆ ತತ್ತ್ವಜ್ಞಾನವಾಗದು. ತತ್ತ್ವಜ್ಞಾನದಿಂದಲೇ ಮುಕ್ತಿ(೧೩). ಪರಮಾತ್ಮನೊಬ್ಬನೇ ಉಳಿಯುತ್ತಾನೆಂದರೆ ಪರಮಾತ್ಮನೊಬ್ಬನೇ ಸತ್ಯ, ಉಳಿದುದೆಲ್ಲವೂ ಮಿಥ್ಯೆ ಎಂಬ ನಿಶ್ಚಿತಜ್ಞಾನ. ತತ್ತ್ವಜ್ಞಾನವಾದರೂ ಜಗತ್ತು ತೋರಿಯೇ ತೋರುತ್ತದೆ. ಜಗತ್ತು ಮರೆತೇ ಹೋಗುತ್ತದೆ - ಎಂದಾದರೆ ಜೀವನ್ಮುಕ್ತಿಯೇ ಇಲ್ಲವಾದೀತು. ಜೀವನ್ಮುಕ್ತನು ಲೋಕ ವ್ಯವಹಾರದಲ್ಲಿ ತೊಡಗಿರುತ್ತಾನೆ. ಅವನಿಗೆ ತತ್ತ್ವಜ್ಞಾನ ವಾಗಿರುವುದರಿಂದ ಮುಕ್ತನೆಂದೇ ತಿಳಿಯಬೇಕು (೧೪). ಎಲ್ಲಿಯವರೆಗೆ ವಿಚಾರಮಾಡುತ್ತಿರಬೇಕು? ತತ್ತ್ವಜ್ಞಾನವಾಗುವವರೆಗೆ. ಜ್ಞಾನವನ್ನೇ ವಿದ್ಯೆ ಎನ್ನುತ್ತಾರೆ. ಇದು ಪರೋಕ್ಷ, ಅಪರೋಕ್ಷವೆಂದು ಎರಡು ವಿಧ. ಅಪರೋಕ್ಷಜ್ಞಾನವಾದೊಡನೆ ವಿಚಾರವು ಸಮಾಪ್ತವಾಗುತ್ತದೆ. ಪರೋಕ್ಷ, ಅಪರೋಕ್ಷ ಎಂಬುದನ್ನು ಹೀಗೆ ವಿಂಗಡಿಸ ಬಹುದು. ಪರಬ್ರಹ್ಮವೆಂಬ ಅದ್ವಿತೀಯವಾದ ಪರಮಾರ್ಥವಸ್ತು ಇದೆ ಎಂದು ತಿಳಿಯುವುದು ಪರೋಕ್ಷಜ್ಞಾನ. ಶಾಸ್ತ್ರವನ್ನು ಚೆನ್ನಾಗಿ ಅಧ್ಯಯನ ಮಾಡಿದಾಗ ಈ ಜ್ಞಾನವು ಲಭಿಸುತ್ತದೆ. ಇದನ್ನು ಪುಸ್ತಕ ಪಾಂಡಿತ್ಯವೆನ್ನಬಹುದು. ಯಾರು ಯಾವ ರೀತಿಯಲ್ಲಿ ಆಕ್ಷೇಪಿಸಿದರೂ ಉತ್ತರವನ್ನು ಕೊಡುವ ಶಕ್ತಿ ಇಂತಹ

ವಿದ್ವಾಂಸರಿಗಿರುತ್ತದೆ. ಆದರೆ ಮುಂದೆ ಹೇಳುವ ತತ್ತ್ವಜ್ಞಾನಿಯ ಲಕ್ಷಣವೂ, ಚಿತ್ತದ ಪರಿಪಾಕವೂ ಸಿದ್ಧಿಸಿರುವುದಿಲ್ಲ. ಕಾಮ, ಕ್ರೋಧ, ಲೋಭಾದಿಗಳು ಎಲ್ಲರಿಗಿರುವಂತೆ ಈತನಿಗೂ ಇರುತ್ತದೆ. ಇವನು ವಿದ್ವಾಂಸ, ಪರೋಕ್ಷಜ್ಞಾನಿ. ಆ ಪರಬ್ರಹ್ಮವು ನಾನೇ ಆಗಿದ್ದೇನೆ - ಎಂಬ ನಿಶ್ಚಯವು ಅನುಭವ ಪರ್ಯಂತವಾಗಿ ಬಂದರೆ ಅದನ್ನು ಅಪರೋಕ್ಷಜ್ಞಾನವೆಂದು ತಿಳಿಯಬೇಕು. ಬ್ರಹ್ಮಸಾಕ್ಷಾತ್ಕಾರ-ವೆಂದರೆ ಇದೇ. ಈ ಅಪರೋಕ್ಷಜ್ಞಾನಿಯನ್ನು ಸ್ಥಿತಪ್ರಜ್ಞನೆನ್ನಬಹುದು. ಭಗವದ್ಗೀತೆಯ ಎರಡನೆಯ ಅಧ್ಯಾಯದಲ್ಲಿ ಸ್ಥಿತಪ್ರಜ್ಞನ ಲಕ್ಷಣವನ್ನು ಶ್ರೀಕೃಷ್ಣನು ಹೇಳಿದ್ದಾನೆ - **'ಪ್ರಜಹಾತಿ ಯದಾ ಕಾಮಾನ್...'** (ಭ.ಗೀ.೨-೫೫) ಇತ್ಯಾದಿ. ಈತನು ಜೀವನ್ಮುಕ್ತ. ಇವನು ಮತ್ತೆ ವಿಚಾರ ಮಾಡಬೇಕಾದ್ದಿಲ್ಲ. **'ಆತ್ಮನ್ಯೇವಾತ್ಮನಾ ತುಷ್ಟಃ'** (ಭ.ಗೀ.೨-೫೫) ಸದಾ ಆತ್ಮಾರಾಮನಾಗಿರುತ್ತಾನೆ(೧೫-೧೬). ಸಜ್ಜನರು ಆತ್ಮಸಾಕ್ಷಾತ್ಕಾರವನ್ನು ಪಡೆದು ಕೃತಕೃತ್ಯರಾಗಲಿ ಎಂಬ ಉದ್ದೇಶದಿಂದ ಈಗ ಆತ್ಮತತ್ತ್ವವನ್ನು ವಿವೇಚಿಸಲಾಗುವುದು. ಈ ಸಾಕ್ಷಾತ್ಕಾರವು ಲಭಿಸಿದೊಡನೆ ಅವರ ಸರ್ವ ಸಂಸಾರಬಂಧವು ಕಳಚಿ ಹೋಗಿ ಒಡನೆಯೇ ಜೀವನ್ಮುಕ್ತರಾಗಿ ಬಿಡುತ್ತಾರೆ. ಅವರಿಗೆ ಪುನಃ ಸಂಸಾರಬಂಧವಿಲ್ಲ(೧೭). ಚಿದಾತ್ಮನು ಪರಮಾರ್ಥದಶೆಯಲ್ಲಿ ಅದ್ವಿತೀಯನೂ ಏಕನೂ ಎಂಬುದನ್ನೀಗ ನಿಶ್ಚಯಿಸಬೇಕಾಗಿದೆ. ಮೊದಲು ವ್ಯವಹಾರದಶೆಯಲ್ಲಿ ಚಿದಾತ್ಮನು ಕೂಟಸ್ಥ, ಬ್ರಹ್ಮ, ಜೀವ, ಈಶ್ವರ - ಎಂದು ನಾಲ್ಕು ವಿಧದಲ್ಲಿ ಪ್ರತೀತನಾಗುತ್ತಾನೆಂದು ತಿಳಿಯಬೇಕು. ಹೇಗೆಂದರೆ, ಆಕಾಶವು ಒಂದೇ ಆಗಿದ್ದರೂ ಉಪಾಧಿಭೇದದಿಂದ ಒಟ್ಟು ನಾಲ್ಕು ಆಕಾಶಗಳಾಗಿ ಬಿಡುತ್ತದೆ. ಘಟಾಕಾಶ, ಮಹಾಕಾಶ, ಜಲಾಕಾಶ ಮತ್ತು ಮೇಘಾಕಾಶ(೧೮). ಇವುಗಳಲ್ಲಿ ಘಟಾಕಾಶ, ಮಹಾಕಾಶಗಳು ಪ್ರಸಿದ್ಧವಾದವು. ಗಡಿಗೆಯಲ್ಲಿರುವ ಆಕಾಶವು ಘಟಾಕಾಶ. ಸುತ್ತಲೂ ವಿಶಾಲವಾಗಿ ತೋರುವುದು ಮಹಾಕಾಶ. ಘಟಾಕಾಶದಲ್ಲಿ ನೀರನ್ನು ತುಂಬಿದಾಗ ಆ ನೀರಿನಲ್ಲಿ ಮೋಡ ನಕ್ಷತ್ರಗಳಿಂದ ಸಹಿತವಾದ ಆಕಾಶವು ಪ್ರತಿಬಿಂಬಿಸುತ್ತದೆ. ಅದನ್ನು ಜಲಾಕಾಶವೆಂದು ತಿಳಿಯಬೇಕು(೧೯). ಇನ್ನು ಮಹಾಕಾಶದಲ್ಲಿ ನಮ್ಮ ಮೇಲ್ಗಡೆ ಮೇಘಮಂಡಲವು ಕಾಣುತ್ತದೆಯಷ್ಟೆ, ಅದರ ಜಲದಲ್ಲಿ ಪ್ರತಿಬಿಂಬಿಸಿರುವ ಆಕಾಶವು ಮೇಘಾಕಾಶವೆನಿಸುತ್ತದೆ. ಇದು ನಮಗೆ ಪ್ರತ್ಯಕ್ಷವಾಗಿ ಕಾಣಿಸುವುದಿಲ್ಲವಾದರೂ ಅನುಮಾನದಿಂದ ನಿಶ್ಚಯಿಸಬಹುದು. ಹೇಗೆಂದರೆ, ಮೇಘಮಂಡಲದಿಂದ ಮಳೆ ಸುರಿಯುತ್ತದೆ. ಮಳೆಯು ಮೇಘದಿಂದ ಹುಟ್ಟಿದ

ಕಾರ್ಯ. ಮಳೆಯು ಜಲವೇ. ಆದ್ದರಿಂದ ಅದು ಮೇಘದಲ್ಲಿ ಕಣ್ಣಿಗೆ ಕಾಣದಿದ್ದರೂ ಜಲದ ಹನಿಯು ಅದರಲ್ಲಿದೆಯೆಂದು ಅನುಮಾನದಿಂದ ನಿಶ್ಚಯಿಸಬಹುದು. ಘಟದಲ್ಲಿರುವ ಜಲದಲ್ಲಿ ಮೇಘವು ಪ್ರತಿಬಿಂಬಿಸುವಂತೆ ಮೇಘಜಲದಲ್ಲಿಯೂ ಅದರ ಮೇಲಿನ ಮಹಾಕಾಶವು ಪ್ರತಿಬಿಂಬಿಸಿರುತ್ತದೆ ಎಂದು ಊಹಿಸಿ ತಿಳಿಯಬಹುದು. ಈ ಪ್ರತಿಬಿಂಬವೇ ಮೇಘಾಕಾಶವೆಂದು ತಿಳಿಯಬೇಕು (೨೦-೨೧). ಹೀಗೆ ನಾಲ್ಕು ಆಕಾಶಗಳು ಸಿದ್ಧವಾದವಷ್ಟೆ ಈಗ ನಮ್ಮ ದೇಹವು ಸ್ಥೂಲ, ಸೂಕ್ಷ್ಮ ಎಂದು ಎರಡು ವಿಧವಾಗಿದೆಯೆಂದು ಹಿಂದೆ ತಿಳಿಸಿದೆ. ಪಂಚೀಕೃತ ಪಂಚ ಮಹಾಭೂತಗಳಿಂದ ನಿರ್ಮಿತವಾದದ್ದು ಸ್ಥೂಲದೇಹ. ಅಪಂಚೀಕೃತ ಪಂಚಮಹಾಭೂತಗಳಿಂದ ನಿರ್ಮಿತವಾದದ್ದು ಸೂಕ್ಷ್ಮದೇಹ. ಇವೆರಡೂ ಅವಿದ್ಯೆಯಿಂದ ಕಲ್ಪಿತವಾದವು. ಈ ದೇಹದ್ವಯಕ್ಕೆ ಆಧಾರನಾದವನು ಆತ್ಮನೇ. ಈ ಆತ್ಮನಿಗೆ ಯಾವ ವಿಕಾರವೂ ಆಗುವುದಿಲ್ಲ. ಕೂಟದಂತೆ ನಿರ್ವಿಕಾರನಾಗಿ ದೇಹದ್ವಯಕ್ಕೆ ಆಧಾರನಾಗಿ ಇರುವ ಆತ್ಮನು ಕೂಟಸ್ಥನೆಂದು ತಿಳಿಯಬೇಕು. ಕೂಟವೆಂದರೆ ಕಮ್ಮಾರನು ಕಾದ ಕಬ್ಬಿಣವನ್ನು ಬಡಿಯುವುದಕ್ಕಾಗಿ ಅದರ ತಳದಲ್ಲಿ ಒಂದು ಕಬ್ಬಿಣದ ದಪ್ಪ ತುಂಡನ್ನಿಟ್ಟುಕೊಂಡಿರುತ್ತಾನೆ. ಆದಕ್ಕೆ ಕೂಟ ಎಂದು ಹೆಸರು. ಅದರ ಮೇಲೆ ಕಬ್ಬಿಣದ ತುಂಡನ್ನಿಟ್ಟು ಬಡಿದರೂ ಕೂಟವು ನಿರ್ವಿಕಾರವಾಗಿರುತ್ತದೆ (೨೨).

ಇಲ್ಲಿ ಹೇಳಬೇಕಾದ ಇನ್ನೊಂದು ಅಂಶವಿದೆ. ಚೇತನ (ಚಿತ್)ವನ್ನು ಮೂರು ವಿಧವಾಗಿ ಮಾತ್ರ ವಾರ್ತಿಕಕಾರರು ವಿಂಗಡಿಸಿದ್ದಾರೆ -

**ಜೀವ ಈಶೋ ವಿಶುದ್ಧಾ ಚಿತ್ ಭೇದಸ್ತೇಷಾಂ ಪರಸ್ಪರಮ್ ।**
**ಅವಿದ್ಯಾ ತಚ್ಚಿತೋರ್ಯೋಗಃ ಷಡಸ್ಮಾಕಮನಾದಯಃ ॥**

ಈಶ್ವರ, ಜೀವ, ಶುದ್ಧವಾದ ಚಿತ್, ಈ ಮೂರಕ್ಕೂ ಪರಸ್ಪರ ಭೇದ, ಅವಿದ್ಯಾ, ಅವಿದ್ಯಾ - ಚಿತ್‌ಗಳ ಸಂಬಂಧ - ಈ ಆರು ವೇದಾಂತಿಗಳಾದ ನಮಗೆ ಅನಾದಿಗಳೆಂದು ಭಾವಿಸಬೇಕು. ಈಶ್ವರಚೇತನ, ಜೀವಚೇತನ, ಶುದ್ಧಚಿತ್ (ಬ್ರಹ್ಮ) - ಹೀಗೆ ಚೇತನವನ್ನು ಮೂರು ವಿಧವಾಗಿ ಪ್ರಾಚೀನರು ವಿಂಗಡಿಸಿದ್ದಾರೆ. ದೃಗ್‌ದೃಶ್ಯ ವಿವೇಕದಲ್ಲಿಯೂ ಕೂಟಸ್ಥನನ್ನು ಜೀವಚೇತನದಲ್ಲಿಯೇ ಸೇರಿಸಿದ್ದಾರೆ. ಪ್ರಕೃತದಲ್ಲಾದರೋ ಕೂಟಸ್ಥಚೇತನವನ್ನು ಪ್ರತ್ಯೇಕವಾಗಿ ಗಣಿಸಿ ಚೇತನವನ್ನು ನಾಲ್ಕುವಿಧವಾಗಿ ವಿಂಗಡಿಸಲಾಗಿದೆ. ಇದಕ್ಕೆ ಸಾಮಂಜಸ್ಯವೇನು? - ಎಂದರೆ, ಸ್ಪಷ್ಟವಾಗಿ ವಿಷಯವನ್ನು ಮನದಟ್ಟು

ಮಾಡುವುದಕ್ಕಾಗಿ ಕೂಟಸ್ಥ ಎಂಬ ಒಂದು ವಿಭಾಗವನ್ನು ಇಲ್ಲಿ ಮಾಡಿದ್ದಾರೆ. ಇದು ಪ್ರಪಂಚಾರ್ಥ. ಇದರಿಂದ ತತ್ತ್ವಸ್ವರೂಪಕ್ಕೆ ವಿರೋಧವೇನೂ ಇಲ್ಲ. ಅನ್ಯತ್ರ ಕೂಟಸ್ಥ ಶಬ್ದವನ್ನು ವಿಕಾರರಹಿತವಾದ 'ಬ್ರಹ್ಮ' ಎಂಬ ಅರ್ಥದಲ್ಲಿ ಬಳಸುತ್ತಾರೆ. ಕೂಟಸ್ಥನಿಗೆ ಉಪಾಧಿಯಾಗಿ ಸ್ಥೂಲ ಸೂಕ್ಷ್ಮದೇಹಗಳಿವೆಯಷ್ಟೆ ಬುದ್ಧಿಯೂ ಸೇರಿದೆ. ಇದೂ ಕಲ್ಪಿತವೇ. ಈ ಬುದ್ಧಿಯಲ್ಲಿ ಚಿತ್ ಪ್ರತಿಬಿಂಬಿಸುತ್ತದೆ. ಈ ಪ್ರತಿಬಿಂಬವೇ ಜೀವ. ಈ ಜೀವವು ಶರೀರದಲ್ಲಿ ಪ್ರಾಣವನ್ನು ಹಿಡಿದು ನಿಲ್ಲಿಸುತ್ತದೆ. ಜೀವವೆಂದರೆ ಪ್ರಾಣವನ್ನು ಹಿಡಿದು ನಿಲ್ಲಿಸತಕ್ಕದ್ದು ಎಂದರ್ಥ. 'ಜೀವ - ಪ್ರಾಣಧಾರಣೇ' ಎಂಬ ಧಾತುವಿನಿಂದ ಈ ಶಬ್ದವು ನಿಷ್ಪನ್ನವಾಗಿದೆ. ಜೀವವೆಂಬ ಈ ಪ್ರತಿಬಿಂಬಕ್ಕೆ ಸಂಸಾರವು ಗಂಟುಬಿದ್ದಿದೆಯೆಂದು ತಿಳಿಯಬೇಕು (೨೩).

ಇದುವರೆಗೆ ಹೇಳಿದ್ದನ್ನು ಇನ್ನೊಮ್ಮೆ ಸ್ಮರಣೆಗೆ ತಂದುಕೊಳ್ಳುವುದು ಉತ್ತಮ. ಚಿತ್ ಎಂಬುದು ಬ್ರಹ್ಮ, ಕೂಟಸ್ಥ, ಜೀವ, ಈಶ್ವರ ಎಂದು ನಾಲ್ಕು ವಿಧವಾಗಿದೆ ಎಂದು ಹೇಳಿದ್ದಾಗಿದೆ. ಅವಿದ್ಯಾಕಲ್ಪಿತವಾದ ಸ್ಥೂಲ ಶರೀರ ಮತ್ತು ಸೂಕ್ಷ್ಮಶರೀರಗಳಿಗೆ ಆಧಾರವಾಗಿ ಅವೆರಡರಿಂದ ಅವಚ್ಛಿನ್ನವಾದ ಚಿತ್ತಿಗೆ ಕೂಟಸ್ಥ ಎಂದು ಹೆಸರು. ಸೂಕ್ಷ್ಮಶರೀರವೇ ಅಂತಃಕರಣ. ಅದೇ ಬುದ್ಧಿ. ಅದರಲ್ಲಿ ಪ್ರತಿಬಿಂಬಿತನಾದ ಕೂಟಸ್ಥನು ಎಂದರೆ ಕೂಟಸ್ಥನ (ಚಿತ್ತಿನ) ಪ್ರತಿಬಿಂಬವು ಜೀವವೆಂದು ತಿಳಿಯಬೇಕು. ಈ ಜೀವವನ್ನೇ ಅಂತಃಕರಣಾವಚ್ಛಿನ್ನಚೈತನ್ಯ ಎಂದು ಹೇಳುವುದುಂಟು. ಇಲ್ಲಿ ಶಬ್ದಭೇದವೇ ಹೊರತು ವಸ್ತುಭೇದವಿಲ್ಲ. ಅಂತಃಕರಣದಲ್ಲಿ ರೂಪವಿಲ್ಲದ ಕೂಟಸ್ಥನು ಪ್ರತಿಬಿಂಬಿಸುವುದು ಹೇಗೆ? ಎಂಬ ಪ್ರಶ್ನೆಯನ್ನು ಬೆಳೆಸಿ ಶಾಸ್ತ್ರಕಾರರು ಬೇರೆ ಬೇರೆ ಸಮಾಧಾನ ಹೇಳಲು ಯತ್ನಿಸಿದ್ದಾರೆ. ವಸ್ತುಸ್ಥಿತಿ ಏನೆಂದರೆ, ಶ್ರುತಿಪ್ರತಿಪಾದಿತ ವಿಷಯದಲ್ಲಿ ತರ್ಕದ ಹಾರಾಟ ನಡೆಯುವುದಿಲ್ಲ. **''ರೂಪಂ ರೂಪಂ ಪ್ರತಿರೂಪೋ ಬಭೂವ**,(ಬೃ.ಉ.೨-೫-೧೯) **ಛಾಯಾತಪೌ ಬ್ರಹ್ಮವಿದೋ ವದಂತಿ''** (ಕಠ.ಉ. ೧-೩-೧) ಇತ್ಯಾದಿ ಶ್ರುತಿಬಲದಿಂದ ಜೀವನು ಅಂತಃಕರಣದಲ್ಲಿ ಮೂಡಿದ ಚಿತ್‌ಪ್ರತಿಬಿಂಬವೆಂದೂ ಅಂತಃಕರಣಾವಚ್ಛಿನ್ನ ಚಿತ್ ಎಂದೂ ವಾದಗಳು ಹೊರಟಿವೆ. ಇವೆಲ್ಲದರ ತಾತ್ಪರ್ಯ ಇಷ್ಟೇ. ಅವಿದ್ಯೆಯಿಂದ ಅನಂತ ಸಂಖ್ಯೆಯಲ್ಲಿ ಅಂತಃಕರಣಗಳು ಕಲ್ಪಿತವಾಗಿವೆ. ಇವು ಜಡವಸ್ತುಗಳು. ಚಿತ್ (ಚೈತನ್ಯ) ಎಂಬ ಒಂದೇ ಒಂದು ವಸ್ತು ಈ ಅಂತಃಕರಣಗಳಿಗೆ ಚೈತನ್ಯ (ಶಕ್ತಿ)ವನ್ನಿತ್ತು ಕೆಲಸ

ಮಾಡಿಸುತ್ತದೆ. ಒಂದೇ ಒಂದು ವಿದ್ಯುತ್ತು ಅಸಂಖ್ಯ ಬಲ್ಬುಗಳಲ್ಲಿ ಹರಿದು ಬೆಳಕನ್ನು ನೀಡುವಂತೆ, ಅಸಂಖ್ಯ ಯಂತ್ರಗಳಲ್ಲಿ ಹರಿದು ಕೆಲಸ ಮಾಡಿಸುವಂತೆ ಎಂದು ತಿಳಿಯಬೇಕು. ಏವಂ ಚ ಚೈತನ್ಯದಿಂದ ಚೇತರಿಸಿಕೊಂಡಿರುವ ಅಂತಃಕರಣವೇ ಜೀವ. ಅಥವಾ ಅಂತಃಕರಣದಲ್ಲಿ ಮೂಡಿದ ಚಿದಂಶವೇ ಜೀವ. ಇದೇ ಚಿದಾಭಾಸ. ಕೇವಲ ಚಿತ್ ಎಂಬುದೂ ಜೀವವಲ್ಲ. ಕೇವಲ ಅಂತಃಕರಣವೂ ಜೀವವಲ್ಲ. ಉಭಯವೂ ಸೇರಿ ಜೀವವೆನಿಸಿದೆ. ಸಂಸಾರವಿರುವುದು ಈ ಜೀವಕ್ಕೆ.

ಹಿಂದೆ ಹತ್ತೊಂಬತ್ತನೆಯ ಶ್ಲೋಕದಲ್ಲಿ, ಮೋಡನಕ್ಷತ್ರಸಹಿತವಾದ ಆಕಾಶವು ಘಟದಲ್ಲಿರುವ ನೀರಿನಲ್ಲಿ ಪ್ರತಿಬಿಂಬಿಸುತ್ತದೆಯೆಂದೂ ಅದು ಜಲಾಕಾಶವೆಂದೂ ಹೇಳಿದ್ದಾಗಿದೆ. ನೀರನ್ನು ತುಂಬುವುದಕ್ಕೆ ಮೊದಲಿದ್ದುದು ಘಟಾಕಾಶ. ಈಗ ಜಲಾಕಾಶದಿಂದ ಘಟಾಕಾಶವು ಮರೆಯಾಗಿಬಿಟ್ಟಿದೆ. ಅಂತೆಯೇ ಜೀವನಿಂದ ಕೂಟಸ್ಥನು ಮರೆಯಾಗಿಬಿಟ್ಟಿದ್ದಾನೆ. ಘಟಾಕಾಶವೇ ಮೋಡನಕ್ಷತ್ರಗಳಿಂದ ಸಹಿತವಾದದ್ದು ಎಂದು ಭ್ರಮಿಸಿದ್ದಾನೆ. ಏವಂಚ ಶುದ್ಧವಾದ ಘಟಾಕಾಶವು ಕಾಣದೆ ಹೋಗಿದೆ. ಘಟಾಕಾಶದಲ್ಲಿ ಮೋಡವೂ ಇಲ್ಲ, ನಕ್ಷತ್ರವೂ ಇಲ್ಲ. ಅದು ಶುದ್ಧವಾದ ಮಹಾಕಾಶವೇ. ಇದನ್ನೇ ಪ್ರಕೃತದಲ್ಲಿ ಕೂಟಸ್ಥನೆಂದು ತಿಳಿಯಬೇಕು. ಜನರಾದರೋ ನೀರಿನಲ್ಲಿ ಕಾಣುವ ಮೋಡ, ನಕ್ಷತ್ರಗಳು ಕೂಟಸ್ಥನಲ್ಲಿವೆಯೆಂದು ಭ್ರಮಿಸಿದ್ದಾರೆ. ಆದ್ದರಿಂದ ಜನರಿಗೆ ಜಲಾಕಾಶವು ಗೋಚರಿಸುತ್ತದೆಯೇ ಹೊರತು ಘಟಾಕಾಶವು ಗೋಚರಿಸುವುದಿಲ್ಲ. ಇವನೇ ಅವನೆಂದೂ ಅವನೇ ಇವನೆಂದೂ ಭ್ರಮಿಸಿದ್ದಾರೆ. ಇದಕ್ಕೆ ಕಾರಣವಾದದ್ದು ಅವಿದ್ಯೆ. ಪ್ರಕೃತದಲ್ಲಿ ಜಲವನ್ನೇ ಅವಿದ್ಯೆಯ (ಅಂತಃಕರಣದ) ಸ್ಥಾನದಲ್ಲಿ ಇಟ್ಟುಕೊಳ್ಳಬೇಕು. ಈ ಅವಿದ್ಯೆಯಿಂದಾದ ಭ್ರಮೆಯನ್ನು ಅನ್ಯೋನ್ಯಾಧ್ಯಾಸವೆನ್ನುತ್ತಾರೆ. ಇಲ್ಲಿ ಸ್ಪಷ್ಟನೆಗಾಗಿ ಕೂಟಸ್ಥನೆಂದು ಬ್ರಹ್ಮದಿಂದ ಪ್ರತ್ಯೇಕಿಸಿ ವಿದ್ಯಾರಣ್ಯ ಸ್ವಾಮಿಗಳು ಬರೆದಿದ್ದಾರೆ (೨೪). ಈ ಜೀವನು ತಾನು ನಿಜವಾಗಿ ಕೂಟಸ್ಥನೇ ಸರಿ ಎಂಬುದನ್ನು ತಿಳಿದುಕೊಳ್ಳುವುದೇ ಇಲ್ಲ! ಅನಾದಿಯಾದ ಅವಿವೇಕ ಇದಕ್ಕೆ ಕಾರಣ. ಇದೇ ಮೂಲಾವಿದ್ಯೆ. ಈ ಮೂಲಾವಿದ್ಯೆಯಿಂದ ಅನ್ಯೋನ್ಯಾಧ್ಯಾಸ ಉಂಟಾಗಿದೆ. ಜೀವನಿಗೆ ಸಂಸಾರದಲ್ಲಿ ನಾನಾವಿಧವಾದ ಭ್ರಮೆಗಳು ಹುಟ್ಟುತ್ತವೆ. ಅವುಗಳಲ್ಲಿ ನಾನು ಸಂಸಾರಿಯಾದ ಜೀವ, ಜನನ ಮರಣಗಳಿಗೆ ಒಳಗಾಗಿದ್ದೇನೆ, ಸುಖದುಃಖಗಳು ನನಗೆ ಗಂಟು ಬಿದ್ದಿವೆ - ಎಂದುಕೊಂಡಿರುವುದು ದೊಡ್ಡ

ಭ್ರಮೆ. ಇದೇ ಅಧ್ಯಾಸ. ಇದಕ್ಕೆ ಕಾರಣವಾದದ್ದು ಮೂಲಾವಿದ್ಯೆಯೆಂದು ಅಭಿಪ್ರಾಯ. ಭ್ರಮೆಗಳೆಲ್ಲವೂ ಅವಿದ್ಯೆಗಳೇ ಆದ್ದರಿಂದ ಅವುಗಳಿಗೆ ಕಾರಣವಾದ ಈಶ್ವರನ ಮಾಯಾಶಕ್ತಿಯನ್ನು ಮೂಲಾವಿದ್ಯೆ ಎನ್ನುತ್ತಾರೆ. ಭ್ರಮೆಗಳ ಮೂಲ ಮೂಲಾವಿದ್ಯೆ (೨೫). ಅವಿದ್ಯೆಯಿಂದ ಕಲ್ಪಿತನಾದ ಚಿದಾಭಾಸನೇ ಜೀವನೆಂದು ಹೇಳಿದ್ದಾಗಿದೆ. ಈ ಅವಿದ್ಯೆಗೆ ಎರಡು ಶಕ್ತಿಗಳುಂಟು. ಒಂದು ಆವರಣ ಶಕ್ತಿ. ಇನ್ನೊಂದು ವಿಕ್ಷೇಪಶಕ್ತಿ. ''ಕೂಟಸ್ಥನು ಯಾರೆಂದು ನನಗೆ ಹೊಳೆಯುವುದೇ ಇಲ್ಲ. ಆದ್ದರಿಂದ ಕೂಟಸ್ಥನೇ ಇಲ್ಲ'' ಎಂದು ತಿಳಿದಿರುವ ಮಿಥ್ಯಾವ್ಯವಹಾರವು ಆವರಣ ಶಕ್ತಿಯ ಕೆಲಸ. ಅದಕ್ಕೆ ಸತ್ಯವನ್ನು ಮುಚ್ಚಿಬಿಡುವ ಸಾಮರ್ಥ್ಯ ಉಂಟು (೨೬). ಜ್ಞಾನಿಯು ಅಜ್ಞಾನಿಯನ್ನು ಕುರಿತು ಹೀಗೆ ಕೇಳುತ್ತಾನೆ ಎನ್ನೋಣ. ''ಅಯ್ಯಾ, ನೀನು ಕೂಟಸ್ಥನಾದ ಆತ್ಮನನ್ನು ಬಲ್ಲೆಯಾ?'' ಅದಕ್ಕೆ ಅಜ್ಞಾನಿಯು ''ಇಲ್ಲ, ಕೂಟಸ್ಥನು ಯಾರೋ ನಾನು ಅರಿಯೆ'' ಎನ್ನುತ್ತಾನೆ. ಇದು ತನ್ನ ಅಜ್ಞಾನವನ್ನು ಅನುಭವಿಸಿ ಹೇಳುವ ಮಾತು. ಆಮೇಲೆ ''ಕೂಟಸ್ಥನೆಂದರೆ ಯಾರು? ಅವನು ಇಲ್ಲವೇ ಇಲ್ಲ'' ಎಂದೂ ಹೇಳುತ್ತಾನೆ. ಇದು ಕೂಟಸ್ಥನ ಅಭಾವವನ್ನರಿತು ಹೇಳುವ ಮಾತು. ಏವಂಚ ಕೂಟಸ್ಥನ ಅಜ್ಞಾನವೂ ಆತನಿಗೆ ಇದೆ. ಕೂಟಸ್ಥನ ಅಭಾವದ ಅನುಭವವೂ ಇದೆ. ಆದ್ದರಿಂದ ಸತ್ಯವು ಕಾಣದಂತೆ ಮುಚ್ಚಿಹಾಕುವ ಆವರಣಶಕ್ತಿ ಅವಿದ್ಯೆಗೆ ಇದೆ ಎಂಬುದು ಸ್ವತಃ ಸಿದ್ಧವಾಗುತ್ತದೆ. ಈ ಅನುಭವವೇ ಅವಿದ್ಯೆ ಇದೆಯೆಂಬುದಕ್ಕೆ ಪ್ರಮಾಣವಾಗುತ್ತದೆ (೨೭). ಇದರ ಮೇಲೆ ತಾರ್ಕಿಕರು ಶಂಕೆಯನ್ನೆತ್ತಬಹುದು. ಅದ್ವೈತಿಗಳಾದ ನಿಮ್ಮ ಸಿದ್ಧಾಂತದಂತೆ ಆತ್ಮನು ಸ್ವಪ್ರಕಾಶನಾಗಿದ್ದಾನೆ. ಸೂರ್ಯನಂತೆ ತಾನೇ ಪ್ರಕಾಶಿಸುತ್ತಾನೆ. ಆತನಿಗೆ 'ಅವಿದ್ಯೆ ಕವಿಯುವುದೆಂದರೇನು? ಅವಿದ್ಯೆ ಕತ್ತಲೆ ಇದ್ದಂತೆ. ಆತ್ಮನು ಬೆಳಕು. ಬೆಳಕನ್ನು ಕತ್ತಲೆ ಮುಚ್ಚಿಕೊಳ್ಳುತ್ತದೆಯೆ? ಬೆಳಕಿಗೂ ಕತ್ತಲೆಗೂ ವಿರೋಧವಿದ್ದಂತೆ ಆತ್ಮನಿಗೂ ಅವಿದ್ಯೆಗೂ ಪರಸ್ಪರ ವಿರೋಧ ವಿದೆಯಾದ್ದರಿಂದ ಅವೆರಡಕ್ಕೂ ಸಂಬಂಧವೇ ಘಟಿಸುವುದಿಲ್ಲ. ಅವಿದ್ಯೆಯ ಸಂಬಂಧವಿಲ್ಲದಾಗ ಅವಿದ್ಯೆಯಿಂದಾಗುವ ಆವರಣವೇ ಇರುವುದಿಲ್ಲ. ಆವರಣವಿಲ್ಲದಾಗ ಆವರಣ ಮೂಲಕವಾದ ವಿಕ್ಷೇಪವೂ ಇರುವುದಿಲ್ಲ. ವಿಕ್ಷೇಪವೂ ಇಲ್ಲದ ಮೇಲೆ ಜ್ಞಾನವು ಹೋಗಲಾಡಿಸುವುದಾದರೂ ಯಾವುದನ್ನು? ಆಗ ಜ್ಞಾನವೂ ವ್ಯರ್ಥವೆಂದಾಗುತ್ತದೆ. ಜ್ಞಾನವು ವ್ಯರ್ಥವೆಂದಾದಾಗ ಅದನ್ನೇ ಪ್ರತಿಪಾದಿಸುವ ವೇದವೂ ಬೇಡ, ಬ್ರಹ್ಮಸೂತ್ರವೂ

ಬೇಡ, ಗೀತೆಯೂ ಬೇಡ. ಅವು ಹೇಳುವುದೆಲ್ಲ ಅಪ್ರಮಾಣವಾಗಿ ಬಿಡುತ್ತದೆಯಲ್ಲ! ಏವಂಚ ನಿಮ್ಮ ವೇದಾಂತಶಾಸ್ತ್ರವು ಅಪ್ರಾಮಾಣಿಕವಾಯಿತು! ಈ ತರ್ಕಜಾಲಕ್ಕೆ ಉತ್ತರವೇನೆಂದರೆ : ನಿಮ್ಮ ತರ್ಕಕ್ಕೆ ಸರಿಯಾಗಿ ಪದಾರ್ಥವಿರಬೇಕಾಗಿಲ್ಲ. ಮನುಷ್ಯನಿಗೆ ಅಜ್ಞಾನವಿದೆಯೆಂಬುದು ಅನುಭವ ಸಿದ್ಧವಾಗಿದೆ. ಆತ್ಮನು ಸ್ವಯಂಪ್ರಕಾಶನೆಂದೂ ಜೀವವು ಬ್ರಹ್ಮವೇ ಎಂದೂ ಶ್ರುತಿಯು ಹೇಳುತ್ತದೆ. ಅಜ್ಞಾನವು ಸಕಲಮಾನವರಿಗೂ ಅನುಭವ ಸಿದ್ಧವಾಗಿದೆ. ''ನ ಹಿ ದೃಷ್ಟೇ ಅನುಪಪನ್ನಂ ನಾಮ'' ಎಂಬ ನ್ಯಾಯ ಉಂಟು. ಒಂದು ವಸ್ತು ಕಣ್ಣಿಗೆ ಕಂಡಿರುವಾಗ ನಿಮ್ಮ ತರ್ಕಕ್ಕೆ ಹೊಂದುವುದಿಲ್ಲವೆಂದು ಆ ವಸ್ತುವೇ ಇಲ್ಲವೆನ್ನಲಾದೀತೆ? ಅನುಭವಕ್ಕಿಂತ ದೊಡ್ಡ ಪ್ರಮಾಣವು ಯಾವುದೂ ಇಲ್ಲ. ಅನುಭವವೇ ಅಜ್ಞಾನವನ್ನು ತೋರಿಸಿಕೊಡುತ್ತಿರುವಾಗ ನಿಮ್ಮ ತರ್ಕವೇನೂ ನಡೆಯಲಾರದು. ಅನುಭವವು ಇಂತಹ ತರ್ಕಜಾಲವನ್ನೆಲ್ಲ ನುಂಗಿ ನೊಣೆದು ಬಿಡುತ್ತದೆ (೨೮). ಅದಕ್ಕೆ ತಾರ್ಕಿಕನು ''ಈ ಅನುಭವವನ್ನು ನಂಬಲಾಗುವುದಿಲ್ಲ. ''ಬೆಳಕನ್ನು ಕತ್ತಲೆ ಮುಸುಕುವುದಿಲ್ಲ. ಬೆಳಕಿದ್ದಲ್ಲಿ ಕತ್ತಲಿಲ್ಲ. ಕತ್ತಲೆ ಇದ್ದಲ್ಲಿ ಬೆಳಕಿಲ್ಲ'' ಎಂಬ ತರ್ಕಕ್ಕೆ ಆ ಅನುಭವವು .ವಿರುದ್ಧವಾಗಿದೆ. ತರ್ಕವಿರುದ್ಧವಾದ ಅನುಭವವು ಪ್ರಮಾಣವಲ್ಲ'' ಎಂದು ವಾದಿಸಬಹುದು. ಅದಕ್ಕೆ ಉತ್ತರವೇನೆಂದರೆ, ತರ್ಕವು ನಿಶ್ಚಾಯಕವಲ್ಲ. ಅದು ಬರಿಯ ಯುಕ್ತಿ. ಗಟ್ಟಿಗನಾದ ಇನ್ನೊಬ್ಬ ತಾರ್ಕಿಕನು ಆ ತರ್ಕವನ್ನು ಖಂಡಿಸಿ ಮತ್ತೊಂದು ತರ್ಕವನ್ನು ಹೇಳಬಹುದು. ತರ್ಕಕ್ಕೆ ಮಿತಿಯೇ ಇಲ್ಲ. ಅನುಭವವೇ ತರ್ಕಕ್ಕಿಂತ ಪ್ರಬಲವಾದದ್ದು. ನಾವು ಹೇಳಿದ ಅನುಭವವು ಯಾರೋ ಒಬ್ಬನದಲ್ಲ. ಸರ್ವರ ಅನುಭವವೂ ಅದೇ ರೀತಿ ಇದೆ. ಬಹುಜನರ ಅನುಭವವನ್ನು ನಿನ್ನ ತರ್ಕವು ದೂಷಿಸಲಾರದು. ಬೆಂಕಿಯು ಬಿಸಿ, ಬೆಲ್ಲವು ಸಿಹಿ - ಎಂಬ ಅನುಭವವನ್ನೇ ನಿನ್ನ ದುಸ್ತರ್ಕವು ಬಾಧಿಸಲಾರದು'' (೨೯). ಅದಕ್ಕೆ ತಾರ್ಕಿಕನು ''ವಿಷಯವು ಸ್ಪಷ್ಟವಾಗಲೆಂದು ತರ್ಕವನ್ನು ಮಾಡಲೇಬೇಕಾಗುತ್ತದೆ. ತರ್ಕವು ಆವಶ್ಯಕವಾದ್ದರಿಂದಲೇ ''ಆತ್ಮಾ ವಾ ಅರೇ ಶ್ರೋತವ್ಯೋ ಮಂತವ್ಯಃ'' ಎಂದು ಶ್ರುತಿಯೇ ಹೇಳುತ್ತದೆಯಲ್ಲವೆ? 'ಮಂತವ್ಯಃ' ಎಂದರೆ ಯುಕ್ತಿಯಿಂದ ವಿಚಾರ ಮಾಡಬೇಕೆಂದು ಅರ್ಥ'' ಎಂದು ಹೇಳಬಹುದು. ಅದಕ್ಕೆ ಉತ್ತರವೇನೆಂದರೆ ''ನಿಜ, ತರ್ಕವು ಬೇಕು. ಅದು ಶ್ರುತಿಗೆ ಅನುಗುಣವಾಗಿದ್ದು ಸಮೀಚೀನವಾದ ತರ್ಕವಾಗಬೇಕು. ಶ್ರುತಿವಿರುದ್ಧವೂ ಅನುಭವ ವಿರುದ್ಧವೂ ಆದದ್ದು ಕುತರ್ಕ. ನೀನು

ಹೇಳುತ್ತಿರುವುದು ಕುತರ್ಕ. ಕುತರ್ಕವು ಇಲ್ಲಿ ಬೇಡ'' (೩೦).

ಹಿಂದೆ ೨೭ನೆಯ ಶ್ಲೋಕದಲ್ಲಿ ಅವಿದ್ಯೆ ಇದೆಯೆಂಬುದನ್ನೂ ಅದು ಆತ್ಮನನ್ನು ಆವರಿಸಿ ಜ್ಞಾನವಾಗದಂತೆ ತಡೆಯುವುದೆಂಬುದನ್ನೂ ಹೇಳಿ, ಅದಕ್ಕೆ ಆಧಾರವಾಗಿ ಸ್ವಾನುಭವವನ್ನು ತೋರಿಸಿದ್ದಾಗಿದೆ. ''ಕೂಟಸ್ಥನು ಅವಿದ್ಯೆಗೂ ಅದರ ಆವರಣಶಕ್ತಿಗೂ ವಿರೋಧಿಯಲ್ಲ, ಕೂಟಸ್ಥನಿಗೆ ಅವಿದ್ಯೆಯೂ ಅದರ ಆವರಣಶಕ್ತಿಯೂ ಇದೆಯೆಂಬುದು ಸ್ವಾನುಭವಕ್ಕೆ ಬಂದಿರುವುದರಿಂದ'' ಎಂದು ತರ್ಕಿಸಬೇಕು. ''ಕೂಟಸ್ಥನಿಗೂ ಅವಿದ್ಯೆಗೂ ವಿರೋಧವಿದ್ದರೆ, ಈ ಅವಿದ್ಯೆ ಆವರಣಗಳನ್ನು ಅನುಭವಿಸತಕ್ಕವನು ಯಾರು? ತಾನಲ್ಲದೆ ಬೇರೆ ಯಾರೂ ಇಲ್ಲವಾದ್ದರಿಂದ ವಿರೋಧವಿಲ್ಲ'' ಇದು ಸುತರ್ಕ. ಹಾಗಾದರೆ ಅವಿದ್ಯೆಯನ್ನು ಹೋಗಲಾಡಿಸುವ ವಿರೋಧಿ ಯಾರು? ಉಪನಿಷತ್ತುಗಳ ವಿಚಾರದಿಂದ ಹುಟ್ಟುವ ಜ್ಞಾನವೇ ಈ ಅವಿದ್ಯೆಗೆ ವಿರೋಧಿಯೆಂದು ತಿಳಿಯತಕ್ಕದ್ದು. ಈ ಜ್ಞಾನವು ತತ್ತ್ವಜ್ಞಾನಿಯಲ್ಲಿರುತ್ತದೆ (೩೧-೩೨). ಈಗ ವಿಕ್ಷೇಪವೆಂದರೇನೆಂಬುದನ್ನು ತಿಳಿಯೋಣ. ಆವರಣದಿಂದ ವಿಕ್ಷೇಪ ಉಂಟಾಗುತ್ತದೆ. ವಿಕ್ಷೇಪವೆಂದರೆ ಒಂದು ವಸ್ತುವನ್ನು ಇನ್ನೊಂದು ವಸ್ತುವೆಂದು ತಿಳಿಯುವುದು. ಹಗ್ಗವನ್ನು ಒಬ್ಬನು ಹಾವೆಂದು ಭ್ರಮಿಸುತ್ತಾನೆ. ಅಲ್ಲಿ ಮೊದಲು ಇದು ಹಗ್ಗವೆಂಬುದು ತಿಳಿಯುವುದಿಲ್ಲ, ಇದೇ ಆವರಣ, ಅನಂತರ ಹಾವು ಎಂಬ ಭ್ರಮೆ ಬರುತ್ತದೆ. ಈ ಭ್ರಮೆಗೆ 'ಇದು ಹಗ್ಗ' ಎಂದು ತಿಳಿಯದಿರುವುದೇ ಕಾರಣ. ಇದು ಆವರಣ. ಹಾವು ಎಂದು ತಿಳಿಯುವುದು ವಿಕ್ಷೇಪ. ಈಗ ಯಥಾಶ್ರುತವಾದ ಶ್ಲೋಕಾರ್ಥವು ಹೀಗಾಗುತ್ತದೆ. ಹಿಂದೆ ಹೇಳಿದಂತೆ ಕೂಟಸ್ಥನು ಅವಿದ್ಯೆಯಿಂದ ಆವರಣಹೊಂದಿದ್ದಾನೆ. ಹಾಗೆ ಆವೃತನಾದ ಕೂಟಸ್ಥನಲ್ಲಿ ದೇಹದ್ವಯಯುಕ್ತವಾದ ಚಿತಿಯು (ಚಿತ್, ಚೈತನ್ಯ) ಆರೋಪಿತವಾಗಿದೆ. ಕಪ್ಪೆಚಿಪ್ಪಿನಲ್ಲಿ ಬೆಳ್ಳಿಯು ಆರೋಪಿತವಾದಂತೆ. ಇದೇ ವಿಕ್ಷೇಪಾಧ್ಯಾಸ ಎಂದು (೩೩). ಚೈತನ್ಯಕ್ಕೆ ಅವಿದ್ಯೆಯು ಆವರಿಸಿಕೊಂಡಾಗ ಅದು ಕೂಟಸ್ಥ ಎನಿಸಿಕೊಳ್ಳುತ್ತದೆ. ಈ ಕೂಟಸ್ಥನಲ್ಲಿ ಸ್ಥೂಲಸೂಕ್ಷ್ಮಗಳಿಂದ ದೇಹದ್ವಯ ಯುಕ್ತನಾದ ಚಿದಾಭಾಸನು ಆರೋಪಿತನಾಗಿ 'ನಾನು, ನಾನು' ಎಂದುಕೊಳ್ಳುವ ಜೀವನಾಗಿದ್ದಾನೆ - ಎಂದು ಒಟ್ಟು ತಾತ್ಪರ್ಯ. ಅವಿದ್ಯೆಯು ಆವರಿಸಿಕೊಳ್ಳುವುದಕ್ಕೆ ಚೈತನ್ಯವು ವಿರೋಧಿಯಲ್ಲವಾದ್ದರಿಂದ ಅವಿದ್ಯೆಯು ಆವರಿಸಿಕೊಂಡಿದೆ. ವಿರೋಧಿಯಾಗಿದ್ದರೆ 'ನನಗೆ ಅವಿದ್ಯೆ ಇದೆ, ನಾನು ಅಜ್ಞಾನಿ, ನಾನು ಸಂಸಾರಿ' ಇತ್ಯಾದಿಯಾದ ಅನುಭವವೇ ಬರುತ್ತಿರಲಿಲ್ಲ.

ಅನುಭವವೇ ಅವಿದ್ಯೆಯು ಆವರಿಸಿಕೊಳ್ಳುತ್ತದೆ ಎನ್ನುವುದಕ್ಕೆ ಪ್ರಮಾಣ. ಕೂಟಸ್ಥನನ್ನು ಜೀವನೆಂದು ತಿಳಿಯುವುದು ವಿಕ್ಷೇಪ. ಇದೇ ಅಧ್ಯಾಸ - ಭ್ರಾಂತಿ. ಶುಕ್ತಿಯನ್ನು ನೋಡಿ 'ಇದು ಬೆಳ್ಳಿ' ಎಂದು ಭ್ರಾಂತಿ ಬರುತ್ತದೆಯಷ್ಟೆ ಎದುರಿಗಿರುವ ಶುಕ್ತಿಯಲ್ಲಿರುವ ಇದು ಎಂಬ ಅಂಶವು ಈ ಭ್ರಾಂತಿಯಲ್ಲಿಯೂ ಸತ್ಯವಾದ ಅಂಶ. ಹಾಗೆಯೇ 'ಕೂಟಸ್ಥನು ಚಿದಾಭಾಸ' ನೆಂಬ ಭ್ರಾಂತಿಯಲ್ಲಿ ಕೂಟಸ್ಥನಲ್ಲಿರುವ 'ಸ್ವಯಂ ತನ್ನತನ' ಎಂಬ ಅಂಶವು ಚಿದಾಭಾಸನಲ್ಲಿಯೂ ಸತ್ಯವಾದದ್ದು. ಭ್ರಮೆಯು ಹೋದರೂ ಈ ಅಂಶವು ಬಾಧಿತವಾಗುವುದಿಲ್ಲ (೩೪). ಶುಕ್ತಿಯನ್ನು ನೋಡಿ ಇದು ಬೆಳ್ಳಿ ಎಂಬ ಭ್ರಾಂತಿ ಬಂದಾಗ ಶುಕ್ತಿಯಲ್ಲಿರುವ ಕೆಳಭಾಗದ ಕಪ್ಪು, ತ್ರಿಕೋಣಾಕಾರ - ಇವೆರಡು ಭ್ರಾಂತಿಯಲ್ಲಿ ತೋರಲಿಲ್ಲ. 'ಇದು' ಎಂಬ ಅಂಶವು ಮಾತ್ರ ತೋರಿತು. ಹಾಗೆಯೇ ಕೂಟಸ್ಥ ಚಿದಾಭಾಸಭ್ರಾಂತಿಯಲ್ಲಿ ಕೂಟಸ್ಥನಲ್ಲಿರುವ ಅಸಂಗತ್ವ, ಆನಂದತ್ವ ಸ್ವರೂಪಗಳು ಚಿದಾಭಾಸನಲ್ಲಿ ತೋರದೆ ಮರೆಯಾಗುತ್ತವೆ. 'ಸ್ವಯಂತ್ವ'ವು - ತನ್ನತನ - ಎಂಬುದು ಮಾತ್ರ ತೋರುತ್ತದೆ (೩೫). ಶುಕ್ತಿರಜತ ದೃಷ್ಟಾಂತದಲ್ಲಿ ಆರೋಪಿತವಾದ ಬೆಳ್ಳಿಯ 'ಬೆಳ್ಳಿ' ಎಂಬ ಹೆಸರು ಉಳಿಯುವಂತೆ ಪ್ರಕೃತದಲ್ಲಿ ಆರೋಪಿತ ಚಿದಾಭಾಸನಲ್ಲಿ 'ನಾನು' ಎಂಬ ಅಂಶ ಮಾತ್ರ ಉಳಿಯುತ್ತದೆ (೩೬). ದೃಷ್ಟಾಂತದಲ್ಲಿ ಇದು ಎಂಬುದನ್ನು ಕಣ್ಣಿಂದ ಕಂಡಾಗ 'ಇದು' ಎಂಬ ಭಾವನೆ ಹುಟ್ಟುತ್ತದೆ. ಪ್ರಕೃತದಲ್ಲಿ ಕೂಟಸ್ಥನನ್ನು ಕಾಣದಿದ್ದರೂ ಆತ್ಮನು ಸ್ವಯಂ ಪ್ರಕಾಶನಾದ್ದರಿಂದ 'ನಾನು' ಎಂಬ ಅಂಶವು ಹೊಳೆದು ಜೀವನೆಂಬ ಆರೋಪಕ್ಕೆ ಒಳಗಾಗುತ್ತಾನೆ (೩೭). ಇಲ್ಲೊಂದು ಶಂಕೆ ಹುಟ್ಟಬಹುದು. ದೃಷ್ಟಾಂತವಾದ 'ಇದು ರಜತ' ಎಂಬ ವಾಕ್ಯದಲ್ಲಿ 'ಇದು' ಶಬ್ದದ ಅರ್ಥ ಬೇರೆ. 'ರಜತ' ಶಬ್ದದ ಅರ್ಥ ಬೇರೆ. ಆದ್ದರಿಂದ ಇದಂತ್ವವು ರಜತದಲ್ಲಿಯೂ ತೋರುತ್ತದೆ ಎನ್ನಲಡ್ಡಿಯಿಲ್ಲ. ಪ್ರಕೃತವಾದ ದಾರ್ಷ್ಟಾಂತಿಕದಲ್ಲಿ 'ಸ್ವಯಂ-ಅಹಂ' ಇವೆರಡೂ ಒಂದೇ ಅರ್ಥದಲ್ಲಿರುವುದರಿಂದ 'ಸ್ವಯಂ' ಎಂಬುದು 'ಅಹಂ' ನಲ್ಲಿಯೂ ತೋರುತ್ತದೆ ಎನ್ನುವುದು ಅಯುಕ್ತವಲ್ಲವೆ? ಎಂದು ಶಂಕೆ. ಇದಕ್ಕೆ ಉತ್ತರವೇನೆಂದರೆ, ಇವೆರಡೂ ಒಂದೇ ಅರ್ಥದ ಶಬ್ದಗಳಲ್ಲ. 'ಸ್ವಯಂ' ಎಂಬುದು ಸಾಮಾನ್ಯಾರ್ಥಕ. 'ಅಹಂ' ಎಂಬುದು ವಿಶೇಷಾರ್ಥಕ. ಇದು 'ಬೆಳ್ಳಿ' ಎಂಬ ವಾಕ್ಯದಲ್ಲಿ 'ಇದು' ಸಾಮಾನ್ಯಾರ್ಥಕ. 'ಬೆಳ್ಳಿ' ವಿಶೇಷಾರ್ಥಕ. 'ಸ್ವಯಂ, ಅಹಂ' ಶಬ್ದಗಳೂ ಹೀಗೆಯೇ ಸಾಮಾನ್ಯ ವಿಶೇಷಾರ್ಥಕಗಳು (೩೮). ಲೋಕದಲ್ಲಿ ''ದೇವದತ್ತನು ಸ್ವಯಂ ಹೋಗಲಿ,

ನೀನು ಸ್ವಯಂ ನೋಡು, ನಾನು ಸ್ವಯಂ ಹೋಗುತ್ತೇನೆ' ಎಂದು ಪ್ರಯೋಗಿಸುತ್ತಾರೆ. 'ಸ್ವಯಂ' ಶಬ್ದಕ್ಕೆ ನಾನು ಎಂಬ ಅರ್ಥವಾದರೆ ಈ ಪ್ರಯೋಗಗಳು ಅಸಂಗತವಾಗುತ್ತವೆ. 'ನಾನು ಸ್ವಯಂ ಹೋಗುತ್ತೇನೆ' ಎಂಬ ವಾಕ್ಯದಲ್ಲಿ ಪುನರುಕ್ತಿದೋಷ ಬರುತ್ತದೆ (೩೯). ಇದು ಬೆಳ್ಳಿ ಇದು ವಸ್ತ್ರ- ಇತ್ಯಾದಿ ಪ್ರಯೋಗಗಳಲ್ಲಿ 'ಇದು' ಎಂಬ ಸಾಮಾನ್ಯ ಶಬ್ದವಿರುವಂತೆ, ಸ್ವಯಂ ಅವನು, ಸ್ವಯಂ ನೀನು, ಸ್ವಯಂ ನಾನು ಎಂಬಲ್ಲಿಯೂ ಸ್ವಯಂ ಶಬ್ದವನ್ನು ಬಳಸುತ್ತಾರೆ. ಆದ್ದರಿಂದ 'ಸ್ವಯಂ' ಶಬ್ದ 'ಇದಂ' ಶಬ್ದದಂತೆ ಸಾಮಾನ್ಯಾರ್ಥಕವೆಂದು ತಿಳಿಯಬೇಕು (೪೦). ಒಳ್ಳೆಯದು. ಸ್ವಯಂ ಎಂಬುದು ಅಹಂ ಶಬ್ದದ ಅರ್ಥಕ್ಕಿಂತ ಬೇರೆ ಅರ್ಥ ಉಳ್ಳದ್ದು- ಎಂಬುದನ್ನು ಒಪ್ಪೋಣ. ಪ್ರಕೃತ ಕೂಟಸ್ಥನ ವಿಷಯದಲ್ಲಿ ನಿನಗೆ ಆದದ್ದೇನು? ಎಂದು ಪೂರ್ವಪಕ್ಷಿಯ ಪ್ರಶ್ನೆ. ಸಾಮಾನ್ಯರೂಪವಾದ ಸ್ವಯಂ ಶಬ್ದಾರ್ಥವೇ ಕೂಟಸ್ಥ - ಎಂದು ನನಗೆ ಸಿದ್ಧವಾಯಿತು - ಎಂದು ಉತ್ತರ!(೪೧). ಶಂಕೆ - ಸ್ವಯಂ ಎಂಬುದು ಸ್ವತ್ವವನ್ನು ಬೋಧಿಸುತ್ತದೆಯೆಂದು ನಿನ್ನ ಹೇಳಿಕೆ. ಅದು ಅನ್ಯನಿವಾರಕವಾಗಬಹುದು. ಅದರಿಂದ ನಿನಗಾದ ಪ್ರಯೋಜನವೇನು? ಉತ್ತರ - ಪ್ರಯೋಜನವೇನೆಂದರೆ, ಕೂಟಸ್ಥನು ಅನ್ಯನಲ್ಲ. ಅವನು ಸ್ವತಃ ಆತ್ಮನೇ ಎಂದು ಸಿದ್ಧವಾಗುತ್ತದೆ: ಕೂಟಸ್ಥನು ಆತ್ಮನೆಂಬುದೇ ನನಗೆ ಬೇಕಾದದ್ದು. ಅದು ನಮಗೆ ಸಂಮತ (೪೨). ಸ್ವಯಂ, ಆತ್ಮ - ಈ ಎರಡು ಶಬ್ದಗಳು ಅನ್ಯಾರ್ಥವಾರಕಗಳಾಗುವುದು ಹೇಗೆ? ಅವುಗಳ ಅರ್ಥಗಳೇ ಬೇರೆಯಲ್ಲವೆ? ಹೀಗಿರುವಾಗ 'ಸ್ವಯಂ' ಎಂದರೆ ಕೂಟಸ್ಥನೆಂದು ಹೇಳುವುದು ಹೇಗೆ? ಕೂಟಸ್ಥನೇ ಆತ್ಮ. ಹಾಗಲ್ಲ; ಅವೆರಡು ಶಬ್ದಗಳು ಹಸ್ತ, ಕರ ಶಬ್ದಗಳಂತೆ ಪರ್ಯಾಯ ಪದಗಳು. ಆದ್ದರಿಂದಲೇ ಅವೆರಡನ್ನೂ ಜೊತೆಯಲ್ಲಿ ಪ್ರಯೋಗಿಸುವುದಿಲ್ಲ, ಪ್ರಯೋಗಿಸಿದರೆ ಪುನರುಕ್ತಿಯಾಗುವುದು. ಇವೆರಡು ಪದಗಳೂ ಸಮಾನಾರ್ಥಕಗಳಾದ್ದರಿಂದ ಸ್ವಯಂತ್ವ, ಆತ್ಮತ್ವ - ಇವೆರಡೂ ಅನ್ಯಾರ್ಥವಾರಕಗಳಾಗುತ್ತವೆ (೪೩). ಹಾಗಾದರೆ 'ಘಟವು ಸ್ವಯಂ ಏನನ್ನೂ ತಿಳಿದುಕೊಳ್ಳಲಾರದು' ಎಂಬ ಪ್ರಯೋಗವು ಹೇಗೆ? ಸ್ವಯಂ ಶಬ್ದದ ಅರ್ಥ ಆತ್ಮವಾದರೆ ಘಟವೂ ಆತ್ಮವೆಂದು ಒಪ್ಪಬೇಕಾಗಿ ಬರುತ್ತದೆ. ಇದು ಅಸಂಗತ. ಜಡವಾದ ಘಟವು ಚೇತನವಾದ ಆತ್ಮವಾಗುವುದು ಹೇಗೆ? ಉತ್ತರವೇನೂ ಕಷ್ಟವಲ್ಲ. ಸ್ಫುರಣವು ಆತ್ಮಸ್ವಭಾವ. ಘಟದಲ್ಲಿಯೂ ಸ್ಫುರಣವಿದೆ. ಅದರಲ್ಲಿಯೂ ಆತ್ಮಾಂಶವಿದೆಯಾದ್ದರಿಂದ 'ಘಟವು ಸ್ವಯಂ' ಎಂದು

ಪ್ರಯೋಗಿಸುವುದು ಅಸಂಗತವಲ್ಲ(೪೪). ಹಾಗಾದರೆ ಜಡ-ಚೇತನ ಎಂಬ ವಿಭಾಗವೇ ತಪ್ಪಾಗಿಬಿಡುತ್ತದೆಯಲ್ಲವೆ? ಘಟ ಪಟಾದಿ ಜಡವಸ್ತುಗಳಲ್ಲಿಯೂ ಆತ್ಮಚೈತನ್ಯವಿದೆಯೆನ್ನುವುದಾದರೆ, ಶಾಸ್ತ್ರದಲ್ಲಿಯೂ ಲೋಕದಲ್ಲಿಯೂ ಸುಪ್ರಸಿದ್ಧವಾದ ಜಡ-ಚೇತನ ಎಂಬ ವಿಭಾಗದ ಗತಿಯೇನು? ಅದಕ್ಕೇನೂ ಬಾಧೆಯಿಲ್ಲ. ಘಟಾದಿಗಳಲ್ಲಿ ಚಿದಾಭಾಸ (ಜೀವ) ವಿಲ್ಲವಾದ್ದರಿಂದ ಅವನ್ನು ಜಡ ಎನ್ನುತ್ತೇವೆ. ಆತ್ಮದ ಅಸ್ತಿತ್ತ್ವ ಜಡದಲ್ಲಿಯೂ ಇದೆ. ಆತ್ಮದ ಅಸ್ತಿತ್ವ-ನಾಸ್ತಿತ್ವಗಳಿಗೂ ಜಡಚೇತನವಿಭಾಗಕ್ಕೂ ಸಂಬಂಧವಿಲ್ಲ(೪೫). ಚಿದಾಭಾಸವಿದ್ದ ವಸ್ತು ಚೇತನ, ಚಿದಾಭಾಸವಿಲ್ಲದ್ದು ಅಚೇತನ - ಎಂದು ಜಡ-ಚೇತನಗಳ ವಿಭಾಗವನ್ನು ಮಾಡುವುದಾದರೆ, ಅಚೇತನವಾದ ಜಡವಸ್ತುವಿನಲ್ಲಿ ಆತ್ಮಸತ್ತೆಯನ್ನು ಒಪ್ಪುವುದರಿಂದ ಪ್ರಯೋಜನವೇನು? ಆತ್ಮನಿದ್ದರೆ ಚೇತನ, ಆತ್ಮನಿಲ್ಲದಿದ್ದರೆ ಅಚೇತನ - ಎಂದು ಹೇಳುವುದೇ ಯುಕ್ತವಲ್ಲವೆ? ಹಾಗಲ್ಲ; ಕೂಟಸ್ಥನಾದ ಆತ್ಮನಲ್ಲಿ ಚಿದಾಭಾಸಕಲ್ಪನೆ ಭ್ರಾಂತಿಯಿಂದ ಆದದ್ದು. ಹಾಗೆಯೇ ಅಚೇತನವಾದ ಘಟಾದಿಪದಾರ್ಥವೂ ಕೂಟಸ್ಥನಾದ ಆತ್ಮನಲ್ಲಿ ಭ್ರಾಂತಿಯಿಂದ ಕಲ್ಪಿತವಾಗಿದೆ! ಉಭಯವೂ ಭ್ರಾಂತಿವಿಲಾಸವೇ. ಭ್ರಾಂತಿಕಲ್ಪಿತವಾದ್ದರಿಂದಲ್ಲವೆ ಘಟಾದಿ ಪದಾರ್ಥಗಳು ತೋರುತ್ತಿರುವುದು? ಆತ್ಮನನ್ನು ಬಿಟ್ಟರೆ ಘಟಾದಿಗಳಿಗೆ ಅಧಿಷ್ಠಾನ ಯಾವುದು? ಆದ್ದರಿಂದ ಸಮಸ್ತವೂ ಆತ್ಮನಲ್ಲಿ ಕಲ್ಪಿತವೆಂದು ಅಂಗೀಕರಿಸಬೇಕು(೪೬).

ಈಗ ಇನ್ನೊಂದು ಪ್ರಶ್ನೆ. ಸ್ವ, ಸ್ವಯಂ - ಎಂಬ ಶಬ್ದಗಳನ್ನು ಎಲ್ಲ ಶಬ್ದಗಳಿಗೂ ಸೇರಿಸಬಹುದು. ಅವೆರಡೂ ತಾನು (ಆತ್ಮ) ಎಂಬ ಅರ್ಥವನ್ನು ಕೊಡುತ್ತವೆ. ಹೀಗೆ ಸರ್ವತ್ರ 'ಸ್ವತ್ವ' ವಿದೆಯಾದ್ದರಿಂದ ಆತ್ಮಾರ್ಥಕವೆಂದು ಹೇಳುತ್ತೀಯೆ. ಹಾಗೆಯೇ ತತ್ (ಅದು) ಇದಂ (ಇದು) - ಎಂಬ ಶಬ್ದಗಳನ್ನು ಸರ್ವ ಪದಾರ್ಥಗಳಿಗೂ ಬಳಸಬಹುದಾದ್ದರಿಂದ 'ತತ್ತ್ವ, ಇದಂತ್ವ' ಎಂಬವೂ ಆತ್ಮಾರ್ಥಕಗಳೆಂದು ಹೇಳಬೇಕಾಗಿ ಬರುತ್ತದೆ. 'ರಾಮಃ ಸ್ವಯಮ್ ಉಕ್ತವಾನ್' ಎಂದರೆ ಯಾವ ಅರ್ಥವೋ ಅದೇ ಅರ್ಥವು 'ರಾಮಃ ಸಃ ಉಕ್ತವಾನ್' ಎಂದರೂ ಬರುತ್ತದೆ - ಎನ್ನಬೇಕಾದೀತು. ಇದು ಅಸಂಗತವಲ್ಲವೆ?(೪೭). ಹಾಗಲ್ಲ; ತತ್ತ್ವ, ಇದಂತ್ವಗಳು ಸತ್ತ್ವ ಇದ್ದಂತೆ 'ತ್ವಂ' 'ಅಹಂ'ಗಳಲ್ಲಿಯೂ ಅನುವೃತ್ತವಾಗುವುದು ದಿಟ. ಹಾಗೆಯೇ ಅವು ಆತ್ಮತ್ವದಲ್ಲಿಯೂ ಅನುಗತವಾಗಿವೆ. ಹೇಗೆಂದರೆ, 'ತದಾತ್ಮತ್ವಂ, ಇದಮಾತ್ಮತ್ವಂ' ಎಂದು ಪ್ರಯೋಗಿಸಬಹುದು. ಆತ್ಮತ್ವಕ್ಕಿಂತ ಅಧಿಕದೇಶವೃತ್ತಿಗಳಾದ್ದರಿಂದ

ತತ್ತ್ವ, ಇದಂತ್ವಗಳು ಆತ್ಮಾರ್ಥಕಗಳಲ್ಲ. ಸಮ್ಯಕ್ತ್ವ ಮೊದಲಾದ ಧರ್ಮವಾಚಕಗಳಿದ್ದಂತೆ ಎಂದು ತಿಳಿಯಬೇಕು. ಆತ್ಮನು ಸಮೀಚೀನ, ಘಟವೂ ಸಮೀಚೀನ ಎಂದು ಹೇಳಬಹುದಲ್ಲವೆ? ಇಲ್ಲಿ ಸಮ್ಯಕ್ತ್ವವು ಆತ್ಮಾರ್ಥಕ ವಲ್ಲವೆಂಬುದು ಸ್ಪಷ್ಟವಾಗಿದೆ (೪೮). ತತ್ (ಅದು),ಇದಂ (ಇದು) ಎಂಬ ಶಬ್ದಗಳೂ , ಸ್ವತಾ- ಅನ್ಯತ್ವಶಬ್ದಗಳೂ ಪರಸ್ಪರ ಪ್ರತಿದ್ವಂದ್ವಿಅರ್ಥವನ್ನು ಕೊಡತಕ್ಕವು ಎಂಬುದು ಲೋಕಪ್ರಸಿದ್ಧವಾದದ್ದು. ಪ್ರಕೃತದಲ್ಲಿ 'ಸ್ವಯಂ ಕೂಟಸ್ಥ' ಎಂದರೆ ಬೇರೆ ಯಾರೂ ಅಲ್ಲದ ಕೂಟಸ್ಥ ಎಂದು ಅರ್ಥ. 'ಸ್ವಯಂ ನಾನು' ಎಂದರೆ 'ನಿನಗಿಂತ ಭಿನ್ನನಾದ ನಾನು ಎಂದು ಅರ್ಥ (೪೯-೫೦). ಈ ಪ್ರಕಾರವಾಗಿ ಜೀವಕೂಟಸ್ಥರಿಗೆ ಭೇದವಿದೆ. ಬುದ್ಧಿಗೆ ಸಾಕ್ಷಿಯಾಗಿ ಶರೀರೋಪಾಧಿಯಿಂದ ಕೂಡಿದ ಚೈತನ್ಯವೇ ಕೂಟಸ್ಥ. ಬುದ್ಧಿಯಲ್ಲಿ ಪ್ರತಿಬಿಂಬಿತವಾದ ಚೈತನ್ಯವು ಜೀವ. ಜೀವನೇ ಪ್ರಕೃತದಲ್ಲಿ ಚಿದಾಭಾಸ. 'ಅಹಂ' ನಾನು ಎಂಬ ಬುದ್ಧಿವೃತ್ತಿಯಲ್ಲಿ ಕೂಟಸ್ಥನಿಗೆ ವಿಷಯರೂಪನಾಗಿ ಚಿದಾಭಾಸನೂ ಅದೇ ಸಮಯದಲ್ಲಿ ಸ್ವಯಂಪ್ರಕಾಶನಾಗಿ ಕೂಟಸ್ಥನೂ ಪ್ರತೀತರಾಗುತ್ತಾರೆ. 'ಇದು ಬೆಳ್ಳಿ' ಎಂದಾಗ ಎರಡು ಶಬ್ದಾರ್ಥಗಳಿಗೂ ಅರ್ಥಭೇದವು ಸ್ಪಷ್ಟವಾಗಿರುವಂತೆ ಅಹಂತಾ-ಸ್ವತ್ತ್ವಗಳಿಗೆ ಭೇದವಿದ್ದರೂ ಜನರು ಭ್ರಾಂತಿಯಿಂದ ಅವೆರಡೂ ಏಕವೆಂದು ತಿಳಿದಿದ್ದಾರೆ (೫೧). ಜೀವಕೂಟಸ್ಥರ ಈ ಏಕತಾಭ್ರಮಕ್ಕೆ ಅನಾದಿಯಾದ ಅವಿದ್ಯೆಯು ಮೂಲಕಾರಣವಾಗಿದೆ. ಈ ಅವಿದ್ಯೆಯು ನಿವೃತ್ತವಾದಾಗ ಅದರ ಕಾರ್ಯವಾದ ಭ್ರಮೆಯೂ ಹೋಗುತ್ತದೆ. ಅವಿದ್ಯಾಜನ್ಯವಾದ ಆವರಣತಾದಾತ್ಮ್ಯಗಳು ವಿದ್ಯೆಯಿಂದ (ಆತ್ಮಜ್ಞಾನದಿಂದ) ನಿವೃತ್ತವಾಗುತ್ತವೆ. ಆದರೆ ಅವಿದ್ಯಾಜನ್ಯವಾದ ವಿಕ್ಷೇಪವು (ಜಗತ್ತೆಂಬ ಭ್ರಾಂತಿಯು) ಪ್ರಾರಬ್ಧದ ಕ್ಷಯವಾಗುವವರೆಗೂ ಇರುತ್ತದೆ(೫೨-೫೩). ಅವಿದ್ಯೆ ಮತ್ತು ಪ್ರಾರಬ್ಧಕರ್ಮ - ಇವೆರಡರ ದೆಸೆಯಿಂದ ಆತ್ಮನು ಮನುಷ್ಯನಾಗಿದ್ದಾನೆ. ಸ್ಥೂಲಸೂಕ್ಷ್ಮಶರೀರಗಳಿಂದ ಕೂಡಿದ ಜೀವನೆನಿಸಿದ್ದಾನೆ. ಈತನೇ ಚಿದಾಭಾಸ. ಅವಿದ್ಯೆಯು ನಷ್ಟವಾಗಿ ಆತ್ಮಜ್ಞಾನವು ಉದಿಸಿದರೂ ಜೀವನ್ಮುಕ್ತನಿಗೆ ಶರೀರವಿದ್ದೇ ಇರುತ್ತದೆ. ಇದು ವಿಕ್ಷೇಪದ ಪ್ರಭಾವ. ಅವಿದ್ಯೆಯು ಹೋದ ಮೇಲೆ ದೇಹವೇಕೆ ಬಿದ್ದು ಹೋಗುವುದಿಲ್ಲ? ಅದು ಉಳಿದಿರಲು ಕಾರಣವೇನು? ಎಂಬ ಪ್ರಶ್ನೆ ಹುಟ್ಟುತ್ತದೆ. ಆತ್ಮಜ್ಞಾನದಿಂದ ಅಧ್ಯಾಸವೆಂಬ ಭ್ರಮೆ ನಿವೃತ್ತವಾದರೂ ಪ್ರಾರಬ್ಧಕರ್ಮವು ಮುಗಿದಿರುವುದಿಲ್ಲ ವಾದ್ದರಿಂದ ವಿಕ್ಷೇಪವು ತೊಲಗುವುದಿಲ್ಲ. ಪ್ರಾರಬ್ಧವು ಕ್ಷಯಿಸಿದ ಮೇಲೆ

ವಿಕ್ಷೇಪದಿಂದಾದ ಶರೀರವೂ ಇಲ್ಲವಾಗುತ್ತದೆ ಎಂದು ಹೇಳಿದ್ದಾಯಿತು. ಈಗ ಒಂದು ಶಂಕೆ ಹುಟ್ಟುತ್ತದೆ. ಶರೀರಪ್ರಾಪ್ತಿಗೆ ಅವಿದ್ಯೆಯೇ ನಿಜವಾದ ಕಾರಣ. ಅದರ ಜೊತೆಗೆ ಇರುವುದರಿಂದ ಪ್ರಾರಬ್ಧಕರ್ಮವು ನಿಮಿತ್ತಮಾತ್ರ. ಆದ್ದರಿಂದ ಮುಖ್ಯವಾದ ಅವಿದ್ಯೆಯು ಹೋದ ಮೇಲೆ ಅದರ ಕಾರ್ಯವಾದ ಶರೀರವೂ ಹೋಗಲೇಬೇಕು ಎಂಬುದು ತಾರ್ಕಿಕನ ಶಂಕೆ. ಅದಕ್ಕೆ ಉತ್ತರವೇನೆಂದರೆ - ''ಎಲೈ ತಾರ್ಕಿಕ, **ಸಮವಾಯಿಕಾರಣೇ ನಷ್ಟೇಽಪಿ ಕ್ಷಣಂ ಕಾರ್ಯಮವ-ತಿಷ್ಠತೇ** = ಉಪಾದಾನ ಕಾರಣವು ನಾಶವಾದರೂ ಅದರಿಂದ ಹುಟ್ಟಿದ ಕಾರ್ಯವು ನಾಶವಾಗದೆ ಒಂದು ಕ್ಷಣ ಕಾಲ ಹಾಗೆಯೇ ಇರುತ್ತದೆ! - ಎಂದು ನಿನ್ನ ಸಿದ್ಧಾಂತದಲ್ಲಿ ಒಪ್ಪಿಕೊಂಡಿದ್ದೀಯಲ್ಲವೆ? ಹಾಗೆಯೇ ಅವಿದ್ಯೆಯು ನಷ್ಟವಾದರೂ ಸ್ವಲ್ಪಕಾಲ ದೇಹವಿರುತ್ತದೆ ಎಂದು ನಾವೇಕೆ ಹೇಳಬಾರದು?'' (೫೪). ಅದಕ್ಕೆ ತಾರ್ಕಿಕನು ''ಕಾರ್ಯವು ಒಂದು ಕ್ಷಣಕಾಲ ಮಾತ್ರ ಉಳಿದಿರುತ್ತದೆಯೆಂದು ನಮ್ಮ ಪ್ರಕ್ರಿಯೆಗೋಸ್ಕರ ನಾವು ಹೇಳಿದ್ದೇವೆ. ನಿಮ್ಮ ಪ್ರಕಾರ ದೇಹವು ಬಹುಕಾಲ ಉಳಿದಿರಬಹುದು. ಆದ್ದರಿಂದ ಈ ಹೋಲಿಕೆ ಸರಿಯಲ್ಲ'' ಎನ್ನಬಹುದು. ಅದಕ್ಕೆ ವೇದಾಂತಿಯ ಉತ್ತರ ಇದು - ''ಬಟ್ಟೆಯ ನೂಲುಗಳನ್ನು ಕಿತ್ತುಹಾಕಿದರೂ ಬಟ್ಟೆ ಒಂದು ಕ್ಷಣಕಾಲ ಇರುತ್ತದೆ ಎಂದು ನಿನ್ನ ವಾದ. ಬಟ್ಟೆಯ ನೂಲನ್ನು ಹೆಚ್ಚೆಂದರೆ ಒಂದು ದಿನದಲ್ಲಿ ಎಣಿಸಿಬಿಡಬಹುದು. ಅಷ್ಟು ಅಲ್ಪ ಸಂಖ್ಯೆಯ ಕಾರಣಗಳು ನಾಶವಾದರೆ ಒಂದು ಕ್ಷಣ ಬಟ್ಟೆ ಇರುತ್ತದೆ ಎಂದು ನಿನ್ನ ಹೇಳಿಕೆ. ಮನುಷ್ಯನ ಕರ್ಮವಾದರೋ ಎಷ್ಟೋ ಕೋಟಿ ವರ್ಷಗಳಿಂದ ಸಂಚಿತವಾದದ್ದು. ಅದಕ್ಕೆ ತಕ್ಕಂತೆ ಕಾರ್ಯವಾದ ದೇಹವು ವರ್ಷಗಟ್ಟಲೆ ಉಳಿಯುತ್ತದೆಯೆಂದರೆ ತಪ್ಪೇನು?''(೫೫). ವಿಮರ್ಶೆಗೆ ನಿಲ್ಲುವ ಸರಿಯಾದ ಪ್ರಮಾಣವಿಲ್ಲದೆಯೇ 'ಕಾರ್ಯವು ಒಂದು ಕ್ಷಣಕಾಲ ನಾಶವಾಗದೆ ಉಳಿದಿರುತ್ತದೆ' ಎಂದು ಇಷ್ಟಾನುಸಾರವಾಗಿ ತಾರ್ಕಿಕರು ಕಲ್ಪಿಸಿಕೊಂಡಿದ್ದಾರೆ. ನಾವಾದರೋ ವೇದ, ಯುಕ್ತಿ, ಅನುಭವ - ಈ ಮೂರು ಪ್ರಮಾಣಗಳನ್ನಾಧರಿಸಿ, ಜ್ಞಾನಿಗೂ ಪ್ರಾರಬ್ಧಕರ್ಮಾನುಸಾರವಾಗಿ ದೇಹ ಉಳಿದಿರುತ್ತದೆ ಎಂದು ಹೇಳುತ್ತೇವೆ. ಅಡ್ಡಿಯೇನು?

ಇದಕ್ಕೆ ಪ್ರಮಾಣಗಳು :-

**೧. ವೇದ : ತಸ್ಯ ತಾವದೇವ ಚಿರಂ ಯಾವನ್ನ ವಿಮೋಕ್ಷ್ಯೇಽಥ**

**ಸಂಪತ್ಸ್ಯೇ** (ಐ.ಉ. ೬-೧೪-೨). ಅವಿದ್ಯೆಯಿಂದ ಮುಕ್ತನಾದ ಜ್ಞಾನಿಯು ದೇಹಪಾತವಾಗುವವರೆಗೆ ಹಾಗೆಯೇ ಇದ್ದು, ಅನಂತರ ಬ್ರಹ್ಮದಲ್ಲಿ ಲೀನನಾಗುತ್ತಾನೆ ಎಂದು ತಾತ್ಪರ್ಯ.

೨. **ಯುಕ್ತಿ** : ಕುಂಬಾರನು ಗಡಿಗೆಯನ್ನು ಮಾಡುವಾಗ ಚಕ್ರವನ್ನು ತಿರುಗಿಸುತ್ತಾನಷ್ಟೆ. ತಿರುಗಿಸುವುದನ್ನು ಕೈ ಬಿಟ್ಟರೂ ಚಕ್ರವು ಪೂರ್ವದ ವೇಗಕ್ಕೆ (ವೆಲಾಸಿಟಿ) ಕೆಲವು ಕಾಲ ತಿರುಗುತ್ತದೆ.

೩. **ಅನುಭವ** : ನಮ್ಮ ಕಣ್ಣೆದುರಿಗೆ ಜ್ಞಾನಿಗಳಾದ ಎಷ್ಟೋ ಮಹಾತ್ಮರು ಇದ್ದರೆಂಬುದು ಅನುಭವಸಿದ್ಧ. ಅಲ್ಲದೆ ಸ್ವತಃ ಜ್ಞಾನಿಗಳಿಗೂ ದೇಹವಿದೆಯೆಂಬ ಅನುಭವ ಇರುತ್ತದೆ. ಅವರ ಮಾತು ಸಹ ನಮಗೆ ಪ್ರಮಾಣ (೫೬).

ಹೋಗಲಿ, ಈ ದುಷ್ಟ ತಾರ್ಕಿಕರೊಡನೆ ವಿವಾದ ಬೇಡ! ಪ್ರಕೃತವೇನೆಂಬುದನ್ನು ನೋಡೋಣ. 'ತಾನು ಸ್ವಯಂ' ಎಂದರೆ ಕೂಟಸ್ಥನೂ ವಿಕಾರರಹಿತನೂ ಆದ ಸಾಕ್ಷಿಗೂ 'ನಾನು-ಅಹಂ' ಎಂದರೆ ವಿಕಾರಿಯಾದ ಚಿದಾಭಾಸನಿಗೂ ಭ್ರಾಂತಿಯಿಂದ ಅಭೇದವು ತೋರುತ್ತದೆಯೆಂದು ಸಿದ್ಧವಾಯಿತು (೫೭). ''ನಾನು ಎಂದರೆ ಕೂಟಸ್ಥನೂ ಸಾಕ್ಷಿಯೂ ಆದ ಪರಮಾತ್ಮನೆಂದು ನಿಮ್ಮ ಅಭಿಪ್ರಾಯವಾಗಿ ತೋರುತ್ತಿದೆ. ಹಾಗಿದ್ದರೆ ಲೋಕದಲ್ಲಿ ಯಾರೂ ಹಾಗೆ ಭಾವಿಸಿಲ್ಲವೇಕೆ? ಅಲ್ಲದೆ ನೈಯಾಯಿಕರೇ ಮೊದಲಾದ ಶಾಸ್ತ್ರಜ್ಞರೂ ಹಾಗೆ ಹೇಳದಿರಲು ಕಾರಣವೇನು?'' ಎಂಬ ಪ್ರಶ್ನೆ ಹುಟ್ಟಿದರೆ ಸಿದ್ಧಾಂತಿಯು ಹೇಳುತ್ತಾನೆ - ''ಹೌದು, ಲೌಕಿಕ ಜನರೆಲ್ಲರೂ ಅವಿದ್ಯೆಯಿಂದಾದ ಭ್ರಾಂತಿಗೆ ಒಳಪಟ್ಟು ಸತ್ಯವನ್ನರಿಯದೆ ಹೋಗಿದ್ದಾರೆ. ಇನ್ನು ತಾರ್ಕಿಕರೇ ಮೊದಲಾದ ಕೆಲವು ಶಾಸ್ತ್ರಜ್ಞರು, ತಾವು ಬಹುದೊಡ್ಡ ಪಂಡಿತರೆಂದು ಭಾವಿಸಿಕೊಂಡು ವೇದವಾಕ್ಯಗಳನ್ನು ಉಪೇಕ್ಷಿಸಿದ್ದಾರೆ. ಅವನ್ನು ಗಮನಕ್ಕೆ ತಂದರೂ ಮೂರ್ಖತೆಯಿಂದ ಪಟ್ಟು ಹಿಡಿದು ಯುಕ್ತಿವಾದವನ್ನೇ ಅವಲಂಬಿಸಿ ತಪ್ಪು ಅರ್ಥವನ್ನು ಹೇಳುತ್ತಾರೆ. ಅವಿದ್ಯೆಯ ಪ್ರಾಬಲ್ಯ ಇದು (೫೮). ಅವರು ಶ್ರುತ್ಯರ್ಥವನ್ನು ಹೇಳುವಾಗಲೂ ಅವುಗಳ ಪೂರ್ವಾಪರವೇನು? ಯಾವ ಸಂದರ್ಭದಲ್ಲಿ ಬಂದಿದೆ?'' - ಇತ್ಯಾದಿ ವಿಚಾರಗಳನ್ನು ಮಾಡುವುದಿಲ್ಲ. ಯಾವುದೋ ಸಂದರ್ಭದಲ್ಲಿ ಎಲ್ಲಿಯೋ ಹೇಳಿದ ವಾಕ್ಯಾಭಾಸಗಳನ್ನು ಕಲ್ಪಿಸಿ ತಂದು ತಮ್ಮ ತಮ್ಮ ಪಕ್ಷಗಳಿಗೆ ಅನುಕೂಲವಾಗುವಂತೆ ಜೋಡಿಸಿ ಬಿಡುತ್ತಾರೆ. ಹಾಗೆ ಜೋಡಿಸುವಾಗ

ಅವರಿಗೆ ನಾಚಿಕೆಯೂ ಆಗುವುದಿಲ್ಲ(೫೯). ಹೇಗೆಂದರೆ, 'ಚೈತನ್ಯ'ಸಹಿತವಾದ ಈ ದೇಹವು ಪ್ರತ್ಯಕ್ಷವಾಗಿ ತೋರುತ್ತದೆ., ಹೀಗಿರುವಾಗ 'ನಾನು' ಎಂದರೆ ಈ ದೇಹವೇ ಸರಿ. ಇದನ್ನು ಬಿಟ್ಟು ಏನನ್ನೋ (ಹುಟ್ಟಿ) ಹಾಕುವುದು ಸರಿಯಲ್ಲ'' ಎಂದು ಚಾರ್ವಾಕರೂ, ಪಾಮರರಾದ ಸಾಮಾನ್ಯ ಜನರೂ ಹೇಳುತ್ತಾರೆ. ಇವರು ದೇಹಾತ್ಮವಾದಿಗಳಾದ ನಾಸ್ತಿಕರು ಮತ್ತು ಅಜ್ಞರು. ಇವರಿಗೆ ದೇಹವು ಕಾಣುತ್ತದೆಯೇ ಹೊರತು ಚೈತನ್ಯವೆಲ್ಲಿ ಕಾಣಸಿಗುತ್ತದೆ? ದೇಹವೇ ನಾನಾದರೆ 'ನನ್ನ ದೇಹ' ಎನ್ನುವುದು ಹೇಗೆ? ಇತ್ಯಾದಿ ವಿಚಾರವನ್ನವರು ಮಾಡುವುದಿಲ್ಲ(೬೦). ಈ ಚಾರ್ವಾಕರು ಪ್ರತ್ಯಕ್ಷವನ್ನು ಮಾತ್ರ ನಂಬತಕ್ಕ ಪ್ರತ್ಯಕ್ಷವಾದಿಗಳು. ಆದರೂ ತಮ್ಮ ಅಭಿಪ್ರಾಯವು ಸರಿಯೆಂದು ಜನರಿಗೆ ನಂಬಿಕೆ ಹುಟ್ಟಿಸುವುದಕ್ಕಾಗಿ ಯಾವುದೋ ಸಂದರ್ಭದಲ್ಲಿ ಬಂದ ವೇದವಾಕ್ಯವನ್ನು ಉದಾಹರಿಸಿ ಬಿಡುತ್ತಾರೆ. ಉದಾಹರಣೆಗೆ, ಅನ್ನಮಯ ಕೋಶವನ್ನು ವಿವರಿಸುವುದಕ್ಕಾಗಿ ತೈತ್ತಿರೀಯದಲ್ಲಿ ''ಸ ವಾ ಏಷ ಪುರುಷೋಽನ್ನರಸಮಯಃ'' (ತೈ.ಉ.೨-೧-೧) ಎಂಬ ವಾಕ್ಯವಿದೆ. ಅನ್ನಮಯವಾದದ್ದು ದೇಹವಾದ್ದರಿಂದ ಪುರುಷ(ಆತ್ಮ) ಎಂದರೆ ಈ ದೇಹವೇ ಎನ್ನುತ್ತಾರೆ. ರಾಕ್ಷಸನಾದ ವಿರೋಚನನು ''ಆತ್ಮೈವ ದೇಹಮಯಃ'' ಎಂದು ಹೇಳುತ್ತಾನೆ. ಅದೇ ವೇದದ ಸಿದ್ಧಾಂತವೆಂದು ಈ ಜನರ ಹೇಳಿಕೆ(೬೧). ಈ ನಾಸ್ತಿಕರಲ್ಲಿ ಇನ್ನೊಂದು ಬಗೆಯವರಿದ್ದಾರೆ. ಅವರು ದೇಹಾತ್ಮವಾದಿಗಳಲ್ಲ. ದೇಹಕ್ಕಿಂತ ಅತಿರಿಕ್ತವಾದದ್ದು ಆತ್ಮ. ಏಕೆಂದರೆ, ಮನುಷ್ಯನು ಸತ್ತು ಹೋದಾಗ ದೇಹವಿದ್ದೇ ಇರುತ್ತದೆ. ಹೆಣದಲ್ಲಿ ಚೈತನ್ಯವಿರುವುದಿಲ್ಲ. ಜೀವಾತ್ಮನಿರುವುದಿಲ್ಲ. ಆದ್ದರಿಂದ ದೇಹವು ಆತ್ಮವಲ್ಲ. ಇಂದ್ರಿಯವು ಆತ್ಮನೆನ್ನುವುದು ಸರಿ. ಹೇಗೆಂದರೆ, 'ನಾನು ನೋಡುತ್ತೇನೆ, ನಾನು ಕೇಳುತ್ತಿದ್ದೇನೆ, ನಾನು ಹೋಗುತ್ತೇನೆ'' ಎಂದು ಜನರು ಆಡಿಕೊಳ್ಳುವುದು ಪ್ರತ್ಯಕ್ಷವಾಗಿದೆ. ಇಲ್ಲಿ ನೋಡತಕ್ಕದ್ದು ದೇಹವಲ್ಲ, ನೇತ್ರೇಂದ್ರಿಯ, ಕೇಳತಕ್ಕದ್ದು ಶ್ರೋತ್ರೇಂದ್ರಿಯ, ಹೋಗತಕ್ಕದ್ದು ಪಾದವೆಂಬ ಕರ್ಮೇಂದ್ರಿಯ. ಆದ್ದರಿಂದ ಇಂದ್ರಿಯವೇ ಆತ್ಮ ಎಂದು ಇವರ ಅಭಿಪ್ರಾಯ(೬೨-೬೩). ಇಲ್ಲೊಂದು ಶಂಕೆ ಬರುತ್ತದೆ. ಆತ್ಮಕ್ಕೆ ಚೈತನ್ಯಶಕ್ತಿ ಇರಬೇಕು. ನೋಡುವುದು, ಹೋಗುವುದು ಮೊದಲಾದದ್ದು ಚೈತನ್ಯವಿಲ್ಲದೆ ಆಗುವುದಿಲ್ಲ. ಜಡವಾದ ಕಲ್ಲುಬಂಡೆ ನೋಡುವುದೂ ಇಲ್ಲ, ಹೋಗುವುದೂ ಇಲ್ಲ. ಆದ್ದರಿಂದ ಜಡವಾದ ಇಂದ್ರಿಯವು ಹೇಗೆ ಆತ್ಮವಾದೀತು? ಎಂದು. ಇದಕ್ಕೆ ಉತ್ತರವೇನೆಂದರೆ, ಉಪನಿಷತ್ತುಗಳಲ್ಲಿ ವಾಕ್ ಮುಂತಾದ

ಇಂದ್ರಿಯಗಳು ಪರಸ್ಪರ ಮಾತಾಡಿದವೆಂದೂ, ಜಗಳವಾಡಿದವೆಂದೂ ವರ್ಣನೆ ಇದೆ. ಆದ್ದರಿಂದ ಅವುಗಳಿಗೆ ಚೈತನ್ಯವಿದೆಯೆಂದೂ, ಅವು ಜಡವಸ್ತುಗಳಲ್ಲವೆಂದೂ ತಿಳಿಯಬೇಕು ಎಂದು ಇಂದ್ರಿಯಾತ್ಮವಾದಿಗಳ ಮತ. ದೇಹಾತ್ಮವಾದಿಗಳ ಈ ಮತ ಸರಿಯಲ್ಲ. ಸತ್ತಮೇಲೆ ದೇಹವು ನಾಶವಾಗುವುದರಿಂದ ಆತ್ಮವೂ ನಾಶವಾಗುವುದೆಂದೂ ಈಗ ಹೊಸದಾದ ಆತ್ಮ ಹುಟ್ಟಿದೆಯೆಂದೂ ಹೇಳಬೇಕಾಗುತ್ತದೆ. ಆಗ ಪಾಪಪುಣ್ಯಗಳ ಗತಿ ಏನು? ಅವುಗಳಿಗೆ ಫಲವೇ ಇಲ್ಲವೆಂದಾಗುತ್ತದೆ. ನಮಗೆ ಒದಗುವ ನಾನಾ ಬಗೆಯ ಸುಖದುಃಖಗಳಿಗೆ ಕಾರಣವೇ ಇಲ್ಲವಾಗುವುದು. ಧರ್ಮಕ್ಕೆ ಬೆಲೆಯೇ ಇಲ್ಲದಂತಾದೀತು. ಪಾಪಕಾರ್ಯದಿಂದ ಏಕೆ ಸುಖವಾಗಿರಬಾರದು? ಎಂಬುದಕ್ಕೂ ಉತ್ತರವಿಲ್ಲದೆ ಹೋಗುವುದು. ಇಂದ್ರಿಯವು ಆತ್ಮವೆನ್ನುವುದೂ ಸರಿಯಲ್ಲ. ಜ್ಞಾನೇಂದ್ರಿಯ, ಕರ್ಮಗಳು ಸೇರಿ ಹತ್ತು ಇಂದ್ರಿಯಗಳಿವೆ. ಒಬ್ಬನಿಗೆ ಹತ್ತು ಆತ್ಮಗಳೇ? ಕಣ್ಣು, ಕಿವಿ ಮುಂತಾದ್ದರಲ್ಲಿ ಕೆಲವು ಕೆಟ್ಟುಹೋದಾಗ ದೇಹವಿರುವುದು ಹೇಗೆ? ನನ್ನ ಕಣ್ಣು, ನನ್ನ ಕಿವಿ, ನನ್ನ ದೇಹ ಎಂದು ಹೇಳುತ್ತೇವಾದ್ದರಿಂದ ಈ 'ನಾನು ಯಾರು?' ಎಂಬ ಪ್ರಶ್ನೆಗೆ ಉತ್ತರವೇ ಇಲ್ಲದೇ ಹೋದೀತು. ಇಂದ್ರಿಯ ಮತ್ತು ದೇಹ - ಇದಾವುದೂ ಆತ್ಮವಲ್ಲ. ಈ ಚಾರ್ವಾಕರ ವಾದ ಹುರುಳಿಲ್ಲದ್ದು(೬೪).

ಪ್ರಾಣ, ಅಪಾನ, ವ್ಯಾನ, ಉದಾನ, ಸಮಾನ ಎಂದು ಪಂಚವಾಯು ಭೇದಗಳಿವೆಯಷ್ಟೆ. ಇವುಗಳ ಸಮಷ್ಟಿಯಾದ ವಾಯುವಿಗೂ ಪ್ರಾಣವೆಂದು ಹೆಸರು. ಸಮಷ್ಟಿರೂಪವಾದ ಈ ಪ್ರಾಣವೇ ಹಿರಣ್ಯಗರ್ಭ. ಹಿರಣ್ಯಗರ್ಭನನ್ನು ಉಪಾಸನೆ ಮಾಡತಕ್ಕ ಜನರು ಪ್ರಾಣವೇ ಆತ್ಮವೆನ್ನುತ್ತಾರೆ. ಕಣ್ಣು ಮುಂತಾದ ಇಂದ್ರಿಯಗಳು ನಷ್ಟವಾದರೂ ಮನುಷ್ಯನು ಬದುಕಿರುತ್ತಾನೆ. ಪ್ರಾಣವಿರುವುದೇ ಇದಕ್ಕೆ ಕಾರಣ. ಮನುಷ್ಯನಿಗೆ ನಿದ್ರೆ ಬಂದಾಗ ದೇಹ ಮತ್ತು ಇಂದ್ರಿಯಗಳಿಗೆ ಚೈತನ್ಯವೇ ಇರುವುದಿಲ್ಲ. ಆದರೆ ಪ್ರಾಣವಾಯು ಮಾತ್ರ ಚೈತನ್ಯಮಯವಾಗಿ ಕೆಲಸ ಮಾಡುತ್ತಲೇ ಇರುವುದು. ಶ್ರುತಿಗಳಲ್ಲಿಯೂ **''ಪ್ರಾಣಾದಯ ಏವ ಏತಸ್ಮಿನ್ ಪುರೇ ಜಾಗ್ರತಿ''** (ಪ್ರಶ್ನ.ಉ.೪)ಮುಂತಾದ ವಚನಗಳು ಪ್ರಾಣದ ಶ್ರೇಷ್ಠತೆಯನ್ನು ಎತ್ತಿ ಹಿಡಿದಿವೆ. ಏತಸ್ಮಿನ್ ಪುರೇ - ಎಂದರೆ ಈ ದೇಹದಲ್ಲಿ ಎಂದರ್ಥ. ಪ್ರಾಣವು ದೇಹವನ್ನು ಬಿಟ್ಟು ಹೋದಾಗ ಮಾತ್ರ ಮನುಷ್ಯನು ಮೃತನಾದನೆಂದು ಲೋಕವು ತಿಳಿದಿದೆ. ಆದ್ದರಿಂದ ಪ್ರಾಣವೇ ಆತ್ಮ ಎಂದು ಇವರ ಮತವಿದೆ (೬೫-೬೬). **'ಮನೋ ಬ್ರಹ್ಮೇತ್ಯುಪಾಸೀತ'**

(ಛಾಂ.ಉ.೩-೧೮-೧) ಎಂದು ವೇದವಚನವಿದೆ. ಮನಸ್ಸೇ ಬ್ರಹ್ಮ (ಆತ್ಮ) ಎಂದು ಉಪಾಸನೆ ಮಾಡತಕ್ಕವರಿದ್ದಾರೆ. ಪ್ರಾಣವು ಆತ್ಮವಾದರೆ ಸುಖದುಃಖಗಳು ಅದಕ್ಕೆ ತಿಳಿಯಬೇಕಾಗಿತ್ತು. ಅವನ್ನು ಭೋಗಿಸತಕ್ಕದ್ದು ಮನಸ್ಸೇ. ಆದ್ದರಿಂದ ಮನಸ್ಸೇ ಆತ್ಮ. **'ಮನ ಏವ ಮನುಷ್ಯಾಣಾಂ ಕಾರಣಂ ಬಂಧಮೋಕ್ಷಯೋಃ'** (ಮೈ.ಉ.೬-೩೪) ಎಂದು ವೇದವೇ ಹೇಳುತ್ತದೆ. ಸಂಸಾರಬಂಧಮೋಕ್ಷಗಳಿಗೆ ಕಾರಣವಾದದ್ದು ಮನಸ್ಸು. **'ಅನ್ಯೋಽಂತರ ಆತ್ಮಾ ಮನೋಮಯಃ'** (ತೈ.ಉ.೨-೨) ಎಂದೂ ಶ್ರುತಿ ಇದೆ. ಪ್ರಾಣಕ್ಕಿಂತ ಅಂತರವಾದದ್ದು ಮನಸ್ಸೆಂದೂ ಅದು ಆತ್ಮವೆಂದೂ ಸ್ಪಷ್ಟವಾಗಿ ವೇದವು ಹೇಳಿರುವುದರಿಂದ ಮನಸ್ಸೇ ಆತ್ಮವೆನ್ನಬೇಕು (೬೭-೬೮). ಈ ವಾದಗಳೂ ಸರಿಯಾದುವಲ್ಲ. ''ನನ್ನ ಪ್ರಾಣ' ಎಂದು ಹೇಳುತ್ತೇವಾದ್ದರಿಂದ ಈ 'ನಾನು' ಪ್ರಾಣಕ್ಕಿಂತ ಬೇರೆಯಾಗಿರಬೇಕು. ಹೊರಗೆ ಬೀಸುವ ವಾಯುವೇ ದೇಹದೊಳಗೆ ಹೋದಮಾತ್ರದಿಂದ ಆತ್ಮವಾಗಿ ಬಿಡುವುದಿಲ್ಲ. ಅದರಲ್ಲಿ ಚಲನಶಕ್ತಿ ಇದೆಯೇ ಹೊರತು ಜ್ಞಾನಶಕ್ತಿ ಇಲ್ಲ. ಆದ್ದರಿಂದ ನಿದ್ರೆ ಬಂದಾಗ ಪ್ರಾಣವಿದ್ದರೂ ನಮಗೆ ಏನೂ ತಿಳಿಯುವುದಿಲ್ಲ. ಮನಸ್ಸು ಜ್ಞಾನಕ್ಕೆ ಸಾಧನವೇ ಹೊರತು ಅದೇ ಸ್ವತಃ ಏನನ್ನೂ ತಿಳಿಯದು. 'ನನ್ನ ಮನಸ್ಸು' ಎಂಬ ವ್ಯವಹಾರವಿರುವುದರಿಂದ 'ನಾನು' ಬೇರೆ ಇರಬೇಕು. ಮನಸ್ಸು ವಿಷಯ ವಾಸನೆಗಳಿಂದ ಕೂಡಿದರೆ ಸಂಸಾರಬಂಧನವಾಗುತ್ತದೆ. ವಿಷಯವಾಸನೆ ಹೋದಾಗ ಮತ್ತು ಆತ್ಮಜ್ಞಾನವು ಬಂದಾಗ ಜೀವನಿಗೆ ಮೋಕ್ಷವಾಗುತ್ತದೆ. ಮನಸ್ಸು ಆತ್ಮನ ಬಂಧಮೋಕ್ಷಗಳಿಗೆ ಕಾರಣವೇ ಹೊರತು ಅದಕ್ಕೇ ಬಂಧಮೋಕ್ಷಗಳಾಗುವುದಿಲ್ಲ. ಆದ್ದರಿಂದ ಈ ವಾದಗಳು ಅಸಂಗತವಾದವು. ಕ್ಷಣಿಕವಿಜ್ಞಾನವಾದಿಗಳಾದ ಬೌದ್ಧರು ವಿಜ್ಞಾನವೇ ಆತ್ಮನೆನ್ನುತ್ತಾರೆ. ಇದು ಮನಸ್ಸಿಗಿಂತಲೂ ಆಂತರವಾದದ್ದು - ಅದಕ್ಕಿಂತ ಒಳಗಿರತಕ್ಕದ್ದು - ಸೂಕ್ಷ್ಮವಾದದ್ದು. ಮನಸ್ಸಿಗೆ ವಿಜ್ಞಾನವು ಮೂಲವೆಂಬುದು ಸ್ಪಷ್ಟವಾಗಿ ತಿಳಿದು ಬರುತ್ತದೆ (೬೯). ಹೇಗೆಂದರೆ, ಅಂತಃಕರಣದಲ್ಲಿ ಅಹಂವೃತ್ತಿ ಇದಂವೃತ್ತಿ ಎಂಬ ಎರಡು ವ್ಯಾಪಾರಗಳಿವೆ. ಅಹಂವೃತ್ತಿ ಎಂದರೆ ನಾನು ಎಂಬ ಭಾವನೆ. ಇದಂವೃತ್ತಿ ಎಂದರೆ ಇದು ಘಟ, ಪಟ ಇತ್ಯಾದಿ ಭಾವನೆ. ನಾನು ಘಟವನ್ನು ನೋಡುತ್ತೇನೆ. ಘಟವನ್ನು ತಿಳಿದಿದ್ದೇನೆ ಎಂಬಾಗ ಯಾವ ಘಟಾದಿ ಜ್ಞಾನವಿದೆಯೋ ಅದಕ್ಕೆ ಮೊದಲು 'ಅಹಂ' 'ನಾನು' ಎಂಬ ಭಾವನೆ ಇದ್ದೇ ಇರುತ್ತದೆ. ಅದಿಲ್ಲದೆ ಜ್ಞಾನವು ಬರುವುದಿಲ್ಲ. ಆದ್ದರಿಂದ ಅಹಂವೃತ್ತಿಯಾದ

ವಿಜ್ಞಾನವು ಇದಂವೃತ್ತಿಯಾದ ಮನಸ್ಸಿಗೆ ಮೂಲವೆಂದು ಗೊತ್ತಾಗುತ್ತದೆ (೭೦). ಆದ್ದರಿಂದ ಇದಂವೃತ್ತಿಗೆ ಅಹಂವೃತ್ತಿಯು ಮೂಲವೆಂದು ತಿಳಿಯಬೇಕು. ಅಂತಃಕರಣವು ತನ್ನನ್ನು ಮೊದಲು ತಿಳಿದುಕೊಳ್ಳದೆ ಹೊರಗಿನದನ್ನು ಎಂದಿಗೂ ತಿಳಿಯಲಾರದು (೭೧). ಪ್ರತಿಕ್ಷಣದಲ್ಲಿಯೂ ಅಹಂವೃತ್ತಿಯು ಹುಟ್ಟಿ ನಾಶವಾಗುತ್ತಲೇ ಇರುವುದರಿಂದ, ಈ ಅಹಂವೃತ್ತಿಯಿಂದ ಹುಟ್ಟುವ ವಿಜ್ಞಾನವೂ ಕ್ಷಣಿಕವಾದದ್ದು. ಇದು ಸ್ಥಿರವಾಗಿ ಇರತಕ್ಕದ್ದಲ್ಲ. ಮತ್ತು ಈ ಕ್ಷಣಿಕವಿಜ್ಞಾನವು ಸ್ವಯಂಪ್ರಕಾಶವಾದದ್ದು. ಹೇಗೆಂದರೆ, ಈ ವಿಜ್ಞಾನವು ಹುಟ್ಟಿರುವುದು ತಾನಾಗಿಯೇ ಗೊತ್ತಾಗುತ್ತದೆ. ಅದು ಹುಟ್ಟಿದೆ ಎಂಬುದನ್ನು ತಿಳಿಸಲು ಇನ್ನಾವುದೂ ಬೇಕಾಗುವುದಿಲ್ಲ, ಇದು ಅನುಭವಸಿದ್ಧ (೭೨). ಇದೇ ವಿಜ್ಞಾನಮಯಕೋಶ. ಇದೇ ಜೀವಾತ್ಮನೆಂದು ವೇದವೇ ಹೇಳುತ್ತದೆ. **'ಅನ್ಯೋಽಂತರ ಆತ್ಮಾ ವಿಜ್ಞಾನಮಯಃ'** (ತೈ.ಉ.೨-೩) ಮನಸ್ಸಿಗಿಂತ ಆಂತರವಾದ ವಿಜ್ಞಾನಮಯವೇ ಆತ್ಮ ಎಂದು ಈ ತೈತ್ತಿರೀಯಶ್ರುತಿಯ ಅರ್ಥ. **'ವಿಜ್ಞಾನಂ ಯಜ್ಞಂ ತನುತೇ, ಕರ್ಮಾಣಿ ತನುತೇಽಪಿ ಚ'** (ತೈ.ಉ. ೨-೫-೧) ಎಂದೂ ಅದೇ ಹೇಳಿದೆ. ವಿಜ್ಞಾನವೇ ಯಜ್ಞಾದಿಕರ್ಮಗಳನ್ನು ನಡೆಸುತ್ತದೆ ಎಂದು ಇದರ ಅಭಿಪ್ರಾಯ. ಈ ಕ್ಷಣಿಕವಿಜ್ಞಾನಮಯ ಕೋಶಕ್ಕೆ ಎಲ್ಲ ಸಂಸಾರವು ಗಂಟುಬಿದ್ದಿದೆ. ಹುಟ್ಟು, ಸಾವು, ಸುಖ, ದುಃಖ ಮೊದಲಾದುವೆಲ್ಲ ಈ ವಿಜ್ಞಾನಮಯಕೋಶವಾದ ಜೀವನಿಗೆ - ಎಂದು ವಿಜ್ಞಾನವಾದಿಗಳಾದ ಬೌದ್ಧರ ಸಿದ್ಧಾಂತ (೭೩). ಬೌದ್ಧರ ಇನ್ನೊಂದು ಪಂಗಡಕ್ಕೆ ಸೇರಿದ ಮಾಧ್ಯಮಿಕರು ಹೇಳುವುದೇನೆಂದರೆ, ಈ ಕ್ಷಣಿಕ ವಿಜ್ಞಾನವು ಆತ್ಮವಲ್ಲ. ಇದು ಮಿಂಚಿನಂತೆ, ಮೋಡದಂತೆ, ಕಣ್ಣುರೆಪ್ಪೆ ಮುಚ್ಚಿ ತೆಗೆದಂತೆ ಬಹುಬೇಗನೆ ನಾಶವಾಗತಕ್ಕದ್ದು. ಇನ್ನು ಬೇರೆ ಯಾವುದೂ ಆತ್ಮನೆನ್ನಿಸಿಕೊಳ್ಳಲು ಯೋಗ್ಯವಾಗಿ ಇಲ್ಲದ್ದರಿಂದ ಶೂನ್ಯವೇ ಆತ್ಮ ಎಂದು ಈ ಶೂನ್ಯವಾದಿಗಳಾದ ಮಾಧ್ಯಮಿಕರು ವಾದಿಸುತ್ತಾರೆ. **'ಅಸದೇವೇದಮಗ್ರ ಆಸೀತ್'** (ಛಾಂ.ಉ. ೬-೧೯-೧; ೬-೨-೧) ಎಂದು ಉಪನಿಷತ್ತು ಹೇಳಿದೆ. ಅಸತ್ = ಶೂನ್ಯ (೭೪). ವಿಜ್ಞಾನವು ಕ್ಷಣಿಕವಾದರೂ ಧಾರಾರೂಪವಾಗಿ ಹರಿಯುತ್ತಲೇ ಇರುತ್ತದೆ. ಈ ಧಾರೆಯನ್ನು ಆಲಯವಿಜ್ಞಾನವೆನ್ನುತ್ತಾರೆ. ಇದೇ ಜೀವಾತ್ಮ ಎಂದು ಬೌದ್ಧವಿಜ್ಞಾನವಾದಿಗಳ ಅಭಿಪ್ರಾಯ. ಈ ಕ್ಷಣಿಕವಿಜ್ಞಾನವಾದರೋ ಒಂದು ಹುಟ್ಟಿ ನಷ್ಟವಾದೊಡನೆ ಇನ್ನೊಂದು ಹುಟ್ಟುತ್ತದೆ. ಅದು ನಷ್ಟವಾದೊಡನೆ ಮೂರನೆಯದು ಹುಟ್ಟುತ್ತದೆ. ಹೀಗೆ ದೀಪದ ಜ್ಯೋತಿಯಂತೆಯೂ ನದಿಯ

ಪ್ರವಾಹದಂತೆಯೂ ಹುಟ್ಟುತ್ತಲೇ ಇರುವುದರಿಂದ ವಿಜ್ಞಾನಧಾರೆ ಏರ್ಪಡುತ್ತದೆ. ಇದರಲ್ಲಿ ಅಹಂವೃತ್ತಿರೂಪವಾದ ಪ್ರಥಮವಿಜ್ಞಾನವಾದ ಮೇಲೆ ಇದಂವೃತ್ತಿರೂಪವಾದ ಪದಾರ್ಥವು ಗೋಚರಿಸುತ್ತದೆ. ಪ್ರಥಮ ವಿಜ್ಞಾನಧಾರೆಯೇ ಬುದ್ಧಿ. ಇದೇ ಆತ್ಮ ಎಂದು ಒಟ್ಟಿನ ಆಶಯ. ಈ ಮತವು ಸರಿಯಲ್ಲ. 'ನನಗೆ ಘಟಾದಿಗಳ ಜ್ಞಾನವಾಗಿದೆ' ಎಂಬುದು ಅನುಭವ ಸಿದ್ಧ. ಈ ಘಟಾದಿಜ್ಞಾನವನ್ನು ತಿಳಿದುಕೊಳ್ಳತಕ್ಕ 'ನಾನು' ಯಾರು? ಆತನು ಬುದ್ಧಿಗೂ ಸಾಕ್ಷಿಯಾದವನು. ಈ ವಿಜ್ಞಾನಧಾರೆಗೆ ಸಾಕ್ಷಿಯಾದವನು ಆತ್ಮನೆಂದು ಹೇಳುವುದೇ ಯುಕ್ತವಾದದ್ದು. ಆತ್ಮನು ಕ್ಷಣಿಕನೆಂದು ಹೇಳುವುದು ಅಸಂಗತ. ಹಾಗಾದರೆ ಭೋಜನ ಮಾಡುವಾಗ ಬೌದ್ಧಮತದಂತೆ ಅನೇಕ ಆತ್ಮರು ಹುಟ್ಟಿ ನಾಶವಾಗಿರುತ್ತಾರೆ. 'ಭೋಜನದಿಂದ ತೃಪ್ತನಾದೆನು' ಎಂದು ಹೇಳಿಕೊಳ್ಳತಕ್ಕವನು ಭೋಜನವನ್ನೇ ಮಾಡಿರುವುದಿಲ್ಲ! ತಿಂದವರು ಬೇರೆ, ತೃಪ್ತನಾದವನು ಬೇರೆ! ಇತ್ಯಾದಿ ಹಲವು ದೋಷಗಳು ವಿಜ್ಞಾನ ವಾದದಲ್ಲಿರುವುದರಿಂದ ಈ ವಾದವು ಅಯುಕ್ತ. ಪ್ರಕೃತದಲ್ಲಿ ವಿಜ್ಞಾನವಾದವು ದೋಷಯುಕ್ತವಾದ್ದರಿಂದಲೂ ಬೇರೊಂದು ವಸ್ತುವು ಗೋಚರಿಸ ದಿರುವುದರಿಂದಲೂ ಶೂನ್ಯವೇ ಆತ್ಮ ಎಂದು ಮಾಧ್ಯಮಿಕರು ಹೇಳುತ್ತಾರೆ. **''ಅಸದೇವೇದಮಗ್ರ ಆಸೀತ್''** (ಛಾಂ.ಉ. ೬-೧೯-೧) ಇತ್ಯಾದಿ ಶ್ರುತಿಗಳಲ್ಲಿ ಅಸತ್ = ಶೂನ್ಯವೇ ಮೊದಲಿತ್ತು ಎಂದು ಹೇಳಿರುವುದರಿಂದ ಶೂನ್ಯವೇ ಆತ್ಮವೆಂದು ಸಿದ್ಧವಾಗುತ್ತದೆ. ಘಟಪಟಾದಿವಿಶಿಷ್ಟವಾದ ಈ ಜಗತ್ತಿನ ಜ್ಞಾನವೂ ಜ್ಞೇಯವಾದ ಈ ಜಗತ್ತು ಇದೆಲ್ಲವೂ ಭ್ರಾಂತಿಯಿಂದ ತೋರುತ್ತದೆ ಎಂದು ಮಾಧ್ಯಮಿಕರ ಅಭಿಪ್ರಾಯ(೭೫). ಇದೂ ಸರಿಯಲ್ಲ. ಜಗತ್ತೆಲ್ಲವೂ ಭ್ರಾಂತಿಯಿಂದ ತೋರುವುದಾದರೆ ಭ್ರಾಂತಿಗೆ ಅಧಿಷ್ಠಾನ ಯಾವುದು? ಯಾವುದನ್ನು ಜಗತ್ತೆಂದು ತಿಳಿದಿದ್ದೇವೆ? ಭ್ರಾಂತಿ ಬರಲು ಮೊದಲು ಅದಕ್ಕೆ ಒಂದು ವಸ್ತುವಿರಬೇಕು. ಹಗ್ಗವನ್ನು ಹಾವೆಂದು ಭ್ರಾಂತಿಪಟ್ಟಾಗ ಹಗ್ಗವೇ ಭ್ರಾಂತಿಯ ಅಧಿಷ್ಠಾನ. ಅದಿಲ್ಲದೆ ಭ್ರಾಂತಿ ಹುಟ್ಟುವುದಿಲ್ಲ. ಜಗತ್ತಿಗೆ ಯಾವುದು ಅಧಿಷ್ಠಾನವೋ ಅದೇ ಆತ್ಮವೆಂದು ಸಿದ್ಧವಾಗುತ್ತದೆ. ಮತ್ತು ಇದೆಲ್ಲವೂ ಶೂನ್ಯವೆಂದು ತಿಳಿಯತಕ್ಕ ನೀನು ಯಾರು? ಶೂನ್ಯವೆನ್ನಲು ತಿಳಿದ ಒಬ್ಬ ಸಾಕ್ಷಿ ನೀನು. ನೀನೇ ಶೂನ್ಯನಲ್ಲ! ಅಲ್ಲಿಗೆ ಶೂನ್ಯನಲ್ಲದವನೊಬ್ಬನಿದ್ದಾನೆ. ಆತನೇ ಸಾಕ್ಷಿ. ಆ ಸಾಕ್ಷಿಯೇ ಆತ್ಮ ಎನ್ನುತ್ತೇವೆ(೭೬). **''ವಿಜ್ಞಾನ-ಮಯಾದನ್ಯೋಽಂತರ ಆತ್ಮಾ ಆನಂದಮಯಃ, ಅಸ್ತೀತ್ಯೇ-**

**ವೋಪಲಬ್ಧವ್ಯಃ''** (ತೈ.ಉ.೨-೪) ಎಂದು ಶ್ರುತಿಯಿರುವುದರಿಂದ ವಿಜ್ಞಾನಮಯಕ್ಕಿಂತ ಅನ್ಯನಾದ ಆತ್ಮನಿದ್ದಾನೆ, ಪರಮಾರ್ಥವಾಗಿ ಆತ್ಮನಿದ್ದಾನೆ ಎಂದೇ ತಿಳಿಯಬೇಕು. ಇದು ವೈದಿಕದರ್ಶನ. ಬೌದ್ಧರು ಹೇಳುವ ಕ್ಷಣಿಕವಿಜ್ಞಾನವೂ ಆತ್ಮನಲ್ಲ, ಶೂನ್ಯವೂ ಆತ್ಮನಲ್ಲ(೭೭).

ಹೀಗೆ ಬೌದ್ಧರ ವಿಜ್ಞಾನಮಯವಾಗಲಿ ಶೂನ್ಯವಾಗಲಿ ಆತ್ಮವಲ್ಲವೆಂದು ಸಿದ್ಧವಾಯಿತು. ವಿಜ್ಞಾನಮಯಕ್ಕಿಂತ ಅನ್ಯನಾದ ಆನಂದಮಯನೇ ಆತ್ಮನೆಂದು ವೈದಿಕಸಿದ್ಧಾಂತವಿದೆ.(ಆನಂದನೇ ಆತ್ಮನೆಂದು ಪಕ್ಷಾಂತರವಿದೆ.) ಈ ಆತ್ಮನ ಪರಿಮಾಣವೆಷ್ಟು? ಅವನು ಯಾವ ಅಳತೆಯವನು? ಎಂಬ ವಿಷಯದಲ್ಲಿ ಸಹ ವಿವಾದವಿದೆ. ಈ ವಿಚಾರವಾಗಿ ಸಹ ವಾದಿಗಳಲ್ಲಿ ಒಮ್ಮತವಿಲ್ಲ. ತಮ್ಮ ವಾದಕ್ಕೆ ಈ ಜನರು ವೇದವಾಕ್ಯಗಳನ್ನು ಪ್ರಮಾಣವಾಗಿ ತೋರಿಸುತ್ತಾರೆ. ಯುಕ್ತಿಗಳನ್ನು ಅವಲಂಬಿಸುತ್ತಾರೆ. ಆತ್ಮನು ಅಣುಪ್ರಮಾಣನೆಂದು ಕೆಲವರು ಹೇಳಿದರೆ ಕೆಲವರು ವಿಭುವೆನ್ನುತ್ತಾರೆ. ಅವೆರಡೂ ಅಲ್ಲ ಆತ್ಮನು ಮಧ್ಯಮ ಪರಿಮಾಣದವನೆಂದು ಹೇಳತಕ್ಕವರೂ ಇದ್ದಾರೆ (೭೮). ಆತ್ಮನು ಅಣು ಪರಿಮಾಣದವನೂ ಆತನು ಅತ್ಯಂತ ಸೂಕ್ಷ್ಮನಾಗಿದ್ದಾನೆಂದೂ ಆಂತರಾಲರ ಮತ★. ಅತ್ಯಂತ ಸೂಕ್ಷ್ಮವಾದ ಎಂದರೆ ಒಂದು ಕೂದಲಿನ ಸಾವಿರದ ಒಂದು ಭಾಗದಷ್ಟು ಚಿಕ್ಕದಾದ ನಾಡಿಯಲ್ಲಿಯೂ ಅವನು ಸಂಚರಿಸುವುದರಿಂದ ಅವನ ಪರಿಮಾಣವು ಬಹು ಸಣ್ಣದಾದ ಅಣುವೇ ಹೊರತು ಬೇರೆಯಲ್ಲ(೭೯) **''ಅಣೋರಣೀಯಾನ್''**(ಶ್ವೇ.ಉ.೩-೨೦), **''ಏಷೋಽಣುರಾತ್ಮಾ ಸೂಕ್ಷ್ಮಾತ್ ಸೂಕ್ಷ್ಮತರಂ ನಿತ್ಯಂ''** ಇತ್ಯಾದಿ ಸಾವಿರಾರು ಶ್ರುತಿ ವಾಕ್ಯಗಳೂ ಆತ್ಮನು ಅಣುವೆಂದು ಹೇಳುತ್ತವೆ (೮೦). ಒಂದು ಕೂದಲಿನ ತುದಿಯನ್ನು ನೂರು ಭಾಗವಾಗಿ ಸೀಳಿ ಒಂದೊಂದು ಭಾಗವನ್ನೂ ನೂರಾಗಿ ಸೀಳಿದರೆ ಎಷ್ಟು ಚಿಕ್ಕದಾಗುವುದೋ ಅಷ್ಟು ಚಿಕ್ಕ ಪ್ರಮಾಣದವನು ಆತ್ಮ ಎಂದು ಇನ್ನೊಂದು ಶ್ರುತಿ ವಾಕ್ಯವಿದೆ ! (೮೧)ದಿಗಂಬರಜೈನರಾದರೋ ಕಾಲಿನಿಂದ ತಲೆಯವರೆಗೂ ಆತ್ಮನುವ್ಯಾಪಿಸಿರುವುದರಿಂದ ಆತ್ಮನು ಮಧ್ಯಮ ಪರಿಮಾಣದವನು. ಅಣುವೂ ಅಲ್ಲ, ವಿಭುವೂ ಅಲ್ಲ, ನಿಮ್ಮ ಶ್ರುತಿಯೇ ಹೇಳಿದೆಯಲ್ಲ **'ಪ್ರವಿಷ್ಟ ಆನಖಾಗ್ರೇಭ್ಯಃ'** ಎಂದು ? ಜನರ ಉಗುರಿನ ತುದಿಯವರೆಗೂ ಆತ್ಮನು ಪ್ರವೇಶಿಸಿರುತ್ತಾನೆ ಎಂದರೆ, ಪ್ರಾಣಿಯ ಶರೀರವನ್ನು

---

★ : **ಆಂತರಾಲರೆಂದರೆ ಯಾರೆಂಬುದು ಚಿಂತನೀಯ. ಈ ಶಬ್ದವನ್ನು ಪ್ರಕೃತ ಶ್ಲೋಕದಲ್ಲಿ ಬಳಸಿದ್ದಾರೆ. ಮಧ್ಯದಲ್ಲಿ ಇರುವವರು ಮಧ್ಯಸ್ಥರು ಎಂದು ಶಬ್ದದ ಅರ್ಥ.**

ವ್ಯಾಪಿಸಿಕೊಂಡಿದ್ದಾನೆ ಎಂದರ್ಥ. ದೇಹಕ್ಕಿಂತ ಹೆಚ್ಚಿನ ಸ್ಥಳವನ್ನು ವ್ಯಾಪಿಸಿಲ್ಲ. ಕಡಿಮೆಯ ಸ್ಥಳವನ್ನು ವ್ಯಾಪಿಸಿಲ್ಲ. ದೇಹದ ಪ್ರಮಾಣದಷ್ಟು ಆತ್ಮನ ಪ್ರಮಾಣ (೮೨). ಹಾಗಾದರೆ ಸೂಕ್ಷ್ಮನಾಡಿಗಳಲ್ಲಿ ಆತ್ಮನು ಸಂಚರಿಸುತ್ತಾನೆ ಎಂಬ ಸಿದ್ಧಾಂತವು ಹೇಗೆ ಕೂಡುತ್ತದೆ? ಅಂಗಿಯನ್ನು ತೊಟ್ಟುಕೊಳ್ಳುವಾಗ ಎರಡು ಕೈಗಳನ್ನು ಅಂಗಿಯೊಳಗೆ ತೂರಿಸುತ್ತೇವೆ. ಅಷ್ಟುಮಾತ್ರದಿಂದ ಇಡಿಯ ದೇಹವೇ ಅಂಗಿಯೊಳಗೆ ತೂರಿ ಹೋಯಿತೆಂದು ವ್ಯವಹಾರವಿರುತ್ತದೆ. ಹಾಗೆಯೇ ಆತ್ಮದ ಸೂಕ್ಷ್ಮಾವಯವವು ಮಾತ್ರ ನಾಡಿಗಳೊಳಗೆ ಸೇರಿಕೊಂಡಿದ್ದರೂ ಪೂರ್ತಿ ಆತ್ಮವೇ ನಾಡಿಗಳಲ್ಲಿ ಸೇರಿ ಸಂಚರಿಸುತ್ತದೆ ಎಂದು ಔಪಚಾರಿಕವಾಗಿ ಹೇಳಬಹುದು.(೮೩) ಇರಲಿ; ಮನುಷ್ಯನು ಮಗುವಾಗಿದ್ದಾಗ ಆತ್ಮನು ಮಗುವಿನ ದೇಹದಷ್ಟಿರುತ್ತಾನೆ ಎಂದಂತಾಯಿತು. ಮಗು ಬೆಳೆದಂತೆ ಆತ್ಮವು ದೊಡ್ಡ ದೇಹವನ್ನು ವ್ಯಾಪಿಸುವುದು ಹೇಗೆ? ಅಲ್ಲದೆ ಕರ್ಮಾನುಸಾರವಾಗಿ ಜೀವಾತ್ಮನಿಗೆ ಇನ್ನೊಂದು ಜನ್ಮದಲ್ಲಿ ಇರುವೆಯ ಜನ್ಮ ಬರಬಹುದು. ಇರುವೆಗೆ ಬೆಕ್ಕಿನ ಜನ್ಮ ಬರಬಹುದು. ಬೆಕ್ಕು ಆನೆಯಾಗಿ ಹುಟ್ಟಬಹುದು. ಆಗ ಜೀವವು ಆಯಾ ಪ್ರಾಣಿಯ ಗಾತ್ರದಂತೆ ದೊಡ್ಡದೂ ಚಿಕ್ಕದೂ ಆಗುವುದು ಹೇಗೆ? ಈ ಪ್ರಶ್ನೆಗೆ ಜೈನರು ಹೇಳುವುದೇನೆಂದರೆ, ''ಆತ್ಮವು ರಬ್ಬರಿನಂತೆ ಹಿಗ್ಗಬಹುದು. ಒಣಗಿದ ಹಣ್ಣಿನಂತೆ ಕುಗ್ಗಬಹುದು. ಆತ್ಮನ ಒಂದಂಶವು ನಷ್ಟವಾಗಬಹುದು. ಒಂದಂಶವು ಬಂದು ಸೇರಿಕೊಂಡು ದೊಡ್ಡದಾಗಬಹುದು. ಹೇಗಾದರೂ ಮಧ್ಯಮ ಪರಿಮಾಣಕ್ಕೆ ಭಂಗವಿಲ್ಲ'' ಎಂದು (೮೪). ಈ ಉತ್ತರ ಅಸಂಗತ. ಮಧ್ಯಮ ಪರಿಮಾಣನೆಂದು ಹೇಳಿದರೆ ಆತ್ಮನಲ್ಲಿ ಅವಯವಗಳಿವೆಯೆಂದೂ ಅಖಂಡ ವಸ್ತುವಲ್ಲವೆಂದೂ ಸಿದ್ಧವಾಗುತ್ತದೆ. ಆಗ ಘಟ, ಪಟಗಳಂತೆ ಆತ್ಮನು ನಾಶವಾಗುತ್ತಾನೆ ಎಂದು ಒಪ್ಪಬೇಕಾಗುತ್ತದೆ. ಸಾವಯವವಾದದ್ದು ಯಾವುದೂ ನಿತ್ಯವಲ್ಲವೆಂದು ಶಾಸ್ತ್ರಸಿದ್ಧಾಂತ. ಆಗ ಮನುಷ್ಯನಿಗೆ ಕೃತನಾಶ, ಅಕೃತಾಭ್ಯಾಗಮ ಎಂಬ ಎರಡು ದೋಷಗಳು ಗಂಟು ಬೀಳುತ್ತವೆ. ಆತ್ಮನು ನಾಶವಾದರೆ ಅವನ ಪುಣ್ಯಪಾಪಗಳೂ ನಾಶವಾಗುತ್ತವೆ ಎಂದು ಒಪ್ಪಬೇಕಾಗುತ್ತದೆ. ಹೊಸದಾಗಿ ಆತ್ಮನು ಹುಟ್ಟಿದಾಗ ಸುಖದುಃಖಗಳನ್ನು ಅನುಭವಿಸಲೇ ಬೇಕು. ಅದಕ್ಕೆ ಕಾರಣಗಳಾದ ಪಾಪಪುಣ್ಯಗಳು ಎಲ್ಲಿಂದ ಬರುತ್ತವೆ? ತಾನು ಮಾಡದೆ ಇದ್ದ ಕರ್ಮದ ಫಲಗಳನ್ನು ಅನುಭವಿಸುತ್ತಾನೆ ಎಂದು ಹೇಳಬೇಕಾಗುವುದು. ಇದೇ ಅಕೃತಾಭ್ಯಾಗಮ. ಮೊದಲು ಹೇಳಿದ್ದು ಕೃತನಾಶ. ಇದನ್ನು ಜೈನರು ಒಪ್ಪುವುದಿಲ್ಲ. ಪಾಪಪುಣ್ಯಗಳನ್ನು ಅಂಗೀಕರಿಸುತ್ತಾರೆ. ಆದ್ದರಿಂದ ಆತ್ಮನು

ಮಧ್ಯಮ ಪರಿಣಾಮನೆಂಬುದು ಅಯುಕ್ತ (೮೫) ಆದ್ದರಿಂದ ಆತ್ಮನು ಸರ್ವವ್ಯಾಪಿಯಾದ ವಿಭುವೇ ಹೊರತು ಅಣುವೂ ಅಲ್ಲ, ಮಧ್ಯಮ ಪ್ರಮಾಣನೂ ಅಲ್ಲ. ಆತನು ಆಕಾಶದಂತೆ ಸರ್ವಗತನೂ ಅವಯವರಹಿತನಾದ ಅಖಂಡನೂ ಆಗಿದ್ದಾನೆ. ಇದೇ ಶ್ರುತಿಸಂಮತವಾದದ್ದು. **''ಆಕಾಶವತ್ ಸರ್ವಗತಶ್ಚ ನಿತ್ಯಃ''** (ಛಾಂ.ಉ.೩-೧೪-೩) **''ನಿಷ್ಕಲಂ ನಿಷ್ಕ್ರಿಯಂ''** (ಶ್ವೇ.ಉ.೬-೧೯) ಇತ್ಯಾದಿ ಶ್ರುತಿಗಳು ಹೀಗೆಂದೇ ಸಾರುತ್ತಿವೆ (೮೬). ಇಷ್ಟು ಹೇಳಿದ ಮೇಲೆ ಮತ್ತೆ ಪಂಡಿತರು ಈ ಆತ್ಮವಿಷಯದಲ್ಲಿ ಇನ್ನೊಂದು ರೀತಿಯ ವಾದವನ್ನೆಬ್ಬಿಸಿದ್ದಾರೆ. ಆತ್ಮನು ಚಿದ್ರೂಪನೆ? ಅಚಿದ್ರೂಪನೆ? ಅಥವಾ ಚಿದಚಿದ್ ರೂಪನೆ? ಎಂದು (೮೭) **ಚಿದ್ರೂಪ** = ಜ್ಞಾನಸ್ವರೂಪ, **ಅಚಿದ್ರೂಪ** = ಜಡ, **ಚಿದಚಿದ್ರೂಪ** = ಉಭಯರೂಪ. ಮೀಮಾಂಸಕರಲ್ಲಿ ಪ್ರಾಭಾಕರರೂ ಮತ್ತು ತಾರ್ಕಿಕರೂ ಸಹ ಆತ್ಮನು ಅಚಿದ್ರೂಪನೆನ್ನುತ್ತಾರೆ. ಯಾವುದರಲ್ಲಿ ಗುಣವಿರುತ್ತದೆಯೋ ಅದು ಒಂದು ದ್ರವ್ಯ. ಶಬ್ದವೆಂಬ ಗುಣವಿರುವುದರಿಂದ ಆಕಾಶವು ಹೇಗೆ ದ್ರವ್ಯವೋ ಹಾಗೆ ಜ್ಞಾನವೆಂಬ ಗುಣವಿರುವುದರಿಂದ ಆತ್ಮನೂ ಒಂದು ದ್ರವ್ಯ. ಪೃಥಿವೀ, ಜಲ ಮೊದಲಾದವುಗಳಲ್ಲಿ ಜ್ಞಾನವಿಲ್ಲ, ಆತ್ಮನಲ್ಲಿ ಮಾತ್ರ ಜ್ಞಾನವಿರುವುದರಿಂದ ಆತ್ಮನು ಪೃಥಿವೀ ಮುಂತಾದ ಇತರ ದ್ರವ್ಯಗಳಿಗಿಂತ ಅತಿರಿಕ್ತ ದ್ರವ್ಯ ಎಂದು ಸಿದ್ಧವಾಗುತ್ತದೆ. ಈ ಜ್ಞಾನಗುಣವು ಆತ್ಮನಿಗೆ ಬರುತ್ತದೆ, ಹೋಗುತ್ತದೆ. ಆದ್ದರಿಂದ ಆತ್ಮನು ಸ್ವತಃ ಜಡಪದಾರ್ಥ (೮೮). ಜ್ಞಾನದಂತೆಯೇ ಇಚ್ಛೆ, ದ್ವೇಷ, ಪ್ರಯತ್ನ, ಧರ್ಮ, ಅಧರ್ಮ, ಸುಖ, ದುಃಖ ಮತ್ತೆ ಅವುಗಳಿಗೆ ಸಂಬಂಧಿಸಿದ ಸಂಸ್ಕಾರಗಳೂ ಆತ್ಮನಲ್ಲಿರುತ್ತವೆ. ಇವೆಲ್ಲವೂ ಆತ್ಮನಲ್ಲಿ ಉಂಟಾಗುವ ಗುಣಗಳು (೮೯). ಮನಸ್ಸು ಆತ್ಮನಲ್ಲಿ ಸೇರಿದಾಗ ಅದೃಷ್ಟಕರ್ಮವಶದಿಂದ ಈ ಗುಣಗಳು ಉತ್ಪನ್ನವಾಗುತ್ತವೆ. ಅದೃಷ್ಟವಶದಿಂದಲೇ ಕ್ಷಯಿಸುತ್ತವೆ. ಉದಾಹರಣೆಗೆ, ತನಿನಿದ್ರೆಯಲ್ಲಿ ಯಾವ ಗುಣವೂ ಆತ್ಮನಲ್ಲಿರುವುದಿಲ್ಲ.(೯೦) ಚಿತ್ (ಜ್ಞಾನ) ಇವನಲ್ಲಿ ಬರುವುದರಿಂದ ಆತ್ಮನು ಚೇತನ ಎಂದು ಹೇಳುತ್ತಾರೆ. ಹಾಗೆಯೇ ಇಚ್ಛಾದ್ವೇಷಾದಿಗಳೂ ಇವನಲ್ಲಿ ಹುಟ್ಟುತ್ತವೆ. ಆದರೆ ಈತನು ಜೀವಾತ್ಮನಾದ್ದರಿಂದ ಧರ್ಮಾಧರ್ಮಗಳ ಕರ್ತನೂ ಸುಖದುಃಖಗಳ ಭೋಕ್ತನೂ ಆಗಿರುತ್ತಾನೆ (೯೧). ಈಗೊಂದು ಶಂಕೆ ಹುಟ್ಟುತ್ತದೆ. ಆತ್ಮನು ವಿಭುವೆಂದು ನೀವು ಒಪ್ಪಿಕೊಂಡಿದ್ದೀರಿ. ವಿಭುವಾದವನು ಸರ್ವವ್ಯಾಪಿಯಾದ ಮಹಾಪರಿಮಾಣದವನು. ಮನುಷ್ಯನು ಸತ್ತ ಮೇಲೆ ಸ್ವರ್ಗ ನರಕಾದಿ ಲೋಕಾಂತರಗಳಿಗೆ ಹೋಗುತ್ತಾನೆ ಎನ್ನುವುದು

ಹೇಗೆ ಕೂಡುತ್ತದೆ? ಸತ್ತಮೇಲೆ ಇನ್ನೊಂದು ಗರ್ಭದಲ್ಲಿ ಸೇರಿ ಜನ್ಮಾಂತರವನ್ನು ತಳೆಯುತ್ತಾನೆ ಎನ್ನುವುದು ಸಹ ಹೊಂದುವುದಿಲ್ಲ. ಎಲ್ಲೆಲ್ಲಿಯೂ ಮೊದಲೇ ಇರತಕ್ಕವನು ಎಲ್ಲಿಗೆ ಹೋಗುವುದು? ಈ ಶಂಕೆ ಸರಿಯಾದದ್ದೇ. ಸಮಾಧಾನ ಹೀಗೆ: ಕರ್ಮವಶದಿಂದ ಆತ್ಮನು ಈ ದೇಹವನ್ನು ಪಡೆದಾಗ ಈ ದೇಹದಲ್ಲಿರುವ ಮನಸ್ಸಿನ ಸಂಯೋಗದಿಂದ ಜ್ಞಾನ, ಇಚ್ಛೆ ಮೊದಲಾದವು ಹುಟ್ಟುತ್ತವಷ್ಟೆ? ಆಗ ಆತ್ಮನು 'ಇಲ್ಲಿದ್ದಾನೆ' ಎಂದು ಹೇಳುವುದುಂಟಷ್ಟೆ? ಹಾಗೆಯೇ ಲೋಕಾಂತರದಲ್ಲಿ ಅದಕ್ಕೆ ತಕ್ಕದ್ದು ಕರ್ಮವಶದಿಂದ ಹುಟ್ಟುತ್ತದೆ. ಆಗ ಈ ಆತ್ಮನು ಆ ಲೋಕಕ್ಕೆ ಹೋಗಿದ್ದಾನೆಂದು ವ್ಯವಹಾರದಲ್ಲಿ ಹೇಳುತ್ತೇವೆ. ವಸ್ತುತಃ ಆತ್ಮವು ಎಲ್ಲಿಗೂ ಹೋಗುವುದಿಲ್ಲ(೯೨). ಈ ಪ್ರಕಾರ ಆತ್ಮನಿಗೆ ಔಪಚಾರಿಕವಾಗಿ ಗಮನಾಗಮನಗಳು ಸಂಭವಿಸುತ್ತವೆ. ಆತ್ಮನು ಕರ್ತನೆಂಬುದಕ್ಕೆ ವೇದದ ಕರ್ಮಕಾಂಡವೇ ಪ್ರಮಾಣ. ದಾನ ಮಾಡು, ಯಜ್ಞ ಮಾಡು, ಗುರುಸೇವೆ ಮಾಡು ಮುಂತಾದ ವಿಧಿವಾಕ್ಯಗಳೇ ಜೀವಾತ್ಮನು ಕರ್ತನೆಂಬುದಕ್ಕೆ ಪ್ರಮಾಣ(೯೩).

ಇಲ್ಲೊಂದು ಪ್ರಶ್ನೆ ಹುಟ್ಟುತ್ತದೆ. ಈ ಪ್ರಕರಣದ ೭೭ನೆಯ ಶ್ಲೋಕದಲ್ಲಿ **'ಅನ್ಯೋ ವಿಜ್ಞಾನಮಯಾತ್ ಆನಂದಮಯ ಆಂತರಃ'** ಎಂಬುದಾಗಿ ಆನಂದಮಯನೇ ಆತ್ಮನೆಂದು ಪ್ರತಿಪಾದಿಸಿದ್ದೀರಿ. ಅನಂತರ ಇಚ್ಛಾದ್ವೇಷ ಪ್ರಯತ್ನಾದಿಗಳು ಆತ್ಮಗುಣಗಳೆಂದು ಹೇಳುತ್ತ ಆತ್ಮನ ಸ್ವಭಾವವನ್ನು ವಿವರಿಸುತ್ತ ಬಂದಿದ್ದೀರಿ. ಆನಂದಮಯನಾದವನು ಇಚ್ಛಾದ್ವೇಷಾದಿಗಳನ್ನು ಪಡೆದಿರುವನೆಂದರೆ ಹಿಂದೆ ಹೇಳಿದುದಕ್ಕೆ ವಿರುದ್ಧವಾಗುತ್ತದೆ. ಇದು ಹೇಗೆ? ನಿಜ; ಆನಂದಮಯಕೋಶ ಎಂದು ನಾವು ಹೇಳಿದ್ದೇವೆ. ಆನಂದ ವಿಶಿಷ್ಟನೆಂದು ಅದರ ಅರ್ಥ. ಇಚ್ಛಾದ್ವೇಷಾದಿಗಳು ಅವನಲ್ಲಿಲ್ಲ ಎಂದು ನಾವು ಹೇಳಿಲ್ಲ. ಈತನು ಮೊದಲು ಹೇಳಿದ ಅನ್ನಮಯಕೋಶನಾದ ಆತ್ಮನಿಗಿಂತ ಬೇರೆ ಅಲ್ಲ ಎಂದು ಪ್ರಾಭಾಕರಾದಿಗಳ ಮತವಿದೆ. ಆದ್ದರಿಂದ ವಿರೋಧವೇನೂ ಇಲ್ಲ. ಆನಂದವಿಶಿಷ್ಟನೇ ಆನಂದದ ವಿಕಾರ. ವಿಕಾರಾರ್ಥದಲ್ಲಿ **'ಮಯಟ್'** ಪ್ರತ್ಯಯ ಬಂದಿದೆ. ಅಥವಾ **'ತತ್ಪ್ರಕೃತವಚನೇ ಮಯಟ್'** ಎಂಬ ಸೂತ್ರದಿಂದ ಪ್ರಾಚುರ್ಯಾರ್ಥದಲ್ಲಿ ಮಯಟ್ ಪ್ರತ್ಯಯ. **'ಅನ್ನಮಯೋ ಯಜ್ಞಃ'** ಎಂಬಂತೆ. ಆನಂದಪ್ರಚುರನಾದವನು ಆತ್ಮನೆಂದು ಆ ಜನರ ಅಭಿಪ್ರಾಯವಾಗಿದೆ. ಸುಷುಪ್ತಿಯಲ್ಲಿ ಆನಂದವೇ ವಿಶೇಷವಾಗಿರುತ್ತದೆ ಯಲ್ಲವೆ? ಜಾಗ್ರತ್ತಿನಲ್ಲಿ

ಇಚ್ಛಾದ್ವೇಷಾದಿಗಳು ಸೇರಿಕೊಳ್ಳುತ್ತವೆ. ಈತನು ಸುಷುಪ್ತಿಯಲ್ಲಿ ಅಸ್ಪಷ್ಟಚಿತ್ = ವಿಲೀನವಾದ ಇಚ್ಛಾದಿಗುಣಗಳುಳ್ಳವನು ಎಂದರ್ಥ. ಜ್ಞಾನ, ಆನಂದಾದಿಗಳು ಈತನ ಗುಣಗಳು ಎಂದು ಪ್ರಾಭಾಕರಾದಿಗಳು ಹೇಳುತ್ತಾರೆ. ಈ ಆತ್ಮನು ಅನ್ನಮಯಾದಿಕೋಶಗಳಲ್ಲಿದ್ದಾನೆ ಎಂದು ಆಶಯ. ಇದು ವೇದಾಂತಿಗಳ ಸಿದ್ಧಾಂತವಲ್ಲ(೯೪). ಅಸ್ಪಷ್ಟಚಿತ್ ಎಂದು ಹಿಂದಿನ ಶ್ಲೋಕದಲ್ಲಿದೆ. ಜೀವಾತ್ಮನಲ್ಲಿ ಚಿತ್ ಸ್ವರೂಪವು ಅಸ್ಪಷ್ಟವಾಗಿರುತ್ತದೆ ಎಂದೂ ಅರ್ಥವನ್ನು ಹೇಳಬಹುದು. ಕೆಲವು ಸಮಯದಲ್ಲಿ ಅದು ಅಸ್ಪಷ್ಟ ಕೆಲವು ಸಮಯದಲ್ಲಿ ಸ್ಪಷ್ಟ ಎಂದು ಭಾಟ್ಟಮೀಮಾಂಸಕರು ಹೇಳುತ್ತಾರೆ. ನಿದ್ರೆ ಬಂದಾಗ ಚೈತನ್ಯವು ಅಸ್ಪಷ್ಟವಾಗಿರುತ್ತದೆ. ನಿದ್ರೆಯಿಂದ ಎದ್ದಾಗ ಅದು ಸ್ಪಷ್ಟವಾಗುತ್ತದೆ. ಆದ್ದರಿಂದ ಆತ್ಮನು ಚಿದಚಿದ್ರೂಪನೆಂದು ಈ ಮೀಮಾಂಸಕರ ಅಭಿಪ್ರಾಯ. ಚಿತ್ = ಚೈತನ್ಯ, ಜ್ಞಾನ. ಅಚಿತ್ = ಜಡ. ಇವೆರಡೂ ಪರಸ್ಪರ ವಿರುದ್ಧಗಳಾದರೂ ಅನುಭವದಲ್ಲಿವೆ. ನಿದ್ರೆ ಬಂದಾಗ ಜಡನಾಗಿರುತ್ತಾನೆ. ''ನಾನು ಮರದ ತುಂಡಿನಂತೆ ಜಡವಾಗಿ ನಿದ್ರಿಸುತ್ತಿದ್ದೆ. ಈಗ ಎಚ್ಚರವಾದ ಮೇಲೆ ಆಲೋಚಿಸುವ ಚೈತನ್ಯ ಬಂದಿದೆ'' ಎಂಬುದು ಎಲ್ಲರ ಅನುಭವದಲ್ಲಿದೆ. ಆದ್ದರಿಂದ ಆತ್ಮನು ಜಡ - ಜ್ಞಾನ ಸ್ವರೂಪ, ಚಿದಚಿದ್ರೂಪ ಎನ್ನುವುದು ಯುಕ್ತವಾದದ್ದು. ಇದರಲ್ಲಿ ಯಾವ ದೋಷವೂ ಇಲ್ಲ ಎಂದು ಅವರ ಮತ(೯೫). ನಿದ್ರಿಸಿ ಎಚ್ಚರಗೊಂಡ ಮೇಲೆ ''ನಾನು ಜಡನಾಗಿ ನಿದ್ರಿಸುತ್ತಿದ್ದೆ'' ಎಂಬ ಸ್ಮರಣೆ ಬರುತ್ತಿದೆಯಲ್ಲವೆ? ಯಾವುದರ ಅನುಭವ ಆಗಿರುವುದಿಲ್ಲವೋ, ಅದರ ಸ್ಮರಣೆ ಎಂದಿಗೂ ಬರುವುದಿಲ್ಲ. ನಿದ್ರಾಕಾಲದಲ್ಲಿ ಜಾಡ್ಯದ ಅನುಭವವಾಗಿದೆ ಎಂದಾಯಿತು. ನಿದ್ರೆಯಲ್ಲಿಯೂ ಜಾಡ್ಯದ ಜ್ಞಾನವಿತ್ತು ಎಂದು ಇದರಿಂದ ಸ್ಪಷ್ಟವಾಗುತ್ತಿದೆ. ಏವಂಚ ಆತ್ಮನು ಒಂದಂಶದಲ್ಲಿ ಜಡ, ಇನ್ನೊಂದು ಅಂಶದಲ್ಲಿ ಚೇತನ ಎಂದಾಯಿತು. ಆದ್ದರಿಂದ ಆತ್ಮನು ಚಿದಚಿದ್ರೂಪನೆಂದು ದೃಢವಾಗುತ್ತದೆ (೯೬). ಹೀಗೆ ಸುಷುಪ್ತಿ ಕಾಲದಲ್ಲಿಯೂ ಆತ್ಮನಲ್ಲಿ ಚೈತನ್ಯವಿರುತ್ತದೆ ಎಂಬುದನ್ನು **''ನಹಿ ದ್ರಷ್ಟುಃ ದೃಷ್ಟೇರ್ವಿಪರಿಲೋಪೋ ವಿದ್ಯತೇ, ಅವಿನಾಶಿತ್ವಾತ್''** (ಬೃ.ಉ.೪-೪-೨೩) ಎಂಬ ಶ್ರುತಿಯೂ ಪ್ರತಿಪಾದಿಸಿದೆ. ಜ್ಞಾತೃವಾದ ಆತ್ಮನ ಸ್ವರೂಪವಾದ ಜ್ಞಾನಕ್ಕೆ ಲೋಪವೇ ಇಲ್ಲ, ಏಕೆಂದರೆ ಆತ್ಮನ ಸ್ವಭಾವಕ್ಕೆ ವಿನಾಶವೇ ಇರುವುದಿಲ್ಲ ಎಂದರ್ಥ. ಜ್ಞಾನವು ಆತ್ಮನ ಸ್ವರೂಪವೇ ಆಗಿದೆಯಾದ್ದರಿಂದ, ನಿದ್ರೆಯಲ್ಲಿ ಆತ್ಮನಿದ್ದ ಮೇಲೆ ಅವನ ಸ್ವಭಾವವಾದ ಜ್ಞಾನವೂ ಇದ್ದೇ ಇರುತ್ತದೆ. ಮಿಂಚುಹುಳು ರಾತ್ರಿಯಲ್ಲಿ ಹಾರುವಾಗ ಒಂದು

ಕ್ಷಣ ಹೊಳೆಯುತ್ತದೆ. ಇನ್ನೊಂದು ಕ್ಷಣ ಹೊಳೆಯುವುದಿಲ್ಲ. ಮಿಂಚುವುದು, ಮಿಂಚದಿರುವುದು ಇವೆರಡೂ ಒಂದೆ ಮಿಂಚುಹುಳದಲ್ಲಿ ಇರುವಂತೆ, ಚೈತನ್ಯ, ಜಾಡ್ಯಗಳು ಒಬ್ಬ ಆತ್ಮನಲ್ಲಿರುತ್ತವೆ ಎಂದು ಭಾಟ್ಟಮೀಮಾಂಸಕರ ಮತವಾಗಿದೆ (೯೭). ಸಾಂಖ್ಯರು ಇದನ್ನೊಪ್ಪುವುದಿಲ್ಲ, ಆತ್ಮನು ಅವಯವರಹಿತನು. ಅಖಂಡ ಸ್ವರೂಪನು. ಇಂತಹ ಆತ್ಮನಲ್ಲಿ ಒಂದು ಅಂಶ ಜಡ, ಇನ್ನೊಂದು ಅಂಶ ಚೇತನ ಎಂಬುದೆಂದಿಗೂ ಸಂಭವಿಸುವುದಿಲ್ಲ, ಆತ್ಮನಲ್ಲಿ ಅಂಶವೇ ಇಲ್ಲದಾಗ ಇಂತಹ ಮಾತು ಹಾಸ್ಯಾಸ್ಪದವಾಗುತ್ತದೆ. ಆದ್ದರಿಂದ ಆತ್ಮನು ಚಿದಚಿತ್ ಸ್ವರೂಪನೆಂಬುದು ಎಂದಿಗೂ ಆಗದ ಮಾತು. ಆತ್ಮನು ಸದಾ ಚೇತನಸ್ವರೂಪನೇ ಆಗಿದ್ದಾನೆ ಎಂದು ಪ್ರಕೃತಿ ಪುರುಷ ವಿಭಾಗವನ್ನು ಪ್ರತಿಪಾದಿಸುವ ಕಪಿಲಸಾಂಖ್ಯರು ಹೇಳುತ್ತಾರೆ (೯೮). ಹಾಗಾದರೆ ನಿದ್ರೆಯಿಂದ ಎದ್ದಾಗ 'ನನಗೆ ಏನೂ ಗೊತ್ತಾಗಲಿಲ್ಲ, ನಾನು ಜಡನಾಗಿ ಮಲಗಿದ್ದೆ' ಎಂಬ ಸ್ಮರಣೆ ಬರುವುದು ಹೇಗೆ? ಎಂದರೆ, ಜಡತ್ವವೆಂಬುದು ಆತ್ಮನ ಜೊತೆಗೇ ಇರುವ ಪ್ರಕೃತಿಯ ಸ್ವರೂಪ. ಅದು ವಿಕಾರಿಯೂ ತ್ರಿಗುಣಾತ್ಮಕವೂ ಆಗಿದೆ. ದೊಣ್ಣೆಯನ್ನು ಹಿಡಿದ ಒಬ್ಬ ದಂಡಧಾರಿಯನ್ನು ನೋಡಿದಾಗ ದಂಡ, ಮನುಷ್ಯ ಇಬ್ಬರೂ ಕಾಣಿಸುತ್ತಾರೆ. ಆಗ ದಂಡವೇ ಮನುಷ್ಯನ ಅವಯವವೆಂದೂ ಮನುಷ್ಯನೆನಿಸಲು ಅವನ ಕೈಯಲ್ಲಿ ದಂಡವಿದ್ದೇ ಇರುತ್ತದೆಯೆಂದೂ ತಿಳಿಯುವುದು ಅಸಂಗತವಾಗುತ್ತದೆ. ಹಾಗೆಯೇ ಪುರುಷ (ಆತ್ಮ) ನೊಂದಿಗಿರುವ ಜಡಪ್ರಕೃತಿಯನ್ನು ಕಂಡು, ಪುರುಷನು ಜಡತ್ವದಿಂದ ಕೂಡಿರುತ್ತಾನೆ ಎನ್ನುವುದು ಅಸಂಗತವೇ ಸರಿ. ಈ ಪ್ರಕೃತಿಯನ್ನು ಅವಶ್ಯವಾಗಿ ಒಪ್ಪಬೇಕು. ಚೇತನನಾದ ಪುರುಷನಿಗೆ ಸುಖ-ದುಃಖಗಳನ್ನೂ, ಅಂತ್ಯದಲ್ಲಿ ಮೋಕ್ಷವನ್ನೂ ಸಂಪಾದಿಸಲು ಈ ಪ್ರಕೃತಿಯು ಆವಶ್ಯಕ. ಅದಕ್ಕಾಗಿಯೇ ಪ್ರಕೃತಿಯು ವ್ಯವಹಾರದಲ್ಲಿ ಪ್ರವರ್ತಿಸುತ್ತದೆ (೯೯). ಇದು ಹೇಗೆ ಸಾಧ್ಯ? ಸಾಂಖ್ಯಮತದಲ್ಲಿ ಪುರುಷನು ಕೇವಲ ಚಿತ್‌ಸ್ವರೂಪನಾಗಿದ್ದಾನೆ. ಅವನು ಸಂಗರಹಿತ. ಸತ್ತ್ವಾದಿಗುಣಗಳ ಸಂಬಂಧವೇ ಅವನಿಗಿಲ್ಲ, ಪ್ರಕೃತಿಗೂ ಪುರುಷನಿಗೂ ಯಾವ ಸಾಮ್ಯವೂ ಇಲ್ಲ, ಸಂಬಂಧವೂ ಇಲ್ಲ, ಹೀಗಿರುವಾಗ ಪುರುಷನು (ಜೀವಾತ್ಮನು) ಸುಖಭೋಗಗಳಲ್ಲಿ ಪ್ರವರ್ತಿಸಿ ಸಂಸಾರದಲ್ಲಿ ಬದ್ಧನಾಗುವುದು ಹೇಗೆ? ಅವನ ಬಿಡುಗಡೆಗಾಗಿ ಪ್ರಕೃತಿಯು ಪ್ರವರ್ತಿಸುವುದಾದರೂ ಏಕೆ? ಬಂಧವೇ ಇಲ್ಲದಾಗ ಪುರುಷನಿಗೆ ಮೋಕ್ಷವಾಗುತ್ತದೆ ಎಂದರೇನು? ಇದೆಲ್ಲವೂ ಅಸಂಬದ್ಧವಲ್ಲವೆ? ಈ ಪ್ರಶ್ನೆಗಳಿಗೆ

ಉತ್ತರವೇನೆಂದರೆ - ಅನಾದಿಯಾದ ಭ್ರಮೆಯಿಂದ ಹೀಗೆ ಆಗುತ್ತದೆ. ವಾಸ್ತವವಾಗಿ ಬಂಧಮೋಕ್ಷಗಳು ಬುದ್ಧಿಗೇ ಆಗುತ್ತವೆ. ಅನಾದಿಯಾದ ಬುದ್ಧಿ ಸಂಬಂಧದಿಂದ ಪುರುಷನು 'ನಾನೇ ಬುದ್ಧಿ' ಎಂಬ ಭ್ರಮೆಗೆ ಒಳಗಾಗಿ ಸಂಸಾರದ ದುಃಖಸುಖಗಳನ್ನು ಬುದ್ಧಿಯೇ ಅನುಭವಿಸಿದರೂ ತಾನು ಅನುಭವಿಸುತ್ತೇನೆಂಬ ಭ್ರಮೆಯಿಂದ ಜೀವನು ಬದ್ಧನಾಗಿದ್ದಾನೆಂಬ ಲೋಕ ವ್ಯವಹಾರ ಉಂಟಾಗಿರುತ್ತದೆ. ಯಾವಾಗ ಪುರುಷನು ''ನಾನು ಬೇರೆ, ಈ ಪ್ರಕೃತಿಯೇ ಬೇರೆ. ನನಗೂ ಅದಕ್ಕೂ ಯಾವ ಸಂಬಂಧವೂ ಇಲ್ಲವೆಂಬ ವಿವೇಕವನ್ನು ಪಡೆಯುತ್ತಾನೋ ಆಗ ಮೋಕ್ಷವಾಗುತ್ತದೆ. ಒಬ್ಬನು ಬದ್ಧ ಇನ್ನೊಬ್ಬನು ಮುಕ್ತ ಎಂಬ ವ್ಯವಸ್ಥೆಗೋಸ್ಕರ ವೈಶೇಷಿಕರಂತೆ ಸಾಂಖ್ಯರೂ ಸಹ ಈ ಚಿದಾತ್ಮರು ಅನ್ಯೋನ್ಯಭಿನ್ನರೇ ಸರಿ. ಅಸಂಖ್ಯಾತಜೀವಾತ್ಮರಿದ್ದಾರೆ ಎಂದು ಹೇಳುತ್ತಾರೆ (೧೦೦). ಇದಕ್ಕೆ ಆಧಾರವು ಶ್ರುತಿಯೇ. **'ಮಹತಃ ಪರಮವ್ಯಕ್ತಂ'** (ಕಠ.ಉ. ೩-೧೧). . ಮಹತ್ತತ್ತ್ವಕ್ಕೆ ಕಾರಣವಾದ್ದರಿಂದ ಅದಕ್ಕಿಂತ ಶ್ರೇಷ್ಠವಾದದ್ದು ಅವ್ಯಕ್ತವೆಂದರ್ಥ.. ಅವ್ಯಕ್ತವೇ ಪ್ರಕೃತಿ. ಈ ಪ್ರಕೃತಿಗೆ ಪರನಾದವನು ಪುರುಷ. ಈತನು ಸಂಗರಹಿತ. **'ಅಸಂಗೋ ಹ್ಯಯಂ ಪುರುಷಃ'** (ಬೃ.ಉ. ೪-೩-೧೫) ಎಂಬ ಶ್ರುತಿಯು ಪುರುಷನ ಅಸಂಗತ್ವವನ್ನು ಹೇಳಿದೆ (೧೦೧). ಈ ಪ್ರಕಾರದಲ್ಲಿ ಜೀವನಿಗೆ ಸಂಬಂಧಿಸಿದ್ದನ್ನು ತಿಳಿಸಿದ್ದಾಯಿತು. ಈಗ ಈಶ್ವರನ ವಿಷಯವಾಗಿ ಹೇಳಬೇಕಾದ್ದಿದೆ. ಯೋಗಿಗಳು ಏನು ಹೇಳುತ್ತಾರೆಂದರೆ: ಚಿದ್ವಸ್ತುವಿನ ಸಾನ್ನಿಧ್ಯದಿಂದ ಪ್ರಕೃತಿಯು ಕಾರ್ಯದಲ್ಲಿ ತೊಡಗುತ್ತದೆಯಷ್ಟೆ, ಈ ಪ್ರಕೃತಿಗೆ ನಿಯಾಮಕನಾದವನು ಈಶ್ವರ - ಭಗವಂತ - ದೇವರು. ಆತನು ಜೀವರಿಗಿಂತ ಶ್ರೇಷ್ಠನಾದವನು (೧೦೨). ಶ್ವೇತಾಶ್ವತರೋಪನಿಷತ್ತಿನಲ್ಲಿ **'ಪ್ರಧಾನಕ್ಷೇತ್ರಜ್ಞಪತಿರ್ಗುಣೇಶಃ'** (ಶ್ವೇ.ಉ.೬-೧೬) ಎಂದು ಹೇಳಿದೆ. ಪ್ರಧಾನವೆಂದರೆ ಸಾಂಖ್ಯರ ಪ್ರಕೃತಿ. ಈ ಪ್ರಕೃತಿಗೂ ಕ್ಷೇತ್ರಜ್ಞರಾದ ಜೀವರಿಗೂ ಒಡೆಯನಾದ ಈಶ್ವರನಿದ್ದಾನೆ. ಈತನು ಸತ್ತ್ವರಜಸ್ತಮಸ್ಸುಗಳೆಂಬ ಗುಣಗಳಿಗೆ ನಿಯಾಮಕನಾದ ಈಶ್ವರನಾಗಿದ್ದಾನೆ. ಮತ್ತು ಬೃಹದಾರಣ್ಯಕದ ಅಂತರ್ಯಾಮಿಬ್ರಾಹ್ಮಣದಲ್ಲಿ ಈಶ್ವರನನ್ನು ಆದರಪೂರ್ವಕವಾಗಿ ಉಪಪಾದಿಸಿದ್ದಾರೆ (೧೦೩). ಜೀವಾತ್ಮನ ವಿಷಯದಲ್ಲಿರುವಂತೆ ಪರಮಾತ್ಮನ ವಿಷಯದಲ್ಲಿಯೂ ವಾದಿಗಳು ಕಲಹ ಮಾಡುತ್ತಾರೆ. ಅದಕ್ಕೆ ಬೇಕಾದಂತೆ ತಮ್ಮ ತಮ್ಮ ಯುಕ್ತಿಗಳನ್ನಿಟ್ಟುಕೊಂಡಿದ್ದಾರೆ. ತಮ್ಮ ಬುದ್ಧಿಗೆ ನಿಲುಕುವಷ್ಟು ಪ್ರಮಾಣ ವಾಕ್ಯಗಳನ್ನು ಉದಾಹರಿಸುತ್ತಾರೆ!

ಯೋಗಶಾಸ್ತ್ರದಲ್ಲಿ ಪತಂಜಲಿ ಮುನಿಗಳು **"ಕ್ಲೇಶಕರ್ಮವಿಪಾಕಾಶಯೈರಪರಾಮೃಷ್ಟಃ ಪುರುಷವಿಶೇಷ ಈಶ್ವರಃ"** (ಯೋ.ಸೂ.೧-೨೪) ಎಂದು ಸೂತ್ರಿಸಿ ಈಶ್ವರನ ಲಕ್ಷಣವನ್ನು ಹೇಳಿದ್ದಾರೆ. ಅವಿದ್ಯೆ, ಅಸ್ಮಿತಾ, ರಾಗ, ದ್ವೇಷ, ಅಭಿನಿವೇಶಗಳೆಂಬ ಐದು ಕ್ಲೇಶಗಳು. ಶಾಸ್ತ್ರವಿಹಿತವಾದ ಕಾಮ್ಯಕರ್ಮವು ಶುಕ್ಲ ನಿಷಿದ್ಧವಾದದ್ದು ಕೃಷ್ಣ. ಮಿಶ್ರವಾದದ್ದು ಶುಕ್ಲಕೃಷ್ಣ. ಹೀಗೆ ಮೂರು ಬಗೆಯ ಕರ್ಮಗಳು (ಯೋ.ಸೂ.೪-೭). ಕರ್ಮಾಚರಣೆಯಿಂದ ಪ್ರಾಪ್ತವಾಗುವ ಜನ್ಮ, ಆಯುಷ್ಯ, ಭೋಗ ಎಂಬ ಮೂರು ಕರ್ಮವಿಪಾಕಗಳು. ಇವುಗಳಿಂದಾಗುವ ಸಂಸ್ಕಾರಗಳೇ ಆಶಯಗಳು. ಈ ಅವಿದ್ಯಾದಿಗಳ ಸ್ಪರ್ಶವೂ ಇಲ್ಲದ ಪುರುಷವಿಶೇಷನೇ ಈಶ್ವರ. ಜೀವಾತ್ಮನಂತೆ ಈಶ್ವರನೂ ಸಂಗರಹಿತನಾಗಿದ್ದಾನೆ. ಮತ್ತು ಚಿದ್ರೂಪನಾಗಿದ್ದಾನೆ ಎಂದು ಪತಂಜಲಿಮುನಿಗಳ ಮತ (೧೦೪-೧೦೫). ಈಶ್ವರನು ಅಸಂಗನೂ ಚಿದ್ರೂಪನೂ ಆಗಿದ್ದರೂ ಸಹ ಅವನು ಜಗತ್ತಿಗೂ ಜೀವಗಳಿಗೂ ನಿಯಾಮಕನಾಗಿದ್ದಾನೆ. ಆತನು ನಿಯಾಮಕನೆಂಬುದನ್ನು ಒಪ್ಪದೇ ಹೋದರೆ, ಅರಾಜಕವಾದ ದೇಶದಂತೆ ಲೋಕದಲ್ಲಿ ಅವ್ಯವಸ್ಥೆಯುಂಟಾದೀತು. ಬಂಧಮೋಕ್ಷಗಳ ವ್ಯವಸ್ಥೆಯೇ ತಪ್ಪಿಹೋದಿತು. ದುಷ್ಟರನ್ನು ದಂಡಿಸಿ ಶಿಷ್ಟರನ್ನು ಪಾಲಿಸುವ ರಾಜನಿಲ್ಲದೇ ಹೋದರೆ ಹೇಗೆ ರಾಜ್ಯವು ಅನಾಯಕವಾಗುವುದೋ ಹಾಗೆ ಪಾಪಿಗಳಿಗೆ ಸಂಸಾರಬಂಧವನ್ನು ಪುಣ್ಯಶಾಲಿಗಳಿಗೆ ಮೋಕ್ಷವನ್ನು ಕೊಡತಕ್ಕ ಈಶ್ವರನಿಲ್ಲದಿದ್ದರೆ, ಧರ್ಮಕ್ಕೆ ಬೆಲೆಯೇ ಇಲ್ಲದೆ ಹೋದೀತು. ಜನರೆಲ್ಲರೂ ಸ್ವೇಚ್ಛಾಚಾರಿಗಳಾಗಿ ಹಾಹಾಕಾರ ಉಂಟಾದೀತು. ಆದ್ದರಿಂದ ಈಶ್ವರನು ನಿಯಾಮಕನೆಂದು ಹೇಳಲೇಬೇಕು (೧೦೬). 'ಈಶ್ವರನ ಭಯದಿಂದಲೇ ಗಾಳಿ ಬೀಸುತ್ತದೆ. ಅವನ ಹೆದರಿಕೆಯಿಂದ ಸೂರ್ಯನು ಉದಯಿಸುತ್ತಾನೆ' ಎಂದು **'ಭೀಷಾಸ್ಮಾದ್ ವಾತಃ ಪವತೇ, ಭೀಷೋದೇತಿ ಸೂರ್ಯಃ'** (ತೈ.ಉ.೩-೮) ಮುಂತಾದ ಶ್ರುತಿಗಳು ಸಾರುತ್ತಿವೆ. ಇದರಿಂದ ಈಶ್ವರನಿಗೆ ನಿಯಾಮಕತ್ವವಿದೆಯೆಂದು ಸ್ಪಷ್ಟವಾಗುವುದು. ಆತನು ಅಸಂಗನಾದರೂ ಕ್ಲೇಶಕರ್ಮಾದಿರಹಿತನಾದ್ದರಿಂದ ನಿಯಾಮಕನಾಗಿರುವುದು ಯುಕ್ತವೇ ಆಗಿದೆ (೧೦೭). ಸೇಶ್ವರ ಸಾಂಖ್ಯವೆನಿಸಿದ ಈ ಯೋಗದರ್ಶನದಲ್ಲಿ ಈಶ್ವರನಂತೆಯೇ ಜೀವರೂ ಸಹ ನಿಃಸಂಗರೂ ಚಿದ್ರೂಪರೂ ಆಗಿದ್ದಾರೆ. ಕ್ಲೇಶಕರ್ಮಾದಿಗಳು ವಾಸ್ತವವಾಗಿ ಜೀವರಿಗೂ ಇಲ್ಲ. ಹೀಗಿರುವಾಗ ಈಶ್ವರನಿಗೆ ಮಾತ್ರ ನಿಯಾಮಕತ್ವವಿದೆಯೆನ್ನುವುದು ಹೇಗೆ ಯುಕ್ತವಾದೀತು? ಈಶ್ವರನಲ್ಲಿ ವಿಶೇಷವಾದರೂ ಏನು? ಎಂಬ ಶಂಕೆ ಹುಟ್ಟುತ್ತದೆ. ಇದಕ್ಕೆ ಅವರು ಹೇಳುವ

ಸಮಾಧಾನವೇನೆಂದರೆ "ಹೌದು; ಪರಮಾರ್ಥದಲ್ಲಿ ಜೀವರಿಗೂ ಕ್ಲೇಶಕರ್ಮಾದಿಗಳಿಲ್ಲ. ಆದರೆ ಪ್ರಕೃತಿಯು ನಿರ್ಮಿಸಿದ ಬುದ್ಧಿಯೊಡನೆ ಜೀವನಿಗೆ ಸಂಬಂಧವಾಗಿದೆಯೆಂದೂ ಬುದ್ಧಿಗಿಂತ ತಾನು ಅನ್ಯನೆಂಬ ವಿವೇಕವಿಲ್ಲದೆ ಬುದ್ಧಿಯು ಅನುಭವಿಸುವ ಕ್ಲೇಶಾದಿಗಳು ತನ್ನವೆಂದೂ ಈ ಜೀವನು ಭ್ರಮಿಸಿದ್ದಾನೆಂದೂ ಹಿಂದೆ ತಿಳಿಸಿದೆ. ಈಶ್ವರನಿಗೆ ಇಂತಹ ಭ್ರಮೆ ಇಲ್ಲ. ಇದೇ ಈಶ್ವರನಲ್ಲಿರುವ ವಿಶೇಷ" (೧೦೮).

ಈಶ್ವರನು ನಿಃಸಂಗನಾದರೆ ಯಾವ ರೀತಿಯಲ್ಲಿಯೂ ಆತನಿಗೆ ನಿಯಾಮಕತ್ವವು ಘಟಿಸುವುದಿಲ್ಲವೆಂದು ತಾರ್ಕಿಕರು ಹೇಳುತ್ತಾರೆ. ಈಶ್ವರನು ಅಸಂಗನೆಂದು ಹೇಳಿ ನಿಯಾಮಕತ್ವವೂ ಇದೆಯೆನ್ನುವುದು ತಪ್ಪು. ಆದ್ದರಿಂದ ಈಶ್ವರನಲ್ಲಿ ನಿತ್ಯಜ್ಞಾನ, ಪ್ರಯತ್ನ, ಇಚ್ಛೆ ಎಂಬ ಗುಣಗಳು ಇವೆ. ಆತನು ಸಗುಣನೇ ಹೊರತು ನಿರ್ಗುಣನಲ್ಲ ಎಂದು ಅವರ ಅಭಿಪ್ರಾಯ. ಈಶ್ವರನು ಇತರ ಜೀವರಂತಲ್ಲ, ಅವನೊಬ್ಬ ಪುರುಷವಿಶೇಷ ಎಂಬುದನ್ನೊಪ್ಪಬೇಕು. ಈಶ್ವರನು "**ಸತ್ಯಕಾಮಃ, ಸತ್ಯಸಂಕಲ್ಪಃ**" ಇತ್ಯಾದಿಯಾಗಿ ಶ್ರುತಿಯು ಘೋಷಿಸುತ್ತಿರುವುದರಿಂದ, ಈಶ್ವರನ ಜ್ಞಾನ, ಪ್ರಯತ್ನಾದಿಗಳೆಲ್ಲವೂ ನಿತ್ಯವಾದವು. ಆತನು ಕಲ್ಯಾಣಗುಣಪೂರ್ಣನಾಗಿರುವುದೇ ಆತನಲ್ಲಿರುವ ವಿಶೇಷವೆಂದು ನೈಯಾಯಿಕರ ಸಿದ್ಧಾಂತ (೧೦೯-೧೧೦). ಆದರೆ ಹಿರಣ್ಯಗರ್ಭನನನ್ನು ಉಪಾಸನೆ ಮಾಡತಕ್ಕವರು ಇದನ್ನೊಪ್ಪುವುದಿಲ್ಲ. ಜ್ಞಾನ, ಪ್ರಯತ್ನ, ಸಂಕಲ್ಪಾದಿಗಳು ಈಶ್ವರನಲ್ಲಿ ನಿತ್ಯವಾಗಿರುವುದಾದರೆ ಸದಾ ಸೃಷ್ಟಿಕಾರ್ಯವು ನಡೆಯುತ್ತಲೇ ಇರಬೇಕಾಗುತ್ತದೆ! ಪ್ರಳಯವೇ ಇಲ್ಲದೇ ಹೋದೀತು. ಪ್ರಳಯದಲ್ಲಿ ಅವನ ಪ್ರಯತ್ನ, ಸಂಕಲ್ಪಗಳೇನೂ ಇರುವುದಿಲ್ಲ. ಆದ್ದರಿಂದ ಲಿಂಗಶರೀರಯುಕ್ತನಾದ ಹಿರಣ್ಯಗರ್ಭನು ಈಶ್ವರನೆನ್ನುವುದು ಯುಕ್ತ. ಸಮಷ್ಟಿ ಲಿಂಗಶರೀರಕ್ಕೆ ಅಭಿಮಾನಿಯೂ ಮಾಯೋಪಾಧಿಯುಳ್ಳವನೂ ಆದ ಪರಮಾತ್ಮನೇ ಹಿರಣ್ಯಗರ್ಭ. '**ಹಿರಣ್ಯಗರ್ಭಃ ಸಮವರ್ತತಾಗ್ರೇ ಭೂತಸ್ಯ ಜಾತಃ ಪತಿರೇಕ ಆಸೀತ್**' ಎಂದು ಶ್ರುತಿವಚನವಿದೆ. ಹಿರಣ್ಯಗರ್ಭನ ಲಿಂಗಶರೀರವಾದ ಮನಸ್ಸಿನಲ್ಲಿ ಇಚ್ಛೆ ಹುಟ್ಟಿದಾಗ ಸೃಷ್ಟಿಯಾಗುತ್ತದೆ. ಇಚ್ಛೆ ಇಲ್ಲದಾಗ ಸೃಷ್ಟಿಕಾರ್ಯವು ನಿಂತು ಹೋಗುತ್ತದೆ. ಉದ್ಗೀಥಬ್ರಾಹ್ಮಣದಲ್ಲಿ ಹಿರಣ್ಯಗರ್ಭನ ಮಹಿಮೆಯು ವಿಸ್ತಾರವಾಗಿ ಬಂದಿದೆ. ಹಿರಣ್ಯಗರ್ಭನಿಗೆ ಲಿಂಗದೇಹವಿದ್ದರೂ ಅವನು ಜೀವಾತ್ಮರಲ್ಲಿ ಸೇರುವುದಿಲ್ಲ. ಏಕೆಂದರೆ, ಅವನಿಗೆ ಅವಿದ್ಯೆ, ಕಾಮ,

ಕರ್ಮಾದಿಗಳಾವುವೂ ಇರುವುದಿಲ್ಲ ಎಂದು ಹಿರಣ್ಯಗರ್ಭೋಪಾಸಕರ ಮತ (೧೧೧-೧೧೨). ಈ ಮತವೂ ಸರಿಯಲ್ಲವೆಂದು ವಿರಾಡುಪಾಸಕರು ಹೇಳುತ್ತಾರೆ. ಹಿರಣ್ಯಗರ್ಭನಿಗೆ (ಸೂತ್ರಾತ್ಮನಿಗೆ) ಸ್ಥೂಲದೇಹವಿಲ್ಲದೆ ಕೇವಲ ಲಿಂಗದೇಹ ವಿರುವುದನ್ನು ಒಪ್ಪಲಾಗುವುದಿಲ್ಲ. ಹಾಗಿರುವುದು ಇನ್ನೆಲ್ಲಿಯೂ ಕಂಡುಬರುವುದಿಲ್ಲ. ಆದಕಾರಣ ಸಮಷ್ಟಿಸ್ಥೂಲಶರೀರಾಭಿಮಾನಿಯಾದ ವಿರಾಟ್‌ಪುರುಷನೇ ಈಶ್ವರ. **ಸಹಸ್ರಶೀರ್ಷಾ ಪುರುಷಃ, ಸಹಸ್ರಾಕ್ಷಃ ಸಹಸ್ರಪಾತ್**, ಇತ್ಯಾದಿ ಶ್ರುತಿವಾಕ್ಯಗಳಿಂದ ಈಶ್ವರನಿಗೆ ಸ್ಥೂಲದೇಹ ವಿದೆಯೆಂದು ನಿಶ್ಚಿತವಾಗುತ್ತದೆ. ಈ ವಿರಾಟ್‌ಪುರುಷನು **'ವಿಶ್ವತಶ್ಚಕ್ಷುಃ'**, ವಿಶ್ವರೂಪ. ಈತನೇ ಈಶ್ವರನೆಂದು ವಿರಾಡುಪಾಸಕರ ಹೇಳಿಕೆ(೧೧೩-೧೧೪). ಇದೂ ಸರಿಯಲ್ಲ. ಈಶ್ವರನು ಸರ್ವತೋಮುಖ, ಸರ್ವತಃ ಪಾಣಿಪಾದ ಎನ್ನುವುದಾದರೆ ಕೆಲವು ಬಗೆಯ ಕ್ರಿಮಿಕೀಟಾದಿಗಳನ್ನು ಈಶ್ವರನೆನ್ನಬೇಕಾದೀತು! ಈ ಕ್ರಿಮಿಕೀಟಗಳಿಗೆ ಬಹುಸಂಖ್ಯೆಯಲ್ಲಿ ನೂರಾರು ಕಾಲುಗಳಿರುತ್ತವೆ. ಯಾವ ಕಡೆಗೆ ಬೇಕಾದರೂ ಇವು ಸರಿದಾಡಬಲ್ಲವು! ಆದ್ದರಿಂದ ಚತುರ್ಮುಖಿಯಾದ ಬ್ರಹ್ಮನೇ ಸೃಷ್ಟಿಕರ್ತನಾದ ಈಶ್ವರನೆನ್ನುವುದು ಯುಕ್ತವಾದದ್ದು. ಬ್ರಹ್ಮನಿಗೆ ಸ್ರಷ್ಟಾ ಎಂಬ ಹೆಸರಿದೆ. ಆದ್ದರಿಂದ ಬ್ರಹ್ಮನಲ್ಲದೆ ಇನ್ನಾರೂ ಈಶ್ವರನಲ್ಲ(೧೧೫). **'ಪ್ರಜಾಪತಿಃ ಪ್ರಜಾ ಅಸೃಜತ'** ಎಂಬ ಶ್ರುತಿವಾಕ್ಯವು ಬ್ರಹ್ಮನೇ ಸೃಷ್ಟಿಕರ್ತನೆಂಬುದಕ್ಕೆ ಪ್ರಮಾಣವಾಗಿದೆ. ಪ್ರಜಾಪತಿಯೆಂದರೆ ಚತುರ್ಮುಖನಾದ ಬ್ರಹ್ಮ. ಪುತ್ರಾರ್ಥಿಗಳಾಗಿ ಬ್ರಹ್ಮನನ್ನು ಉಪಾಸನೆ ಮಾಡತಕ್ಕವರು ಹೀಗೆ ಹೇಳಿದ್ದಾರೆ (೧೧೬). ಆದರೆ ವಿಷ್ಣುಭಕ್ತರಾದ ಭಾಗವತರೆಂಬ ಜನರು ವಿಷ್ಣುವೇ ಈಶ್ವರನೆನ್ನುತ್ತಾರೆ. ವಿಷ್ಣುವಿನ ನಾಭಿಕಮಲದಿಂದ ಬ್ರಹ್ಮನು ಹುಟ್ಟಿದನೆಂದು ಪುರಾಣಗಳಲ್ಲಿ ಹೇಳಿದೆ. ಬ್ರಹ್ಮನಿಗೂ ತಂದೆಯಾದ ವಿಷ್ಣುವೇ ಈಶ್ವರನೆಂದು ಅವರ ಅಭಿಪ್ರಾಯ (೧೧೭). ಶೈವಶಾಸ್ತ್ರವನ್ನು ನಂಬಿರುವ ಶೈವರಾದರೋ ಶಿವನೇ ಈಶ್ವರನೆನ್ನುತ್ತಾರೆ. ಏಕೆಂದರೆ ಪುರಾಣದಲ್ಲಿ ಈ ಕಥೆ ಇದೆ. - ಒಂದು ಸಲ ವಿಷ್ಣುವಿಗೂ ಬ್ರಹ್ಮನಿಗೂ ನಾನು ಹೆಚ್ಚು, ನಾನು ಹೆಚ್ಚು ಎಂದು ಕಲಹವಾಯಿತು. ಆಗ ಅವರಿಬ್ಬರ ನಡುವೆ ಶಿವನು ಲಿಂಗಾಕಾರನಾಗಿ ಆವಿರ್ಭವಿಸಿದನು. 'ಅದ್ಭುತವಾದ ಈ ಲಿಂಗ ಯಾವುದು? ಇದರ ಆದ್ಯಂತವನ್ನು ತಿಳಿಯಬೇಕು' ಎಂದು ಅವರಿಬ್ಬರೂ ನಿರ್ಣಯಿಸಿದರು. ಆ ಮಹಾಲಿಂಗದ ತುದಿಯನ್ನು ಕಂಡುಹಿಡಿಯಲು ಬ್ರಹ್ಮನು ಆಕಾಶವನ್ನೇರಿ ಹೋದನು. ವಿಷ್ಣುವು ಲಿಂಗದ ಬುಡವನ್ನು ಕಂಡುಹಿಡಿಯಲು ಲಿಂಗದ ಕೆಳಗೆ

ನೆಲವನ್ನು ಅಗೆಯುತ್ತ ಹೋದನು. ವಿಷ್ಣುವಿಗೆ ಲಿಂಗದ ಆದಿಯನ್ನು ಕಂಡುಹಿಡಿಯಲಾಗಲಿಲ್ಲ. ಬ್ರಹ್ಮನಿಗೆ ತುದಿಯನ್ನು ಕಂಡುಹಿಡಿಯಲೂ ಆಗಲಿಲ್ಲ. ಆದ್ದರಿಂದ ಬ್ರಹ್ಮ, ವಿಷ್ಣು ಇವರಿಬ್ಬರಿಗೂ ಅಧಿಕನಾದವನು ಶಿವನು. ಆದ್ದರಿಂದ ಶಿವನೇ ಈಶ್ವರ ಎಂದು ಶೈವರು ಹೇಳುತ್ತಾರೆ (೧೧೮). ಗಣಪತಿಯೇ ಶಿವನಿಗಿಂತ ಅಧಿಕನಾಗಿದ್ದಾನೆಂದು ಗಾಣಪತ್ಯರು ಹೇಳುತ್ತಾರೆ. ಶಿವನು ತ್ರಿಪುರಾರಿ ಎಂದು ಪ್ರಸಿದ್ಧನಷ್ಟೆ. ಆತನು ತ್ರಿಪುರರನ್ನು ಗೆಲ್ಲುವುದಕ್ಕೆ ಮೊದಲು ಗಣಪತಿಯನ್ನು ಪೂಜಿಸಿದನೆಂದು ಪುರಾಣದಲ್ಲಿದೆ. ಆದ್ದರಿಂದ ಶಿವನಿಗೂ ಪೂಜ್ಯನಾದ ಗಣಪತಿಯೇ ಈಶ್ವರನೆಂದು ಅವರು ಹೇಳುತ್ತಾರೆ (೧೧೯). ಹೀಗೆಯೇ ಶಾಕ್ತರು, ಸೌರರು, ಭೈರವರು ಮೊದಲಾದ ಬೇರೆ ಬೇರೆ ದೇವತೋಪಾಸಕರು ನಾನಾವಿಧವಾಗಿ ಹೇಳುತ್ತಿದ್ದಾರೆ. ಮಾರಣ, ಉಚ್ಚಾಟನ, ವಶೀಕರಣಾದಿ ಮಂತ್ರಗಳನ್ನೂ, ಭೈರವಾದಿಗಳನ್ನು ಹೊಗಳುವ ಅರ್ಥವಾದದ ಸ್ತುತಿಗಳನ್ನೂ ಹೀಗೆಯೇ ಆಧುನಿಕರು ರಚಿಸಿ ಪ್ರಕಾಶಿಸಿರುವ ಕಲ್ಪಿತವಾದ ಕಲ್ಪಗ್ರಂಥಗಳನ್ನು ಆಶ್ರಯಿಸಿಕೊಂಡು ಈ ಜನರು ಈಶ್ವರನ ಸ್ವರೂಪವನ್ನು ಪ್ರತಿಪಾದಿಸುತ್ತಾರೆ (೧೨೦). ಅಂತರ್ಯಾಮಿಯಾದ ಪರಮಾತ್ಮನಿಂದ ಆರಂಭಿಸಿ ಅರಳಿಮರ, ಎಕ್ಕದ ಗಿಡ, ಬಿದಿರು ಮುಂತಾದ ಸ್ಥಾವರ ವಸ್ತುಗಳನ್ನು ಈಶ್ವರನೆಂದು ನಂಬಿದ ಜನರಿದ್ದಾರೆ. ಈ ಸ್ಥಾವರಗಳು ಕೆಲವರಿಗೆ ಕುಲದೇವತೆಗಳಾಗಿರುವುದೂ ಉಂಟು (೧೨೧). ಹೀಗಿರುವಾಗ ಯಾವಾತನು ಪರಮಾರ್ಥಸತ್ಯವೇನೆಂಬುದನ್ನು ತಿಳಿಯಲಿಚ್ಛಿಸುತ್ತಾನೋ, ಯುಕ್ತಿಯಿಂದಲೂ ವೇದಶಾಸ್ತ್ರವಿಚಾರದಿಂದಲೂ ಈಶ್ವರನ ಸ್ವರೂಪವೇನೆಂಬುದನ್ನು ನಿರ್ಣಯಿಸಲು ಬಯಸುತ್ತಾನೋ ಆತನಿಗೋಸ್ಕರ ಒಂದೇ ಸತ್ಯವೇನೆಂಬುದನ್ನು ಈಗ ನಿರ್ಣಯಿಸಿ ಹೇಳುತ್ತೇವೆ (೧೨೨).

ಮಾಯೆಯು ಈ ಜಗತ್ತಿಗೆ ಉಪಾದಾನಕಾರಣವಾದ ಪ್ರಕೃತಿ ಎಂದು ತಿಳಿಯಬೇಕು. ಮಾಯೆಯೇ ಉಪಾಧಿಯಾಗಿರುವ ಎಂದರೆ ಮಾಯೆಗೆ ಅಧಿಷ್ಠಾತನಾದ ಮಹೇಶ್ವರನು (ಅಂತರ್ಯಾಮಿಯು) ಈ ಜಗತ್ತಿಗೆ ನಿಮಿತ್ತ ಕಾರಣನಾಗಿದ್ದಾನೆಂದು ತಿಳಿಯತಕ್ಕದ್ದು. ಮಾಯಿಯಾದ ಈ ಈಶ್ವರನ ಅಂಶಗಳಾದ ಜೀವಾತ್ಮರಿಂದ ಈ ಜಗತ್ತು ವ್ಯಾಪ್ತವಾಗಿದೆ. ಗಡಿಗೆಗೆ ಮಣ್ಣು ಉಪಾದಾನಕಾರಣ. ಉಂಗುರಕ್ಕೆ ಚಿನ್ನವು ಉಪಾದಾನಕಾರಣ. ಹಾಗೆ ಸ್ಥಾವರವಾದ ಜಡಸ್ವರೂಪದ ಜಗತ್ತಿಗೆ ಮಾಯೆಯು ಉಪಾದಾನಕಾರಣ. ಗಡಿಗೆಗೆ ಕುಂಬಾರನೂ, ಉಂಗುರಕ್ಕೆ ಅಕ್ಕಸಾಲೆಯೂ ನಿಮಿತ್ತಕಾರಣ. ಹಾಗೆ

ಈ ಸ್ಥಾವರ ಜಗತ್ತಿಗೆ ಈಶ್ವರನು ಎಂದರೆ ಮಾಯೋಪಾಧಿಯಾದ ಪರಮಾತ್ಮನು ನಿಮಿತ್ತಕಾರಣ. ಜೀವಾತ್ಮರು ಪರಮಾತ್ಮನ ಅಂಶಗಳು. ಅಂಶಗಳೆಂದರೇನೆಂಬುದು ಮುಂದೆ ಗೊತ್ತಾಗುತ್ತದೆ. ಏವಂಚ ಈಶ್ವರ, ಅವನ ಮಾಯಾಶಕ್ತಿ ಇವನ್ನು ಬಿಟ್ಟು ಇನ್ನೊಂದು ವಸ್ತುವೇ ಇಲ್ಲವೆಂದು ತಾತ್ಪರ್ಯ (೧೨೩). **''ಮಾಯಾಂ ತು ಪ್ರಕೃತಿಂ ವಿದ್ಯಾತ್ ಮಾಯಿನಂ ತು ಮಹೇಶ್ವರಂ''** (ಶ್ವೇ.ಉ. ೪-೧೦) ಎಂಬ ಶ್ರುತಿಗೆ ಅನುಸಾರವಾಗಿ ಈಶ್ವರನು ಯಾರೆಂದು ನಿರ್ಣಯಿಸುವುದು ಯುಕ್ತವಾದದ್ದು. ಹೀಗೆ ನಿರ್ಣಯಿಸಿದರೆ ಹಿಂದೆ ಹೇಳಿದ ಮತಭೇದಗಳಿಗೆ ವಿರೋಧವೇ ಇರುವುದಿಲ್ಲ. ಅಶ್ವತ್ಥವೃಕ್ಷ ಮುಂತಾದ ಸ್ಥಾವರಗಳು ಈಶ್ವರನೆಂಬ ಎಲ್ಲ ವಾದಗಳೂ ಈ ನಿರ್ಣಯದಲ್ಲಿ ಅಡಗಿಹೋಗುತ್ತವೆ. ಏಕೆಂದರೆ, ಅವೆಲ್ಲವೂ ಮಾಯಾವಿಯಾದ ಈಶ್ವರನ ರೂಪಭೇದಗಳೇ ಆಗಿರುತ್ತವೆ. ನಮ್ಮ ಈ ನಿಲುವಿನಲ್ಲಿ ಇತರ ಸಿದ್ಧಾಂತಗಳಿಗೆ ವಿರೋಧವಿಲ್ಲದಂತೆ ಸರ್ವಸಮನ್ವಯವಾಗಿ ಬಿಡುತ್ತದೆ (೧೨೪). ಈ ಮಾಯೆಯು ತಮೋರೂಪವಾದ್ದೆಂದು ನೃಸಿಂಹೋತ್ತರತಾಪಿನಿಯೆಂಬ ಉಪನಿಷತ್ತಿನಲ್ಲಿ ಹೇಳಿದೆ. **''ಮಾಯಾ ಚ ತಮೋರೂಪಾನುಭೂತಿಃ ತದೇತತ್ ಜಡಂ ಮೋಹಾತ್ಮಕಂ''** (ನೃ. ಉ. ೯) ಎಂದು ಅಲ್ಲಿರುವ ವಾಕ್ಯ. ತಮೋರೂಪವೆಂದರೆ ಅಜ್ಞಾನರೂಪವೆಂದರ್ಥ. ಏವಂಚ ಜಗತ್ತಿನ ಉಪಾದಾನಕಾರಣವು ಅಜ್ಞಾನರೂಪವಾದ ಮಾಯೆಯೆಂದು ಸಿದ್ಧವಾಗುತ್ತದೆ. ಇದಕ್ಕೆ ಅನುಭವವೇ ಪ್ರಮಾಣವೆಂದು ಶ್ರುತಿಯೇ ಸಾರಿ ಹೇಳಿದೆ (೧೨೫). ಯಾರ ಅನುಭವಕ್ಕೆ ಇದು ಬಂದಿದೆ? ನಮ್ಮೆಲ್ಲರ ಅನುಭವಕ್ಕೂ ಬಂದಿದೆಯೆಂಬುದನ್ನು ಶ್ರುತಿಯೇ **'ತದೇತಜ್ಜಡಂ ಮೋಹಾತ್ಮಕಂ'** (ನೃ. ಉ. ೯) ಎಂದು ವರ್ಣಿಸಿ ಹೇಳಿದೆ. ಪ್ರಕೃತಿಯ ಕಾರ್ಯವು ಜಡವಾಗಿದೆ. ನಾವು ಕಾಣುವ ಘಟಪಟಾದಿವಸ್ತುಗಳೆಲ್ಲವೂ ಜಡವಾದವು. ಐಂದ್ರಜಾಲಿಕನು ತನ್ನ ಮಂತ್ರಪ್ರಭಾವದಿಂದ ಇಲ್ಲದ ಮಾವಿನ ಹಣ್ಣನ್ನೋ ಇನ್ನೊಂದು ವಸ್ತುವನ್ನೋ ತೋರಿಸುತ್ತಾನೆ. ಆತನು ತನ್ನ ಪ್ರಭಾವದಿಂದ ನಮ್ಮ ಜ್ಞಾನವನ್ನು ಅಡ್ಡಗಟ್ಟಿ ಇಲ್ಲದ್ದನ್ನು ಕಾಣಿಸುತ್ತಾನೆ. ಅದೇ ಮಾಯೆ, ಅದೇ ನಮ್ಮ ಅಜ್ಞಾನ. ಮಾಯೆಯೇ ಜ್ಞಾನವನ್ನು ಅಡ್ಡಗಟ್ಟಿದ್ದರಿಂದ ಸತ್ಯವನ್ನು ಮರೆಮಾಚಿದ್ದರಿಂದ ಅದರ ಕಾರ್ಯ ಮೋಹ. ಅದೇ ಅಜ್ಞಾನ. ಇಲ್ಲದ ಘಟಪಟಾದಿಗಳನ್ನು ತೋರಿಸುವುದರಿಂದ ಮಾಯೆಯ ಕಾರ್ಯ ಜಡವೂ ಹೌದು. ಅದ್ವಿತೀಯವಾದ ಪರಮಾರ್ಥವಸ್ತು ಒಂದೇ ಇರುವಾಗ ಅದನ್ನು ಕಾಣದೇ ಜಡಜಗತ್ತನ್ನು ಮಾತ್ರ ಕಾಣುತ್ತಿರುವುದು

ನಮ್ಮೆಲ್ಲರ ಅನುಭವಕ್ಕೂ ಬಂದಿದೆ ಎಂದು ಅಭಿಪ್ರಾಯ. ಇದು ಬಾಲಕರಿಗೂ ವಿದ್ಯಾಹೀನರಾದ ಗೊಲ್ಲರಿಗೂ ಸಹ ಅನುಭವಕ್ಕೆ ಬರುವುದರಿಂದ ಈ ಮಾಯೆ 'ಅನಂತ' ವಾದದ್ದೂ ಹೌದು (೧೨೬). ಅಚಿದ್ರೂಪವಾದ ಘಟಾದಿವಸ್ತುವೆಲ್ಲವೂ ಜಡವೇ ಆಗಿದೆ. ಈ ಜಗತ್ತೆಲ್ಲವೂ ಹೇಗಾಗಿರಬಹುದು, ಇದರ ಆದ್ಯಂತಗಳೇನು? ಎಂದು ತಿಳಿಯದಿರುವುದೇ ಮೋಹವೆಂದು ಲೌಕಿಕರೂ ಹೇಳುತ್ತಾರೆ (೧೨೭). ಅಚಿತ್ ಎಂದರೆ ಘಟಾದಿ ಜಡವಸ್ತುವೆಂದರ್ಥ. ಈ ಜಗತ್ತು ಹೇಗೆ ನಿರ್ಮಿತವಾಗಿದೆಯೆಂಬುದನ್ನು ತಿಳಿಯಲಾರದೆ ಇರುವುದು ಚಿತ್ತದ ಮೋಹ. ಇಂತಹ ಚಿತ್ತಮೋಹವು ಸಕಲಜನರಿಗೂ ಇದೆಯಾದ್ದರಿಂದ ಇದನ್ನು ಅನಂತವೆಂದು ತಿಳಿಯಬೇಕು. ಕತ್ತಲೆಯಂತಿರುವ ಈ ಮೋಹವು ಜನರನ್ನು ಆವರಿಸಿಕೊಂಡಿರುವುದರಿಂದ ಮುಂದೇನಿದೆ, ಜಗತ್ತಿನ ಮೂಲವೇನು ಎಂಬುದನ್ನು ಗೊತ್ತುಪಡಿಸಲಾರದೆ ಬುದ್ಧಿಯನ್ನು ಕುಂಠಿತಗೊಳಿಸುತ್ತದೆ. ಇದೆಲ್ಲವೂ ಲೌಕಿಕರ ಅನುಭವಕ್ಕೆ ಬಂದ ಸಂಗತಿ. ಈ ಮೋಹವೇ ಮಾಯಾ ಎನ್ನಿಸುತ್ತದೆ. ಈ ಮಾಯಾಸ್ವರೂಪವನ್ನು ಯುಕ್ತಿಯಿಂದಲೂ ನಿರ್ಣಯಿಸ- ಲಾಗುವುದಿಲ್ಲ. ಶ್ರುತಿಯೇ ಇದನ್ನು ಹೇಳಿದೆ, **'ನಾಸದಾಸೀತ್ ನೋ ಸದಾಸೀತ್'** (ಬೃ.ಉ.೪-೪-೧೯) ಎಂದು (೧೨೮). ಈ ಶ್ರುತಿಯ ಅಭಿಪ್ರಾಯವೇನೆಂದರೆ, ಮಾಯಾತತ್ತ್ವವು ಅಸತ್ ಅಲ್ಲ, ಮಾಯೆ ಇಲ್ಲ ಎನ್ನುವಂತಿಲ್ಲ, ಏಕೆಂದರೆ ಘಟ, ಪಟಾದಿಗಳು ಕಣ್ಣಿಗೆ ಕಾಣಿಸುತ್ತವೆ. ಹಾಗಾದರೆ ಅದು ಸತ್ = ಇದೆಯೆನ್ನೋಣವೇ ಎಂದರೆ ಅದೂ ಯುಕ್ತವಲ್ಲ. **'ನೇಹ ನಾನಾಸ್ತಿ ಕಿಂಚನ'** (ಬೃ.ಉ.೪-೪-೧೯) ಎಂದು ಶ್ರುತಿಯು ಪರಬ್ರಹ್ಮಕ್ಕೆ ಅತಿರಿಕ್ತವಾದದ್ದು ಯಾವುದೂ ಇಲ್ಲವೆಂದು ಘೋಷಿಸುತ್ತದೆ. ಇದೆಯೆಂದರೆ ಶ್ರುತಿಗೆ ವಿರುದ್ಧವಾಗುತ್ತದೆ. ಇನ್ನು ಸತ್ - ಅಸತ್ ಎರಡೂ ಆಗಿದೆ ಎನ್ನುವುದು ಪರಸ್ಪರ ವಿರುದ್ಧವಾದದ್ದು. ಏವಂಚ ಮಾಯೆಯು ಅನಿರ್ವಾಚ್ಯವೆಂಬ ಪರಿಸ್ಥಿತಿಯುಂಟಾಯಿತು. ಬ್ರಹ್ಮಜ್ಞಾನಿಯ ಜ್ಞಾನದೃಷ್ಟಿಯಲ್ಲಾದರೋ ಮಾಯೆಯು ಪೂರ್ಣವಾಗಿ ತೊಲಗಿ ಹೋಗುವುದರಿಂದ ಘಟ ಪಟಾದಿಗಳೆಲ್ಲವೂ ತುಚ್ಛ - ಶೂನ್ಯ - ಇಲ್ಲವೇ ಇಲ್ಲವೆಂದು ಶ್ರುತಿಯೇ ಹೇಳಿದೆ (೧೨೯). ಈಗ ಏನಾಯಿತೆಂದರೆ, ಮಾಯೆಯು ತುಚ್ಛ (ಇಲ್ಲದ್ದು), ಅನಿರ್ವಚನೀಯ, ವಾಸ್ತವೀ (ಸತ್ - ಇದೆ) - ಎಂಬ ಮೂರು ರೂಪಗಳನ್ನು ತಳೆಯಿತು! ವೇದವು ಹೇಳಿದಂತೆ ಜ್ಞಾನಿಯ ದೃಷ್ಟಿಯಲ್ಲಿ ತುಚ್ಛ, ಯುಕ್ತಿವಾದಿಗಳ ದೃಷ್ಟಿಯಲ್ಲಿ ಅನಿರ್ವಚನೀಯ, ಲೌಕಿಕರ

ದೃಷ್ಟಿಯಲ್ಲಿ ವಾಸ್ತವೀ (ಸತ್ಯ) - ಹೀಗೆ ಮೂರು ರೂಪಗಳಾದವು (೧೩೦). ಚಿತ್ರಪಟವೆಂದರೆ ಚಿತ್ರವನ್ನು ಬರೆದಿರುವ ಬಟ್ಟೆ. ಅದನ್ನು ಬಿಚ್ಚಿ ಹಿಡಿದರೆ ಚಿತ್ರವು ಕಾಣಿಸುತ್ತದೆ. ಮಡಿಸಿದರೆ ಚಿತ್ರವು ಕಾಣಿಸುವುದಿಲ್ಲ! ಈ ಮಾಯೆಯೂ ಚಿತ್ರಪಟವಿದ್ದ ಹಾಗೆ. ಅದು ತನ್ನನ್ನು ಬಿಚ್ಚಿಕೊಂಡರೆ ಈ ಜಗತ್ತು ಕಾಣಿಸುತ್ತದೆ. ಜಗತ್ತು 'ಸತ್' ಎಂದು ಗೊತ್ತಾಗುತ್ತದೆ. ಅದು ಮುಚ್ಚಿಕೊಂಡರೆ ಜಗತ್ತೇ ಇರುವುದಿಲ್ಲ! ಇದೆಲ್ಲವೂ ಅಸತ್ ಆಗಿಬಿಡುತ್ತದೆ! (೧೩೧). ಚಿತಿ ಎಂದರೆ ಚಿತ್. ಪ್ರಕಾಶಸ್ವರೂಪವಾದ ಚೈತನ್ಯ. ಅದೇ ಪರಬ್ರಹ್ಮ. ಈ ಮಾಯೆಯು ಚಿತಿಯ ಸಹಾಯವಿಲ್ಲದೆ ಈ ಜಗತ್ತನ್ನು ತೋರಿಸಲು ಶಕ್ತವಾಗುವುದಿಲ್ಲ. ಆದ್ದರಿಂದ ಇದು ಸ್ವತಂತ್ರವಲ್ಲ ಎನ್ನಬಹುದು. ಚಿತಿಯಾದ ಆತ್ಮನನ್ನೇ ಅದು ಅನ್ಯಾಕಾರವಾಗಿ ತೋರಿಸಿ ಬಿಡಲು ಶಕ್ತವಾಗಿರುವುದರಿಂದ ಮಾಯೆಯು ಸ್ವತಂತ್ರ ಎಂದೂ ಹೇಳಬಹುದು! (೧೩೨). ನಿರ್ವಿಕಾರನೂ ಅಸಂಗನೂ ಆದ ಆತ್ಮನನ್ನೇ ಈ ಮಾಯೆಯು ಜಗತ್ತನ್ನಾಗಿ ಮಾರ್ಪಡಿಸಿ ಬಿಡುತ್ತದೆ. **"ಜೀವೇಶಾವಾಭಾಸೇನ ಕರೋತಿ"** (ನೃ.ಉ.೮) ಎಂಬ ಶ್ರುತಿ ವಚನದಂತೆ ಚಿತಿಯನ್ನೇ ಚಿದಾಭಾಸರೂಪರನ್ನಾಗಿ ಪರಿವರ್ತಿಸಿ 'ಜೀವ - ಈಶ್ವರ' ಎಂಬ ಎರಡು ಭೇದಗಳನ್ನು ಕಲ್ಪಿಸಿಬಿಡುತ್ತದೆ! (೧೩೩). ವಿಚಿತ್ರವೇನೆಂದರೆ, ಕೂಟಸ್ಥನಾದ ಎಂದರೆ ನಿರ್ವಿಕಾರನಾದ ಆತ್ಮನಲ್ಲಿ ವಸ್ತುತಃ ಯಾವ ವಿಕಾರವನ್ನೂ ಮಾಡಲಾಗದಿದ್ದರೂ ಆತನನ್ನೇ ಜಗತ್ತಿನ ಆಕಾರದಲ್ಲಿಯೂ ಜೀವ-ಈಶ್ವರ ಎಂಬ ಭೇದದಲ್ಲಿಯೂ ಪರಿವರ್ತಿಸಿ ಬಿಡುತ್ತದೆ! ಅಘಟಿತ ಘಟನೆಯನ್ನು ಮಾಡಬಲ್ಲ ಈ ಮಾಯೆಯಲ್ಲಿ ಆಶ್ಚರ್ಯವಾದರೂ ಏನು? ಇಂತಹ ದುರ್ಘಟವಾದ ಕಾರ್ಯವನ್ನು ಮಾಡಿ ಚಮತ್ಕಾರವನ್ನು ತೋರಿಸದಿದ್ದರೆ ಅದನ್ನೇಕೆ ಮಾಯೆಯೆನ್ನಬೇಕು! (೧೩೪). ನೀರಿನಲ್ಲಿ ದ್ರವತ್ವ, ಬೆಂಕಿಯಲ್ಲಿ ಬಿಸಿ, ಕಲ್ಲಿನಲ್ಲಿ ಕಠಿಣತೆ- ಹೇಗೆ ಸ್ವಭಾವ ಸಿದ್ಧವಾಗಿದೆಯೋ ಹಾಗೆ ಮಾಯೆಯಲ್ಲಿ ಯಾರಿಗೂ ಸಾಧ್ಯವಿಲ್ಲದ್ದನ್ನು ಮಾಡುವ ಶಕ್ತಿ ಸ್ವಭಾವಸಿದ್ಧವಾಗಿದೆ. ಅದಕ್ಕೆ ಬೇರೆ ಕಾರಣ ಯಾವುದೂ ಇಲ್ಲ (೧೩೫). ಎಲ್ಲಿಯವರೆಗೆ ಈ ಲೋಕವು ಆ ಮಾಯೆಯನ್ನು ಬೀಸುವ ಮಾಯಾವಿಯನ್ನು ಸಾಕ್ಷಾತ್ಕರಿಸಿಕೊಳ್ಳುವುದಿಲ್ಲವೋ ಅಲ್ಲಿಯವರೆಗೆ ಈ ಚಮತ್ಕಾರವನ್ನು ಲೋಕವು ಕಾಣುತ್ತಲೇ ಇರುವುದು. ಸಾಕ್ಷಾತ್ಕರಿಸಿಕೊಂಡ ಮೇಲೆ 'ಓ! ಇದು ಎಲ್ಲವೂ ಬರಿಯ ಮಾಯೆ' ಯೆಂದು ಸುಮ್ಮನಾಗುವುದು. ಮಾಯಾವಿಯನ್ನು ಕಂಡ ಮೇಲೆ ಯಾವ ಚಮತ್ಕಾರವೂ ಇರುವುದಿಲ್ಲ (೧೩೬). ಜಗತ್ತು ಸತ್ಯವೆಂದು ಯಾರು ವಾದಿಸುತ್ತಾರೋ ಅಂತಹ ತಾರ್ಕಿಕರೇ

ಮೊದಲಾದವರಿಗೆ ಈ ಪ್ರಶ್ನೆಯನ್ನು ಹಾಕಬೇಕು. ಭೂಮಿಜಲಾದಿಗಳಿಂದ ಕೂಡಿದ ಈ ಜಗತ್ತು ಹೇಗೆ ಹುಟ್ಟಿತು? ಈ ಅದ್ಭುತಗಳು ಹೇಗೆ ನಡೆಯುತ್ತವೆ? ಏಕೆ ನಡೆಯುತ್ತವೆ? ಎಂಬ ಪ್ರಶ್ನೆಗಳನ್ನು ಜಗತ್‌ಸತ್ಯವಾದಿಗಳಿಗೆ ಹಾಕಬೇಕು. ಮಾಯಾವಾದಿಯಾದ ವೇದಾಂತಿಗೆ ಹಾಕತಕ್ಕದ್ದಲ್ಲ. ಮಾಯೆಯಿಂದ ಈ ಚಮತ್ಕಾರಗಳು ತೋರುತ್ತವೆ, ಇವು ಸತ್ಯವಲ್ಲ - ಎಂಬ ವೇದಾಂತಿಯು ಈ ಪ್ರಶ್ನೆಗಳಿಗೆ ಉತ್ತರ ಕೊಡಬೇಕಾದ್ದಿಲ್ಲ (೧೩೭). ಇನ್ನು ಮಾಯೆಯಾದರೂ ಏಕಿದೆ? ಅದಕ್ಕೆ ಈ ಶಕ್ತಿ ಹೇಗೆ ಬಂದಿತು? ಎಂದು ಆಕ್ಷೇಪಿಸಿದರೆ ಈ ಆಕ್ಷೇಪದ ಮೇಲೆ ನಾನೂ ಆಕ್ಷೇಪ ಮಾಡಬೇಕಾಗುತ್ತದೆ. ಆ ಶಕ್ತಿ ಮಾಯೆಯ ಸ್ವಭಾವ ಎಂದರೂ ಆಕ್ಷೇಪಿಸುವುದಾದರೆ ಅದನ್ನೇಕೆ ಆಕ್ಷೇಪಿಸುತ್ತೀಯೆ? ಅದರಿಂದ ನಿನಗೇನು ಪ್ರಯೋಜನ? ಎಂದೂ ಆಕ್ಷೇಪಿಸಬೇಕಾಗುತ್ತದೆ. ಇಂತಹ ಆಕ್ಷೇಪ - ಪ್ರತ್ಯಾಕ್ಷೇಪಗಳಿಂದ ಫಲವೇನೂ ಇಲ್ಲ (೧೩೮). ಆದ್ದರಿಂದ ಮಾಯೆ ಇದ್ದುಬಿಟ್ಟಿದೆ. ಅದರ ಲಕ್ಷಣವೇನೆಂದು ವಿಚಾರಿಸುವುದರಿಂದ ಪ್ರಯೋಜನವಿಲ್ಲ. ಈ ಮಾಯಾಬಂಧನದಿಂದ ತಪ್ಪಿಸಿಕೊಳ್ಳುವುದು ಹೇಗೆ? ಇದಕ್ಕೆ ಪರಿಹಾರವೇನು? ಎಂಬುದನ್ನು ಬುದ್ಧಿಶಾಲಿಗಳು ವಿಚಾರ ಮಾಡಬೇಕಾಗಿದೆ (೧೩೯). ''ಮಾಯಾತ್ವವೆಂದರೇನೆಂಬುದನ್ನೇ ಮೊದಲು ನಿಶ್ಚಯಿಸಬೇಕು. ಆಮೇಲೆ ಅದಕ್ಕೆ ಪರಿಹಾರವನ್ನು ವಿಚಾರಿಸಬಹುದು'' ಎಂದು ನೀನು ಹೇಳುವೆಯಾದರೆ, ''ಒಳ್ಳೆಯದು, ನಿಶ್ಚಯಿಸು'' ಎಂದು ನಾನು ಹೇಳುತ್ತೇನೆ. ಈಶ್ವರನ ಮಾಯೆ ಇರಲಿ, ಇಂದ್ರಜಾಲವೆಂಬ ಒಂದು ಮಾಯೆ ಇದೆಯಲ್ಲ, ಅದರ ಸ್ವರೂಪವನ್ನು ಮೊದಲು ನಿರ್ಧರಿಸು. ನೋಡೋಣ! (೧೪೦). '' ಇಂದ್ರಜಾಲದ ಸ್ವರೂಪವನ್ನು ನಿಶ್ಚಯಿಸಲು ಶಕ್ಯವಿಲ್ಲ. ಅದು ಇದೆಯೆಂದು ಸ್ಪಷ್ಟವಾಗಿ ಇಂದ್ರಜಾಲದ ಚಮತ್ಕಾರವನ್ನು ಕಂಡಾಗ ಗೊತ್ತಾಗುತ್ತದೆ. ಅದೇ ಮಾಯೆಯೆಂದು ಲೋಕಪ್ರಸಿದ್ಧವಾಗಿದೆ'' (೧೪೧) ಎಂದು ಹೇಳುವೆಯಾದರೆ, ಹಾಗೆಯೇ ಈಶ್ವರನ ಮಾಯೆಯೂ ಒಂದಿದೆಯೆಂದು ತಿಳಿ. ಇಂದ್ರಜಾಲಕ್ಕೊಂದು ನೀತಿ, ಮಾಯೆಗೆ ಇನ್ನೊಂದು ನೀತಿ - ಎಂಬ ಪಕ್ಷಪಾತವನ್ನು ಮಾಡದೆ ವಿಚಾರ ಮಾಡು (೧೪೨). ಸಕಲ ಪಂಡಿತರೂ ಸೇರಿ ಮಾಯೆಯ ಸ್ವರೂಪವನ್ನು ನಿರ್ಣಯಿಸಲು ಹೊರಟರೂ ಸಾಧ್ಯವಾಗುವುದಿಲ್ಲ. ಕೆಲವು ಹಂತಗಳನ್ನೇರಿದರೂ ಮುಂದೆ ಏನೆಂದು ಹೊಳೆಯದೆ ಅಜ್ಞಾನವು ಅಡ್ಡಗಟ್ಟಿ ನಿಂತು ಬಿಡುತ್ತದೆ! ಮುಂದೆ ಏನೆಂದು

ಹೊಳೆಯುವುದೇ ಇಲ್ಲ(೧೪೩). ಒಂದು ವೀರ್ಯಬಿಂದುವಿನಿಂದ ಈ ದೇಹವೂ ಕರ್ಮೇಂದ್ರಿಯ ಜ್ಞಾನೇಂದ್ರಿಯಾದಿಗಳೂ ಹೇಗೆ ಹುಟ್ಟುತ್ತವೆ? ಈ ಜಡದೇಹದಲ್ಲಿ ಚೇತನವೂ ಹೇಗೆ ಬಂದು ಸೇರಿಕೊಳ್ಳುತ್ತದೆ? ಈ ಪ್ರಶ್ನೆಗಳಿಗೆ ನಿನ್ನ ಉತ್ತರವಾದರೂ ಏನು? (೧೪೪) ಅದೆಲ್ಲವೂ ವೀರ್ಯಬಿಂದುವಿನ ಸ್ವಭಾವ ಎಂದು ಉತ್ತರ ಹೇಳಿದರೆ, ಆ ಸ್ವಭಾವವಿದೆಯೆಂದು ನಿನಗೆ ತಿಳಿದದ್ದು ಹೇಗೆ? ಅನುಮಾನದಿಂದ ತಿಳಿದೆನೆಂದರೆ, ಅನ್ವಯ - ವ್ಯತಿರೇಕ ವ್ಯಾಪ್ತಿಗಳಿಲ್ಲವಾದ್ದರಿಂದ ಅನುಮಾನ ಹೇಗೆ ಘಟಿಸುತ್ತದೆ? ಬಂಜೆಯಾದ ಸ್ತ್ರೀಯಲ್ಲಿ ವೀರ್ಯವು ವ್ಯರ್ಥವಾಗುವುದರಿಂದ 'ವೀರ್ಯವಿದ್ದರೆ ದೇಹಾದಿಗಳು ಹುಟ್ಟುತ್ತವೆ' ಯೆಂಬ ಅನ್ವಯವ್ಯಾಪ್ತಿ ಇಲ್ಲ. ಮರ, ಬಳ್ಳಿ - ಮುಂತಾದವು ವೀರ್ಯವಿಲ್ಲದೆಯೇ ಹುಟ್ಟುತ್ತವೆಯಾದ್ದರಿಂದ 'ವೀರ್ಯವಿಲ್ಲದಿದ್ದರೆ ದೇಹಾದಿಗಳೂ ಹುಟ್ಟುವುದಿಲ್ಲ' ಎಂಬ ವ್ಯತಿರೇಕವ್ಯಾಪ್ತಿಯೂ ಇಲ್ಲ(೧೪೫). ಹೀಗೆ ಪ್ರಶ್ನೆಗಳನ್ನು ಕೇಳುತ್ತ ಹೋದರೆ 'ಏನೋ ನನಗೆ ಗೊತ್ತಿಲ್ಲ' ಎಂಬ ಉತ್ತರಕ್ಕೆ ನೀನು ಶರಣಾಗಬೇಕಾಗುತ್ತದೆ! ಆದ್ದರಿಂದಲೇ ಮಹಾಪುರುಷರು ಈ ಜಗನ್ನಿರ್ಮಾಣವು ಒಂದು ಇಂದ್ರಜಾಲ - ಎಂದು ಹೇಳಿದ್ದಾರೆ (೧೪೬). ಒಬ್ಬ ಮಹಾಪುರುಷರು ಹೀಗೆ ಹೇಳಿದ್ದಾರೆ - ''ಈ ಜಗತ್ತಿನಲ್ಲಿ ಇದಕ್ಕಿಂತಲೂ ಅದ್ಭುತವಾದ ಯಾವ ಇಂದ್ರಜಾಲವಿದ್ದೀತು? ಏನೆಂದರೆ, ಗರ್ಭದಲ್ಲಿದ್ದ ಒಂದು ವೀರ್ಯಬಿಂದುವಿಗೆ ಕ್ರಮವಾಗಿ ಚೈತನ್ಯ ಬಂದು ಚಲಿಸತೊಡಗುತ್ತದೆ. ಅದಕ್ಕೆ ಕೈಕಾಲುಗಳು ಹುಟ್ಟುತ್ತವೆ. ತಲೆ ಹುಟ್ಟುತ್ತದೆ. ಕೈಕಾಲುಗಳಿಗೆ ಬೆರಳುಗಳು ತಲೆಗೆ ಕಿವಿ, ಕಣ್ಣು, ಮೂಗು, ಬಾಯಿ - ಮೊದಲಾದವು ಅಂಕುರಗಳಂತೆ ಹುಟ್ಟುತ್ತವೆ. ಅನಂತರ ಆ ವೀರ್ಯಬಿಂದುವು ಶಿಶುವಾಗಿ ಜನಿಸುತ್ತದೆ. ಕ್ರಮದಲ್ಲಿ ಬೆಳೆದು ಯೌವನ, ಮುಪ್ಪು ಮೊದಲಾದ ವೇಷಗಳನ್ನು ಧರಿಸುತ್ತದೆ. ಅದು ಕಣ್ಣಿಂದ ನೋಡಿ ವಸ್ತುವಿನ ರೂಪವನ್ನು ಗ್ರಹಿಸಬಲ್ಲದು. ಕಿವಿಯಿಂದ ಶಬ್ದಗಳನ್ನು ಆಲಿಸಬಲ್ಲದು. ಮೂಸಿ ವಾಸನೆಯನ್ನು ಹಿಡಿಯಬಲ್ಲದು. ದೂರಕ್ಕೆ ಹೋಗಬಲ್ಲದು. ಹಾಗೆಯೇ ಹಿಂದಕ್ಕೆ ಬರಬಲ್ಲದು!'' (೧೪೭). ಹೀಗೆಯೇ ದೇಹದಂತೆ ವಟವೃಕ್ಷದ ಬೀಜಾದಿಗಳ ಪರಿಸ್ಥಿತಿಯನ್ನು ನೋಡು. (ಚಿಕ್ಕದಾದ ಆಲ, ಅರಳಿ ಬೀಜಗಳಿಂದ ಭಾರೀ ದೊಡ್ಡ ಮರಗಳೇ ಹುಟ್ಟಿ ಬೆಳೆಯುತ್ತವೆ. ಒಗರಾದ ಮಾವಿನ ವಾಟೆಯಿಂದ ಹುಟ್ಟಿದ ಮರದಲ್ಲಿ ಸಿಹಿಯಾದ ಮಾವಿನ ಹಣ್ಣುಗಳು ದೊರೆಯುತ್ತವೆ. ಬೇವಿನ ಬೀಜದಿಂದ ಕಹಿಯಾದ ಎಲೆ, ಬಾಳೆಯ ಬೇರಿನಿಂದ ಹುಟ್ಟಿದ ಮರದಲ್ಲಿ ಬಾಳೆ ಹಣ್ಣುಗಳು ಹೇಗೆ ಹುಟ್ಟುತ್ತಿರಬಹುದು?

ಮೆಣಸಿನಕಾಯಿ ಖಾರ, ನಿಂಬೆಹಣ್ಣು ಹುಳಿ, ಕಬ್ಬಿನಹಾಲು ಸಿಹಿ - ಮೊದಲಾದವು ಆಶ್ಚರ್ಯಕರವಲ್ಲವೇ? ಒಂದೇ ನೆಲ, ನೀರು, ಗಾಳಿಗಳಿಂದ ಬೆಳೆದ ಇವುಗಳಲ್ಲಿ ಬೇರೆ ಬೇರೆ ರುಚಿ ಹೇಗೆ ಬರುತ್ತದೆ?) ಇವೆಲ್ಲವನ್ನೂ ಚೆನ್ನಾಗಿ ಆಲೋಚಿಸು. ಕಡೆಗೆ ಇದೆಲ್ಲ ಮಾಯಾ ಕಾರ್ಯವೆಂದು ನಿಶ್ಚಯಿಸಿಬಿಡು! (೧೪೮). ಇನ್ನು ಪ್ರತಿಯೊಂದು ಪದಾರ್ಥಕ್ಕೂ ಲಕ್ಷಣವನ್ನು ಹೇಳಿ ನಿರ್ವಚನ ಮಾಡಬಲ್ಲೆವು ಎಂದು ತಾರ್ಕಿಕಾದಿಗಳು ಅಭಿಮಾನವನ್ನು ತಳೆದಿದ್ದಾರೆ. ಅವರಿಗೆ ಶ್ರೀಹರ್ಷನೇ ಮೊದಲಾದವರು 'ಖಂಡನ ಖಂಡ ಖಾದ್ಯ' ಮುಂತಾದ ಗ್ರಂಥಗಳಲ್ಲಿ ಚೆನ್ನಾಗಿ ಪಾಠವನ್ನು ಕಲಿಸಿದ್ದಾರೆ! (೧೪೯) ಚಿಂತನೆಗೆ ಸಹ ನಿಲುಕದ ವಸ್ತುಗಳಿವೆ. ಅವು ಮನುಷ್ಯನ ಊಹೆಗೂ ಸಹ ನಿಲುಕುವುದಿಲ್ಲ. ಅಂತಹವುಗಳನ್ನು ತರ್ಕದಿಂದ ಪರೀಕ್ಷಿಸಲು ಹೋಗಬಾರದು. ಈ ಜಗತ್ತಿನ ರಚನೆ ಹೇಗಾಗಿರಬಹುದೆಂದು ಮನಸ್ಸಿನಿಂದ ಊಹಿಸಲು ಸಹ ಶಕ್ಯವಿಲ್ಲ- ಎಂದು ವೇದಾಂತಾಚಾರ್ಯರು ಹೇಳಿದ್ದಾರೆ (೧೫೦). ಅಚಿಂತ್ಯವಾದ ವಸ್ತುವನ್ನು ರಚಿಸುವ ಸಾಮರ್ಥ್ಯಕ್ಕೆ ಜಗತ್ಕಾರಣವು ಮಾಯೆಯೆಂದು ನಿಶ್ಚಯಿಸಿಕೋ. ಮಾಯಾರೂಪವಾದ ಈ ಜಗತ್ಕಾರಣಬೀಜವು ಸುಷುಪ್ತಿಯಲ್ಲಿ ಎಲ್ಲರ ಅನುಭವಕ್ಕೂ ಬರುತ್ತದೆ (೧೫೧). ಜಾಗ್ರತ್ ಮತ್ತು ಸ್ವಪ್ನಗಳಲ್ಲಿ ಕಾಣುವ ಜಗತ್ತು ಸುಷುಪ್ತಿಕಾಲದಲ್ಲಿ ಅನುಭವಕ್ಕೆ ಬರುವ ಮಾಯಾಬೀಜದಲ್ಲಿ ಅಡಗಿರುತ್ತದೆ, ಮರವು ಬೀಜದಲ್ಲಿ ಅಡಗಿರುವಂತೆ. ಆದ್ದರಿಂದ ಈ ಸಮಸ್ತ ಜಗತ್ತಿನ ಸಂಸ್ಕಾರಗಳೂ ಈ ಮಾಯೆಯಲ್ಲಿ ಇರುತ್ತವೆ (೧೫೨).

ಜಗನ್ನಿರ್ಮಾಣಕ್ಕೆ ಮಾಯೆಯು ಬೀಜವೆಂದೂ ಆದ್ದರಿಂದ ಅದರಲ್ಲಿ ಜಗನ್ನಿರ್ಮಾಣಕ್ಕೆ ಅವಶ್ಯಕವಾದ ಜಗದ್ವಾಸನೆಗಳೆಲ್ಲವೂ ಇರುತ್ತವೆಯೆಂಧೂ ಹೇಳಿದ್ದಾಯಿತು. ಜಗತ್ತು ತೋರುವುದು ಜೀವಾತ್ಮನಿಗೆ. ಜೀವಾತ್ಮನು ಯಾರೆಂದರೆ, ಜಾಗ್ರತ್‌ಸ್ವಪ್ನಗಳಲ್ಲಿ ಜಗತ್ತಿನ ಜ್ಞಾನವಾಗುವುದಕ್ಕೆ ಆ ಜ್ಞಾನರೂಪವಾದ ಬುದ್ಧಿಯಲ್ಲಿರುವ ಸಂಸ್ಕಾರಗಳಲ್ಲಿ ಚೈತನ್ಯವು ಪ್ರತಿಬಿಂಬಿಸಿರುತ್ತದೆ. ಅದಕ್ಕೆ ಚಿದಾಭಾಸವೆಂದು ಹೆಸರು. ಅದು ಮೇಘಾಕಾಶದಂತೆ ಅಸ್ಪಷ್ಟವಾದ್ದರಿಂದ ಕಾಣಿಸುವುದಿಲ್ಲ. ಅನುಮಾನದಿಂದ ಚಿದಾಭಾಸವಿದೆಯೆಂದು ನಿಶ್ಚಯಿಸಬಹುದು. ಚಿದಾಭಾಸವೆಂದರೆ ಜೀವಾತ್ಮ. ಅದು ಅನುಮಾನಕ್ಕೆ ಗೋಚರವಾಗುತ್ತದೆ. ಅನುಮಾನ ಪ್ರಕಾರವನ್ನು ಮುಂದಿನ ಶ್ಲೋಕದಲ್ಲಿ ವಿವರಿಸಲಾಗುವುದು. ಮೇಘಾಕಾಶವೆಂದರೆ ಮೇಘದಲ್ಲಿ ಪ್ರತಿಬಿಂಬಿಸಿದ ಆಕಾಶ. ಗಡಿಗೆಯಲ್ಲಿರುವ ನೀರಿನಲ್ಲಿ ಆಕಾಶದ ಪ್ರತಿಬಿಂಬವು

ಸ್ಪಷ್ಟವಾಗಿ ಕಾಣುತ್ತದೆ. ಮೇಘವು ಜಲದ ರಾಶಿಯೇ ಆದ್ದರಿಂದ ಅದರಲ್ಲಿ ಸಹ ಆಕಾಶವು ಪ್ರತಿಬಿಂಬಿಸಿರುತ್ತದೆ. ಮೇಘದಲ್ಲಿರುವ ಆಕಾಶದ ಪ್ರತಿಬಿಂಬವೇ ಮೇಘಾಕಾಶ. ನಾವು ಮೇಘವನ್ನು ನೋಡಿದಾಗ ಆ ಪ್ರತಿಬಿಂಬವು ಸ್ಪಷ್ಟವಾಗಿ ತೋರುವುದಿಲ್ಲ. ಗಡಿಗೆಯ ನೀರಿನಲ್ಲಿ ಪ್ರತಿಬಿಂಬಿಸಿದಂತೆ ಮೇಘದಲ್ಲಿಯೂ ಆಕಾಶವು ಪ್ರತಿಬಿಂಬಿಸಿರಬೇಕೆಂದು ಊಹಿಸಬಹುದು (೧೫೩). ಚಿದಾಭಾಸಸಹಿತವಾದ ಮಾಯೆಯೆಂಬ ಅಜ್ಞಾನವು ಬುದ್ಧಿಯಾಗಿ (ಅಂತಃಕರಣವಾಗಿ) ಪರಿಣಿತವಾಗುತ್ತದೆ. ಆದ್ದರಿಂದ ಬುದ್ಧಿಯಲ್ಲಿ ಚಿದಾಭಾಸವು ಸ್ಪಷ್ಟವಾಗಿ ತೋರುವುದು. ಚಿದಾಭಾಸವು ಪ್ರತಿಬಿಂಬದ ಹಾಗೆ ಕಣ್ಣಿಗೆ ಕಾಣಿಸದಿದ್ದರೂ ಅನುಮಾನ ಪ್ರಯೋಗದಿಂದ ಬುದ್ಧಿಗೆ ಸ್ಪಷ್ಟವಾಗಿ ಗೋಚರಿಸುತ್ತದೆ. ಅನುಮಾನ ಪ್ರಕಾರ ಹೀಗೆ - ವಿವಾದಗ್ರಸ್ತವಾದ ಬುದ್ಧಿವಾಸನೆಗಳಲ್ಲಿ ಚೈತನ್ಯ ಪ್ರತಿಬಿಂಬವಿದೆ. ಬುದ್ಧಿವಾಸನೆಗಳು ಅವಸ್ಥಾ ವಿಶೇಷಗಳಾದ್ದರಿಂದ - ಇದಕ್ಕೆ ದೃಷ್ಟಾಂತ - ಬುದ್ಧಿಯ ವೃತ್ತಿಗಳ ಹಾಗೆ - ಇದನ್ನು ವಿವರಿಸಬೇಕಾಗಿದೆ. ಮೋಡವಿದ್ದಂತೆ ಮಾಯೆ. ಮೋಡದಲ್ಲಿ ನೀರಿನ ಹನಿಗಳಿದ್ದಂತೆ ಮಾಯಾವಿಕಾರವಾದ ಬುದ್ಧಿಯಲ್ಲಿ ವಾಸನೆಗಳು ಇವೆ. ನೀರಿನಲ್ಲಿ ಆಕಾಶವು ಪ್ರತಿಬಿಂಬಿಸಿದಂತೆ ಈ ವಾಸನೆಗಳಲ್ಲಿ ಚೈತನ್ಯವು ಪ್ರತಿಬಿಂಬಿಸುತ್ತದೆ. ಆದ್ದರಿಂದಲೇ ಬುದ್ಧಿಯು ಈ ಜಗತ್ತನ್ನು ಗ್ರಹಿಸಲು ಶಕ್ತವಾಗಿದೆ. ಚೈತನ್ಯದ ಸಂಬಂಧವಿಲ್ಲದಿದ್ದರೆ ಜಡವಾದ ಬುದ್ಧಿಯು (ಅಂತಃಕರಣವು) ಜಗತ್ತನ್ನು ತಿಳಿಯಲು ಸಮರ್ಥವಾಗದು. ಮನಸ್ಸು, ಬುದ್ಧಿ, ಚಿತ್ತ, ಅಹಂಕಾರಗಳೆಂಬ ವೃತ್ತಿಗಳು ಅಂತಃಕರಣದಲ್ಲಿ ಹುಟ್ಟುವಂತೆ, ಈ ವೃತ್ತಿಗಳಿಗೆ ಮೂಲಭೂತವಾದ ಜಗತ್ತಿನ ಜ್ಞಾನವೂ ಅಂತಃಕರಣದಲ್ಲಿ ಸ್ಪಷ್ಟವಾಗಿ ಕಾಣುತ್ತದೆ. ಚೈತನ್ಯ ಪ್ರತಿಬಿಂಬವಿಲ್ಲದೆ ಅಂತಃಕರಣದಲ್ಲಿ ಹೇಗೆ ವೃತ್ತಿಗಳು ಹುಟ್ಟುವುದಿಲ್ಲವೋ ಹಾಗೆ ಚೈತನ್ಯ ಪ್ರತಿಬಿಂಬವಿಲ್ಲದಿದ್ದರೆ ಜಗತ್ತಿನ ಜ್ಞಾನವೇ ಅಂತಃಕರಣಕ್ಕೆ ಆಗುತ್ತಿರಲಿಲ್ಲ. ಆದ್ದರಿಂದ ಚೈತನ್ಯ ಪ್ರತಿಬಿಂಬವು ಅಂತಃಕರಣದಲ್ಲಿದೆ ಎಂದು ನಿಶ್ಚಯಿಸಬಹುದು (೧೫೪). **''ಮಾಯಾ ಆಭಾಸೇನ ಜೀವೇಶೌ ಕರೋತಿ''** (ನೃ.ಉ.೮) ಎಂದು ಶ್ರುತಿವಚನವಿದೆ. ಮಾಯೆಯು ಉಪಾಧಿ ನಿಮಿತ್ತದಿಂದ ಜೀವ, ಈಶ್ವರ - ಎಂಬ ಎರಡು ವಿಭಾಗಗಳನ್ನು ಮಾಡುತ್ತದೆ ಎಂದು ತಾತ್ಪರ್ಯ. ಮೇಘಾಕಾಶ, ಜಲಾಕಾಶಗಳಂತೆ ಜೀವ, ಈಶ್ವರರು ಬೇರೆ ಬೇರೆಯಾಗಿ ವ್ಯವಸ್ಥಿತರಾಗಿದ್ದಾರೆ. ಮೇಘಾಕಾಶದಂತೆ ಜೀವನು ಜಲಾಕಾಶದಂತೆ ಈಶ್ವರನೂ ಇದ್ದಾರೆಂದು ತಿಳಿಯಬೇಕು. **'ಆಭಾಸ ಏವ ಚ'** ಎಂಬ

ಬ್ರಹ್ಮಸೂತ್ರದಲ್ಲಿ (೨-೨-೪೦) ಇನ್ನು ಹೆಚ್ಚು ವಿವರಗಳು ಸಿಗುತ್ತವೆ (೧೫೫). ಮಾಯೆಯು ಮೇಘದಂತೆ ಇದೆ. ಮೇಘದಲ್ಲಿರುವ ಸೂಕ್ಷ್ಮ ಜಲಕಣಗಳಂತೆ ಬುದ್ಧಿಯಲ್ಲಿ ಸಂಸ್ಕಾರಗಳು ಸೇರಿಕೊಂಡಿರುತ್ತವೆ. ಬುದ್ಧಿಯು (ಚಿತ್ತ-ಅಂತಃಕರಣ) ಮಾಯೆಯ ರೂಪಾಂತರವೇ. ಮಾಯಾಕಲ್ಪಿತವಾದದ್ದು. ಮೋಡದ ನೀರು ಹನಿಗಳಲ್ಲಿ ಆಕಾಶವು ಪ್ರತಿಬಿಂಬಿಸಿರುವಂತೆ ಬುದ್ಧಿಗತವಾದ ಸಂಸ್ಕಾರಗಳಲ್ಲಿ ಪ್ರತಿಬಿಂಬಿಸಿದ ಆಕಾಶದಂತೆ ಜೀವನಿದ್ದಾನೆ (೧೫೬). ಆದರೆ ಜೀವನು ಮಾಯೆಗೆ ಅಧೀನನಾಗಿದ್ದಾನೆ. ಈಶ್ವರನಾದರೋ ಮಾಯೆಯನ್ನು ವಶಪಡಿಸಿಕೊಂಡು ಮಾಯಿ ಎನ್ನಿಸಿದ್ದಾನೆ. ಅಲ್ಲದೆ ಈಶ್ವರನು ಜಗತ್ತಿನ ಅಂತರ್ಯಾಮಿಯೂ ಸರ್ವಜ್ಞನೂ ಜಗತ್ತಿನ ಸೃಷ್ಟಿಕರ್ತನೂ ಆಗಿದ್ದಾನೆ (೧೫೭). ಸುಷುಪ್ತಿಸಮಯದ ಆನಂದಮಯ ಕೋಶವನ್ನು ಆಧರಿಸಿ ಶ್ರುತಿಯು "**ಏಷ ಸರ್ವೇಶ್ವರ ಏಷ ಸರ್ವಜ್ಞ ಏಷೋಽಂತರ್ಯಾಮೀ ಏಷ ಯೋನಿಃ ಸರ್ವಸ್ಯ**" (ಮಾಂ.ಉ. ೬) ಎಂದು ಹೇಳಿದೆ. ವೇದೋಕ್ತನಾದ ಈಶ್ವರನೇ ಈತನು, ವಸ್ತುತಃ ಸುಷುಪ್ತಿಯಲ್ಲಿಯೂ ಆತ್ಮನು ಜೀವಾವಸ್ಥೆಯಲ್ಲಿಯೇ ಇರುತ್ತಾನೆ. ಆಗ ಮನಸ್ಸಿನ ಯಾತಾಯಾತಗಳ ಶ್ರಮವಿಲ್ಲದೆ, ಯಾವ ವಿಷಯ ವಸ್ತುವಿನ ಹಂಗೂ ಇಲ್ಲದೆ ಒಂದು ವಿಶಿಷ್ಟವಾದ ಆನಂದವನ್ನು ಅನುಭವಿಸುತ್ತಾನಾದ್ದರಿಂದ ಆನಂದಭುಕ್ ಎಂದೂ ಆನಂದಮಯನೆಂದೂ ಶ್ರುತಿಯು ವರ್ಣಿಸಿದೆ. ಆನಂದಮಯನೆಂದರೆ ಆನಂದಪ್ರಚುರನೆಂದರ್ಥ, ಆನಂದವೇ ಅಲ್ಲ. ಆನಂದಮಯಕೋಶದಲ್ಲಿರುವ ಈತನು ಜೀವನು. ಅನ್ನಮಯಾದಿಪಂಚಕೋಶಗಳೂ ಜೀವಾವಸ್ಥೆಗೆ ಸಂಬಂಧಿಸಿದವು. ಮನಃಸಂಬಂಧವಿಲ್ಲದೆಯೇ ಇಲ್ಲಿ ಆನಂದವನ್ನನುಭವಿಸುವುದು ಸುಷುಪ್ತಿಯ ಒಂದು ವೈಶಿಷ್ಟ್ಯ. ಇದು ಸ್ವರೂಪಾನಂದಕ್ಕೆ ಸೇರಿದ್ದು. ವಿಷಯಾನಂದವಿದಲ್ಲ. ಈ ಅವಸ್ಥೆಯಲ್ಲಿ ಅವಿದ್ಯೆ ಇದ್ದರೂ ಸುಪ್ತವಾಗಿರುತ್ತದೆ. ಶ್ರುತಿಯು ಮಂದಾಧಿಕಾರಿಗಳನ್ನುದ್ದೇಶಿಸಿ, ಆತ್ಮನು ವಿಷಯಸಂಬಂಧವಿಲ್ಲದೆಯೇ ಆನಂದವನ್ನನುಭವಿಸುತ್ತ ಆನಂದಸ್ವರೂಪನಾಗಿರುತ್ತಾನೆಂದು ಬೋಧಿಸುವುದಕ್ಕಾಗಿ ಈ ಪ್ರಕಾರ ಹೇಳಿದೆ. ಈ ವಿಷಯದಲ್ಲಿ ಶ್ರುತಿಯೇ ನಮಗೆ ಪ್ರಮಾಣ (೧೫೮). ಈತನು ಸರ್ವಜ್ಞ, ಸರ್ವೇಶ್ವರ - ಎಂದೆಲ್ಲಾ ಹೇಳುವುದು ಹೇಗೆ? ಆನಂದಮಯನಲ್ಲಿ ಸರ್ವಜ್ಞತ್ವಾದಿ ಗುಣಗಳು ಹೇಗೆ ಬರುತ್ತವೆ? ಮುಂತಾದ ತರ್ಕವನ್ನಿಲ್ಲಿ ಎತ್ತಬಾರದು. ಶ್ರುತಿಯು ಹೇಳಿದ್ದು ನಮಗೆ ಪ್ರಮಾಣ. ಶ್ರುತಿವಚನದಲ್ಲಿ ಕುತರ್ಕಕ್ಕೆ ಅವಕಾಶವಿಲ್ಲ. ಅಲ್ಲದೆ ಇವೆಲ್ಲವೂ

ಮಾಯಾವಿಶಿಷ್ಟನಿಗೆ ಅನ್ವಯಿಸತಕ್ಕದ್ದಾಗಿದೆ. ಮಾಯೆಯಲ್ಲಿ ಯಾವುದು ಸಂಭವ? ಯಾವುದು ಅಸಂಭವ? ಎಂದು ಹೇಳಲಾಗುವುದಿಲ್ಲ, ಎಲ್ಲವೂ ಅದರಲ್ಲಿ ಸಂಭವಿಸುತ್ತದೆ. ನಿರ್ಗುಣನಲ್ಲಿಯೂ ನಿರ್ವಿಶೇಷನಾದವನಲ್ಲಿಯೂ ಗುಣವನ್ನೂ ವಿಶೇಷವನ್ನೂ ಮಾಯೆಯು ತೋರಿಸಬಲ್ಲದು! (೧೫೯). ಈ ಆನಂದಮಯನು ಜಾಗ್ರತ್ತಿನಲ್ಲಿ ಈ ಜಗತ್ತನ್ನು ಸೃಜಿಸುತ್ತಾನೆ. ಇದನ್ನು ಬದಲಾಯಿಸಲು ಯಾವನೂ ಶಕ್ತನಲ್ಲ. ಆದ್ದರಿಂದ ಈತನು ಸರ್ವೇಶ್ವರ ನಾಗಿದ್ದಾನೆ (೧೬೦). ಕಾರಣಭೂತವಾದ ಸುಷುಪ್ತಿಕಾಲದ ಅಜ್ಞಾನದಲ್ಲಿ ಕಾರ್ಯಭೂತವಾದ ಸಮಸ್ತಪ್ರಾಣಿಗಳ ಬುದ್ಧಿಸಂಸ್ಕಾರಗಳೂ ನಿಹಿತವಾಗಿವೆ. ಆ ಸಂಸ್ಕಾರಗಳಿಗೆ ಸಮಸ್ತ ಜಗದ್ವ್ಯವಹಾರಗಳೂ ವಿಷಯವಾಗಿರುತ್ತವೆ. ಹೀಗೆ ಸಮಸ್ತ ಬುದ್ಧಿಸಂಸ್ಕಾರಗಳೂ ಸೇರಿರುವ ಅಜ್ಞಾನಗಳ ಸಮಷ್ಟಿಯೇ ಈತನಿಗೆ ಉಪಾಧಿಯಾಗಿರುವುದರಿಂದ ಈತನು ಸರ್ವವನ್ನೂ ತಿಳಿದವನಾಗಿರುತ್ತಾನೆ. ಆದ್ದರಿಂದ ಈ ಆನಂದಮಯನು ಸರ್ವಜ್ಞನು (೧೬೧). ಹಾಗಾದರೆ 'ನಾನು ಸರ್ವಜ್ಞ' ಎಂಬುದು ನಮಗೇಕೆ ಗೊತ್ತಾಗುವುದಿಲ್ಲ? ನಾನು ಸರ್ವಜ್ಞನೆಂದು ಯಾವನೂ ತಿಳಿದಿಲ್ಲವೇಕೆ? ಅದಕ್ಕೆ ಕಾರಣ ಉಂಟು. ಅನ್ಯರ ಬುದ್ಧಿಗಾದ ಸಂಸ್ಕಾರಗಳು (ವಾಸನೆಗಳು) ಆಯಾ ಬುದ್ಧಿಗಳಲ್ಲಿ ಮಾತ್ರ ಇರುತ್ತವೆ. ಅವು ನಮ್ಮ ಬುದ್ಧಿಗೆ ಪರೋಕ್ಷವಾದವುಗಳು. ಅವುಗಳಿಂದ ಹುಟ್ಟುವ ಜ್ಞಾನವು ಆ ಬುದ್ಧಿಗಳಿಗೆ ಮಾತ್ರ ಇರುತ್ತದೆ. ಸಮಷ್ಟಿಬುದ್ಧಿಗಾದ ಸಂಸ್ಕಾರವಾಗಲಿ ಜ್ಞಾನವಾಗಲಿ ವ್ಯಷ್ಟಿಬುದ್ಧಿಗೆ ಬರದು. ಆದ್ದರಿಂದ ಸರ್ವಜ್ಞತ್ವವೂ ಪರೋಕ್ಷವಾಗಿಯೇ ಇರುತ್ತದೆ. ಸರ್ವಬುದ್ಧಿಗತ ಸಂಸ್ಕಾರದಿಂದ ಹುಟ್ಟುವ ಜ್ಞಾನವು ಸರ್ವಬುದ್ಧಿಗತವಾಗಿರುತ್ತದೆ. ಒಂದು ವಸ್ತ್ರದಲ್ಲಿ ಹಲವು ಬಣ್ಣದ ಎಳೆಗಳು (ನೂಲುಗಳು - ತಂತುಗಳು) ಇರುತ್ತವೆ. ಅವುಗಳಿಂದ ನೇಯ್ದ ವಸ್ತ್ರವು ಚಿತ್ರವರ್ಣವಾಗಿರುತ್ತದೆ. ಈ ಚಿತ್ರವರ್ಣವು ತಂತು ಸಮುದಾಯವಾದ ವಸ್ತ್ರದಲ್ಲಿರುವುದೇ ಹೊರತು ಒಂದೊಂದು ಎಳೆಯಲ್ಲಿಯೂ ಇರುವುದಿಲ್ಲ. ಈ ದೃಷ್ಟಾಂತದಿಂದ ಈಶ್ವರನು ಸರ್ವಜ್ಞನೆಂದು ನಿಶ್ಚಯಿಸಬಹುದು (೧೬೨). ಈತನು ಅಂತರ್ಯಾಮಿ. ಹೇಗೆಂದರೆ, ವಿಜ್ಞಾನಮಯಾದಿಕೋಶಗಳಲ್ಲಿಯೂ ಪೃಥಿವ್ಯಾದಿಪಂಚಭೂತಗಳಲ್ಲಿಯೂ ಅಂತರ್ಗತನಾಗಿ ಈತನು ಸರ್ವ ಪದಾರ್ಥಗಳನ್ನೂ ನಿಯಂತ್ರಿಸುತ್ತಾನೆ. ನಿಯಮಕ್ಕೆ ಒಳಪಡಿಸುತ್ತಾನೆ. ಆದ್ದರಿಂದ ಈ ಪುರುಷನು ಅಂತರ್ಯಾಮಿಯೆಂದು ಸಿದ್ಧವಾಗುತ್ತದೆ (೧೬೩). ಅಲ್ಲದೆ ಈ ಸರ್ವೇಶ್ವರನು ಅಂತರ್ಯಾಮಿಯಾಗಿದ್ದಾನೆಂಬುದಕ್ಕೆ ಬೃಹದಾರಣ್ಯಕದ

ಅಂತರ್ಯಾಮಿಬ್ರಾಹ್ಮಣವು ಪ್ರಮಾಣವಾಗಿದೆ. "**ಯೋ ವಿಜ್ಞಾನೇ ತಿಷ್ಠನ್ ವಿಜ್ಞಾನಾದಂತರೋ ಯಂ ವಿಜ್ಞಾನಂ ನ ವೇದ**" "**ಯೋ ವಿಜ್ಞಾನ-ಮಂತರೋ ಯಮಯತಿ**" (ಬೃ.ಉ.೩-೭-೨೨) ಎಂದು ಶ್ರುತಿಯು ಸ್ಪಷ್ಟವಾಗಿ ನುಡಿದಿದೆ. ಆದ್ದರಿಂದ ಈತನು ಅಂತರ್ಯಾಮಿ. ಈತನು ಬುದ್ಧಿಯಲ್ಲಿ ಇದ್ದುಕೊಂಡು ಬುದ್ಧಿಶರೀರನೇ ಆಗಿದ್ದರೂ ಬುದ್ಧಿಗೆ ಅಗೋಚರನಾಗಿರುತ್ತಾನೆ ಮತ್ತು ಬುದ್ಧಿಯನ್ನೇ ನಿಯಂತ್ರಿಸುತ್ತಾನೆ ಎಂದು ಆ ಉಪನಿಷತ್ತು ಘೋಷಿಸಿರುತ್ತದೆ (೧೬೪). ವಸ್ತ್ರದಲ್ಲಿರುವ ತಂತುವು (ನೂಲು) ವಸ್ತ್ರಕ್ಕೆ ಉಪಾದಾನಕಾರಣವಾಗಿ ವಸ್ತ್ರದಲ್ಲಿಯೇ ನೆಲೆಸಿದೆ. ಹಾಗೆಯೇ ಈಶ್ವರನು ಜಗತ್ತಿನ ಸಮಸ್ತ ವಸ್ತುಗಳಿಗೂ ಉಪಾದಾನಕಾರಣನಾಗಿ ಸಮಸ್ತವಸ್ತುಗಳಲ್ಲಿ ನೆಲೆಸಿರುವುದರಿಂದ ಆತನು ಅಂತರ್ಯಾಮಿಯೇ ಆಗಿದ್ದಾನೆ (೧೬೫).

ಪರಮಾತ್ಮನು ಉಪಾದಾನಕಾರಣನಾಗಿ ಸರ್ವತ್ರ ಇರುವುದಾದರೆ ನಮಗೇಕೆ ಎಲ್ಲಿಯೂ ಗೋಚರಿಸುವುದೇ ಇಲ್ಲ. ವಸ್ತ್ರಕ್ಕೆ ಉಪಾದಾನ ಕಾರಣವಾಗಿ ನೂಲು ಇದೆಯಷ್ಟೆ, ನೂಲು ಕಾಣಿಸುತ್ತದೆ. ನೂಲಿಗೆ ಉಪಾದಾನವಾದ ಹತ್ತಿಯೂ ಕಾಣಿಸುತ್ತದೆ. ಪರಮಾತ್ಮನೇಕೆ ಕಾಣಿಸುವುದಿಲ್ಲ? ನಿಜ; ಆದರೆ ಹತ್ತಿಯಲ್ಲಿ ಉಪಾದಾನಕಾರಣತ್ವವು ಮುಗಿಯುವುದಿಲ್ಲ. ಆದಕ್ಕೆ ಕಾರಣ ಯಾವುದು? ಆ ಕಾರಣಕ್ಕೆ ಕಾರಣ ಯಾವುದು? ಎಂದು ವಿಚಾರ ಮಾಡುತ್ತಾ ಹೋದಾಗ ಎಲ್ಲಿಗೆ ಕಾರಣತ್ವವು ಮುಗಿಯುತ್ತದೆಯೋ ಅದು ಅಂತ್ಯವಾದ ಕಾರಣ. ಅಲ್ಲಿಯವರೆಗೆ ಕಾರಣದ ಕಾರಣ ಯಾವುದು? ಎಂದು ವಿಚಾರಿಸುತ್ತಾ ಹೋದಾಗ ಅಂತ್ಯಕಾರಣವೇ ಪರಮಾತ್ಮನಾಗಿರುತ್ತಾನೆ. ಆತನಿಗೆ ಇನ್ನೊಂದು ಕಾರಣವಿಲ್ಲ(೧೬೬). ನೂಲು, ಹತ್ತಿ ಮುಂತಾದ ಎರಡು ಮೂರು ಕಕ್ಷೆಗಳವರೆಗೆ ಉಪಾದಾನಕಾರಣವು ಪ್ರತ್ಯಕ್ಷವಾಗಬಹುದು. ಅದೆಲ್ಲವೂ ಸ್ಥೂಲವಾದದ್ದು. ಅಂತರ್ಯಾಮಿಯು ಸರ್ವಾಂತರನಾದ ಅತ್ಯಂತ ಸೂಕ್ಷ್ಮನಾದ ಉಪಾದಾನಕಾರಣವಾಗಿದ್ದಾನೆ. ಆದ್ದರಿಂದ ಪ್ರತ್ಯಕ್ಷನಲ್ಲ. ಯುಕ್ತಿ ಮತ್ತು ಶ್ರುತಿಗಳಿಂದ ಆತನಿದ್ದಾನೆಂದು ನಿರ್ಣಯಿಸಿಕೊಳ್ಳಬೇಕು. ಅಚೇತನವು ಚೇತನದ ನೆರವಿಲ್ಲದೆ ಚಲಿಸುವುದಿಲ್ಲ. ಆದ್ದರಿಂದ ಚೇತನವಿದೆಯೆಂದು ಯುಕ್ತಿಯಿಂದ ನಿರ್ಣಯಿಸಬಹುದು. '**ಯೋ ವಿಜ್ಞಾನೇ ತಿಷ್ಠನ್ ವಿಜ್ಞಾನಾದಂತರೋ, ಯಂ ವಿಜ್ಞಾನಂ ನ ವೇದ**' (ಬೃ.ಉ.೩-೭-೨) ಎಂಬ ಶ್ರುತಿಯನ್ನು ಹಿಂದೆ ೧೬೪ನೇ ಶ್ಲೋಕದ ವ್ಯಾಖ್ಯಾನದಲ್ಲಿ ಉದಾಹರಿಸಿದ್ದಾಗಿದೆ (೧೬೭). ನೂಲು ವಸ್ತ್ರವಾಗಿದ್ದರೂ ವಸ್ತ್ರದಲ್ಲಿ ನೂಲು

ಇದೆ ಎಂದು ಲೋಕ ವ್ಯವಹಾರವಿದೆಯಷ್ಟೆ. ಆಗ ವಸ್ತ್ರವು ನೂಲಿನ ಶರೀರವಾಯಿತು. ವಸ್ತ್ರವೆಂಬ ಶರೀರದಲ್ಲಿ ನೂಲು ಇದೆ ಎನ್ನಬಹುದು. ಹಾಗೆಯೇ ಪರಮಾತ್ಮನು ಸಮಸ್ತ ಪದಾರ್ಥಗಳ ರೂಪದಲ್ಲಿರುವುದರಿಂದ ಈ ಜಗತ್ತೆಲ್ಲವೂ ಆತನ ಶರೀರವೆನ್ನಬಹುದು. ಆದ್ದರಿಂದಲೇ ಅಂತರ್ಯಾಮಿಬ್ರಾಹ್ಮಣದಲ್ಲಿ **''ಯಸ್ಯ ಸರ್ವಾಣಿ ಭೂತಾನಿ ಶರೀರಂ, ಯಃ ಸರ್ವಾಣಿ ಭೂತಾನ್ಯಂತರೋ ಯಮಯತಿ''** (ಬೃ.ಉ. ೩-೮-೧೫) ಎಂದು ಸ್ಪಷ್ಟವಾದ ವಚನವಿದೆ (೧೬೮). ವಸ್ತ್ರದೊಳಗಿರುವ ನೂಲು ಮಡಿಸಿಕೊಂಡರೆ ಬಟ್ಟೆಯೂ ಮಡಿಸಿಕೊಳ್ಳುತ್ತದೆ. ನೂಲು ಹರಡಿದಾಗ ಬಟ್ಟೆಯೂ ಹರಡಿಕೊಳ್ಳುತ್ತದೆ. ನೂಲು ಚಲಿಸಿದಾಗ ಬಟ್ಟೆಯೂ ಚಲಿಸುತ್ತದೆ. ಇಲ್ಲದಿದ್ದರೆ ಬಟ್ಟೆಯೂ ತೆಪ್ಪಗೆ ಬಿದ್ದಿರುತ್ತದೆ. ಬಟ್ಟೆಗೆ ಯಾವ ಸ್ವಾತಂತ್ರ್ಯವೂ ಎಂದಿಗೂ ಇಲ್ಲ (೧೬೯). ಹಾಗೆಯೇ ಪೃಥಿವ್ಯಾದಿಗಳಲ್ಲಿ ಇರುವ ಅಂತರ್ಯಾಮಿಯು ಪೂರ್ವವಾಸನೆಯಿಂದ ಘಟಾದಿಕಾರ್ಯದಲ್ಲಿ (ಮಾಯೆಯಿಂದ) ವಿಕೃತನಾಗುವನೋ ಆ ಕಾರ್ಯವು ಘಟಾದಿರೂಪವನ್ನು ಅವಶ್ಯವಾಗಿ ಧರಿಸುತ್ತದೆ. ಇದರಲ್ಲಿ ಸಂಶಯವಿಲ್ಲ (೧೭೦). ಇದನ್ನೇ ಭಗವಂತನು ಗೀತೆಯಲ್ಲಿ ಹೇಳಿದ್ದಾನೆ -

**ಈಶ್ವರಃ ಸರ್ವಭೂತಾನಾಂ ಹೃದ್ದೇಶೇಽರ್ಜುನ ತಿಷ್ಠತಿ ।**
**ಭ್ರಾಮಯನ್ ಸರ್ವಭೂತಾನಿ ಯಂತ್ರಾರೂಢಾನಿ ಮಾಯಯಾ ॥**

(ಭ.ಗೀ.೧೮-೬೧)

ಅರ್ಜುನ, ಅಂತರ್ಯಾಮಿಯಾದ ಈಶ್ವರನು ಸರ್ವಭೂತಗಳ ಹೃದಯ ದೇಶದಲ್ಲಿದ್ದು, ತಿರುಗುಯಂತ್ರಗಳನ್ನೇರಿದ ಬೊಂಬೆಗಳನ್ನು ತಿರುಗಿಸುವಂತೆ, ತನ್ನ ಮಾಯೆಯಿಂದ ಈ ಪ್ರಾಣಿಗಳನ್ನು ತಿರುಗಿಸುತ್ತಿದ್ದಾನೆ. **'ಯಂತ್ರಾ - ರೂಢಾನಿ'** ಎಂಬಲ್ಲಿ 'ಇವ' ಶಬ್ದವನ್ನು ಅಧ್ಯಾಹಾರ ಮಾಡಿಕೊಳ್ಳಬೇಕು. ಅಥವಾ ದೇಹವೆಂಬ ಯಂತ್ರವನ್ನೇರಿದ ಪ್ರಾಣಿಜೀವರನ್ನು ಎಂದೂ ಅರ್ಥಮಾಡಬಹುದು (೧೭೧). ಸರ್ವಭೂತಗಳೂ ವಿಜ್ಞಾನಮಯವಾದವು (ಅಂತಃಕರಣಪರಿಚ್ಛಿನ್ನವಾದವು). ಅಂತಃಕರಣವು ಹೃದಯದಲ್ಲಿರುವುದರಿಂದ ಅದರಿಂದ ಪರಿಚ್ಛಿನ್ನವಾದ ಜೀವವೂ ಹೃದಯದಲ್ಲಿರುತ್ತದೆ. ಅದಕ್ಕೆ ಉಪಾದಾನ ಸ್ವರೂಪನಾದ ಅಂತರ್ಯಾಮಿಯು ಹೃದಯದಲ್ಲಿದ್ದು ವಿಕೃತನಾದಂತೆ ಶರೀರಗಳೂ ವಿಕೃತವಾಗುತ್ತವೆ. ಸರ್ವಭೂತಗಳನ್ನು ತಿರುಗಿಸುವುದು ಈ ಪ್ರಕಾರದಲ್ಲಿ (೧೭೨). ಹಿಂದೆ ಹೇಳಿದಂತೆ ಮನುಷ್ಯದೇಹಾದಿಗಳೇ

ಯಂತ್ರಗಳೆಂದು ಭಾವಿಸಬೇಕು. ಅದನ್ನು ಹತ್ತುವುದೆಂದರೆ ದೇಹದಲ್ಲಿ ಅಭಿಮಾನವನ್ನಿಡುವುದು. ಇದು ನನ್ನ ದೇಹ, ಈ ದೇಹವೇ ನಾನು - ಎಂದು ಭಾವಿಸುವುದು ಅಭಿಮಾನ. ಶಾಸ್ತ್ರ ವಿಹಿತ ಕಾರ್ಯದಲ್ಲಾಗಲಿ, ನಿಷಿದ್ಧ ಕಾರ್ಯದಲ್ಲಾಗಲಿ ಪ್ರವರ್ತಿಸುವುದೇ ಭ್ರಮಣ - ತಿರುಗುವುದು (೧೭೩). **'ಭ್ರಾಮಯನ್ ಸರ್ವಭೂತಾನಿ ಮಾಯಯಾ'** ಎಂಬ ಗೀತಾವಾಕ್ಯ-ದಲ್ಲಿರುವ ಭ್ರಾಮಣ - ತಿರುಗಿಸುವುದು ಎಂದರೇನು? ಮತ್ತು ಮಾಯೆಯೆಂದರೇನು?- ಎಂಬುದನ್ನು ಹೀಗೆ ತಿಳಿಯಬೇಕು. ಏನೆಂದರೆ, ಈಶ್ವರನು ತನ್ನ ಮಾಯಾಶಕ್ತಿಯಿಂದ ವಿಜ್ಞಾನಸ್ವರೂಪನಾಗಿ (ಜೀವಾತ್ಮನಾಗಿ) ಕಾರ್ಯದಲ್ಲಿ ಪ್ರವೃತ್ತನಾಗುತ್ತಾನಷ್ಟೆ. ಜೀವಾತ್ಮನಾಗುವ ಶಕ್ತಿಯೇ ಮಾಯೆ. ಜೀವಾತ್ಮನ ಪ್ರವೃತ್ತಿಯೇ ಈಶ್ವರನ ಭ್ರಾಮಣ (ತಿರುಗಿಸುವುದು) (೧೭೪). ಅಂತರ್ಯಾಮಿ ಬ್ರಾಹ್ಮಣದಲ್ಲಿ ''**ಯಃ ಪೃಥಿವ್ಯಾಂ ತಿಷ್ಠನ್ ಪೃಥಿವೀ ಮಂತರೋ ಯಮಯತಿ**'' ಎಂದು ಶ್ರುತವಾಗಿದೆ. ಈ ಅಂತರ್ಯಮನವನ್ನೇ **'ಭ್ರಾಮಯನ್ ಸರ್ವಭೂತಾನಿ'** ಎಂದು ಭಗವದ್ಗೀತೆಯಲ್ಲಿ ಹೇಳಿದ್ದಾರೆ. ಈ ಯಮನ (ಭ್ರಾಮಣ)ವನ್ನೇ ಪೃಥಿವೀ ಮುಂತಾದ ಸಮಸ್ತವಸ್ತು ವಿಷಯದಲ್ಲಿಯೂ ಸ್ವಬುದ್ಧಿಯಿಂದ ಯೋಜಿಸಿಕೊಳ್ಳಬೇಕು (೧೭೫).

**ಜಾನಾಮಿ ಧರ್ಮಂ ನ ಚ ಮೇ ಪ್ರವೃತ್ತಿಃ**
**ಜಾನಾಮ್ಯಧರ್ಮಂ ನ ಚ ಮೇ ನಿವೃತ್ತಿಃ ।**
**ಕೇನಾಪಿ ದೇವೇನ ಹೃದಿ ಸ್ಥಿತೇನ**
**ಯಥಾ ನಿಯುಕ್ತೋಽಸ್ಮಿ ತಥಾ ಕರೋಮಿ ॥**

''ಧರ್ಮವೇನೆಂಬುದನ್ನು ನಾನು ಬಲ್ಲೆನು. ಆದರೆ ಅದನ್ನಾಚರಿಸಲು ನನಗೆ ಪ್ರವೃತ್ತಿಯಾಗುವುದಿಲ್ಲ! ಅಧರ್ಮವು ಯಾವುದೆಂಬುದನ್ನು ನಾನು ಬಲ್ಲೆನು. ಆದರೆ ಅಧರ್ಮಮಾರ್ಗದಿಂದ ನಿವೃತ್ತನಾಗಲೂ ನನಗೆ ಇಚ್ಛೆಯಾಗುವುದಿಲ್ಲ! ಹೃದಯಸ್ಥಿತನಾದ ಯಾವನೋ ಒಬ್ಬ ಅಂತರ್ಯಾಮಿಯು ಹೇಗೆ ಪ್ರೇರಿಸುತ್ತಾನೋ ಹಾಗೆ ಮಾಡುತ್ತೇನೆ!'' ಈ ಮಾತನ್ನು ದುರ್ಯೋಧನನು ಹೇಳಿದನೆಂದು ಪ್ರಸಿದ್ಧಿ ಇದೆ. ಮನುಷ್ಯನ ಪ್ರವೃತ್ತಿಯೆಲ್ಲವೂ ಸರ್ವೇಶ್ವರನ ಅಧೀನವೆಂಬುದಕ್ಕೆ ಈ ಮಾತು ಉದಾಹರಣೆಯಾಗಿದೆ.(೧೭೬)

ಹೀಗೆ ಮನುಷ್ಯನ ಪ್ರವೃತ್ತಿ ಎಲ್ಲವೂ ಈಶ್ವರಾಧೀನವಾದರೆ ಪುರುಷ ಪ್ರಯತ್ನಕ್ಕೆ ಪ್ರಯೋಜನವೇ ಇಲ್ಲದೆ ಹೋಗುವುದಿಲ್ಲವೆ? ಆಗ ಗುರೂಪದೇಶವೂ ವ್ಯರ್ಥವಾದೀತು. ಆಗ ಶ್ರೀಕೃಷ್ಣನು ಭಗವದ್ಗೀತೆಯಲ್ಲಿ

ಅರ್ಜುನನಿಗೆ '**ಕುರು ಕರ್ಮೈವ ತಸ್ಮಾತ್ತ್ವಂ**' ಎಂದು ಬೋಧಿಸಿದ್ದಕ್ಕೆ ಫಲವೇ ಇಲ್ಲವಾಗುತ್ತದೆ. ಪುರುಷಕಾರವು ವ್ಯರ್ಥವಾಗುತ್ತದಲ್ಲವೆ? ಹಾಗಲ್ಲ; ಮನುಷ್ಯನ ಪುರುಷಪ್ರಯತ್ನವೆಂಬುದೂ ಸಹ ಈಶ್ವರನ ವಿವರ್ತವೇ ಆಗಿದೆ. ಈಶ್ವರನೇ ಪೌರುಷರೂಪದಿಂದ ಪ್ರವರ್ತಕನೆಂದು ತಿಳಿಯಬೇಕು (೧೭೭). ಪುರುಷಪ್ರಯತ್ನವೂ ಈಶ್ವರರೂಪವೇ. ಈಶ್ವರಾಧೀನವೇ ಎಂದು ತಿಳಿಯುವುದಾದರೆ, ಈಶ್ವರನು ಅಂತರ್ಯಾಮಿಯಾಗಿ ಪ್ರೇರಿಸುತ್ತಾನೆ ಎನ್ನುವುದೇಕೆ? ಯಮಯತಿ - ಭ್ರಾಮಯತಿ ಎನ್ನುವುದು ವ್ಯರ್ಥವಲ್ಲವೆ? ಹಾಗಲ್ಲ; ಅದರಿಂದ ಅಂತರ್ಯಾಮಿಯಾಗಿ ಪ್ರೇರಣೆ, ಪುರುಷಪ್ರಯತ್ನದಿಂದ ಪ್ರವೃತ್ತಿ - ಇವೆರಡೂ ಈಶ್ವರಾಧೀನ, ಕ್ರಿಯೆಯಲ್ಲಿ ನನ್ನದೇನು ಪ್ರಸಕ್ತಿ ಇಲ್ಲ ಎಂಬ ಜ್ಞಾನ ಹುಟ್ಟುವುದೇ ಇದಕ್ಕೆ ಪ್ರಯೋಜನ. ತಾನು ಕೇವಲ ಸಾಕ್ಷಿಯೆಂದೂ ಪ್ರವೃತ್ತಿಯೆಲ್ಲವೂ ಅನ್ಯಾಧೀನವೆಂದೂ ಇದರಿಂದ ನಿಶ್ಚಿತವಾಗುತ್ತದೆ. ಆತ್ಮನು ನಿಷ್ಕ್ರಿಯನೆಂಬ ಜ್ಞಾನವಾಗುವುದೇ ಫಲ (೧೭೮). ಆತ್ಮನು ಅಸಂಗ, ನಿಷ್ಕ್ರಿಯ - ಎಂಬ ಜ್ಞಾನದಿಂದ ಮೋಕ್ಷವಾಗುತ್ತದೆಯೆಂದು ಶ್ರುತಿಗಳೂ ಸ್ಮೃತಿಗಳೂ ಘೋಷಿಸುತ್ತವೆ. ಅವನ್ನು ಉಲ್ಲಂಘಿಸಿ ಅನ್ಯಥಾ ತಿಳಿಯುವುದಾಗಲಿ, ಅನ್ಯಥಾ ಆಚರಿಸುವುದಾಗಲಿ ಯೋಗ್ಯವಲ್ಲ. ಶ್ರುತಿಸ್ಮೃತಿಗಳೆರಡೂ ಆಜ್ಞೆಗಳೆಂದು ಭಗವಂತನೇ ಹೇಳಿದ್ದಾನೆ. '**ಶ್ರುತಿಸ್ಮೃತೀ ಮಮೈವಾಜ್ಞೇ**' ಎಂದು (೧೭೯). '**ಭೀಷಾಸ್ಮಾದ್ವಾತಃ ಪವತೇ , ಭೀಷೋದೇತಿ ಸೂರ್ಯಃ**' (ತೈ.ಉ.೨-೮; ನೃ.ಪೂ.ತಾ.ಉ.೨-೪) ಎಂದು ತೈತ್ತಿರೀಯ ಶ್ರುತಿ ಇದೆ. ಸರ್ವೇಶ್ವರನ ಭಯದಿಂದ ಗಾಳಿ ಬೀಸುತ್ತದೆ. ಆತನ ಭಯದಿಂದಲೇ ಸೂರ್ಯನು ಪ್ರತಿದಿನ ಹುಟ್ಟುತ್ತಾನೆ ಎಂದರ್ಥ. ಭಗವಂತನು ಸರ್ವೇಶ್ವರನೆಂದು ಇದರಿಂದ ಸ್ಪಷ್ಟವಾಗುತ್ತದೆ. ಆತನೇ ಅಂತರ್ಯಾಮಿಯಾಗಿ ಪ್ರಾಣಿಗಳ ಶರೀರದಲ್ಲಿದ್ದು ಆಯಾ ಪ್ರಾಣಿಶರೀರವನ್ನು ನಿಯಮಿಸುತ್ತಾನೆ. ಹೀಗೆ ಸರ್ವೇಶ್ವರತ್ವ, ಅಂತರ್ಯಾಮಿತ್ವಗಳಲ್ಲಿ ಭೇದ ಉಂಟು (೧೮೦). "**ಏತಸ್ಯ ವಾ ಅಕ್ಷರಸ್ಯ ಪ್ರಶಾಸನೇ ಗಾರ್ಗಿ ಸೂರ್ಯಾಚಂದ್ರಮಸೌ ವಿಧೃತೇ ತಿಷ್ಠತಃ**" (ಬೃ.ಉ. ೩-೮-೨) - ಎಂದು ಶ್ರುತಿ ಇದೆ. "ಗಾರ್ಗಿ, ಈ ಅಕ್ಷರನಾದ ಈಶ್ವರನ ಆಜ್ಞೆಯಂತೆ ಸೂರ್ಯಚಂದ್ರರು ಆಕಾಶದಲ್ಲಿ ಧೃತರಾಗಿ ನಿಂತಿದ್ದಾರೆ - ಎಂದರ್ಥ. "**ಅಂತಃಪ್ರವಿಷ್ಟಃ ಶಾಸ್ತಾ ಜನಾನಾಮ್**" ಎಂದೂ ಶ್ರುತಿವಚನವಿದೆ. "ಜನರ ಹೃದಯದೊಳಗೆ ಪ್ರವೇಶಿಸಿ ಅವರನ್ನು ನಿಯಮಿಸತಕ್ಕವನು ಈಶ್ವರ" ಎಂದರ್ಥ. ಈ ಶ್ರುತಿಗಳಿಂದ ಒಬ್ಬನೇ ಈಶ್ವರನು ದೇಹದ ಹೊರಗೂ

ದೇಹದ ಒಳಗೂ ನಿಯಾಮಕನೆಂದು ಗೊತ್ತಾಗುತ್ತದೆ (೧೮೧). ಜಗತ್ತಿನ ಉತ್ಪತ್ತಿಗೂ ಪ್ರಳಯಕ್ಕೂ ಕಾರಣನಾದ್ದರಿಂದ ಈಶ್ವರನು ಜಗದ್ಯೋನಿಯೆನಿಸಿದ್ದಾನೆ. ಉತ್ಪತ್ತಿಯೆಂದರೆ ಆವಿರ್ಭಾವ, ಅಪ್ಯಯ- ಪ್ರಲಯ ಎಂದರೆ ತಿರೋಭಾವ. ಜಗದ್ಯೋನಿಯಾದ ಪರಮೇಶ್ವರನು ತನ್ನಲ್ಲಿ ಅಡಗಿದ್ದ ಈ ಸಮಸ್ತ ಜಗತ್ತನ್ನು ಹೊರಗೆ ತೋರಿಸುತ್ತಾನೆ. ಚಿತ್ರಕಾರನು ಸುರುಳಿಯಾಗಿ ಮಡಚಿ ಇಟ್ಟುಕೊಂಡಿರುವ ಚಿತ್ರಪಟವನ್ನು ಪ್ರೇಕ್ಷಕರಿಗೆ ಬಿಚ್ಚಿತೋರಿಸುವಂತೆ ಜೀವಿಗಳ ವಿವಿಧಕರ್ಮಗಳಿಗೆ ಫಲವನ್ನು ನೀಡುವ ಕಾಲ ಬಂದೊಡನೆ ಈಶ್ವರನು ಜಗತ್ತಿನ ಬೃಹದಾಕಾರದ ಚಿತ್ರಪಟವನ್ನು ಬಿಚ್ಚಿಬಿಡುತ್ತಾನೆ! (೧೮೨-೧೮೩). ಅನಂತರ ಜೀವಿಗಳ ಕರ್ಮವು ಕ್ಷಯಿಸಿದೊಡನೆ ಈ ಜಗದ್ರೂಪದ ಪಟವನ್ನು ಸುರುಳಿ ಸುತ್ತಿ ತನ್ನೊಳಗೆ ಸೇರಿಸಿಕೊಂಡು ಬಿಡುತ್ತಾನೆ. ಚಿತ್ರಕಾರನು ತನ್ನ ಚಿತ್ರಪಟವನ್ನು ಪ್ರೇಕ್ಷಕರು ನೋಡಿ ಮುಗಿದೊಡನೆ ಹೇಗೆ ಸುರುಳಿಸುತ್ತಿಬಿಡುವನೋ ಹಾಗೆ! ಇದೇ ಪ್ರಳಯ (೧೮೪). ರಾತ್ರಿ - ಹಗಲು, ನಿದ್ರೆ - ಎಚ್ಚರ, ಕಣ್ಣು ಮುಚ್ಚುವುದು - ಕಣ್ದೆರೆಯುವುದು, ಮೌನ - ಮನಸ್ಸಿಗೆ ಬಂದಂತೆ ಮಾತಾಡುವುದು, ಇವು ಹೇಗೆ ಒಂದಾದ ಮೇಲೆ ಒಂದರಂತೆ ಬರುವ ದ್ವಂದ್ವಗಳೋ ಹಾಗೆ ಪ್ರಳಯಸೃಷ್ಟಿಗಳು ಕ್ರಮವಾಗಿ ಬರುತ್ತಲೇ ಇರುತ್ತವೆ (೧೮೫).

ಇಲ್ಲೊಂದು ಪ್ರಶ್ನೆ ಏಳುತ್ತದೆ. ಈಶ್ವರನು ಜಗತ್ತಿನ ಆವಿರ್ಭಾವ ತಿರೋಭಾವಗಳನ್ನು ಎಂದರೆ - ಸೃಷ್ಟಿಲಯಗಳನ್ನು ಮಾಡುತ್ತಾನೆ ಎಂದು ಹೇಳಿದಿರಲ್ಲವೆ? ಈ ಮಾತು ತಾರ್ಕಿಕರ ಆರಂಭವಾದವನ್ನು ಆಶ್ರಯಿಸಿ ಹೇಳಿದ್ದೆ? ಅಥವಾ ಸಾಂಖ್ಯರ ಪರಿಣಾಮವಾದವನ್ನು ಆಶ್ರಯಿಸಿ ಹೇಳಿದ್ದೆ? ಉಭಯಪಕ್ಷದಲ್ಲಿಯೂ ದೋಷವಿದೆ. ಹೇಗೆಂದರೆ, ಆರಂಭವಾದವು ಈ ಪ್ರಕಾರ ಇರುತ್ತದೆ. ಅನೇಕ ಅವಯವಗಳ ಸಂಯೋಗದಿಂದ ಕಾರ್ಯವಾದ ದ್ರವ್ಯವು ಹುಟ್ಟುತ್ತದೆ. ಮಣ್ಣಿನಿಂದ ಕಪಾಲಗಳು, ಅವುಗಳಿಂದ ಗಡಿಗೆ ಹುಟ್ಟಿದಂತೆ ಅಥವಾ ಹತ್ತಿಯಿಂದ ನೂಲು, ನೂಲಿನಿಂದ ವಸ್ತ್ರ ಹುಟ್ಟಿದಂತೆ. ಅದಕ್ಕೆ ಒಬ್ಬ ಕರ್ತನು ಬೇಕು. ಮಣ್ಣು ಹತ್ತಿಯಂತಹ ಸಾಮಗ್ರಿ ಬೇಕು. ಕುಂಬಾರನ ಚಕ್ರ, ಬಟ್ಟೆ ನೇಯುವ ಮಗ್ಗ ಮುಂತಾದ ಸಾಧನವು ಬೇಕು. ಅದ್ವಿತೀಯವಾದ ಬ್ರಹ್ಮ ಒಂದೇ ಇರುವಾಗ ಜಗನ್ನಿರ್ಮಾಣಕ್ಕೆ ಸಾಮಗ್ರಿ ಯಾವುದು? ಕರಣ ಯಾವುದು? ಎಂಬ ಪ್ರಶ್ನೆ ಹುಟ್ಟುತ್ತದೆ. ಪರಿಣಾಮವಾದವು ಹೀಗಿರುತ್ತದೆ. ಮಣ್ಣು ಕಪಾಲವಾಗಿ ಗಡಿಗೆಯಾಗಿ ಪರಿಣಮಿಸುತ್ತದೆ. ಹತ್ತಿ ನೂಲಾಗಿ

ಬಟ್ಟೆಯಾಗುತ್ತದೆ. ಒಂದೇ ವಸ್ತು ತನ್ನ ಸ್ವರೂಪವನ್ನು ಬದಲಾಯಿಸಿಕೊಳ್ಳುತ್ತ ಹೋಗುವುದು ಪರಿಣಾಮ. ಸಾಂಖ್ಯರು ಈ ಪರಿಣಾಮವಾದವನ್ನು ಅಂಗೀಕರಿಸಿ ಪ್ರಧಾನವೇ (ಪ್ರಕೃತಿಯೇ) ಜಗತ್ತಾಗಿ ಪರಿಣಮಿಸುತ್ತದೆ ಎನ್ನುತ್ತಾರೆ. ಹಾಗೆ ಬ್ರಹ್ಮವೇ ಜಗತ್ತಾಗಿ ಪರಿಣಮಿಸುತ್ತದೆ ಎನ್ನುವುದು ಯುಕ್ತವಲ್ಲ. ಅವಯವಗಳಿಲ್ಲದ ಅಖಂಡವಾದ ವಸ್ತು ಎಂದಿಗೂ ಪರಿಣಮಿಸಲಾರದು. ಪರಬ್ರಹ್ಮಕ್ಕೆ ಅವಯವಗಳಿವೆಯೆಂದೂ ಅಥು ಪರಿಣಮಿಸುತ್ತಿದೆಯೆಂದೂ ಎಂದಿಗೂ ಹೇಳಲಾಗುವುದಿಲ್ಲ. ಆ ಪಕ್ಷದಲ್ಲಿ ಬ್ರಹ್ಮವು ಅನಿತ್ಯವಾಗಿ ಬಿಡುತ್ತದೆ. ಯಾವುದು ಪರಿಣಮಿಸಿ ವಿಕಾರವನ್ನು ಹೊಂದುತ್ತದೆಯೋ ಅದು ನಶ್ವರವೆಂದು ಸಿದ್ಧಾಂತವಿದೆ. ಆದ್ದರಿಂದ ಬ್ರಹ್ಮವು (ಈಶ್ವರ) ಹೇಗೆ ಜಗತ್ತನ್ನು ನಿರ್ಮಿಸುತ್ತದೆ? ಎಂದು. ವೇದಾಂತಿಗಳ ಪಕ್ಷದಲ್ಲಿ ಈ ಪ್ರಶ್ನೆ ಹುಟ್ಟುವುದಿಲ್ಲ. ಏಕೆಂದರೆ ವೇದಾಂತವು ವಿವರ್ತವಾದವನ್ನು ಅಂಗೀಕರಿಸಿದೆ. ಸ್ವಸ್ವರೂಪವನ್ನು ಬದಲಾಯಿಸದೆ ರೂಪಾಂತರವನ್ನು ಪಡೆಯುವುದು ವಿವರ್ತ. ಹಗ್ಗವು ಹಾವಾಗಿ ತೋರುವುದು, ಕಪ್ಪೆಚಿಪ್ಪು ಬೆಳ್ಳಿಯಾಗಿ ತೋರುವುದು, ದೂರದಲ್ಲಿ ಕಾಣುವ ಬಿಸಿಲು ನೀರಿನಂತೆ ಕಾಣುವುದು - ಇತ್ಯಾದಿಗಳೆಲ್ಲವೂ ವಿವರ್ತಗಳು. ಇದಕ್ಕೆ ಭ್ರಮೆಯೇ ಕಾರಣ. ಅನಾದಿಯಾದ ಈ ಭ್ರಮೆಯನ್ನು ವೇದಾಂತಿಗಳು ಅವಿದ್ಯೆಯೆಂದೂ ಅಜ್ಞಾನವೆಂದೂ ಹೇಳುತ್ತಾರೆ. ಈ ಪಕ್ಷದಲ್ಲಿ ಹಿಂದೆ ಹೇಳಿದ ಯಾವ ದೋಷವೂ ಸಂಭವಿಸುವುದಿಲ್ಲ(೧೮೬). ಏಕೆಂದರೆ, ವಿವರ್ತವಾದ ದಲ್ಲಿ ಅಜ್ಞಾನದ ಹೊರತಾಗಿ ಇನ್ನಾವುದೂ ಬೇಕಾಗುವುದಿಲ್ಲ. ಮೂಲದ್ರವ್ಯವೇ ರೂಪಾಂತರವನ್ನು ಹೊಂದಿದಂತೆ ಕಾಣುತ್ತದೆ. ಒಳ್ಳೆಯದು. ವಿವರ್ತವಾದ ದಲ್ಲಿಯೇ ಒಂದು ಪ್ರಶ್ನೆ ಹುಟ್ಟುತ್ತದೆ. ಈ ವಾದದಲ್ಲಿಯೂ ಉಪಾದಾನವಾಗಿ ಒಂದು ವಸ್ತುವಿರಲೇಬೇಕಷ್ಟೆ. ಆ ವಸ್ತು ಈಶ್ವರನೇ ಆಗಿರುತ್ತಾನೆ. ಅವನೇ ಜಗತ್ತಿಗೆ ಉಪಾದಾನಕಾರಣ. ಜಗತ್ತಾದರೋ ಚೇತನಾಚೇತನ ರೂಪವಾಗಿದೆ. ಜಡ-ಚೇತನ ಇವೆರಡಕ್ಕೆ ಈಶ್ವರನು ಉಪಾದಾನವಾಗುವುದು ಹೇಗೆ? ಈಶ್ವರನು ಚೇತನನಾದ್ದರಿಂದ ಅವನು ಜಡಕ್ಕೆ ಉಪಾದಾನಕಾರಣನಾಗಲಾರ. ಹಾಗಲ್ಲ; ಮಾಯೆಯೆಂಬ ಉಪಾಧಿಯಿಂದ ಕೂಡಿದವನು ಈಶ್ವರ. ಈ ಮಾಯೆಯು ಸತ್ತ್ವರಜಸ್ತಮೋಗುಣಗಳಿಂದ ಕೂಡಿದ್ದು. ತಮೋಗುಣವು ಜಡಸ್ವರೂಪವುಳ್ಳದ್ದು. ತಮೋಗುಣಪ್ರಧಾನವಾದ ಮಾಯೆಯಿಂದ ಜಡಜಗತ್ತು ಹುಟ್ಟಿದೆ. ಆದ್ದರಿಂದ ಈಶ್ವರನು ಮಾಯೋಪಾಧಿಯ ಜಾಡ್ಯಾಂಶದಿಂದ ಅಚೇತನಗಳಿಗೂ ಚಿದಾಭಾಸಾಂಶದಿಂದ ಜೀವಗಳಿಗೂ ಕಾರಣನಾಗುತ್ತಾನೆ.

ಹೀಗೆ ಉಪಾಧಿಯಿಂದ ಎರಡು ಅಂಶಗಳು ಈಶ್ವರನಲ್ಲಿರುವುದರಿಂದ ಚೇತನಾಚೇತನಗಳಿಗೆ ಈಶ್ವರನು ಕಾರಣನೆಂದರೆ ವಿರೋಧವೇನೂ ಇಲ್ಲ (೧೮೭). ಆದರೆ ಶ್ರೀ ಸುರೇಶ್ವರಾಚಾರ್ಯರು ಪರಮಾತ್ಮನೇ (ಪರಬ್ರಹ್ಮವೇ) ಈ ಜಗತ್ತಿಗೆ ಕಾರಣವೆಂದು ಹೇಳಿದ್ದಾರೆ. ಮಾಯಾವಿಶಿಷ್ಟನಾದ ಈಶ್ವರನು ಕಾರಣನೆಂದು ಅವರು ಹೇಳಿಲ್ಲ. ಆದ್ದರಿಂದ ಸುರೇಶ್ವರಾಚಾರ್ಯರು ಹೇಳಿದುದಕ್ಕೆ ನೀವು ಹೇಳುವುದು ವಿರುದ್ಧವಾಗಿದೆಯಲ್ಲವೇ? - ಎಂಬ ಶಂಕೆ ಇಲ್ಲಿ ಬರಬಹುದು. ಅವರು ಹೇಳಿದ್ದೇನೆಂದರೆ, ತಮೋಗುಣಪ್ರಧಾನವಾದ ಮಾಯೆಯನ್ನು ಉಪಾಧಿಯಾಗಿ ಉಳ್ಳ ಪರಮಾತ್ಮನು ಶರೀರಗಳಿಗೂ (ಅಚೇತನಗಳಿಗೂ) ಚಿತ್ ಪ್ರಧಾನನಾದಾಗ ಭಾವನಾ (ಸಂಸ್ಕಾರ), ದೇವತಾ ಧ್ಯಾನಾದಿಗಳು, ಪುಣ್ಯಾಪುಣ್ಯ ಸಂಸ್ಕಾರಗಳು - ಇವುಗಳ ನಿಮಿತ್ತದಿಂದ ಜೀವಾತ್ಮರಿಗೂ ಕಾರಣನಾಗುತ್ತಾನೆ ಎಂದಿದ್ದಾರೆ. ಏವಂಚ ಪರಮಾತ್ಮನು ಜಗತ್ತಿಗೆ ಕಾರಣನೆಂದಿದ್ದಾರೆಯೇ ಹೊರತು, ಈಶ್ವರನು ಕಾರಣನೆಂದು ಹೇಳಿಲ್ಲ - ಎಂದು ಅಭಿಪ್ರಾಯ. ಸುರೇಶ್ವರಾಚಾರ್ಯರೇ ವಾರ್ತಿಕಕಾರರು (೧೮೮-೧೮೯). ಇದಕ್ಕೆ ಸಮಾಧಾನವೇನೆಂದರೆ : **'ತತ್ತ್ವಮಸಿ'** ಎಂಬ ಮಹಾವಾಕ್ಯದಲ್ಲಿ ಜೀವಕೂಟಸ್ಥರಿಗೆ ಹೇಗೆ ಅನ್ಯೋನ್ಯಾಧ್ಯಾಸವಿದೆಯೋ ಹಾಗೆ ಈಶ್ವರಪರಬ್ರಹ್ಮ - ಇವರಿಗೆ ಅನ್ಯೋನ್ಯಾಧ್ಯಾಸ ಸಿದ್ಧವಾಗಿದೆಯೆಂದು ತಿಳಿದು ಅಭೇದದಿಂದ ಸುರೇಶ್ವರಾಚಾರ್ಯರು ಹಾಗೆ ಹೇಳಿದ್ದಾರೆ. ಅವರು ಈಶ್ವರನನ್ನೇ ಪರಮಾತ್ಮನೆಂದು ಕರೆದಿದ್ದಾರೆ. ಇದಕ್ಕೆ ವಿವರಣೆ ಹೀಗೆ - ತತ್ತ್ವಮಸಿ ಎಂಬ ವಾಕ್ಯದಲ್ಲಿ ತ್ವಂ = ನೀನು, ತತ್ = ಆ ಕೂಟಸ್ಥ ಈಶ್ವರನೇ ಅಸಿ = ಆಗಿದ್ದೀಯೆ ಎಂದರ್ಥ. ಜೀವನು ಮಾಯೆಗೆ ಅಧೀನವಾದ ಆತ್ಮ. ಅವನು ಕೂಟಸ್ಥಬ್ರಹ್ಮವಾಗುವುದು ಹೇಗೆ? ಜೀವನ ಉಪಾಧಿಯನ್ನು ಗಣಿಸದೆ ಆರೋಪದಿಂದ ಜೀವನನ್ನು ಕೂಟಸ್ಥನೆಂದೂ ಕೂಟಸ್ಥನನ್ನು ಜೀವನೆಂದೂ ಎಣಿಸಿ ಅಭೇದವನ್ನು ಹೇಳಬೇಕು. ಉಭಯೋಪಾಧಿಗಳಿಂದ ವಿಮುಕ್ತವಾದಾಗ ಅಭೇದವು ಸಿದ್ಧವಾಗುತ್ತದೆ. ಹಾಗೆ ಪ್ರಕೃತದಲ್ಲಿಯೂ ಮಾಯೋಪಾಧಿವಿಶಿಷ್ಟನಾದ ಈಶ್ವರನನ್ನೇ ಪರಮಾತ್ಮನೆಂದು ವಾರ್ತಿಕಕಾರರು ಹೇಳಿದ್ದಾರೆಂದು ತಿಳಿಯಬೇಕು (೧೯೦). ವೇದದಲ್ಲಿಯೇ ಈ ಬಗೆಯ ವ್ಯವಹಾರ ಉಂಟು. ಬ್ರಹ್ಮಾನಂದ-ವಲ್ಲಿಯಲ್ಲಿ **'ಸತ್ಯಂ ಜ್ಞಾನಮನಂತಂ ಬ್ರಹ್ಮ'** (ತೈ.ಉ.೨-೧-೧) ಎಂಬ ವಾಕ್ಯವಿದೆ. ಇದು ನಿರ್ಗುಣನಾದ ಪರಮಾತ್ಮನ ಸ್ವರೂಪ. ಅನಂತರ **'ಏತಸ್ಮಾದಾತ್ಮನ ಆಕಾಶಃ ಸಂಭೂತಃ, ಆಕಾಶಾದ್ವಾಯುಃ .......'**

(ತೈ.ಉ.೨-೧) ಇತ್ಯಾದಿ ಶ್ರುತಿವಾಕ್ಯವಿದೆ. ಇಲ್ಲಿ ಪರಮಾತ್ಮನಿಂದಲೇ ಆಕಾಶದಿಂದ ಪುರುಷಪರ್ಯಂತ ಸೃಷ್ಟಿಯಾಯಿತೆಂದು ಸ್ಪಷ್ಟವಾಗಿ ಶ್ರುತಿಯು ತಿಳಿಸಿದೆ. ನಿರ್ಗುಣಪರಮಾತ್ಮನಿಂದ ಹೇಗೆ ಸೃಷ್ಟಿಯಾಗುತ್ತದೆ? ಆದ್ದರಿಂದ ಶ್ರುತಿಯಲ್ಲಿಯೂ ಅಧ್ಯಾಸದಿಂದಲೇ ಈಶ್ವರನನ್ನು ಪರಮಾತ್ಮನೆಂದು ವ್ಯವಹರಿಸಲಾಗಿದೆಯೆಂದು ಹೇಳಬೇಕು (೧೯೧). ಸತ್ಯಜ್ಞಾನಾನಂತವಾದ ಬ್ರಹ್ಮಕ್ಕೆ ಜಗತ್ತಿನ ಕಾರಣತ್ವವನ್ನು ಆಪಾತವಾಗಿ ಶ್ರುತಿಯಲ್ಲಿ ಹೇಳಿದೆ. ಕಾರಣತ್ವವು ಮಾಯಾವಿಶಿಷ್ಟನಾದ ಈಶ್ವರನಿಗೇ ಸತ್ಯವಾದ್ದರಿಂದ ಬ್ರಹ್ಮ-ಈಶ್ವರ ಇವರಿಗೆ ಅನ್ಯೋನ್ಯಾಧ್ಯಾಸವಾಗಿದೆಯೆಂಬುದು ಸ್ಫುಟವಾಗುತ್ತದೆ (೧೯೨). ಉದಾಹರಣೆಗೆ, ಅನ್ನದ ಗಂಜಿಯನ್ನು ಬಳಿದ ಬಟ್ಟೆಯನ್ನು ನೋಡಬಹುದು. ಶುದ್ಧವಾದ ಬಟ್ಟೆ ಬೇರೆ, ಅನ್ನದ ಗಂಜಿಯನ್ನು ಬಳಿದ ಬಟ್ಟೆ ಬೇರೆಯಾದರೂ ಎರಡೂ ಒಂದೇ ಎಂಬ ಅಧ್ಯಾಸದಿಂದ ಅದೇ ಇದು, ಇದೇ ಅದು ಎಂದು ವ್ಯವಹರಿಸುತ್ತಾರೆ. ಹಾಗೆಯೇ ಭ್ರಾಂತಿಯಿಂದ ಪರಮಾತ್ಮನಾದ ಬ್ರಹ್ಮವೂ ಈಶ್ವರನೂ ಒಬ್ಬನೇ ಎಂದು ವ್ಯವಹಾರ ಉಂಟು (೧೯೩). ಮಹಾಕಾಶವು ಶುದ್ಧವಾಗಿರುತ್ತದೆ. ಮೇಘಾಕಾಶವು ಮೇಘವೆಂಬ ಉಪಾಧಿಯಿಂದ ಕೂಡಿರುತ್ತದೆ. ಆಪಾತದರ್ಶಿಗಳು ಅವೆರಡೂ ಒಂದೇ ಎಂದು ತಿಳಿದು ವ್ಯತ್ಯಾಸವನ್ನು ಗುರುತಿಸುವುದಿಲ್ಲ (ಮೇಘದಿಂದ ಮಳೆ ಸುರಿದರೂ ಆಕಾಶದಿಂದ ಮಳೆ ಸುರಿಯಿತು ಎನ್ನುತ್ತಾರೆ). ಹಾಗೆಯೇ ಬ್ರಹ್ಮ, ಈಶ್ವರ ಎರಡೂ ಒಂದೇ ಎಂದು ತಿಳಿದಿರುತ್ತಾರೆ (೧೯೪). ಬ್ರಹ್ಮ-ಈಶ್ವರರಲ್ಲಿ ಭೇದವಿರುವುದರಿಂದ ಈಶ್ವರನು ಸೃಷ್ಟಿಗೆ ಕಾರಣನೆಂದು ಶ್ರುತಿಯ ತಾತ್ಪರ್ಯವಾಗಿದೆ. ತಾತ್ಪರ್ಯವನ್ನು ತಿಳಿಯಲು ಮಾರ್ಗದರ್ಶಕವಾದ ಆರು ಲಿಂಗ (ಲಕ್ಷಣ)ಗಳಿವೆ. ಅವು ಯಾವುವೆಂದರೆ:-

**ಉಪಕ್ರಮೋಪಸಂಹಾರೌ ಅಭ್ಯಾಸೋಽಪೂರ್ವತಾ ಫಲಮ್ ।**
**ಅರ್ಥವಾದೋಪಪತ್ತೀ ಚ ಲಿಂಗಂ ತಾತ್ಪರ್ಯನಿರ್ಣಯೇ ॥**

ಶಾಸ್ತ್ರದ ತಾತ್ಪರ್ಯವನ್ನು ನಿಶ್ಚಯಿಸುವುದಕ್ಕೆ ಉಪಕ್ರಮ, ಉಪಸಂಹಾರ, ಅಭ್ಯಾಸ, ಅಪೂರ್ವತಾ, ಫಲ, ಅರ್ಥವಾದ ಮತ್ತು ಉಪಪತ್ತಿಗಳು ಲಿಂಗಗಳು. ಉಪಕ್ರಮ (ಆರಂಭ). ಉಪಸಂಹಾರ (ಸಮಾಪ್ತಿ) - ಇವೆರಡೂ ಸೇರಿ ಒಂದೇ ಲಕ್ಷಣವಾಗುತ್ತದೆ. ಆದ್ದರಿಂದ ಆರು ತಾತ್ಪರ್ಯ ಲಿಂಗಗಳು. ಬ್ರಹ್ಮವು ಸಂಗರಹಿತವಾದದ್ದು, ಮಾಯಾವಿಯಾದ ಈಶ್ವರನು ಜಗತ್ತನ್ನು ಸೃಜಿಸುತ್ತಾನೆ ಎಂದು ಶ್ರುತಿಯ ತಾತ್ಪರ್ಯ (೧೯೫). ಬ್ರಹ್ಮವು ಜಾತ್ಯಾದಿಧರ್ಮಗಳಿಲ್ಲದ

ನಿರ್ಧರ್ಮಕವೂ ನಿಃಸಂಗವೂ ಆದ ಸದ್‌ವಸ್ತುವೆಂಬುದನ್ನು ಉಪಕ್ರಮೋಪಸಂಹಾರಗಳಿಂದ ನಿಶ್ಚಯಿಸಬಹುದು. ತೈತ್ತಿರೀಯದಲ್ಲಿ **'ಸತ್ಯಂಜ್ಞಾನಮನಂತಂ ಬ್ರಹ್ಮ'** (ತೈ.ಉ.೨-೧-೧) ಎಂದು ಬ್ರಹ್ಮದ ಸ್ವರೂಪಲಕ್ಷಣವಿದೆ. ಬ್ರಹ್ಮವು ನಿಃಸಂಗವೆಂಬುದನ್ನು ಸ್ಪಷ್ಟವಾಗಿ ಈ ವಚನವು ಉಪಕ್ರಮದಲ್ಲಿ ತಿಳಿಸಿದೆ. ಅನಂತರ ಉಪಸಂಹಾರದಲ್ಲಿ **'ಯತೋ ವಾಚೋ ನಿವರ್ತಂತೇ ಅಪ್ರಾಪ್ಯ ಮನಸಾ ಸಹ'** (ತೈ.ಉ.೨-೪) ಎಂದು ಹೇಳಿದೆ. ಮಾತಿಗೂ ಮನಸ್ಸಿಗೂ ಅದು ನಿಲುಕತಕ್ಕದ್ದಲ್ಲ- ಎಂದರ್ಥ. ಜಾತ್ಯಾದಿಧರ್ಮವಾಗಲಿ ಆಕೃತಿಯಾಗಲಿ ಬ್ರಹ್ಮಕ್ಕಿಲ್ಲವೆಂದು ಇದರಿಂದ ನಿಶ್ಚಿತವಾಗುತ್ತದೆ (೧೯೬). **'ಅಸ್ಮಾನ್ ಮಾಯೀ ಸೃಜತೇ ವಿಶ್ವಮೇತತ್, ತಸ್ಮಿಂಶ್ಚಾನ್ಯೋ ಮಾಯಯಾ ಸಂನಿರುದ್ಧಃ'** (ಶ್ವೇ.ಉ. ೪-೯) ಎಂದು ಶ್ವೇತಾಶ್ವತ-ರೋಪನಿಷತ್ತಿನಲ್ಲಿದೆ. ಕೂಟಸ್ಥಬ್ರಹ್ಮವು ಮಾಯಾವಿಶಿಷ್ಟವಾಗಿ ಮಾಯೆಯಿಂದ ಈ ವಿಶ್ವವನ್ನು ನಿರ್ಮಿಸುತ್ತದೆ. ಮಾಯೆಗೆ ಅಧೀನವಾಗಿ ಇನ್ನೊಬ್ಬ ಜೀವನಂತೆ ಅದೇ ತನ್ನನ್ನು ಮಾರ್ಪಡಿಸಿಕೊಂಡಿದೆ ಎಂದು ಈ ಉಪನಿಷದ್ವಾಕ್ಯದ ತಾತ್ಪರ್ಯ. ಇದರಿಂದ ಮಾಯಾವಿಶಿಷ್ಟನಾದ ಈಶ್ವರನು ಜಗತ್ತನ್ನು ಸೃಜಿಸುತ್ತಾನೆಂದು ತಿಳಿದು ಬರುತ್ತದೆ (೧೯೭). ಜಗತ್ತಿನ ಉತ್ಪತ್ತಿಪ್ರಕಾರವು ಹೇಗೆಂದರೆ: ಆನಂದಮಯನಾದ ಈಶ್ವರನು **'ಬಹು ಸ್ಯಾಂ ಪ್ರಜಾಯೇಯೇತಿ'** (ನಾನು ಬಹು ಆಗಬೇಕು, ಜನಿಸಬೇಕು) ಎಂದು ಆಲೋಚಿಸಿದನು. ಒಡನೆಯೇ ಸಮಷ್ಟಿಸೂಕ್ಷ್ಮಪ್ರಪಂಚರೂಪನಾದ ಹಿರಣ್ಯಗರ್ಭನಾಗಿ ಬಿಟ್ಟನು! ಗಾಢನಿದ್ರೆಯಾದ ಸುಷುಪ್ತಿಯು ಸ್ವಪ್ನವಾಗಿ ಪರಿವರ್ತಿಸು ವಂತಾಯಿತು! (೧೯೮). ಅನಂತರ ಶ್ರುತಿಯಲ್ಲಿ ಹೇಳಿದಂತೆ ಆಕಾಶ, ವಾಯು, ಅಗ್ನಿ, ಜಲ, ಪೃಥ್ವಿ - ಇತ್ಯಾದಿ ಕ್ರಮಪೂರ್ವಕವಾಗಿ ಸೃಷ್ಟಿಯಾಯಿತು. ಅಥವಾ **'ಇದಂ ಸರ್ವಮಸೃಜತ '** ಎಂಬ ಶ್ರುತಿವಾಕ್ಯದಂತೆ ಏಕಕಾಲದಲ್ಲಿ ಜಗತ್ತಿನ ಸೃಷ್ಟಿಯಾಯಿತು ಎಂದು ತಿಳಿಯಬಹುದು. ಕ್ರಮಸೃಷ್ಟಿ ಅಥವಾ ಏಕಕಾಲದಲ್ಲಿ ಜಗತ್ತಿನ ಸೃಷ್ಟಿಯಾಯಿತು ಎಂದು ತಿಳಿಯಬಹುದು. ಕ್ರಮಸೃಷ್ಟಿ ಅಥವಾ ಏಕಕಾಲದ ಸೃಷ್ಟಿ- ಇವುಗಳಲ್ಲಿ ಯಾವುದಾದರೂ ಆಗಿರಬಹುದು. ಅದೇನೂ ಮುಖ್ಯ ವಿಷಯವಲ್ಲ(೧೯೯). ಹಿರಣ್ಯಗರ್ಭನೇ ಸೂತ್ರಾತ್ಮನೆನಿಸುತ್ತಾನೆ. ವಸ್ತ್ರದಲ್ಲಿ ನೂಲು ಇರುವಂತೆ ಜಗತ್ತಿನಲ್ಲಿ ಅನುಸ್ಯೂತನಾದ್ದರಿಂದ ಸೂತ್ರಾತ್ಮನೆನಿಸಿದ್ದಾನೆ. ಇವನಿಗೆ ಸೂಕ್ಷ್ಮದೇಹನೆಂದೂ ಹೆಸರು. ವ್ಯಷ್ಟಿಯಾದ ಸಮಸ್ತ ಲಿಂಗ ದೇಹಗಳಲ್ಲಿಯೂ 'ನಾನು' ಎಂಬ ಅಹಂಭಾವವನ್ನು ತಳೆದಿರುವ

ಈತನು ಸರ್ವರ ಸಮಷ್ಟಿದೇಹಸ್ವರೂಪದವನು. ಈ ಸೂತ್ರಾತ್ಮನಲ್ಲಿ ಜ್ಞಾನ, ಇಚ್ಛೆ, ಕ್ರಿಯಾ ಎಂಬ ಮೂರು ಶಕ್ತಿಗಳಿವೆ (೨೦೦).

ಉಷಃಕಾಲದಲ್ಲಿ ಅಥವಾ ಸಂಜೆಯಲ್ಲಿ ಮಬ್ಬುಗತ್ತಲೆಯಾದಾಗ ಈ ಜಗತ್ತು ಹೇಗೆ ಅಸ್ಫುಟವಾಗಿ ಕಾಣುತ್ತದೆಯೋ ಹಾಗೆ ಹಿರಣ್ಯಗರ್ಭಾವಸ್ಥೆಯಲ್ಲಿ ಈ ಜಗತ್ತು ಅಸ್ಫುಟವಾಗಿರುತ್ತದೆ. ಗಂಜಿಹಾಕಿದ ಬಟ್ಟೆಯ ಮೇಲಿನ ಮಸಿಯಿಂದ ಬೇರೆ ಬೇರೆ ಸೂಕ್ಷ್ಮ ಆಕೃತಿಗಳನ್ನು ಸರ್ವತ್ರ ಗೀಚಿದರೆ ಆ ಬಟ್ಟೆ ಹೇಗೆ ಕಾಣಿಸುವುದೋ ಹಾಗೆ ಮಾಯಾವಿಯಾದ ಈಶ್ವರನ ವಿಶ್ವಾಕಾರದ ದೇಹವು ಲಾಂಛಿತವಾಗಿರುತ್ತದೆಯೆಂದು ತಿಳಿಯಬೇಕು. ಈ ಸ್ಥಿತಿಯಲ್ಲಿ ಪಂಚ ಮಹಾಭೂತಗಳು ಅಪಂಚೀಕೃತವಾಗಿರುತ್ತವೆ (೨೦೧-೨೦೨). ಇನ್ನೊಂದು ದೃಷ್ಟಾಂತವನ್ನು ಹಿರಣ್ಯಗರ್ಭನ ರೂಪಕ್ಕೆ ಕೊಡಬಹುದು. ಧಾನ್ಯವಾಗಲಿ ಅಥವಾ ಇನ್ನೊಂದು ಗಿಡದ ಬೀಜವಾಗಲಿ ಮೊಳಕೆಯೊಡೆದು ಎಳೆಯ ಸಸಿಯಾದಾಗ ಎಷ್ಟು ಕೋಮಲವಾಗಿರುವುದೋ ಹಾಗೆ ಹಿರಣ್ಯಗರ್ಭನೆಂಬ ಈ ಜಗತ್ತಿನ ಎಳೆಯ ಸಸಿಯು ಇರುವುದೆಂದು ಊಹಿಸಿಕೊಳ್ಳಬಹುದು (೨೦೩). ಇದಿಷ್ಟು ಸೂತ್ರಾತ್ಮನಾದ ಹಿರಣ್ಯಗರ್ಭನ ಸ್ಥಿತಿ. ಅನಂತರ ಈತನೇ ವಿರಾಡ್ರೂಪವನ್ನು ಧರಿಸುತ್ತಾನೆ. ಪಂಚಮಹಾಭೂತಗಳೂ ಈಗ ಪಂಚೀಕೃತವಾಗಿರುತ್ತವೆ. ಈ ಉಪಾಧಿಗಳಿಂದ ಕೂಡಿದ ವಿರಾಡಾತ್ಮನು ಬಿಸಿಲಿನಿಂದ ಬೆಳಗುವ ಲೋಕವು ಹೇಗೆ ಕಾಣಿಸುವುದೋ, ಎಲ್ಲ ಬಣ್ಣಗಳನ್ನೂ ಕ್ರಮವಾಗಿ ಹಚ್ಚಿದ ಮೇಲೆ ಬಣ್ಣದ ಚಿತ್ರಪಟವು ಹೇಗಿರುವುದೋ, ಎಳೆಯ ಸಸಿಯು ಬೆಳೆದು ಫಲಪುಷ್ಪಗಳಿಂದ ರಂಜಿತವಾದಾಗ ಹೇಗೆ ಕಾಣಿಸುವುದೋ ಹಾಗೆ ಪ್ರಕಾಶಮಾನನಾಗಿರುತ್ತಾನೆ. ಎಂದರೆ, ವಿರಾಡಾತ್ಮನ ದೇಹವು ಈ ಪ್ರಕಾರವಾಗಿ ನಮಗೆ ಗೋಚರಿಸುತ್ತದೆ. ಈಗ ನಮಗೆ ಕಾಣಿಸುತ್ತಿರುವ ಜಗತ್ತೇ ವಿರಾಡಾತ್ಮನ ಶರೀರವೆಂದು ತಿಳಿಯಬೇಕು (೨೦೪). ಭಗವದ್ಗೀತೆಯಲ್ಲಿ ಶ್ರೀಕೃಷ್ಣನು ಅರ್ಜುನನಿಗೆ ವಿಶ್ವರೂಪದರ್ಶನವನ್ನು ಮಾಡಿಸುತ್ತಾನಷ್ಟೆ. ಪುರುಷಸೂಕ್ತದಲ್ಲಿಯೂ 'ಸಹಸ್ರಶೀರ್ಷಾ ಪುರುಷಃ' ಎಂದು ವಿಶ್ವರೂಪದ ವರ್ಣನೆಯೇ ಇದೆ. ಬ್ರಹ್ಮನಿಂದ ಹಿಡಿದು ಒಂದು ಹುಲ್ಲುಕಡ್ಡಿಯವರೆಗಿನ ಸಮಸ್ತಪದಾರ್ಥಗಳೂ ವಿರಾಟ್‌ಪುರುಷನ ಅವಯವಗಳು (೨೦೫). ಇದೆಲ್ಲವನ್ನೂ ಬಿಡಿಸಿ ಹೇಳಿದುದೇಕೆಂದರೆ, ಈ ವಿಶ್ವದಲ್ಲಿರುವ ಸಕಲ ಪ್ರಾಣಿಗಳು ಜಡವಸ್ತುಗಳು ಪರಮಾತ್ಮಸ್ವರೂಪಗಳಾಗಿವೆ. ಇವೆಲ್ಲವೂ ಪೂಜ್ಯವಾದವು. ಪೂಜಿಸಿದರೆ ಫಲವೂ ಉಂಟು ಎಂದು ತಿಳಿಸುವುದಕ್ಕಾಗಿ.

ಅಂತರ್ಯಾಮಿಯಾದ ಈಶ್ವರ, ಸೂತ್ರಾತ್ಮನಾದ ಹಿರಣ್ಯಗರ್ಭ, ವಿರಾಟ್‌ಪುರುಷ. ಬ್ರಹ್ಮ, ವಿಷ್ಣು ರುದ್ರ, ಇಂದ್ರ, ಅಗ್ನಿ, ವಿಘ್ನೇಶ್ವರ, ಭೈರವ, ಮೈರಾಲ, ಮಾರಿ, ಯಕ್ಷ, ರಾಕ್ಷಸರು, ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರೂ, ಹಸು, ಕುದುರೆ, ಮೃಗಪಕ್ಷಿಗಳೂ, ಅರಳಿಮರ, ಆಲದ ಮರ, ಮಾವಿನಮರ ಮೊದಲಾದ ವೃಕ್ಷಗಳೂ, ಗೋಧಿ, ಭತ್ತ ಹುಲ್ಲು ಮೊದಲಾದವೂ, ನೀರು, ಕಲ್ಲು, ಮಣ್ಣು ಕಟ್ಟಿಗೆಗಳೂ ವಾಸ್ಯ(?), ಗುದ್ದಲಿ ಮೊದಲಾದ ಆಯುಧಗಳೂ ಸಹ ಈಶ್ವರಸ್ವರೂಪಗಳೆಂದೇ ತಿಳಿದು ಪೂಜಿಸಿದರೆ ಇವೆಲ್ಲವೂ ಫಲವನ್ನು ಅವಶ್ಯವಾಗಿ ನೀಡುತ್ತವೆ (೨೦೬-೨೦೮). ಪೂಜಾಕರ್ಮ ಎಷ್ಟೆಷ್ಟು ಉತ್ಕೃಷ್ಟರೀತಿಯಲ್ಲಿ ನಡೆಯುವುದೋ ಅಷ್ಟೇ ಉತ್ತಮವಾದ ಫಲವೂ ಭಕ್ತರಿಗೆ ದೊರೆಯುತ್ತದೆ. ಪೂಜ್ಯವಾದ ವಸ್ತುವಿನಲ್ಲಿ ಯಾವ ಭಾವನೆಯನ್ನಿಟ್ಟು ಪೂಜಿಸುತ್ತೇವೋ ಅದಕ್ಕೆ ತಕ್ಕದಾದ ಫಲವು ದೊರೆಯುತ್ತದೆ. ಪೂಜೆಯ ಎಂದರೆ ಭಕ್ತಿಭಾವದ ಉತ್ಕರ್ಷ - ಅಪಕರ್ಷಗಳನ್ನನುಸರಿಸಿ ಅದಕ್ಕೆ ಯೋಗ್ಯವಾದ ಫಲವು ದೊರೆಯುತ್ತದೆ(೨೦೯). ಆದರೆ ಮೋಕ್ಷವು ಮಾತ್ರ ಬ್ರಹ್ಮತತ್ತ್ವದ ಯಥಾರ್ಥ ಜ್ಞಾನದಿಂದಲೇ ಹೊರತು ಈ ಬಗೆಯ ಪೂಜೆಯಿಂದ ಎಂದಿಗೂ ದೊರಕದು. ಹೇಗೆಂದರೆ, ಒಬ್ಬನು ಕನಸನ್ನು ಕಾಣುತ್ತಿರುತ್ತಾನೆ. ಆ ಕನಸು ಮುಗಿಯಬೇಕಾದರೆ ಅವನಿಗೇ ಎಚ್ಚರವಾಗಬೇಕು. ಎಚ್ಚರವಾಗದೆ ಕನಸು ಮುಗಿಯುವುದಿಲ್ಲ. ಹಾಗೆಯೇ ಕನಸಿಗೆ ಸಮಾನವಾದ ಈ ಜಗದ್ವ್ಯವಹಾರವು ಭ್ರಮೆಯಿಂದ ಬಿಡುಗಡೆ ಹೊಂದಿ ಆತ್ಮಜ್ಞಾನವಾದಾಗ ಮಾತ್ರ ನಿಲ್ಲುತ್ತದೆ. ಸ್ವಸ್ವರೂಪ ಜ್ಞಾನವೇ ಎಚ್ಚರವೆಂದು ತಿಳಿಯಬೇಕು (೨೧೦). ಈಗೊಂದು ಶಂಕೆ ಹುಟ್ಟುತ್ತದೆ. ದ್ವೈತ ನಿವೃತ್ತಿಯೇ ಮುಕ್ತಿಯಷ್ಟೆ, ದ್ವೈತರೂಪವಾದ ಜಗತ್ತಿಗೆ ಸ್ವಪ್ನದೃಷ್ಟಾಂತವನ್ನಿತ್ತು ಇದರ ನಿವೃತ್ತಿಯನ್ನು ಹೇಳಿರುವುದು ಸಮಂಜಸವಲ್ಲ, ಸ್ವಪ್ನವು ಕೇವಲ ಮನಃಕಲ್ಪಿತವಾದ್ದರಿಂದ ಎಚ್ಚರವಾದೊಡನೆ ನಿವೃತ್ತವಾಗುತ್ತದೆ. ಸ್ವಪ್ನದಂತೆ ಈ ಜಗತ್ತು ನಿವೃತ್ತವಾಗುವುದು ಹೇಗೆ? ನಾವು ಜಾಗ್ರತ್ತಿನಲ್ಲಿದ್ದೇವೆ. ಜಾಗ್ರತ್ತು ಸ್ವಪ್ನವಲ್ಲ. ಈ ಶಂಕೆಗೆ ಉತ್ತರವೇನು? ಉತ್ತರವನ್ನು ಸಮಾಧಾನದಿಂದ ಕೇಳಬೇಕು. **'ಸ್ವಪ್ನವತ್ತನ್ನ ಸತ್ಯಂ'** ಇತ್ಯಾದಿ ವಚನಗಳು ಇದು ಮಿಥ್ಯಾಪ್ರಪಂಚವೆಂದೂ ಮಾಯಾಕಲ್ಪಿತವೆಂದು ಸಾರಿ ಹೇಳಿದೆ. **''ತ್ರಯಮೇತತ್ ಸುಷುಪ್ತಂ ಸ್ವಪ್ನಂ ಮಾಯಾಮಾತ್ರಂ''** (ನೃ.ಉ,ತಾ.ಉ.೧) ಎಂದು ಶ್ರುತಿಯೇ ಹೇಳಿದೆ. ಜಾಗ್ರತ್, ಸ್ವಪ್ನ ಸುಷುಪ್ತಿ ಇವು ಮೂರೂ ನಿದ್ರೆಯೇ ಮಾಯಾಕಲ್ಪಿತವಾದ

ಸ್ವಪ್ನವೇ - ಎಂದು ಅದರ ಅರ್ಥ. ದ್ವೈತವು ವಸ್ತುತಃ ಇಲ್ಲ. ಅಜ್ಞಾನದಿಂದ ಜಗತ್ತು ತೋರುತ್ತದೆ ಎಂಬುದಿಷ್ಟೇ ಸತ್ಯವಾದ್ದರಿಂದ ಆತ್ಮಜ್ಞಾನವಾದಾಗ ಕನಸಿನಂತೆ ಈ ಜಗತ್ತು ನಿವೃತ್ತವಾಗುತ್ತದೆ ಎನ್ನುವುದು ಯುಕ್ತವಾಗಿಯೇ ಇದೆ. ಪರಮಾರ್ಥದಲ್ಲಿ ಜಾಗ್ರತ್ತು ಸಹ ಸ್ವಪ್ನವೇ. ಅದ್ವಿತೀಯವಾದ ಆತ್ಮತತ್ತ್ವ ಒಂದೇ ಸತ್ಯ. ಉಳಿದದ್ದೆಲ್ಲವೂ ಮಿಥ್ಯೆ. ಆತ್ಮಸಾಕ್ಷಾತ್ಕಾರವಾದಾಗ ಚೇತನಾಚೇತನಾತ್ಮಕವಾದ ಈ ಜಗತ್ತು ಮಿಥ್ಯೆಯಾಗಿ ಬಿಡುತ್ತದೆ. ಈಶ್ವರ, ಜೀವ ಎಂಬ ಭೇದವೂ ಇರುವುದಿಲ್ಲ (೨೧೧). ಈಶ್ವರ, ಜೀವ ಎಂದರೆ ಯಾರು? ಈಶ್ವರನು ಆನಂದಮಯ, ಜೀವನು ವಿಜ್ಞಾನಮಯ. ಇಬ್ಬರೂ ಮಾಯಾಕಲ್ಪಿತರು. ಮಾಯಾಕಲ್ಪಿತರಾದ ಇವರಿಬ್ಬರಿಂದ ಈ ಜಗತ್ತೇ ಕಲ್ಪಿತವಾಗಿ ಬಿಟ್ಟಿದೆ (೨೧೨). ಅವುಗಳಲ್ಲಿ ಈಕ್ಷಣದಿಂದ ಪ್ರವೇಶಪರ್ಯಂತವಾದ ಸೃಷ್ಟಿಯು ಈಶ್ವರನಿಂದ ಕಲ್ಪಿತವಾದದ್ದು. **''ಸ ಐಕ್ಷತ ಲೋಕಾನ್ನು ಸೃಜಾ ಇತಿ''** (ಐ.ಉ.೧-೨) ಎಂದು ಶ್ರುತಿ ಇದೆ. ಈಕ್ಷಣವೆಂದರೆ ಆಲೋಚನೆ. ಈ ಲೋಕಗಳನ್ನು ನಾನು ಸೃಜಿಸಬೇಕು ಎಂಬ ಇಚ್ಛೆ. **'ಆತ್ಮನ ಆಕಾಶಃ ಸಂಭೂತ'** (ತೈ.ಉ.೨-೧) ಇತ್ಯಾದಿ ಶ್ರುತಿ ವಚನಗಳು ಪಂಚಮಹಾಭೂತಗಳಿಂದ ಹಿಡಿದು **'ಅನ್ನಾತ್ ಪುರುಷಃ'** (ತೈ.ಉ.೨-೧-೧) ಎಂಬಂತೆ ಪ್ರಾಣಿಗಳ ಸೃಷ್ಟಿಯನ್ನು ಮಾಡಿ ಅವುಗಳಲ್ಲಿ ತಾನು ಪ್ರವೇಶಿಸಿದನು. ಈ ಪ್ರವೇಶವನ್ನು **''ಏತಯಾ ದ್ವಾರಾಪ್ರಾಪದ್ಯತ''** (ಐ.ಉ. ೩-೧೨) ಎಂಬ ವಚನವು ತಿಳಿಸುತ್ತದೆ. ಈಶ್ವರನು ಶಿರೋರಂಧ್ರದ ಮೂಲಕ ಪ್ರಾಣಿ ಶರೀರವನ್ನು ಜೀವರೂಪದಲ್ಲಿ ಪ್ರವೇಶಿಸಿದನು- ಎಂದರ್ಥ. ಇದಿಷ್ಟು ಈಕ್ಷಣಾದಿ ಪ್ರವೇಶಾಂತವಾದ ಸೃಷ್ಟಿ. ಅನಂತರ ಜಾಗ್ರದಾದಿ ಮೋಕ್ಷಪರ್ಯಂತವಾದ ಸೃಷ್ಟಿಯನ್ನು ಜೀವನು ಮಾಡಿಕೊಂಡನು. ಇದನ್ನು ಸಹ **''ತಸ್ಯ ತ್ರಯ ಆವಸಥಾಃ''** (ಐ.ಉ. ೩-೧೨) ಎಂದು ಶ್ರುತಿಯೇ ಹೇಳಿದೆ. ಜೀವನಿಗೆ ಜಾಗ್ರತ್, ಸ್ವಪ್ನ, ಸುಷುಪ್ತಿಗಳೆಂಬ ಮೂರು ವಾಸಸ್ಥಾನಗಳು. ಆಮೇಲೆ **''ಸ ಏತಮೇವ ಪುರುಷಂ ಬ್ರಹ್ಮ ತತಮಪಶ್ಯತ್''** (ಐ.ಉ. ೩-೧೨)- ಎಂದರೆ ಆ ಜೀವನು ಪುರುಷನಾದ ತನ್ನನ್ನೇ ಸರ್ವವ್ಯಾಪಿಯಾದ ಬ್ರಹ್ಮವೆಂಬುದನ್ನು ಅರಿತುಕೊಂಡನು - ಎಂಬ ವಾಕ್ಯವು ಮೋಕ್ಷಸ್ಥಿತಿಯನ್ನು ವರ್ಣಿಸಿದೆ. ಈ ಪ್ರಕಾರವಾಗಿ ಜಗತ್ತಿನಿಂದ ಹಿಡಿದು ಮೋಕ್ಷಪರ್ಯಂತವಾದ ಸಂಸಾರವು ಜೀವನಿಂದ ಕಲ್ಪಿತವೆಂಬುದು ಸ್ಪಷ್ಟವಾಗಿದೆ (೨೧೩). ಪರಬ್ರಹ್ಮದ ಸತ್ಯಸ್ವರೂಪವು ಅದ್ವಿತೀಯವೂ ಸಂಗರಹಿತವೂ ಆಗಿದೆಯೆಂಬ

ಪರಮಾರ್ಥವನ್ನರಿಯದ ಜನರು ಮಾಯಾಕಲ್ಪಿತರಾದ ಜೀವೇಶ್ವರರ ವಿಷಯದಲ್ಲಿ ನಾನಾ ಶಂಕೆಗಳನ್ನೆತ್ತಿ ಜಗಳವಾಡುತ್ತಾರೆ. ಅದೆಲ್ಲವೂ ವ್ಯರ್ಥವಾದ ಕೋಲಾಹಲ(೨೧೪). ನಾವಂತೂ ಸದಾ ತತ್ವನಿಷ್ಠರಾದ ಸಜ್ಜನರನ್ನು ನೋಡಿ, ಒಪ್ಪಿಗೆಯಿಂದ ಸಂತೋಷ ಪಡುತ್ತೇವೆ. ಜಗಳ ಮಾಡುವ ಇತರರನ್ನು ಕಂಡು ಮರುಕ ಪಡುತ್ತೇವೆ. ಭ್ರಾಂತರಾದ ಆ ಜನರೊಡನೆ ವಾದಕ್ಕೂ ಹೋಗುವುದಿಲ್ಲ. (೨೧೫). ಹುಲ್ಲುಪೂಜೆ ಮಾಡುವವರಿಂದ ಹಿಡಿದು ಪಾತಂಜಲಯೋಗಗಳವರೆಗೆ ಜನರು ಈಶ್ವರನ ವಿಷಯದಲ್ಲಿ ಭ್ರಾಂತಿಯನ್ನು ತಳೆದಿದ್ದಾರೆ. ಚಾರ್ವಾಕರಿಂದ ಹಿಡಿದು ಸಾಂಖ್ಯರವರೆಗೆ ಜೀವಾತ್ಮನ ವಿಷಯದಲ್ಲಿ ಭ್ರಾಂತರು (೨೧೬)

ಭ್ರಾಂತರನ್ನು ಉತ್ತಮ, ಮಧ್ಯಮ, ಕನಿಷ್ಠ - ಎಂದು ಮೂರು ವಿಧವಾಗಿ ವಿಂಗಡಿಸಬಹುದು.

೧. ಶಾಸ್ತ್ರಜ್ಞರಾದ ಪಂಡಿತರಾದರೂ ತಮ್ಮ ಮತದಲ್ಲಿ ಅಂಧಶ್ರದ್ಧೆಯನ್ನಿಟ್ಟು ಸತ್ಯಾನ್ವೇಷಣೆಗಳನ್ನು ಇಷ್ಟಪಡದವರು ಉತ್ತಮ ಭ್ರಾಂತರು.

೨. ಶಾಸ್ತ್ರಜ್ಞಾನವಿಲ್ಲದ ಅಂಧಶ್ರದ್ಧೆಯವರು ಮಧ್ಯಮರು.

೩. ಆತ್ಮವಿಚಾರದಲ್ಲಿ ಆಸ್ಥೆಯೇ ಇಲ್ಲದ ನಾಸ್ತಿಕರು ಕನಿಷ್ಠ ವರ್ಗದ ಭ್ರಾಂತರು.

ಅದ್ವಿತೀಯವಾದ ಬ್ರಹ್ಮತತ್ವವನ್ನರಿಯದೇ ಹೋದಾಗ, ಅವರೆಲ್ಲರೂ ಭ್ರಾಂತರೇ ಸರಿ. ಅವರಿಗೆ ಚಿತ್ತಶಾಂತಿ ಇರುವುದಿಲ್ಲ. ಅವರಿಗೆ ಮುಕ್ತಿ ಹೇಗೆ ದೊರಕೀತು? ಚಿತ್ತಶಾಂತಿಯೂ ತೃಪ್ತಿಯೂ ಇಲ್ಲದ ಮೇಲೆ ಈ ಲೋಕದಲ್ಲಿ ಅವರಿಗೆ ಸುಖವೂ ಇಲ್ಲ(೨೧೭) ಆದರೂ ಇವರಲ್ಲಿ ಉತ್ತಮ, ಮಧ್ಯಮ, ಕನಿಷ್ಠ ಎಂಬ ಭೇದಗಳುಂಟು. ಅದು ಲೋಕದೃಷ್ಟಿಯಿಂದ. ಮೂರು ಬಗೆಯವರೂ ಭ್ರಾಂತರೇ ಸರಿ. ಕನಸಿನಲ್ಲಿ ರಾಜ್ಯವು ಸಿಕ್ಕಿದರೇನು? ಭಿಕ್ಷೆ ಬೇಡಿದರೇನು? ಎರಡೂ ಒಂದೇ ! ಆದ್ದರಿಂದ ಮುಮುಕ್ಷುಗಳಾದವರು ಜೀವರಿಗಿಂತ ಈಶ್ವರನು ಭಿನ್ನನೇ? ಅಲ್ಲವೇ? ಎಂಬ ಶುಷ್ಕವಾದದಲ್ಲಿ ಮಗ್ನರಾಗಬಾರದು. ಬ್ರಹ್ಮತತ್ತ್ವದ ವಿಚಾರದಲ್ಲಿ ಮಾತ್ರ ಮಗ್ನರಾಗಿ ಅದರ ಸ್ವರೂಪವನ್ನರಿಯಲು ಪ್ರಯತ್ನಿಸಬೇಕು. ತಿಳಿಯಬೇಕು. (೨೧೮-೨೧೯). ಅದೇನೋ ಸರಿ. ಆದರೆ ಸಾಂಖ್ಯಾದಿ ದ್ವೈತಶಾಸ್ತ್ರಗಳನ್ನೋದಿದರೆ ಬಾಧೆಯೇನು? ಅವು ನಮ್ಮ ವೇದಾಂತಶಾಸ್ತ್ರಕ್ಕೆ ಪೂರ್ವಪಕ್ಷದಂತೆ ಇರುತ್ತವೆ. ಆ ಶಾಸ್ತ್ರದಲ್ಲಿರುವ ದೋಷಗಳು, ನಮ್ಮ ಸಿದ್ಧಾಂತವನ್ನು ದೃಢಗೊಳಿಸಲು ಕಾರಣಗಳಾಗುತ್ತವೆಯಲ್ಲವೆ?

ಆಗಲಿ; ಅವುಗಳಲ್ಲಿಯೂ ಮುಳುಗು. ಆದರೆ ಆ ವಾದಗಳಿಗೆ ವಶನಾಗಿ ಬಿಡಬೇಡ ಎಚ್ಚರವಿರಲಿ (೨೨೦). ಆದರೆ ಸಾಂಖ್ಯಶಾಸ್ತ್ರದಲ್ಲಿಯೂ, ಯೋಗಶಾಸ್ತ್ರದಲ್ಲಿಯೂ ಹೇಳಿದ ಜೀವೇಶ್ವರರು ಚಿದ್ರೂಪರೆಂದೇ ಆ ಶಾಸ್ತ್ರಗಳು ಅಂಗೀಕರಿಸಿವೆ. ಜೀವನು ನಿಃಸಂಗನೆಂದೂ ವಿಭುವೆಂದೂ ಹಾಗೆಯೇ ಈಶ್ವರನೂ ಆಗಿದ್ದಾನೆಂದೂ ಸಾಂಖ್ಯಯೋಗಗಳು ಹೇಳುತ್ತವೆ. ಅದು ಪೂರ್ವಪಕ್ಷ ಹೇಗಾದೀತು? ತತ್ತ್ವಮ್- ಪದಾರ್ಥಗಳು ಅವರ ಮತದಲ್ಲಿಯೂ ಸರಿಯಾಗಿಯೇ ಇವೆಯಲ್ಲವೆ? (೨೨೧). ನಿಜ; ವಸ್ತುಸ್ಥಿತಿ ಏನೆಂಬುದನ್ನು ಕೇಳು. ತತ್ತ್ವಮ್ ಪದಾರ್ಥಗಳಲ್ಲಿ ವಾಸ್ತವ ಭೇದವನ್ನೂ ಅವರು ಅಂಗೀಕರಿಸುತ್ತಾರೆ. ಈಶ್ವರ ಮತ್ತು ಜೀವರು ನಿಃಸಂಗರೂ ವಿಭುಗಳೂ ಚಿದ್ರೂಪರು- ಎಂಬುದನ್ನು ಒಪ್ಪುತ್ತಾರೆ. ಈ ಎರಡು ಅರ್ಥಗಳು ನಮಗೆ ಸಂಮತವಲ್ಲ. ತತ್ತ್ವಮ್ ಪದಾರ್ಥಗಳಲ್ಲಿ ವಾಸ್ತವ ಭೇದವನ್ನು ನಾವು ಒಪ್ಪುವುದಿಲ್ಲ. ವಾಸ್ತವ ಭೇದವು ನಮ್ಮ ಸಿದ್ಧಾಂತದಲ್ಲಿಲ್ಲ. 'ತತ್ತ್ವಮಸಿ' ಎಂಬ ವಾಕ್ಯದ ಅರ್ಥವನ್ನು ಹೇಳುವಾಗ ಜೀವೇಶ್ವರರು ಭಿನ್ನರೆಂಬ ಮೊದಲನೆಯ ಒಂದು ಕಕ್ಷೆಯನ್ನು ನಾವು ಅಂಗೀಕರಿಸಿರುವುದು ಪರಮಾರ್ಥದಲ್ಲಿ ಅದ್ವೈತವನ್ನು ಬೋಧಿಸುವುದಕ್ಕಾಗಿಯೇ ಸರಿ. ಲೋಕ ವ್ಯವಹಾರದಲ್ಲಿರುವ ಭೇದವನ್ನು ಕೇವಲ ಅನುವಾದಿಸಿದ್ದೇವೆ (೨೨೨). ಅನಾದಿ ಮಾಯೆಯಿಂದ ಭ್ರಾಂತರಾದ ಜನರು ಪರಮಾರ್ಥದಲ್ಲಿಯೂ ಜೀವೇಶ್ವರರು ಭಿನ್ನರೆಂದು ತಪ್ಪು ತಿಳಿವಳಿಕೆಯನ್ನು ಹೊಂದಿದ್ದಾರೆ. ಆ ಭ್ರಾಂತಿಯನ್ನು ನಿವಾರಿಸುವುದಕ್ಕಾಗಿ ತತ್ತ್ವಮ್ ಪದಾರ್ಥಗಳನ್ನು ಶೋಧಿಸಬೇಕಾಯಿತು. ಶೋಧನೆಗಾಗಿ ಮೊದಲು ಭ್ರಾಂತಿಯ ಅನುವಾದ. ಅನಂತರ ಶೋಧಿತವಾದ ಸಿದ್ಧಾಂತ (೨೨೩). ಈ ಪದಾರ್ಥ ಶೋಧನೆಗಾಗಿಯೇ ಮೊದಲು ಘಟಾಕಾಶ-ಮಹಾಕಾಶಗಳನ್ನೂ ಜಲಾಕಾಶ- ಮೇಘಾಕಾಶಗಳನ್ನು ಯೋಗ್ಯದೃಷ್ಟಾಂತಗಳನ್ನಾಗಿ ಉದಾಹರಿಸಿದ್ದೇವೆ. ಹೇಗೆಂದರೆ, ಜಲಾಕಾಶ-ಮೇಘಾಕಾಶಗಳು ಜಲ, ಮೇಘಗಳೆಂಬ ಉಪಾಧಿಗಳಿಂದ ಕೂಡಿದವು. ಅವು ಶುದ್ಧವಾದವುಗಳಲ್ಲ. ಘಟಾಕಾಶ-ಮಹಾಕಾಶಗಳು ಮಾತ್ರ ಪರಿಶುದ್ಧವಾದವು (ಘಟಾಕಾಶದಲ್ಲಿ ಘಟವು ಉಪಾಧಿಯಾದರೂ ಅದರಿಂದ ಅದರೊಳಗಿನ ಆಕಾಶವು ಕಲುಷಿತವಾಗಿಲ್ಲ. ಶುದ್ಧವಾಗಿಯೇ ಇದೆ. ಆದರ ಪರಿಮಾಣವು ಮಾತ್ರ ಪರಿಮಿತವಾಗಿದೆ. (೨೨೪-೨೨೫). ಹೀಗೆಯೇ ಆನಂದಮಯನಾದ ಈಶ್ವರನು ಮಾಯೆಯೆಂಬ ಉಪಾಧಿವಿಶಿಷ್ಟನೂ ವಿಜ್ಞಾನಮಯನಾದ ಜೀವನು ಬುದ್ಧಿಯೆಂಬ ಉಪಾಧಿವಿಶಿಷ್ಟನೂ ಆಗಿದ್ದಾರೆ.

ಇವರನ್ನು ಕ್ರಮವಾಗಿ ಜಲಾಕಾಶ, ಮೇಘಾಕಾಶಗಳಿಗೆ ಹೋಲಿಸಬಹುದು. ಈ ಜೀವೇಶ್ವರರಿಗೆ ಅಧಿಷ್ಠಾನಗಳಾದ ಕೂಟಸ್ಥ ಬ್ರಹ್ಮ- ಇವರು ಮಾತ್ರ ನಿರ್ಮಲರಾಗಿದ್ದಾರೆ. ಇವರು ಉಪಾಧಿವಶರಲ್ಲ (೨೨೬). ವೇದಾಂತದಲ್ಲಿ ಜೀವೇಶ್ವರರ ಸ್ವರೂಪನಿರ್ಣಯದ ಒಂದು ಕಕ್ಷೆಗೆ ಉಪಯುಕ್ತವಾದ್ದರಿಂದ ಸಾಂಖ್ಯಯೋಗಮತಗಳನ್ನೂ ಅಂಗೀಕರಿಸಬಹುದಲ್ಲವೆ ಇಲ್ಲ; ಉಪಯುಕ್ತ-ವಾಗುವುದರಿಂದ ಅವುಗಳಿಗೂ ನಾವು ಸಂಮತಿಯನ್ನು ನೀಡುವುದಾದರೆ, ದೇಹವು ಅನ್ನಮಯ ಕಕ್ಷೆಗೆ ಸೇರುವುದರಿಂದ ದೇಹವೂ ಆತ್ಮವೆಂದು ಒಪ್ಪಬೇಕಾದೀತು. ಒಂದು ಸಿದ್ಧಾಂತವನ್ನು ಸ್ಥಾಪಿಸಬೇಕಾದರೆ ಎಷ್ಟೋ ಹಂತಗಳನ್ನು ದಾಟಿಹೋಗಬೇಕಾಗುತ್ತದೆ. ಮೇಲೆ ಹತ್ತಲು ಸೋಪಾನಗಳಿರುವಂತೆ ಅವು ಆವಶ್ಯಕ. ಸೋಪಾನಗಳೇ ನಮಗೆ ಗಮ್ಯವಲ್ಲ. ಹಾಗೆಯೇ ಬೇರೆ ಬೇರೆ ಹಂತಗಳನ್ನೇ ನಾವು ಸಿದ್ಧಾಂತ ಕಕ್ಷೆಗೆ ಸೇರಿಸಲಾಗುವುದಿಲ್ಲ (೨೨೭). ಸಾಂಖ್ಯಯೋಗಗಳೂ ಒಂದು ಕಕ್ಷೆಯಲ್ಲಿ ಉಪಯುಕ್ತವಾದ ಮೇಲೆ ಆ ಮತಗಳು ವೇದಾಂತವಿರುದ್ಧಗಳೆಂದು ಏಕೆ ಹೇಳಬೇಕು? ಅವರು ಹೇಳುವುದರಲ್ಲಿ ಮೂರು ಅಂಶಗಳು ನಮಗೆ ಗ್ರಾಹ್ಯವಲ್ಲ. ಅನೇಕ ಆತ್ಮರಿದ್ದಾರೆ. ಜಗತ್ತು ಸತ್ಯವಾದದ್ದು ಇವುಗಳಿಗೆ ಅತಿರಿಕ್ತನಾದ ಈಶ್ವರನಿದ್ದಾನೆ - ಈ ಮೂರು ಅಂಶಗಳನ್ನು ಅವರು ತ್ಯಜಿಸಿದರೆ, ಆಗ ವೇದಾಂತವು ಆ ಎರಡು ಮತಗಳನ್ನು ಸ್ವೀಕರಿಸುತ್ತದೆ! (೨೨೮). ವೇದಾಂತಿಗಳಾದ ನೀವು ಆತ್ಮಜ್ಞಾನದಿಂದ ಮೋಕ್ಷವೆಂದು ಹೇಳುತ್ತೀರಲ್ಲ ವೆ? ಹಾಗೆಯೇ ಆತ್ಮನು ಅಸಂಗ, ವಿಭು, ಚೇತನ - ಎಂದು ಸಾಂಖ್ಯಯೋಗದವರೂ ಹೇಳುತ್ತಾರೆ. ಅವರ ಮತದಂತೆಯೇ ಆತ್ಮಜ್ಞಾನವಾದರೆ ಕೃತಾರ್ಥನಾಗಬಹುದು. ಮೋಕ್ಷಕ್ಕೆ ಅದ್ವೈತಜ್ಞಾನದ ಅವಶ್ಯಕತೆ ಏಕೆ? ಹಾಗೆ ಹೇಳುವುದಾದರೆ, ಸ್ರಕ್‌ಚಂದನಾದಿ ವಿಷಯ ಭೋಗವೂ ನಿತ್ಯ ಎಂದು ತಿಳಿದುಕೊಂಡರಾಯಿತು ! ವಿಷಯಭೋಗವೂ ನಿತ್ಯವಾಗಿ ಬಿಡುತ್ತದೆಯಾದ್ದರಿಂದ ಕೃತಾರ್ಥನಾಗಬಹುದು! ವಿಷಯಭೋಗದಲ್ಲಿ ವೈರಾಗ್ಯವೇಕೆ ಬೇಕು? (೨೨೯) ಅದೇನೋ ಹೇಳುವುದು ಸುಲಭ. ಸ್ರಕ್‌ಚಂದನಾದಿ ವಿಷಯವು ಯಾವ ರೀತಿಯಲ್ಲಿಯೂ ಹೇಗೆ ನಿತ್ಯವಾಗುವುದಿಲ್ಲವೋ ಹಾಗೆಯೇ ಇದು . ಸಾಂಖ್ಯಯೋಗಾದಿಗಳು ಹೇಳುವಂತೆ ಜಗತ್ತು, ಈಶ್ವರ- ಇವೆರಡು ಅನ್ಯೋನ್ಯ ಸಂಬಂಧವುಳ್ಳವುಗಳಾಗಿ ಗಟ್ಟಿಯಾಗಿ ನಿಂತಿರುವಾಗ ಈಶ್ವರನು ಅಸಂಗನೆಂದು ನಿಶ್ಚಿತವಾಗುವುದು ಹೇಗೆ? ಇದು ಅಸಂಭಾವಿತ (೨೩೦). ನೀವು ಹೇಗೆ ತಿಳಿದುಕೊಂಡರೂ ಪ್ರಕೃತಿಯು

ಸ್ವತಂತ್ರವಾದ್ದರಿಂದ ಹಿಂದಿನಂತೆ ಜೀವಾತ್ಮನ ಮೇಲೆ ಪರಿಣಾಮವನ್ನು ಬೀರಿ ವಿಷಯದೊಡನೆ ಸಂಗವನ್ನೇರ್ಪಡಿಸುತ್ತದೆ. ಜೀವ ಜಗತ್ತುಗಳಿಗೂ ಈಶ್ವರನಿಗೂ ಸಂಗವು ಅನಿವಾರ್ಯ. ಈಶ್ವರನು ಜೀವಜಗತ್ತುಗಳ ಶಾಸಕನಾಗುವುದರಿಂದ ಅಸಂಗನಾಗುವುದು ಹೇಗೆ? ಜೀವನಿಗೆ ಮೋಕ್ಷವಾಗುವುದು ಹೇಗೆ? ಇದು ಆಗತಕ್ಕದ್ದಲ್ಲ (೨೩೧). ಈಶ್ವರನಿಗೆ ಜಗತ್ಸಂಗವೆನ್ನುವುದು ವಿವೇಕಾಭಾವದಿಂದ ಎಂದರೆ ವಿವೇಚನೆ ಇಲ್ಲದ್ದರಿಂದ ಬಂದದ್ದಾಗಿದೆ. ಆತನು ಜಗತ್ತನ್ನು ನಿಯಮಿಸುತ್ತಾನೆನ್ನುವುದೂ ಅವಿವೇಕ ಜನ್ಯವೇ. ಈ ಅವಿವೇಕವು ಹೋದರೆ ಈಶ್ವರನು ಅಸಂಗನೆಂಬುದು ನಿಶ್ಚಿತವಾಗುತ್ತದೆಯಲ್ಲವೇ? ಭೇಷ್! ಈ ದುರ್ಬುದ್ಧಿಯ ಸಾಂಖ್ಯರು ಯತ್ನವಿಲ್ಲದೆ ನಮ್ಮ ಮಾಯಾವಾದವನ್ನು ಒಪ್ಪಿಕೊಂಡಂತಾಯಿತು! (೨೩೨).

ನೀವು ಹೇಳುವ ಅವಿವೇಕ ಎಂದರೇನು? ವಿವೇಕದ ಅಭಾವವೆ? ವಿವೇಕಕ್ಕಿಂತ ಭಿನ್ನವಾದ ಇನ್ನೊಂದು ವಸ್ತುವೆ? ಅಥವಾ ವಿವೇಕಕ್ಕೆ ವಿರೋಧಿಯಾದದ್ದೆ? ಮೊದಲನೆಯ ಪಕ್ಷವಲ್ಲ. ಅಭಾವವೆಂದರೆ ಏನೂ ಇಲ್ಲ, ಶೂನ್ಯ-ಎಂದಾಗುತ್ತದೆ. ಇದರಿಂದ ತಪ್ಪುತಿಳಿವಳಿಕೆಯೂ ಹುಟ್ಟುವುದಿಲ್ಲ. ಎರಡನೆಯ ಪಕ್ಷವೂ ಸರಿಯಲ್ಲ. ವಿವೇಕಕ್ಕಿಂತ ಭಿನ್ನವಾದ ಅನ್ಯವಸ್ತು ಘಟಪಟಾದಿಗಳಾಗುತ್ತವೆ. ಅವು ಸಂಗವನ್ನುಂಟು ಮಾಡಲಾರವು. ಇನ್ನು ಮೂರನೆಯ ಪಕ್ಷವಾದ ವಿವೇಕ ವಿರೋಧಿಯೆಂದೊಪ್ಪಿದರೆ, ಅದು ಮಾಯೆಯಲ್ಲದೆ ಬೇರೆಯಲ್ಲ. ಆದ್ದರಿಂದ ಅವಿವೇಕವೆಂದು ಹೇಳತಕ್ಕವರು ಮಾಯಾವಾದವನ್ನೊಪ್ಪಿದಂತೆಯೇ ಆಯಿತು. ಹೇಗಿದ್ದರೂ ಜೀವಾತ್ಮರು ಅನೇಕರಿದ್ದಾರೆಂದು ವೇದಾಂತಿಗಳು ಒಪ್ಪಲೇ ಬೇಕಾಗುತ್ತದೆ. ಇಲ್ಲದಿದ್ದರೆ ಬಂಧ ಮೋಕ್ಷವ್ಯವಸ್ಥೆ ಹೇಗೆ? ಒಬ್ಬನು ಸಂಸಾರದಲ್ಲಿ ಬದ್ಧನಾಗಿದ್ದಾಗ ಇನ್ನೊಬ್ಬನು ಮುಕ್ತನಾದನು ಎಂದು ಹೇಳುವುದು ಹೇಗೆ? ಒಬ್ಬನೇ ಆತ್ಮನಾದರೆ ಈ ವ್ಯವಸ್ಥೆಯೇ ಇಲ್ಲದೆ ಹೋದೀತು. ಹಾಗಲ್ಲ! ಮಾಯೆಯು ಈ ಬಂಧಮೋಕ್ಷವ್ಯವಸ್ಥೆಯನ್ನೂ ಸೊಗಸಾಗಿ ಮಾಡಿಕೊಡುತ್ತದೆ! (೨೩೩). ಯಾವುದು ಘಟಿಸತಕ್ಕದ್ದಲ್ಲವೋ ಅದನ್ನು ನಡೆಸಬಲ್ಲೆನು - ಎಂಬ ವಿರೋಧಸ್ವಭಾವದ ಮಾಯೆಯನ್ನು ನೀನು ಕಾಣೆಯಾ? ವಸ್ತುಸ್ಥಿತಿಯೇನೆಂದರೆ, ಪರಮಾರ್ಥವಾಗಿ ಬಂಧಮೋಕ್ಷಗಳಿರುವುದನ್ನೇ ಶ್ರುತಿಯು ಎಂದಿಗೂ ಸಹಿಸದು. ಬಂಧವೂ ಇಲ್ಲ, ಮೋಕ್ಷವೂ ಇಲ್ಲ ಎಂಬುದೇ ಶ್ರುತಿಯ ಸಿದ್ಧಾಂತವಾಗಿದೆ (೨೩೪). ಶ್ರುತಿಯು ಹೇಳುತ್ತದೆ. ''ಈ ಆತ್ಮನಿಗೆ ನಾಶವೂ ಇಲ್ಲ, ದೇಹ ಸಂಬಂಧವೆಂಬ ಉತ್ಪತ್ತಿಯೂ ಇಲ್ಲ, ಸುಖಗಳ ಅನುಭವವೆಂಬ ಬಂಧವೂ ಇಲ್ಲ,

ಶ್ರವಣಮನನಾದಿಗಳನ್ನು ಆಚರಿಸುವ ಸಾಧಕನೂ ಇಲ್ಲ, ಸಾಧನ ಚತುಷ್ಟಯ ಸಂಪನ್ನನೆನಿಸುವ ಮುಮುಕ್ಷುವೂ ಇಲ್ಲ. ಅವಿದ್ಯೆಯನ್ನು ಹೋಗಲಾಡಿಸಿಕೊಂಡ ಮುಕ್ತನೆಂಬವನೂ ಇಲ್ಲ ಇದೇ ಪರಮಾರ್ಥವಾದ ಸತ್ಯ''(೨೩೫). ಮಾಯೆಯೆಂಬ ಕಾಮಧೇನುವಿಗೆ ಜೀವ ಈಶ್ವರ ಎಂಬ ಎರಡು ಕರುಗಳಿವೆ ! ಇವು ಯಥೇಷ್ಟವಾಗಿ ದ್ವೈತವೆಂಬ ಹಾಲನ್ನು ಕುಡಿಯುತ್ತಿರಲಿ ! ಸತ್ಯವು ಮಾತ್ರ ಅದ್ವೈತವೇ ಆಗಿರುತ್ತದೆ (೨೩೬). ಜೀವೇಶ್ವರರೇನೋ ಉಪಾಧಿ ವಿಶಿಷ್ಟರಾದ್ದರಿಂದ ಮಾಯಾಕಲ್ಪಿತರೆನ್ನಬಹುದು. ಕೂಟಸ್ಥ ಬ್ರಹ್ಮ- ಎಂಬವು ಮಾತ್ರ ಶುದ್ಧವಾದವುಗಳೆಂದು ಹಿಂದೆ ತಿಳಿಸಿದ್ದೀರಿ. ಆಗ ಅದ್ವೈತವು ಹೇಗೆ ಸಿದ್ಧಿಸುತ್ತದೆ? ಹೇಗೆಂದರೆ, ಕೂಟಸ್ಥ ,ಬ್ರಹ್ಮ ಎಂದು ವಿಭಾಗವು ಹೆಸರಿಗೆ ಮಾತ್ರ. ಇರತಕ್ಕದ್ದು ಒಂದೇ ವಸ್ತು ಇದಕ್ಕೆ ದೃಷ್ಟಾಂತವಾಗಿ ಘಟಾಕಾಶ, ಮಹಾಕಾಶಗಳನ್ನು ಹೇಳಿದ್ದೇವೆ. ಅಲ್ಲಿಯೂ ಸಹ ವ್ಯವಹಾರಕ್ಕಾಗಿ ಎರಡು ಹೆಸರುಗಳೇ ಹೊರತು ಅವುಗಳಲ್ಲಿ ಭೇದವೆಲ್ಲಿದೆ? ಅವು ಯಾವಾಗಲೂ ಬೇರೆ ಬೇರೆ ಆಗುವುದೇ ಇಲ್ಲ. ಒಂದೇ ವಸ್ತುವಿಗೆ ನಿಮಿತ್ತಭೇದದಿಂದ ಎರಡು ಹೆಸರುಗಳನ್ನಿಟ್ಟು ಕೊಂಡಿದ್ದೇವೆ. ನೇಯ್ಗೆಯವನನ್ನು ಅವನ ತಂದೆ ಮಗನೆಂದು ಕರೆಯುತ್ತಾನೆ. ಅದರಿಂದ ನೇಯ್ಗೆಯವನೂ ಮಗನೂ ಬೇರೆ ಬೇರೆ ವ್ಯಕ್ತಿಗಳಾಗುವುದಿಲ್ಲ (೨೩೭). ಸೃಷ್ಟಿಯಾಗುವುದಕ್ಕೆ ಪೂರ್ವದಲ್ಲಿ ಯಾವ ಅದ್ವೈತ ಸ್ಥಿತಿ ಇದ್ದಿತೆಂದು ಶ್ರುತಿಯು ಹೇಳಿದೆಯೋ ಅದೇ ಸ್ಥಿತಿ ಈಗಲೂ ಇದೆ. ಮುಂದೆಯೂ ಹೀಗೆಯೇ ಇರುವುದು ಮುಕ್ತಿಯಾದಾಗಲೂ ಹೀಗೆಯೇ ಇರುತ್ತದೆ. ಮಾಯೆಯು ವ್ಯರ್ಥವಾಗಿ ಜನರನ್ನು ಮೋಹಗೊಳಿಸುತ್ತಿದೆ.''**ಸದೇವ ಸೌಮ್ಯೇದಮಗ್ರ ಆಸೀತ್, ಏಕಮೇವಾದ್ವಿತೀಯಂ ಬ್ರಹ್ಮ**'' (ಛಾಂ.ಉ.೬-೨-೧) ಎಂದು ಶ್ರುತಿಯು ಹೇಳಿದೆಯಲ್ಲವೆ? ಅದ್ವಿತೀಯ ಬ್ರಹ್ಮದಲ್ಲಿ ಯಾವ ಬದಲಾವಣೆಯೂ ಆಗುವುದಿಲ್ಲ. ತತ್ವಜ್ಞಾನರಹಿತರಾದ ಜನರಿಗೆ ನಾನಾ ವಿಧದ ಸೃಷ್ಟಿ ಪ್ರಳಯಗಳಾದಂತೆ ಕಾಣಿಸುತ್ತದೆ (೨೩೮). ನೀವು ಹೇಳುವ ಜ್ಞಾನಿಗಳು ಹೀಗೆಯೇ ಈ ಪ್ರಪಂಚವು ಮಾಯಾಮಯವೆಂದೂ ಹೇಳುತ್ತಾರೆ. ಪರಮಾರ್ಥವು ಅದ್ವೈತವೆಂದೂ ಹೇಳುತ್ತಾರೆ. ಅವರೇ ಸಂಸಾರದಲ್ಲಿ ತೊಳಲುತ್ತಿರುವುದು ಕಣ್ಣಿಗೆ ಕಾಣುತ್ತದೆ. ಹೀಗಿರುವಾಗ ತತ್ತ್ವಜ್ಞಾನದಿಂದ ಯಾವ ಪ್ರಯೋಜನವಾಯಿತು? ಅವಿದ್ಯೆ ಅವರನ್ನೂ ಕಾಡಿಸುತ್ತಲೇ ಇರುವುದಲ್ಲವೆ? ಹಾಗಲ್ಲ. ಅವರು ತತ್ತ್ವಜ್ಞಾನಿಗಳೇ ಹೌದಾಗಿದ್ದರೆ, ಪ್ರಾರಬ್ಧಕರ್ಮವಶದಿಂದ ಅವರು ವ್ಯವಹಾರವನ್ನು ನಡೆಸುತ್ತಿದ್ದಾರೆಯೇ ಹೊರತು ವ್ಯವಹಾರದಲ್ಲಿ ಯಾವ

ಅಭಿನಿವೇಶವನ್ನೂ ಇಟ್ಟಿರುವುದಿಲ್ಲ, ಅಭಿನಿವೇಶವಿಲ್ಲದ ಮೇಲೆ ಅವರಿಗೆ ಸಂಸಾರವಿಲ್ಲವೆಂದೇ ತಿಳಿಯಬೇಕು. ಅವರಿಗೆ ಯಾವ ಭ್ರಾಂತಿಯೂ ಇರುವುದಿಲ್ಲ (೨೩೯). ಅಜ್ಞಾನಿಗಳ ನಿಶ್ಚಯವು ಹೀಗಿರುತ್ತದೆ. ''ಐಹಿಕವಾದ ಪುತ್ರಮಿತ್ರಕಳತ್ರಾದಿ ಸರ್ವ ಸಂಸಾರವೂ ವಾಸ್ತವವಾಗಿ ಇರತಕ್ಕದ್ದು. ಅಂತೆಯೇ ಸ್ವರ್ಗವೇ ಮೊದಲಾದ ಆಮುಷ್ಮಿಕಸುಖಾದಿಗಳೂ ಇದ್ದೇ ಇರುತ್ತವೆ. ಅದ್ವೈತವು ನಮಗೆ ಪ್ರತೀತವಾಗುವುದಿಲ್ಲ. ಆದ್ದರಿಂದ ಅದ್ವೈತವೆಂಬುದೇ ಇಲ್ಲ'' ಇದು ಅಜ್ಞಾನಿಗಳ ತಿಳಿವಳಿಕೆ (೨೪೦). ಜ್ಞಾನಿಗಳ ನಿಶ್ಚಯವಾದರೋ ಇದಕ್ಕೆ ವಿರುದ್ಧವಾಗಿರುವುದು ಸ್ಪಷ್ಟವಾಗಿದೆ. ಪಾರಮಾರ್ಥಿಕವಾದ ಅದ್ವೈತವೇ ಸತ್ಯವೆಂದೂ ಈ ಸಂಸಾರವೆಲ್ಲವೂ ಭ್ರಾಂತಿಯಿಂದ ಆದದ್ದು- ಎಂದೂ ಅವರ ನಿಶ್ಚಯವಾಗಿರುತ್ತದೆ. ಹೀಗೆ ಆಯಾ ಜನರು ನಾನು ಬದ್ಧನೆಂದೂ ನಾನು ಮುಕ್ತನೆಂದೂ ತಿಳಿದಿರುತ್ತಾರೆ (೨೪೧). ಆದರೆ ಅದ್ವೈತವು ಅನುಭವಕ್ಕೆ ಬರುವುದಿಲ್ಲ. ಅದು ಪ್ರತ್ಯಕ್ಷವಾಗಿ ತಿಳಿಯುವುದಿಲ್ಲ - ಎಂದರೆ, ಹಾಗೆ ಹೇಳಲಾಗುವುದಿಲ್ಲ. ಅದು ಚಿದ್ರೂಪದಲ್ಲಿ ಭಾಸವಾಗುತ್ತದೆ. ಅನುಭವಕ್ಕೆ ಬರುತ್ತದೆ. ಘಟವು ಸ್ಫುರಿಸುತ್ತದೆ, ಮರವು ತೋರುತ್ತಿದೆ - ಎಂದು ಅನುಭವವಾಗುವುದಷ್ಟೆ ಆ ಸ್ಫುರಣ, ಆ ತೋರುವಿಕೆ - ಎಂಬುದೇ ಚಿತ್. ಇದು ಪ್ರತಿಯೊಂದು ಪದಾರ್ಥದೊಡನೆ ಪ್ರತಿಯೊಬ್ಬನಿಗೂ ಪ್ರತೀತವಾಗುತ್ತದೆ. ಆದರೆ ಅದ್ವೈತದ ಏಕಾಂಶವು ತಿಳಿಯುತ್ತದೆ ಎನ್ನಬಹುದೇ ಹೊರತು ಸಂಪೂರ್ಣವಾಗಿ ತಿಳಿಯುವುದಿಲ್ಲ - ಎನ್ನುವುದೂ ತಪ್ಪು. ಹಾಗೆ ನೋಡಿದರೆ ದ್ವೈತವೇನು ಸಂಪೂರ್ಣವಾಗಿ ಅನುಭವಕ್ಕೆ ಗೋಚರ ವಾಗುತ್ತದೆಯೆ?(೨೪೨). ಹೇಗೆಂದರೆ, ಹಸುವನ್ನು ನೋಡಿ ಅದು ಹಸು, ಒಂದು ಮರವನ್ನು ನೋಡಿ ಅದು ಮರ - ಎಂದು ನಿಶ್ಚಯಿಸುತ್ತೀರಿ. ಹಸುವಿನ ಮುಖವನ್ನೋ ಒಂದು ಪಾರ್ಶ್ವವನ್ನೋ ನೋಡಿರುತ್ತೀರಿ. ಪೂರ್ತಿಯಾಗಿ ಅದರ ಸರ್ವಾಂಗಗಳನ್ನೂ ನೋಡಿರುವುದಿಲ್ಲ. ಮರದ ಒಂದಂಶವನ್ನು ಮಾತ್ರ ನೋಡಿ ಅದು ಮರ ಎಂದು ನಿಶ್ಚಯಿಸುತ್ತೀರಿ. ಮರದ ಎಲ್ಲ ಕೊಂಬೆಗಳನ್ನೂ ಎಲೆಗಳನ್ನೂ ನೋಡಿರುತ್ತೀರಾ? ಆದ್ದರಿಂದ ದಿಙ್ಮಾತ್ರವಾಗಿ ಏಕದೇಶದ ಅನುಭವವು ಅದ್ವೈತ, ದ್ವೈತಗಳೆರಡಕ್ಕೂ ಸಮಾನವೇ. ಏಕಾಂಶವನ್ನು ನೋಡಿ ದ್ವೈತವು ಸಿದ್ಧಿಸುತ್ತದೆ ಎಂದು ಹೇಳತಕ್ಕ ನಿಮಗೆ ಅದ್ವೈತವೂ ಹಾಗೆಯೇ ಸಿದ್ಧಿಸುತ್ತದೆ ಎನ್ನಲಡ್ಡಿಯೇನು? (೨೪೩). ಮತ್ತೆ ಪೂರ್ವಪಕ್ಷಿಯ ಶಂಕೆ : ದ್ವೈತರಹಿತವಾದದ್ದು ಅದ್ವೈತವೆನಿಸುತ್ತದೆ. ದ್ವೈತಜ್ಞಾನಕ್ಕೆ ವಿರೋಧಿಯಾದದ್ದು

ಅದ್ವೈತಜ್ಞಾನ. ಆದ್ದರಿಂದ ದ್ವೈತಜ್ಞಾನವಿರುವಾಗ ಅದ್ವೈತಜ್ಞಾನ ಹೇಗೆ ಬರುತ್ತದೆ? ಅದ್ವೈತಿಗಳ ಮತದಲ್ಲಿ ಸ್ಫುರಣ, ತೋರುವಿಕೆ - ಎಂಬ ಚಿದಂಶವು ತೋರುತ್ತದೆ ಎನ್ನುತ್ತೀರಲ್ಲ, ಅದು ಜ್ಞಾನರೂಪವಾದ್ದರಿಂದ ಉಭಯತ್ರ ಸಮಾನವಾಗಿದೆ. ದ್ವೈತವು ಸ್ಫುರಿಸುತ್ತದೆ, ಘಟಪಟಗಳು ತೋರುತ್ತವೆ ಎಂಬುದೂ ಅನುಭವಗೋಚರವೇ. ಆದ್ದರಿಂದ ಚಿದ್ಭಾನವು ದ್ವೈತಕ್ಕೆ ವಿರೋಧಿಯಲ್ಲ. ಆದ್ದರಿಂದ ಉಭಯ ಪಕ್ಷಗಳೂ ಸಮಾನವೆಂದು ಹೇಳಲಾಗುವುದಿಲ್ಲ(೨೪೪). ಈಗ ಸಿದ್ಧಾಂತಿಯ ಉತ್ತರ: ಹಾಗಾದರೆ ಕೇಳು: **'ಮಾಯೀ ಸೃಜತೇ ವಿಶ್ವಮೇತತ್'** ಇತ್ಯಾದಿ ಶ್ರುತಿಗಳಿಂದ ಅಸತ್ತಾದ ಈ ವಿಶ್ವವೆಲ್ಲವೂ ಮಾಯಾಮಯವೆಂದು ಗೊತ್ತಾಗುತ್ತದೆ. **'ಏಕಮೇವಾದ್ವಿತೀಯಂ ಬ್ರಹ್ಮ'** ಇತ್ಯಾದಿ ಶ್ರುತಿ ವಚನಗಳಿಂದ ಒಂದೇ ಅದ್ವಿತೀಯವಾದ ಬ್ರಹ್ಮವಿದೆಯೆಂದೂ ಗೊತ್ತಾಗುತ್ತದೆ. ಹೀಗಿರುವಾಗ ಸಕಲ ಜಗತ್ತೂ ಮಾಯೆಯೆಂದೂ ಅಸತ್ ಎಂದೂ ನಿಶ್ಚಯಿಸಿಕೊಂಡರೆ, ಪರಿಶೇಷವಾಗಿ ಅದ್ವೈತ ಒಂದೇ ವಾಸ್ತವವೆಂದು ಸ್ಪಷ್ಟವಾಗುತ್ತದೆ (೨೪೫). ಪರಿಶೇಷವೆಂದರೆ ಹೀಗೆ - **''ಪ್ರಸಕ್ತ ಪ್ರತಿಷೇಧೇಽನ್ಯತ್ರ ಅಪ್ರಸಂಗಾತ್ ಶಿಷ್ಯಮಾಣೇ ಸಂಪ್ರತ್ಯಯಃ ಪರಿಶೇಷಃ''** ಪ್ರಸಕ್ತವಾದದ್ದನ್ನು ನಿಷೇಧಿಸುತ್ತ ಹೋದಾಗ ಯಾವುದನ್ನು ನಿಷೇಧಿಸುವುದಕ್ಕೆ ಆಗದೆ ಉಳಿದುಬಿಡುತ್ತದೆಯೋ ಅದೇ ಸತ್ಯವೆಂದು ನಿಶ್ಚಯಿಸುವುದು ಪರಿಶೇಷ. ಪ್ರಕೃತದಲ್ಲಿ ಘಟಾದಿವಸ್ತುಗಳ ಮೂಲ ಯಾವುದು? ಎಂದು ಹುಡುಕುತ್ತಾ ಇದಲ್ಲ ಇದಲ್ಲ - ಎಂದು ಅನ್ವೇಷಿಸುತ್ತ ಹೋದಾಗ ಕಡೆಯಲ್ಲಿ ಅದ್ವೈತವಾದ ಬ್ರಹ್ಮತತ್ತ್ವವು ಉಳಿದುಕೊಳ್ಳುತ್ತದೆ. ಅದಕ್ಕೆ ಮೂಲವಿಲ್ಲವಾದ್ದರಿಂದ ಅದನ್ನು ನಿಷೇಧಿಸಲಾಗುವುದಿಲ್ಲ. ಆ ಅದ್ವೈತವೇ ಸತ್ಯವೆಂದು ನಿಶ್ಚಯಿಸುವುದು ಪರಿಶೇಷ (೨೪೬). ಮತ್ತೆ ಪೂರ್ವಪಕ್ಷಿಯ ಶಂಕೆ: ಹೀಗೆ ಪರಿಶೇಷದಿಂದ ಅದ್ವೈತವನ್ನು ನಿಶ್ಚಯಿಸಿಕೊಂಡರೂ ಮತ್ತೆ ಈ ದ್ವೈತವು ತೋರಿಬಿಡುತ್ತದೆಯಲ್ಲ! ದ್ವೈತವು ಸತ್ಯವೆಂದೇ ಭಾಸವಾಗಿ ಬಿಡುತ್ತದೆ? ಇದಕ್ಕೆ ಪರಿಹಾರವೇನು? ಇಷ್ಟೇ ಪರಿಹಾರ. ದ್ವೈತವೂ ಪೂರ್ವಸಂಸ್ಕಾರದ ಬಲದಿಂದ ಬಂದದ್ದು. ಆದ್ದರಿಂದ ಮತ್ತೆ ಮತ್ತೆ ಪರಿಶೇಷದೃಷ್ಟಿಯಿಂದ ಸತ್ಯವೇನೆಂಬುದನ್ನು ಪರಿಶೀಲಿಸುತ್ತಲೇ ಇರಬೇಕು. ಬ್ರಹ್ಮಸೂತ್ರಕಾರರು ಶ್ರವಣಮನನಾದಿಗಳನ್ನು ಪುನಃ ಪುನಃ ಮಾಡುತ್ತಲೇ ಇರಬೇಕೆಂದು **''ಆವೃತ್ತಿರಸಕೃದುಪದೇಶಾತ್''** ಎಂಬ ಸೂತ್ರದಿಂದ ಬೋಧಿಸಿದ್ದಾರೆ. ಮತ್ತೆ ಮತ್ತೆ ಚಿಂತನೆ ಮಾಡಲು ನಿನಗೆ

ಕಷ್ಟವೇನು? ಹೇಳು (೨೪೭).

"ದ್ವೈತವು ಮಿಥ್ಯೆ, ದ್ವೈತವು ಮಿಥ್ಯೆ- ಎಂದು ಎಷ್ಟು ಕಾಲದವರೆಗೆ ವಿಚಾರ ಮಾಡುತ್ತಿರಬೇಕು? ಇದು ಕಷ್ಟದ ವಿಚಾರ" ಎಂದು ಹೇಳಿದರೆ ಅದಕ್ಕೆ ಉತ್ತರ ಇದು. "ಈ ಕಷ್ಟ ಬರುವುದು ದ್ವೈತದಲ್ಲಿ, ಎಷ್ಟು ಕಾಲದವರೆಗೆ ಅದರಲ್ಲಿ ಕೊಳೆಯುತ್ತಿದ್ದರೂ ಫಲವೇ ಇಲ್ಲದೆ ಹೋಗುತ್ತದೆ. ಅದ್ವೈತದಲ್ಲಿ ಹಾಗಲ್ಲ. "ತತ್ರಾಪರೋಕ್ಷವಿದ್ಯಾಪ್ತೌ ವಿಚಾರೋಽಯಂ ಸಮಾಪ್ಯತೇ" ಎಂದು ಜ್ಞಾನಿಗಳು ಹೇಳಿದ್ದಾರೆ. ಪ್ರತ್ಯಕ್ಷವಾಗಿ ಅದ್ವೈತಜ್ಞಾನವು ಪ್ರಾಪ್ತವಾದೊಡನೆ ಈ ಎಲ್ಲ ವಿಚಾರಗಳೂ ಮುಗಿದು ಹೋಗುತ್ತವೆ. ದ್ವೈತದಲ್ಲಿ ಮುಗಿಯುವ ಪ್ರಶ್ನೆಯೇ ಇಲ್ಲ! (೨೪೮) ಒಳ್ಳೆಯದು ; ಈ ಅದ್ವೈತಜ್ಞಾನವು ಪ್ರಾಪ್ತವಾದರೂ ಹಸಿವು ಬಾಯಾರಿಕೆಗಳ ಕಾಟ ಆಗಲೂ ನನ್ನಲ್ಲಿ ಇದ್ದೇ ಇರುವುದಲ್ಲ! - ಎಂದರೆ ಹೌದು; ನನ್ನಲ್ಲಿ ಎಂದರೆ ಆತ್ಮನಾದ ನನ್ನಲ್ಲಿ ಎಂದು ಅರ್ಥವಲ್ಲ. 'ನಾನು' ಎಂದು ಭ್ರಮಿಸಿರುವ ಅಹಂಕಾರದಲ್ಲಿ - ಎಂದು ಅರ್ಥ. ಅಲ್ಲಿ ಹಸಿವು ಬಾಯಾರಿಕೆಗಳಿಲ್ಲವೆಂದು ಯಾವನು ಹೇಳುತ್ತಾನೆ? (೨೪೯). ತಾದಾತ್ಮ್ಯಾಧ್ಯಾಸದಿಂದ ಚಿದ್ರೂಪದಲ್ಲಿಯೇ ಹಸಿವು ಮೊದಲಾದವು ತೋರಿಬಿಡುತ್ತವಲ್ಲ! - ಎಂದರೆ, ಈ ಅಧ್ಯಾಸದ ನಿವೃತ್ತಿಗಾಗಿ ಚಿಂತನೆ ಮಾಡಬೇಕೆಂದಲ್ಲವೆ ನಾವು ಹೇಳುತ್ತಿರುವುದು? ಅನರ್ಥಕಾರಿಯಾದ ಈ ಭ್ರಮೆಯು ಮತ್ತೆ ಬಾರದಂತೆ ವಿಚಾರ ಮಾಡುತ್ತಲೇ ಹೋಗಬೇಕು! ಆದ್ದರಿಂದ ಇನ್ನೂ ವಿಚಾರ ಮಾಡುತ್ತಿರು (೨೫೦). ಪೂರ್ವವಾಸನೆಯು ದೃಢವಾಗಿ ನಿಂತು ಬಿಟ್ಟಿರುತ್ತದೆ! ಎಷ್ಟು ತಳ್ಳಿದರೂ ಈ ಅಧ್ಯಾಸವು ಬಂದು ಮುತ್ತಿಕೊಳ್ಳುತ್ತದೆ ! - ಎಂದರೆ ನಿಜ; ವಿಚಾರಮಾಡುತ್ತಲೇ ಹೋಗಿ ಆ ವಾಸನೆಯನ್ನು ದೃಢವಾಗಿ ತಳ್ಳಿಬಿಡಬೇಕು !(೨೫೧). ವಿಚಾರಮಾಡಿದಾಗ ದ್ವೈತವು ಮಿಥ್ಯೆಯೆನ್ನುವುದು ಯುಕ್ತಿಯಿಂದ ಸಿದ್ಧವಾದೀತೇ ಹೊರತು, ಅನುಭವದಿಂದಲ್ಲ. ಅನುಭವದಲ್ಲಿ ದ್ವೈತವೇ ಸತ್ಯವಾಗಿ ತೋರುತ್ತದೆ ಎನ್ನುವುದೂ ಸರಿಯಲ್ಲ. ಏಕೆಂದರೆ, ದ್ವೈತಮಯವಾದ ಈ ಪ್ರಪಂಚದ ರಚನೆ ಹೇಗಾಗಿದೆಯೆಂಬುದು ಊಹೆಗೂ ನಿಲುಕುವುದಿಲ್ಲ. ಊಹೆಗೂ ನಿಲುಕದ ಅದ್ಭುತವನ್ನು ರಚಿಸತಕ್ಕವರು ಯಾರು? ಅಚಿಂತ್ಯ ರಚನೆಯಾದದ್ದು ಮಿಥ್ಯೆ. ಆದ್ದರಿಂದ ಇದು ಮಾಯಾವಿಜೃಂಭಿತ. ಮಾಯಾವಿಜೃಂಭಿತವೆಂದರೆ ಪರಮಾರ್ಥದಲ್ಲಿ ಮಿಥ್ಯೆಯೇ ಆಗಿರುತ್ತದೆ. ಇದಕ್ಕೆ ತಾನೇ ಸಾಕ್ಷಿಯಾಗಿರುತ್ತಾನೆ. ತಾನೇ ಸಾಕ್ಷಿಯಾದ್ದರಿಂದ ತನ್ನ ಅನುಭವಕ್ಕೆ ಬಂದೇ ಇರುತ್ತದೆ (೨೫೨).

ಅಚಿಂತ್ಯರಚನೆಯಾದದ್ದು ಮಿಥ್ಯೆಯೆಂದು ಹೇಳುವುದಾದರೆ ಚಿದಾತ್ಮನೂ ಅಚಿಂತ್ಯರಚನೆಯಾಗಿದ್ದಾನಲ್ಲವೆ? ಹೌದು; ಚಿದಾತ್ಮನೂ ಅಚಿಂತ್ಯರಚನೆಯುಳ್ಳವನೇ. ಆದರೆ ಮಿಥ್ಯೆಯಲ್ಲ. ಏಕೆಂದರೆ, **'ಪ್ರಾಗಭಾವಯುಕ್ತತ್ವೇಸತಿ ಅಚಿಂತ್ಯರಚನತ್ವಂ ಮಿಥ್ಯಾತ್ವಂ'** ಎಂದು ಮಿಥ್ಯೆಯ ಲಕ್ಷಣ. ಪ್ರಾಗಭಾವವು ಯಾವುದಕ್ಕೆ ಇದ್ದು ಅನಂತರ ಯಾವುದರ ರಚನೆಯು ಅಚಿಂತ್ಯವಾಗಿದೆಯೋ ಅದು ಮಿಥ್ಯೆಯೆಂದರ್ಥ. ಎಂದರೆ ಮೊದಲು ಇಲ್ಲದೆ ಅನಂತರ ಹುಟ್ಟಿ ಯಾವುದು ಅಚಿಂತ್ಯ ರಚನೆಯಾಗಿದೆಯೋ ಅದು ಮಿಥ್ಯೆ. ಚಿದಾತ್ಮನು ನಿತ್ಯನಾದ್ದರಿಂದ ಅವನಿಗೆ ಪ್ರಾಗಭಾವವೇ ಇಲ್ಲ. ಅವನ ರಚನೆಯೇ ಇಲ್ಲವಾದ್ದರಿಂದ ಅವನು ಅಚಿಂತ್ಯರಚನೆಯೇ ಆಗಿದ್ದಾನೆಂದು ನಾವು ಹೇಳುತ್ತೇವೆ. ಅವನು ಸುಚಿಂತ್ಯರಚನೆಯವನೆಂದು ನಾವು ಹೇಳುವುದೇ ಇಲ್ಲ! (೨೫೩). ಚಿದ್ವಸ್ತುವಿನ ಪ್ರಾಗಭಾವವು ಎಂದರೆ ಅದು ಇಲ್ಲ ಎನ್ನುವುದು ಯಾರ ಅನುಭವಕ್ಕೂ ಬಂದಿಲ್ಲ. ಬರುವುದು ಸಾಧ್ಯವಿಲ್ಲ. ಆದ್ದರಿಂದ ಅದು ನಿತ್ಯವಾದದ್ದು. ದ್ವೈತದ ಪ್ರಾಗಭಾವವಾದರೋ ಚೈತನ್ಯಕ್ಕೆ ಗೋಚರಿಸುತ್ತದೆ. ಚಿದ್ರೂಪನಾದ ಬ್ರಹ್ಮಜ್ಞಾನಿಯ ಅನುಭವಕ್ಕೆ ಬರುತ್ತದೆ. ಆದ್ದರಿಂದ ದ್ವೈತವು ನಿತ್ಯವಲ್ಲ. ಬ್ರಹ್ಮಜ್ಞಾನಿಗೆ ಮಾತ್ರವಲ್ಲ, ನಮ್ಮೆಲ್ಲರ ಅನುಭವಕ್ಕೂ ಬರುತ್ತದೆ. ಸರ್ವರಿಗೂ ಸುಷುಪ್ತಿಯಲ್ಲಿ ದ್ವೈತವೆಲ್ಲಿ ತೋರುತ್ತದೆ? ಆಗ ಆತ್ಮನು ಸಾಕ್ಷಿಯಾಗಿದ್ದು ದ್ವೈತಾಭಾವವನ್ನು ಕಾಣುತ್ತಾನೆ. ಆದ್ದರಿಂದಲೇ ಶ್ರುತಿಯು **''ತಮಸಃ ಸಾಕ್ಷೀ ಸರ್ವಸ್ಯ ಸಾಕ್ಷೀ''** ಎನ್ನುತ್ತದೆ. ಸಾಕ್ಷಿರೂಪನಾಗಿ ಚಿತ್ ಇರುವಾಗ ಚಿತ್ತಿನ ಅಭಾವವನ್ನು ಹೇಳಲಾಗುವುದೇ ಇಲ್ಲ. ಜಡವಸ್ತು ಚಿತ್ತಿನ ಅಭಾವವನ್ನು ಎಂದಿಗೂ ತಿಳಿಯಲಾರದು (೨೫೪). ಈಗ ದ್ವೈತದ ಪ್ರಾಗಭಾವವು ಸಿದ್ಧವಾಯಿತು. ಅದು ಘಟಪಟಾದಿಗಳಂತೆ ರಚಿತವಾಗುತ್ತದೆ ಎಂದೂ ಸಿದ್ಧವಾಗುತ್ತದೆ. ಇದರ ರಚನೆ ಹೇಗೆ? ರಚಿಸಲು ಬೇಕಾದ ಸಾಮಗ್ರಿ ಯಾವುದು? ಮನುಷ್ಯನ ಊಹೆಗೂ ನಿಲುಕದ ಈ ಪ್ರಪಂಚದ ರಚನೆ ಅಚಿಂತ್ಯವೆಂದು ಒಪ್ಪಿಕೊಳ್ಳಬೇಕು. ಆದ್ದರಿಂದಲೇ ಇದು ಇಂದ್ರಜಾಲದಂತೆ ಮಿಥ್ಯೆ ಎಂದೂ ಸಿದ್ಧವಾಗುತ್ತದೆ (೨೫೫). ಏವಂಚ ಚಿತ್ ಎಂಬುದು ಸ್ವಯಂಪ್ರಕಾಶವೆಂದೂ ನಿತ್ಯವೆಂದೂ ಪರೋಕ್ಷವಲ್ಲವೆಂಬುದೂ ಈ ವಿವೇಚನೆಯಿಂದ ಸಿದ್ಧವಾಯಿತು. ಚಿತ್ ಅಲ್ಲದ ಜಡವಾದ ದ್ವೈತವು ಮಿಥ್ಯೆಯೆಂಬುದನ್ನು ಚಿತಿಯೇ ಸಾಕ್ಷಿಯಾಗಿ ನೋಡುವುದೆಂದೂ

ಗೊತ್ತಾಯಿತು. ಹೀಗಿರುವಾಗ ಅದ್ವೈತವು ಅಪರೋಕ್ಷವಲ್ಲ, ಪರೋಕ್ಷವೇ ಸರಿ ಎಂದು ಹೇಳುವುದು 'ವದತೋ ವ್ಯಾಘಾತ'ವಾಗುತ್ತದೆ ! ಹೇಳುವಾಗಲೇ ಅಸಮಂಜಸವೆಂದು ಗೊತ್ತಾಗುತ್ತದೆ. ಚಿತ್ ಗೋಚರಿಸುವುದಿಲ್ಲ - ಎಂದು ಹೇಳತಕ್ಕ ತಾನೇ ಚಿತ್ ಆಗಿರುತ್ತಾನೆ ! ''ನನಗೆ ಮಾತಾಡಲು ಬರುವುದಿಲ್ಲ' ಎಂದು ಗಟ್ಟಿಯಾಗಿ ನುಡಿದಂತೆ ಇದು ! (೨೫೬). ಈ ಪ್ರಕಾರವಾಗಿ ಬಿಡಿಸಿ ಹೇಳಿದ ಮೇಲೆ ಇದನ್ನೆಲ್ಲ ತಿಳಿದುಕೊಂಡರೂ ಕೆಲವು ಜನರು ತೃಪ್ತರಾಗದೆ ಅದ್ವೈತದಲ್ಲಿ ವಿಶ್ವಾಸವನ್ನಿಡುವುದಿಲ್ಲವಲ್ಲ, ಅದೇಕೆ? ಊಹಾಪೋಹ ಕುಶಲರಾದ ಚಾರ್ವಾಕರೂ ಪಾಮರರೂ ಸಹ ದೇಹವೇ ಆತ್ಮವೆನ್ನುತ್ತಾರಲ್ಲ, ಅದೇಕಿರಬಹುದು? ಹೇಳೋಣವಾಗಲಿ (೨೫೭). ಚಾರ್ವಾಕಾದಿಗಳು ಬುದ್ಧಿದೋಷದಿಂದ ಸರಿಯಾಗಿ ವಿಚಾರಮಾಡುವು-ದಿಲ್ಲವೆಂದು ಹೇಳುವುದಾದರೆ ಅದೂ ಸರಿಯೇ. ಸಂತೃಪ್ತರಾಗದ ಪಂಡಿತರೂ ಸಹ ಶಾಸ್ತ್ರಾರ್ಥವನ್ನು ತಳಮುಟ್ಟಿ ವಿಚಾರಮಾಡಿಲ್ಲವೆಂದೇ ಹೇಳಬೇಕಾಗುತ್ತದೆ (೨೫೮). ಇರಲಿ: ಆತ್ಮತತ್ತ್ವಜ್ಞಾನದ ಫಲವೇನೆಂಬುದನ್ನು ನೋಡೋಣ. ಶ್ರುತಿಯು ಹೇಳುತ್ತದೆ - **'ಯದಾ ಸರ್ವೇ ಪ್ರಮುಚ್ಯಂತೇ ಕಾಮಾ ಯೇಽಸ್ಯ ಹೃದಿ ಶ್ರಿತಾಃ, ಅಥ ಮರ್ತ್ಯೋಽಮೃತೋ ಭವತ್ಯತ್ರ ಬ್ರಹ್ಮಸಮಶ್ನುತೇ'** ಎಂದು ಕಠೋಪನಿಷತ್ತು ಹೇಳುತ್ತದೆ (ಕಠ. ಉ. ೬-೧೪). ''ಯಾವಾಗ ಈ ಮುಮುಕ್ಷುವಿನ ಹೃದಯದಲ್ಲಿರುವ ಕಾಮನೆಗಳೆಲ್ಲವೂ ಹೊರಟು ಹೋಗುತ್ತವೆಯೋ ಆಗ ಮನುಷ್ಯನು ಅಮೃತನಾಗಿಬಿಡುತ್ತಾನೆ ! ಈ ದೇಹದಲ್ಲಿಯೇ ಬ್ರಹ್ಮವನ್ನು ಸೇರುತ್ತಾನೆ'' ಎಂದು. ಅಮೃತತ್ವವೆಂದರೆ ಮರಣರಾಹಿತ್ಯ. ಈ ಫಲವನ್ನು ಶ್ರುತಿಯೇ ಹೇಳಿರುತ್ತದೆ. ಅದು ನಿಶ್ಚಿತವಾದದ್ದು (೨೫೯). ಹೇಗೆಂದರೆ, ಮುಂದಿನ ವಾಕ್ಯದಲ್ಲಿ **'ಯದಾ ಸರ್ವೇ ಪ್ರಭಿದ್ಯಂತೇ ಹೃದಯಗ್ರಂಥಯಸ್ತದಾ'** (ಕಠ. ಉ. ೨-೬-೧೪) ಎಂದಿದೆ. ಇಲ್ಲಿ ಹೃದಯದ ಕಾಮನೆಗಳು ತೊಡೆದು ಹೋಗುವುದನ್ನು ಹೃದಯಗ್ರಂಥಿಭೇದನವೆಂದು ವ್ಯಾಖ್ಯಾನಿಸಲಾಗಿದೆ. ಹೃದಯಗ್ರಂಥಿಭೇದನ-ವೆಂದರೇನು? ಅಹಂಕಾರ ಚಿದಾತ್ಮರಿಗಿರುವ ತಾದಾತ್ಮ್ಯಾಧ್ಯಾಸ ನಿವೃತ್ತಿಯೇ ಅದು. ಕಾಮನೆಗಳೇ ಗ್ರಂಥಿಗಳು. ಅಧ್ಯಾಸದ ನಿವೃತ್ತಿಯೆಂದರೆ ಕಾಮಗಳ ನಿವೃತ್ತಿ. ಕಾಮಗಳ ನಿವೃತ್ತಿಯಾದರೆ ಅಧ್ಯಾಸದ ನಿವೃತ್ತಿ. ಹೀಗೆ ಕಾಮ-ಅಧ್ಯಾಸಗಳೆರಡೂ ಜಂಟಿಯಾಗಿ ಬಿಟ್ಟಿವೆ (೨೬೦). ಲೋಕದಲ್ಲಿ ಕಾಮವನ್ನು ಇಚ್ಛಾಭೇದವೆಂದು ತಿಳಿದಿದ್ದೇವೆ. ಅದನ್ನು ಗ್ರಂಥಿಯೆನ್ನುವುದೇಕೆ?

ಏಕೆಂದರೆ ಇಲ್ಲಿ ಇಚ್ಛಾವಿಶೇಷವನ್ನು ಕಾಮವೆಂದು ಗ್ರಹಿಸಿದ್ದಾರೆ. ಅಹಂಕಾರ ಚಿದಾತ್ಮರನ್ನು ಅಧ್ಯಾಸದಿಂದ ಒಂದೇ ಪದಾರ್ಥವೆಂದು ತಿಳಿದಾಗ, ಇದು ನನಗೆ ಬೇಕು ಇದು ನನಗೆ ಬೇಕು - ಎಂದು ಹುಟ್ಟುವ ಇಚ್ಛೆಗಳನ್ನು ಇಲ್ಲಿ ಕಾಮಗಳೆಂದು ತಿಳಿಯಬೇಕು (೨೬೧). ಅಧ್ಯಾಸಮೂಲವಾದದ್ದೇ ಪ್ರಕೃತದಲ್ಲಿ ಕಾಮವೆನಿಸಿದೆ. ಇದೇ ತ್ಯಾಜ್ಯವಾದದ್ದು. ಚಿದಾತ್ಮನೇ ಅಹಂಕಾರವೆಂದು ತಿಳಿಯದೆ, ಅಹಂಕಾರವು ಚಿತ್ತಿಗಿಂತ ಬೇರೆಯಾದದ್ದು ಎಂಬ ವಿವೇಕವು ಉದಿಸಿದಮೇಲೆ, ಲೌಕಿಕವಾದ ಕೋಟಿವಸ್ತುಗ್ಗಳನ್ನೇ ಬಯಸಲಿ, ಬಾಧೆಯಿಲ್ಲ. ಆತನಿಗೆ ಗ್ರಂಥಿಭೇದವಾಗಿ ಬಿಟ್ಟಿರುತ್ತದೆ (೨೬೨). ಅಧ್ಯಾಸವು ನಿವೃತ್ತವಾದ ಮೇಲೆ ಕಾಮವೇ ಹುಟ್ಟುವುದಿಲ್ಲ. ಹಾಗಿದ್ದಮೇಲೆ 'ಕೋಟಿವಸ್ತುಗ್ಗಳನ್ನೇ ಬಯಸಲಿ, ಬಾಧೆಯಿಲ್ಲ' ಎಂದು ಹೇಳುವುದೇಕೆ? ಏಕೆಂದರೆ, ಗ್ರಂಥಿಭೇದವಾಗಿ ಅಧ್ಯಾಸವು ನಿವೃತ್ತವಾದರೂ ಪ್ರಾರಬ್ಧಕರ್ಮವು ತೊಲಗಿರುವುದಿಲ್ಲ. ಅದರಿಂದಲೇ ದೇಹ ಉಳಿದಿರುತ್ತದೆ. ಆ ಪ್ರಾರಬ್ಧಕರ್ಮದಿಂದಲೇ ಬಯಕೆಗಳು ಹುಟ್ಟಬಹುದು. ಉದಾಹರಣೆಗೆ, ವೇದಾಂತತತ್ತ್ವವನ್ನಿಷ್ಟು ಹೇಳಿ ತಿಳಿಸಿಕೊಟ್ಟರೂ ನಿನಗೆ ತೃಪ್ತಿಯಾಗಲಿಲ್ಲ! ಗ್ರಂಥಿಭೇದವಾಗಲಿಲ್ಲ. ಅದಕ್ಕೆ ಅಡ್ಡಲಾಗಿ ಪ್ರಾರಬ್ಧಪಾಪಕರ್ಮಗಳು ನಿಂತುಬಿಟ್ಟಿವೆ (೨೬೩). ಅಹಂಕಾರ ಚಿದಾತ್ಮಗಳ ಗ್ರಂಥಿಭೇದವಾದರೂ ಪ್ರಾರಬ್ಧಕರ್ಮದಿಂದ ಅಹಂಕಾರವು ಪ್ರತ್ಯೇಕವಾಗಿ ಉಳಿದುಕೊಂಡಿರುತ್ತದೆ. ಅದರಲ್ಲಿ ಕಾಮನೆಗಳು ಹುಟ್ಟಿದರೆ ಚಿದಾತ್ಮನಿಗಾಗುವ ಬಾಧೆಯಾವುದು? ಈ ದೇಹಕ್ಕೆ ನಾನಾವ್ಯಾಧಿಗಳು ಬಂದರೂ ಬೇರೆ ಕೆಲವು ಮರಗಳು ಹುಟ್ಟಿಸತ್ತರೂ ಆತ್ಮನಿಗೆ ಯಾವ ಸಂಬಂಧವೂ ಇರುವುದಿಲ್ಲವಷ್ಟೆ? ದೇಹಕ್ಕೆ ಯಾವ ಪೀಡೆಯಾದರೂ ಜ್ಞಾನಿಯು ಅದು ತನಗಾದ ಪೀಡೆಯೆಂದು ಭಾವಿಸುವುದೇ ಇಲ್ಲ (೨೬೪). ಚಿದಾತ್ಮನು ಸರ್ವದಾ ಅಸಂಗನೇ ಆದ್ದರಿಂದ ಗ್ರಂಥಿಭೇದವಾದರೇನು? ಆಗದಿದ್ದರೇನು? ಅವನಿಗೆ ಯಾವಾಗಲೂ ಕಾಮನೆಯೂ ಇಲ್ಲ, ಪೀಡೆಯೂ ಇಲ್ಲ- ಎಂದು ಪೂರ್ವಪಕ್ಷಿಯ ಹೇಳಿಕೆ. ಅದಕ್ಕೆ ಸಿದ್ಧಾಂತಿಯ ಉತ್ತರ - ಇದನ್ನೇ ನಾವು ಹೇಳುತ್ತಿರುವುದು, ಮರೆಯಬೇಡ. ಹೀಗೆ ನೀನು ತಿಳಿದರೆ ಗ್ರಂಥಿಭೇದವಾಯಿತು! ನೀನು ಧನ್ಯ! (೨೬೫). ಮೂಢರಿಗೆ ಈ ರೀತಿಯಾದ ಜ್ಞಾನವಿರುವುದಿಲ್ಲ. ಈ ಅಜ್ಞಾನವೇ ಗ್ರಂಥಿ. ಗ್ರಂಥಿಯೆಂದು ಬೇರೆಯಾವುದೂ ಇಲ್ಲ. ಈ ಅಜ್ಞಾನಗ್ರಂಥಿಯಿದ್ದವನು ಮೂಢ. ಇದನ್ನು ಭೇದಿಸಿ ದೂರಮಾಡಿದವನು

ಜ್ಞಾನಿ. ಇವರಲ್ಲಿ ಇನ್ನಾವ ವಿಶೇಷವೂ ಇಲ್ಲ(೨೬೬). ದೇಹ, ಇಂದ್ರಿಯ, ಮನಸ್ಸು, ಬುದ್ಧಿ- ಇವುಗಳ ಪ್ರವೃತ್ತಿಯಲ್ಲಾಗಲಿ ನಿವೃತ್ತಿಯಲ್ಲಾಗಲಿ ಜ್ಞಾನಿಗೂ ಅಜ್ಞಾನಿಗೂ ಬೇರೆ ಯಾವ ಭೇದವೂ ಸ್ವಲ್ಪವೂ ಇರುವುದಿಲ್ಲ(೨೬೭). ಒಬ್ಬ ಶ್ರೋತ್ರಿಯನಿಗೂ ವ್ರಾತ್ಯನಾದ ಒಬ್ಬ ಶೂದ್ರನಿಗೂ ಭೇದವಾವುದು? ಶ್ರೋತ್ರಿಯನು ವೇದಾಧ್ಯಯನ ಮಾಡಿರುತ್ತಾನೆ. ವ್ರಾತ್ಯನು ಮಾಡಿರುವುದಿಲ್ಲ. ಅಷ್ಟೇ ಭೇದ. ಆಹಾರಾದಿಗಳಲ್ಲಿ ಯಾವ ವ್ಯತ್ಯಾಸವೂ ಇರುವುದಿಲ್ಲ. ಅದೇ ನ್ಯಾಯವನ್ನು ಜ್ಞಾನಿ- ಅಜ್ಞಾನಿಗಳಿಗೂ ಅನ್ವಯಿಸಿಕೊಳ್ಳಬೇಕು (೨೬೮). ಭಗವದ್ಗೀತೆಯಲ್ಲಿ ಹೀಗೆ ಹೇಳಿದೆಯಲ್ಲವೆ? ಸ್ಥಿತಪ್ರಜ್ಞನು ದುಃಖಗಳು ಬಂದರೆ ಅವನ್ನು ದ್ವೇಷಿಸುವುದೂ ಇಲ್ಲ. ಕಳೆದುಹೋದ ಸುಖಗಳನ್ನು ಬಯಸುವುದೂ ಇಲ್ಲ. ಏನೂ ಅರಿಯದ ಉದಾಸೀನನಂತೆ ಶಾಂತನಾಗಿರುತ್ತಾನೆ - ಎಂದು. ಗ್ರಂಥಿಭೇದವೆಂದರೆ ಇದೇ ಸ್ಥಿತಿ(೨೬೯). ಗೀತೆಯ ಈ ಶ್ಲೋಕದಲ್ಲಿ ಜ್ಞಾನಿಯು ಉದಾಸೀನನಾಗಿರ ಬೇಕೆಂದು ಔದಾಸೀನ್ಯವನ್ನು ವಿಧಿಸಿದ್ದಾರಲ್ಲವೆ? ಎಂದು ಹೇಳುವುದು ಸರಿಯಲ್ಲ. ಆಗ 'ಉದಾಸೀನವತ್' ಎಂಬಲ್ಲಿ 'ವತ್' ಶಬ್ದವು ವ್ಯರ್ಥವಾಗುತ್ತದೆ. ಉದಾಸೀನನಾಗಿರಬೇಕು ಎಂದು ಹೇಳದೆ ಉದಾಸೀನನಂತೆ ಇರುತ್ತಾನೆ ಎಂದು ಹೇಳಿದ್ದರಿಂದ ಇದು ವಿಧಿಯಲ್ಲ. ಜ್ಞಾನಿಯ ದೇಹಕ್ಕೆ ಕೆಲಸಮಾಡಲು ಶಕ್ತಿಯಿಲ್ಲದೆ ಹಾಗಿರುತ್ತಾನೆಂದರೆ, ಅದು ರೋಗವೇ ಸರಿ! (೨೭೦). ತತ್ತ್ವಜ್ಞಾನವು ಕ್ಷಯರೋಗವೆಂದೋ ಜಾಡ್ಯವೆಂದೋ ಹೇಳತಕ್ಕವರು ಮಹಾಪ್ರಾಜ್ಞರೇ ಸರಿ! ಅವರ ಪ್ರಜ್ಞಾಶಕ್ತಿ ಬಹಳ ಸೂಕ್ಷ್ಮವಾದದ್ದು! ಅವರಿಗೆ ಅಸಾಧ್ಯವಾದದ್ದು ಯಾವುದಿದೆ, ಹೇಳು! (೨೭೧). ಜಡಭರತ - ಮೊದಲಾದವರು ಏನನ್ನೂ ಮಾಡದೆ ಜಡರಾಗಿದ್ದರೆಂದು ಪುರಾಣದಲ್ಲಿ ಹೇಳಿದೆಯಲ್ಲವೆ? - ಎಂದು ನೀನು ಹೇಳಿದರೆ, **'ಜಕ್ಷನ್ ಕ್ರೀಡನ್ ರಮಮಾಣಃ.....'**(ಛಾಂ.ಉ.೮-೧೨-೩) ಇತ್ಯಾದಿ ಶ್ರುತಿವಾಕ್ಯವನ್ನು ನೀನು ಕೇಳಿಲ್ಲವೆ? ಎಂದು ತಿರುಗಿ ಪ್ರಶ್ನಿಸಬೇಕಾಗುತ್ತದೆ. 'ಜ್ಞಾನಿಯು ತಿನ್ನುತ್ತ, ಕ್ರೀಡಿಸುತ್ತ, ಸ್ತ್ರೀಯರೊಡನೆ ವಿಹರಿಸುತ್ತ, ವಾಹನಗಳಲ್ಲಿ ಹೋಗುತ್ತ ತನ್ನ ದೇಹವನ್ನೇ ತಾನು ಮರೆತು ಹೇಗೆ ಹೇಗೋ ನಡೆದುಕೊಳ್ಳುತ್ತಾ ಇರುತ್ತಾನೆ' ಎಂದು ಆ ಶ್ರುತಿಯು ಹೇಳಿದೆ (೨೭೨). ಜಡಭರತನೇ ಮೊದಲಾದವರು ಆಹಾರಾದಿಗಳನ್ನೂ ತ್ಯಜಿಸಿ ಎಂದಿಗೂ ಇರಲಿಲ್ಲ. ಮರದ ತುಂಡೋ ಬಂಡೆಯೋ ಎಂಬಂತೆ ಇದ್ದು ಬಿಡಲಿಲ್ಲ. ಜನಸಂಸರ್ಗವು ಬೇಡವೆಂದು ದೂರವಾಗಿದ್ದರು, ಅಷ್ಟೆ! (೨೭೩). ಜನಸಂಸರ್ಗವಿದ್ದರೆ ಏನಾದರೊಂದು

ತೊಂದರೆ ಉದ್ಭವಿಸುತ್ತದೆ. ನಿಃಸಂಗನಾದವನು ಸುಖವಾಗಿರುತ್ತಾನೆ. ಆದ್ದರಿಂದ ಆತ್ಮಾರಾಮನಾಗಿ ಸುಖದಿಂದಿರಬೇಕೆಂದು ಬಯಸತಕ್ಕವನು ಜನಸಂಸರ್ಗವನ್ನು ತ್ಯಜಿಸುವುದು ಉತ್ತಮ (೨೭೪). ಶಾಸ್ತ್ರದ ರಹಸ್ಯವೇನೆಂಬುದನ್ನರಿಯದ ಮೂಢನು ಮನಸ್ಸಿಗೆ ಬಂದಂತೆ ಮಾತಾಡುತ್ತಾನೆ. ಈ ಮೂರ್ಖರ ನಿರ್ಣಯವು ಅತ್ತ ಬಿದ್ದಿರಲಿ. ನಮ್ಮ ಸಿದ್ಧಾಂತವೇನೆಂಬುದನ್ನು ತಿಳಿಸುತ್ತೇವೆ (೨೭೫). ವೈರಾಗ್ಯ, ಜ್ಞಾನ, ಉಪರತಿ - ಈ ಮೂರು ಪರಸ್ಪರ ಸಹಾಯಕವಾದವುಗಳು. ಸಾಮಾನ್ಯವಾಗಿ ಇವು ಮೂರು ಒಟ್ಟಿಗೆ ಇರುತ್ತವೆ. ವಿರಳವಾಗಿ ಬೇರೆ ಯಾಗುವುದೂ ಉಂಟು. ಶುಕ, ವಾಮದೇವ - ಮುಂತಾದವರಲ್ಲಿ ಮೂರೂ ಒಟ್ಟಿಗೆ ಇದ್ದವು. ಲೋಕಕಾರ್ಯದಲ್ಲಿ ಪ್ರಸಕ್ತರಾದ ಜನಕರಾಜ, ಶ್ರೀರಾಮ - ಮುಂತಾದವರಲ್ಲಿ ಪರಸ್ಪರವಿಯುಕ್ತವಾಗಿಯೂ ಇದ್ದವು* (೨೭೬). ಈ ವೈರಾಗ್ಯ, ಜ್ಞಾನ, ಉಪರತಿಗಳ ಹೇತುಗಳೂ ಸ್ವರೂಪವೂ ಇವುಗಳ ಫಲವೂ ಪರಸ್ಪರಭಿನ್ನವಾಗಿವೆ. ಶಾಸ್ತ್ರಾರ್ಥವನ್ನು ವಿವೇಚಿಸತಕ್ಕವರು ತಾತ್ತ್ವಿಕವಾಗಿ ಇವೆಲ್ಲವನ್ನೂ ತಿಳಿದುಕೊಂಡಿರಬೇಕಾಗುತ್ತದೆ (೨೭೭).

ಈಗ ವೈರಾಗ್ಯಾದಿಗಳ ಹೇತು, ಸ್ವರೂಪ, ಫಲಗಳು ಯಾವುವೆಂಬುದನ್ನು ನೋಡೋಣ. ವಿಷಯಗಳು ಕೆಟ್ಟವು ಎಂಬ ದೋಷದೃಷ್ಟಿ ವೈರಾಗ್ಯಕ್ಕೆ ಅಸಾಧಾರಣವಾದ ಹೇತು. ಅವುಗಳ ತ್ಯಾಗಬುದ್ಧಿಯು ವೈರಾಗ್ಯದ ಸ್ವರೂಪ. ಅಕಸ್ಮಾತ್ತಾಗಿ ವಿಷಯಗಳು ಪ್ರಾಪ್ತವಾದರೂ ಮತ್ತೆ ಭೋಗಿಸಬೇಕೆಂಬ ಚಾಪಲ್ಯವಿಲ್ಲದಿರುವುದು ವೈರಾಗ್ಯದ ಫಲ (೨೭೮). ಶ್ರವಣ ಮನನ ನಿದಿಧ್ಯಾಸನಗಳೆಂಬ ಮೂರು, ಇದು ಸತ್ಯ ಇದು ಮಿಥ್ಯೆ ಎಂಬ ವಿವೇಚನೆ, ಮತ್ತೆ ಗ್ರಂಥಿಯ ಅನುತ್ಪತ್ತಿ - ಎಂದರೆ - ಕೂಟಸ್ಥ ಮತ್ತು ಅಹಂಕಾರಾದಿಗಳಲ್ಲಿ ಅನ್ಯೋನ್ಯಾಧ್ಯಾಸವಿಲ್ಲದಿರುವುದು - ಇವು ಮೂರು ಕ್ರಮವಾಗಿ ತತ್ತ್ವಜ್ಞಾನದ ಹೇತು, ಸ್ವರೂಪ, ಫಲಗಳು (೨೭೯). ಹೀಗೆಯೇ ಯಮನಿಯಮಾದಿಗಳು ಉಪರತಿಗೆ ಕಾರಣಗಳು. ಚಿತ್ತವೃತ್ತಿನಿರೋಧವೆಂಬ ಯೋಗವು ಉಪರತಿಯ ಸ್ವರೂಪ. ಲೌಕಿಕ ವೈದಿಕ ವ್ಯವಹಾರಗಳಲ್ಲಿ ಅನಾಸಕ್ತಿಯು ಉಪರತಿಯ ಫಲ. ಈ ಪ್ರಕಾರವಾಗಿ ವೈರಾಗ್ಯಾದಿಗಳನ್ನು ಬಿಡಿಸಿ ತೋರಿಸಿದ್ದಾಯಿತು. ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧಾರಣ, ಧ್ಯಾನ, ಸವಿಕಲ್ಪಕ ಸಮಾಧಿ - ಇವು ಎಂಟು ಅಷ್ಟಾಂಗಯೋಗಗಳು. ಮನಸ್ಸು ನಾನಾ ವಿಷಯಗಳ

---

* ಇವರಲ್ಲಿ ತತ್ತ್ವಜ್ಞಾನವಿತ್ತು. ಉಪರತಿ ವೈರಾಗ್ಯಗಳು ವ್ಯವಹಾರದಲ್ಲಿ ಕಾಣಿಸುತ್ತಿರಲಿಲ್ಲ.

ಕಡೆಗೆ ಹೋಗುವ ವ್ಯಾಪಾರಗಳು ಚಿತ್ತವೃತ್ತಿಗಳು. ಇವುಗಳ ನಿರೋಧವೇ ಉಪರತಿಯ ಸ್ವರೂಪ (೨೮೦). ಇವುಗಳಲ್ಲಿ ತತ್ತ್ವಜ್ಞಾನವು ಸಾಕ್ಷಾತ್ತಾಗಿ ಮೋಕ್ಷಕ್ಕೆ ಕಾರಣವಾದ್ದರಿಂದ ಮುಖ್ಯವಾದದ್ದು. ವೈರಾಗ್ಯ, ಉಪರತಿಗಳು ತತ್ತ್ವಜ್ಞಾನ ಹುಟ್ಟಲು ಉಪಕರಿಸುತ್ತವೆ. ಅವೆರಡೂ ತತ್ತ್ವಜ್ಞಾನದ ಮೂಲಕ ಪರಂಪರೆಯಾಗಿ ಮೋಕ್ಷಕ್ಕೆ ಕಾರಣಗಳಾಗಿವೆ (೨೮೧). ಒಬ್ಬನಲ್ಲಿ ಇವು ಮೂರೂ ಉತ್ಕೃಷ್ಟರೀತಿಯಲ್ಲಿ ಸೇರುವುದೆಂದರೆ ಮಹತ್ತರವಾದ ಪುಣ್ಯದ ಫಲವೇ ಸರಿ. ಅನೇಕ ಜನ್ಮಗಳಲ್ಲಿ ಆರ್ಜಿಸಿದ ಪುಣ್ಯದ ಫಲವಾಗಿ ಯಾರೋ ಒಬ್ಬನಲ್ಲಿ ಈ ಮೂರೂ ಏಕಕಾಲದಲ್ಲಿ ಒಟ್ಟಿಗೆ ಸೇರುವುದುಂಟು. ಯಾವುದೋ ಪಾಪಕೃತ್ಯವು ಇವುಗಳಲ್ಲೊಂದೊಂದನ್ನು ಅಲ್ಲಲ್ಲಿ ತಡೆದು ಬಿಡುತ್ತದೆ (೨೮೨). ವೈರಾಗ್ಯ, ಉಪರತಿಗಳೆರಡೂ ಒಬ್ಬನಿಗೆ ಪೂರ್ಣವಾಗಿ ಪ್ರಾಪ್ತವಾಗಿದ್ದರೂ ಯಾವುದೋ ಕರ್ಮಬಲದಿಂದ ಅವನಿಗೆ ತತ್ತ್ವಜ್ಞಾನವು ಪ್ರತಿಬದ್ಧವಾಗಿ ಬರದೆ ಹೋಗಬಹುದು. ಅವನಿಗೆ ಮೋಕ್ಷವಾಗದು. ಆದರೆ ಅವನ ತಪೋಬಲದಿಂದ ಪುಣ್ಯಲೋಕವು ದೊರೆಯುತ್ತದೆ. ಭಗವದ್ಗೀತೆಯಲ್ಲಿ-

> ಪ್ರಾಪ್ಯಪುಣ್ಯಕೃತಾನ್ ಲೋಕಾನ್ ಉಷಿತ್ವಾ ಶಾಶ್ವತೀಃ ಸಮಾಃ ।
> ಶುಚೀನಾಂ ಶ್ರೀಮತಾಂ ಗೇಹೇ ಯೋಗಭ್ರಷ್ಟೋಽಭಿಜಾಯತೇ ॥
> (ಭ.ಗೀ. ೬-೪೧)

ಎಂದು ಹೇಳಿದೆ. ಇದು ಆ ಬಗೆಯ ಜನರಿಗಾಗಿ (೨೮೩). ಒಬ್ಬನಿಗೆ ಆತ್ಮಜ್ಞಾನವು ಪೂರ್ಣವಾಗಿ ಪ್ರಾಪ್ತವಾಗಿರುತ್ತದೆ. ಯಾವುದೋ ಕರ್ಮವಶದಿಂದ ವೈರಾಗ್ಯ ಉಪರತಿಗಳು ಸರಿಯಾಗಿ ಬಂದಿರುವುದಿಲ್ಲ. ಆಗ ಆ ತತ್ತ್ವಜ್ಞಾನಿಗೆ ಮೋಕ್ಷವಾಗುವುದು ನಿಶ್ಚಿತ. ಅವಿದ್ಯೆಯು ನಾಶವಾಗದೆ ಜ್ಞಾನಿಯಾಗುವುದಿಲ್ಲ. ಒಂದು ಸಲ ಅವಿದ್ಯೆ ನಾಶವಾದ ಮೇಲೆ ಪುನಃ ಅದು ಹುಟ್ಟುವುದಿಲ್ಲ. ಆದ್ದರಿಂದ ಅವನಿಗೆ ವಿದೇಹಕೈವಲ್ಯವಾಗಿಯೇ ತೀರುತ್ತದೆ. ಆದರೆ ವೈರಾಗ್ಯಉಪರತಿಗಳು ಇಲ್ಲದ್ದರಿಂದ ಜೀವನ್ಮುಕ್ತಿ ಇಲ್ಲವೆಂದೇ ಹೇಳಬೇಕಾಗುವುದು. ಅವನು ಒಂದು ದೃಷ್ಟಿಯಿಂದ ಮುಕ್ತನಾದರೂ ಸಂಸಾರದ ಕಷ್ಟಗಳು ತಪ್ಪುವುದಿಲ್ಲ. ಅವನಲ್ಲಿ ರಜೋಗುಣಗಳು ಉಳಿದುಕೊಂಡಿರುವುದೇ ಅದಕ್ಕೆ ಕಾರಣ (೨೮೪). ಬ್ರಹ್ಮಲೋಕವನ್ನೂ ಸಹ ತೃಣಕ್ಕೆ ಸಮಾನವಾಗಿ ತುಚ್ಛವೆಂದು ತಿಳಿಯುವುದು ವೈರಾಗ್ಯದ ಪರಮಾವಧಿಯಾಗಿರುತ್ತದೆ. ಅಜ್ಞಾನಿಗಳು ದೇಹವೇ ಆತ್ಮವೆಂದು ಎಷ್ಟು ದೃಢವಾಗಿ ನಂಬಿಕೊಂಡಿದ್ದಾರೋ ಹಾಗೆ ಪರಮಾತ್ಮನೇ ನನ್ನ ಆತ್ಮವೆಂದು ದೃಢವಾದ ವಿಶ್ವಾಸವು ಹುಟ್ಟಿತೆಂದರೆ

ಆತ್ಮಜ್ಞಾನವು ಪೂರ್ಣವಾಯಿತೆಂದು ತಿಳಿಯಬೇಕು (೨೮೫). ಸುಷುಪ್ತಿಯಲ್ಲಾಗುವಂತೆ ಸರ್ವವಸ್ತುಗಳ ವಿಸ್ಮೃತಿಯು ಉಪರತಿಯ ಪರಮಾವಧಿಯಾಗಿರುತ್ತದೆ. ಈ ರೀತಿಯಲ್ಲಿ ಇತರ ವಿಷಯಗಳ ನ್ಯೂನಾಧಿಕಭಾವವನ್ನು ಊಹಿಸಿಕೊಳ್ಳಬೇಕು (೨೮೬). ಹಾಗಾದರೆ ತತ್ತ್ವಜ್ಞಾನದಲ್ಲಿ ತಾರತಮ್ಯವಿರುತ್ತದೆಯೇನು? ಇರುವುದಾದರೆ ಯಾವ ಬಗೆಯ ಜ್ಞಾನಬಂದರೆ ಮುಕ್ತರೆಂದು ತಿಳಿಯಬೇಕು? ಎಂಬ ಪ್ರಶ್ನೆ ಹುಟ್ಟುತ್ತದೆ. ಏಕೆಂದರೆ, ಜೀವನ್ಮುಕ್ತರ ವರ್ತನೆಯೂ ನಾನಾ ಬಗೆಯಾಗಿರುತ್ತದೆ. ಹಾಗಲ್ಲ; ಆತ್ಮ ಜ್ಞಾನದಲ್ಲಿ ತಾರತಮ್ಯವಿಲ್ಲ. ಜೀವನ್ಮುಕ್ತರ ಪ್ರಾರಬ್ಧಕರ್ಮಗಳು ನಾನಾ ಬಗೆಯಾಗಿರುತ್ತವೆ. ಅವುಗಳನ್ನು ಅನುಭವಿಸಲೇಬೇಕು. ಆದ್ದರಿಂದ ಜೀವನ್ಮುಕ್ತರ ವರ್ತನೆಯು ಅನೇಕರೀತಿಯಲ್ಲಿರುತ್ತದೆ. ಪಂಡಿತರಾದವರು ಆ ಜನರ ವರ್ತನೆಗಳನ್ನು ನೋಡಿ ಶಾಸ್ತ್ರಾರ್ಥದ ವಿಷಯದಲ್ಲಿ ಭ್ರಮಿಸಬಾರದು (೨೮೭). ಅವರು ತಮ್ಮ ತಮ್ಮ ಪ್ರಾರಬ್ಧಕರ್ಮಗಳಿಗೆ ಅನುಗುಣವಾಗಿ ಹೇಗೆ ಬೇಕಾದರೂ ಇದ್ದುಕೊಳ್ಳಲಿ. '**ಅಹಂ ಬ್ರಹ್ಮಾಸ್ಮಿ**' ಎಂಬ ಜ್ಞಾನವು ಅವರೆಲ್ಲರಿಗೂ ಏಕರೂಪವಾಗಿ ಬಂದಿರುತ್ತದೆ. ಅದರಲ್ಲಿ ಯಾವ ವಿಶೇಷವೂ ಇರುವುದಿಲ್ಲ. ಅಂತೆಯೇ ಬ್ರಹ್ಮರೂಪದಲ್ಲಿ ಮುಕ್ತರ ಅವಸ್ಥಾನವೂ ಏಕರೂಪವಾಗಿರುತ್ತದೆ. ಮುಕ್ತಿಯಲ್ಲಿ ಭೇದವಿಲ್ಲ. ಇದು ಶಾಸ್ತ್ರದ ಸಿದ್ಧಾಂತವಾಗಿದೆ (೨೮೮). ಸ್ವಚ್ಛವಾದ ಬಟ್ಟೆಯ ಮೇಲೆ ಚಿತ್ರಕಾರನು ನಾನಾ ಚಿತ್ರಗಳನ್ನು ಬರೆಯುವಂತೆ, ಮಾಯೆಯು ಆತ್ಮಚೈತನ್ಯದ ಮೇಲೆ ಈ ಜಗತ್ತೆಂಬ ಚಿತ್ರವನ್ನು ಬರೆದಿದ್ದಾಳೆ. ಈ ಚಿತ್ರವನ್ನು ಉಪೇಕ್ಷಿಸಿ ನಿನ್ನ ಚೈತನ್ಯವು ಮಾತ್ರ ಶುದ್ಧರೂಪದಲ್ಲಿ ಇದೆಯೆಂದು ತಿಳಿದುಕೋ (೨೮೯). ಈ ಚಿತ್ರದೀಪಪ್ರಕರಣವನ್ನು ಯಾವ ಮುಮುಕ್ಷುಗಳು ಪ್ರತಿದಿನವೂ ಅನುಸಂಧಾನ ಮಾಡುತ್ತಾರೋ ಅವರು ಈ ವಿಚಿತ್ರಜಗತ್ತನ್ನು ಅನುದಿನವೂ ನೋಡುತ್ತಿದ್ದರೂ ಹಿಂದಿನಂತೆ ಮೋಹಗೊಳ್ಳುವುದಿಲ್ಲ (೨೯೦).

**ಇಲ್ಲಿಗೆ ಚಿತ್ರದೀಪಪ್ರಕರಣವು ಸಮಾಪ್ತವಾಯಿತು**

---

# ೭. ತೃಪ್ತಿದೀಪಪ್ರಕರಣ

**ಆತ್ಮಾನಂ ಚೇದ್ವಿಜಾನೀಯಾತ್ ಅಯಮಸ್ಮೀತಿ ಪೂರುಷಃ ।**
**ಕಿಮಿಚ್ಛನ್ ಕಸ್ಯ ಕಾಮಾಯ ಶರೀರಮನುಸಂಜ್ವರೇತ್ ॥**

(ಬೃ.ಉ.೪-೪-೧೨)

ಎಂದು ಶ್ರುತಿ ಇದೆ. ಇದರ ಸಾಮಾನ್ಯವಾದ ವಾಚ್ಯಾರ್ಥವು ಹೀಗೆ - 'ನಾನು ಇವನು' ಎಂದು ಮನುಷ್ಯನು ತನ್ನ ಸ್ವರೂಪವನ್ನು ತಿಳಿದುಕೊಂಡ ಮೇಲೆ, ಯಾವುದನ್ನು ಬಯಸುತ್ತ ಯಾವುದರ ಭೋಗಕ್ಕಾಗಿ ಆತನು ತನ್ನ ಶರೀರದ ಜೊತೆಗೆ ಕಷ್ಟವನ್ನನುಭವಿಸುತ್ತ ಅಲೆಯಬೇಕು? (೧). ಈ ಶ್ರುತಿಯ ಅಭಿಪ್ರಾಯವೇನೆಂಬುದನ್ನು ಈ ಪ್ರಕರಣದಲ್ಲಿ ಸಂಪೂರ್ಣವಾಗಿ ವಿಚಾರಿಸಲಾಗುವುದು. ಇದರಿಂದ ಜೀವನ್ಮುಕ್ತನಿಗೆ ಯಾವ ತೃಪ್ತಿ ಇರುವುದೆಂದು ಉಪನಿಷತ್ತು ಹೇಳಿದೆಯೋ ಅದು ಸ್ಪಷ್ಟವಾಗಿ ತಿಳಿದು ಬರುವುದು (೨). **'ಮಾಯಾ ಆಭಾಸೇನ ಜೀವೇಶೌ ಕರೋತಿ'** (ನೃಂ.ಉ.೯) ಎಂದು ಶ್ರುತಿ ಇದೆ. 'ಮಾಯೆಯು ತಾನು ಉಪಾಧಿಯಾಗುವುದರಿಂದ ಜೀವನನ್ನೂ ಈಶ್ವರನನ್ನೂ ನಿರ್ಮಿಸುತ್ತದೆ' ಎಂದು ಶ್ರುತಿಯು ಹೇಳುವುದರಿಂದ ಜೀವಾತ್ಮ ಮತ್ತು ಈಶ್ವರ ಎಂಬಿಬ್ಬರನ್ನೂ ಮಾಯೆಯು ಕಲ್ಪಿಸಿದೆಯೆಂದೂ ಅವರಿಂದ ಈ ಜಗತ್ತೆಲ್ಲವೂ ಕಲ್ಪಿತವಾಗಿದೆ - ಎಂದೂ ತಿಳಿದುಬರುತ್ತದೆ. ಈ ವಿಚಾರವು ಹಿಂದೆ ತತ್ತ್ವವಿವೇಕ ಪ್ರಕರಣದ ೧೫-೧೬-೧೭ನೇ ಶ್ಲೋಕಗಳಲ್ಲಿ ಬಂದಿದೆ. ವಿವರಗಳಿಗೆ ಆ ಭಾಗವನ್ನೂ ನೋಡಬಹುದು (೩). ಈಶ್ವರನ ಈಕ್ಷಣದಿಂದ ಹಿಡಿದು ಪ್ರವೇಶಪರ್ಯಂತವಾದ ಸೃಷ್ಟಿಯು ಈಶ್ವರನಿಂದ ಕಲ್ಪಿತವಾದದ್ದು. ಜಾಗ್ರತ್ತಿನಿಂದ ಹಿಡಿದು ಮೋಕ್ಷಪರ್ಯಂತವಾದ ಸಂಸಾರಸೃಷ್ಟಿಯು, ಜೀವನಿಂದ ಕಲ್ಪಿತವಾದದ್ದು. **'ತದೈಕ್ಷತ ಬಹುಸ್ಯಾಂ ಪ್ರಜಾಯೇಯೇತಿ'**, (ಛಾಂ.ಉ.೬-೨-೩) ಎಂಬಲ್ಲಿ ಈಕ್ಷಣವಿದೆ. **ಅನೇನ ಜೀವೇನಾತ್ಮನಾ ಅನುಪ್ರವಿಶ್ಯ'** (ಛಾಂ.ಉ.೬-೩-೨)ಎಂಬಲ್ಲಿ ಪ್ರವೇಶವಿದೆ. ಇದಿಷ್ಟು ಈಶ್ವರನ ಸೃಷ್ಟಿ.**'ಸ ಏಷ ಮಾಯಾಪರಿಮೋಹಿತಾತ್ಮಾ..'** (ಕೈ.ಉ.೧೨) ಎಂಬಲ್ಲಿಂದ **'ಸರ್ವಬಂಧೈಃ ಪ್ರಮುಚ್ಯತೇ'** (ಕೈ.ಉ.೧೭) ಎಂಬವರೆಗೆ ಹೇಳಿರುವುದು ಜೀವಾತ್ಮನ ಸೃಷ್ಟಿ(೪). ಈ ಪ್ರಕರಣದ ಆರಂಭದಲ್ಲಿ ಹೇಳಿದ **'ಆತ್ಮಾನಂ ಚೇದ್ವಿಜಾನೀಯಾತ್'** (ಬೃ.ಉ.೪-೪-೧೨) ಎಂಬ ಶ್ರುತಿಯ

ವ್ಯಾಖ್ಯಾನರೂಪವಾದದ್ದು ಈ ಪ್ರಕರಣ. ವ್ಯಾಖ್ಯಾನವೆಂದರೇನು?

**ಪದಚ್ಛೇದಃ ಪದಾರ್ಥೋಕ್ತಿರ್ವಿಗ್ರಹೋ ವಾಕ್ಯಯೋಜನಾ ।**
**ಆಕ್ಷೇಪೋಽಥ ಸಮಾಧಾನಂ ವ್ಯಾಖ್ಯಾನಂ ಷಡ್ವಿಧಂ ಮತಮ್ ॥**

ಎಂದು ವ್ಯಾಖ್ಯಾನದ ಲಕ್ಷಣ. ಪದವಿಭಾಗ, ಕ್ಲಿಷ್ಟಪದದ ಅರ್ಥವನ್ನು ಹೇಳುವುದು, ಸಮಾಸಕ್ಕೆ ವಿಗ್ರಹಪ್ರದರ್ಶನ, ವಾಕ್ಯದಲ್ಲಿರುವ ಪದಗಳ ಅನ್ವಯ, ಪೂರ್ವಪಕ್ಷ, ಅದಕ್ಕೆ ಸಮಾಧಾನ - ಇವು ಆರು ವ್ಯಾಖ್ಯಾನದಲ್ಲಿ ಬೇಕಾಗುತ್ತವೆ. ಪ್ರಕೃತ ಶ್ರುತಿಯಲ್ಲಿ '**ಪೂರುಷಃ**' ಎಂಬ ಶಬ್ದವಿದೆಯಷ್ಟೆ , ಇದರ ಅರ್ಥ-ವನ್ನೀಗ ಹೇಳುತ್ತಾರೆ. ಅರ್ಥವಿಶೇಷವಿದ್ದಾಗ ಹೇಳಬೇಕಾಗುತ್ತದೆ. ಅರ್ಥವು ಸುಲಭವಾದಾಗ ಹೇಳಬೇಕಾದ್ದಿಲ್ಲ. ಪೂರುಷನೇ ಪುರುಷ- ಬುದ್ಧಿಯಲ್ಲಿ ಪ್ರತಿಬಿಂಬಿತವಾದ ಕೂಟಸ್ಥಚೈತನ್ಯವೇ ಜೀವ. ಈ ಜೀವಾತ್ಮನೇ ಪ್ರಕೃತದಲ್ಲಿ ಪುರುಷ. ''ದೇಹೇಂದ್ರಿಯಾದಿಗಳು ನಾನು'' ಎಂಬ ಅನ್ಯೋನ್ಯಾಧ್ಯಾಸವು ಭ್ರಮೆ. ಈ ಭ್ರಮೆಗೆ ಈ ಪುರುಷನು ಆಶ್ರಯನಾಗಿದ್ದಾನೆ - ಎಂದರೆ ದೇಹೇಂದ್ರಿ ಯಾದಿಗಳೇ ನಾನೆಂದು ಜೀವನು ತಿಳಿದುಕೊಂಡಿದ್ದಾನೆ. ಈತನು ವಸ್ತುತಃ ಕೂಟಸ್ಥನೂ ಸಂಗರಹಿತನೂ ಚಿತ್‌ಸ್ವರೂಪನೂ ಆಗಿದ್ದರೂ ಬುದ್ಧಿಯಲ್ಲಿ ಪ್ರತಿಬಿಂಬಿತನಾಗಿ ಬುದ್ಧಿಯೆಂಬ ಉಪಾಧಿಗೆ ಒಳಪಟ್ಟಿರುವುದರಿಂದ ಅಜ್ಞಾನಿಯಾಗಿ ಅಧ್ಯಾಸದ ಮೂಲಕ ಜೀವನೆನಿಸಿದ್ದಾನೆ. ಈ ಜೀವನೇ ಪ್ರಕೃತದಲ್ಲಿ ಪುರುಷನೆಂದು ತಿಳಿಯತಕ್ಕದ್ದು . ಚಿದಾಭಾಸನು ಜೀವನೆಂದಾದ ಮೇಲೆ, ಪುರುಷನೆಂದರೆ ಕೇವಲ ಚಿದಾಭಾಸನೆಂದಿಷ್ಟೇ ಹೇಳಬಹುದಲ್ಲ. ಅಧ್ಯಾಸಕ್ಕೆ ಅಧಿಷ್ಠಾನನಾದ ಕೂಟಸ್ಥಚೈತನ್ಯನನ್ನು ಸೇರಿಸಿ ಪುರುಷನೆಂದು ಹೇಳುವುದೇಕೆ? ಏಕೆಂದರೆ, ಇಲ್ಲಿ ಅಧಿಕಾರಿಯನ್ನು ಹೇಳಬೇಕಾಗಿದೆ. ಅಧಿ ಷ್ಠಾನಸಹಿತನಾದ ಜೀವನು ಮೋಕ್ಷಾದಿಗಳಿಗೆ ಅಧಿಕಾರಿ. ಅಧಿಷ್ಠಾನವಿಲ್ಲದ ಕೇವಲ ಚಿದಾಭಾಸನು ಅಧಿಕಾರಿಯಲ್ಲ. ಅಧಿಷ್ಠಾನವೆಂದರೆ ಆರೋಪಕ್ಕೆ ಆಶ್ರಯವಾದ ವಸ್ತು. ಅದು ಪ್ರಕೃತದಲ್ಲಿ ಕೂಟಸ್ಥಚೈತನ್ಯ. ಅದಿಲ್ಲದೆ ಆರೋಪವೇ ಸಂಭವಿಸುವುದಿಲ್ಲ. ಹಗ್ಗವಿಲ್ಲದೆ ಸರ್ಪತ್ವವನ್ನು ಆರೋಪಿಸಲು ಶಕ್ಯವಿಲ್ಲ(೫-೬). ಜೀವನು ಆರೋಪಕ್ಕೆ ಅಧಿಷ್ಠಾನವಾದ ಕೂಟಸ್ಥನೊಡನೆ ಚಿದಾಭಾಸೋಪೇತವಾದ ಈ ಶರೀರವನ್ನು ಯಾವಾಗ ತಾನೆಂದು ಭ್ರಮಿಸುತ್ತಾನೋ ಆಗ 'ನಾನು ಸಂಸಾರಿ' ಎಂಬ ಅಭಿಮಾನವನ್ನು ತಳೆಯುತ್ತಾನೆ (೭). ಯಾವಾಗ ಈ ಚಿದಾಭಾಸಸಹಿತವಾದ ಶರೀರದಲ್ಲಿ 'ನಾನು' ಎಂಬ ಭ್ರಮೆಯನ್ನು ತ್ಯಜಿಸಿ ಅಧಿಷ್ಠಾನವಾದ ಕೂಟಸ್ಥ ಸ್ವರೂಪವನ್ನು ಪ್ರಧಾನವಾಗಿ

ಜೀವನು ತಳೆಯುತ್ತಾನೋ ಆಗ 'ನಾನು ಚಿದಾತ್ಮ. ಸಂಗರಹಿತನಾಗಿದ್ದೇನೆ' ಎಂಬ ಅರಿವನ್ನು ಪಡೆಯುತ್ತಾನೆ - (೮) ಎಂದರ್ಥ. ಇದು ಹೇಗೆ ಸರಿಯಾದೀತು? ಚಿದಾತ್ಮನು ಸ್ವತಃ ಸಂಗರಹಿತನಾದ್ದರಿಂದ 'ನಾನು ಸಂಗ ರಹಿತ' ಎಂಬ ಅಭಿಮಾನವು ಅವನಲ್ಲಿ ಬರಲು ಹೇಗೆ ಸಾಧ್ಯ? ಈ ಪ್ರಶ್ನೆಗೆ ಉತ್ತರ ಹೇಳುತ್ತೇವೆ, ಕೇಳು. 'ಅಹಂ ಶಬ್ದಕ್ಕೆ ಇಲ್ಲಿ ಮೂರು ಅರ್ಥಗಳಿವೆ. ಒಂದು ಮುಖ್ಯವಾದ ಅರ್ಥ. ಇನ್ನೆರಡು ಗೌಣವಾದ ಅರ್ಥಗಳು (೯). ಕೂಟಸ್ಥಚಿದಾಭಾಸಗಳಿಗೆ ಅನ್ಯೋನ್ಯಾಧ್ಯಾಸದಿಂದ ಏಕತ್ವವನ್ನು ಪಡೆದ ಅರ್ಥವು ಅಹಂ ಶಬ್ದದ ಮುಖ್ಯಾರ್ಥ. ಏಕೆಂದರೆ, ವಿವೇಚನೆಯನ್ನು ಮಾಡದ ಮೂಢರೆಲ್ಲರೂ ಈ ಅರ್ಥದಲ್ಲಿಯೇ 'ನಾನು' ಎಂದು ಅಹಂ ಶಬ್ದವನ್ನು ಪ್ರಯೋಗಿಸುತ್ತಾರೆ. ಬಹುಜನರು ಹೀಗೆಯೇ ತಿಳಿದಿರುವುದರಿಂದ ಇದು ಮುಖ್ಯಾರ್ಥ (೧೦). ಕೂಟಸ್ಥ ಚಿದಾಭಾಸ - ಇವೆರಡು 'ಅಹಂ' ಶಬ್ದಕ್ಕೆ ಅಮುಖ್ಯವಾದ ಗೌಣಾರ್ಥಗಳು. ಏಕೆಂದರೆ, ತತ್ತ್ವಜ್ಞನು ಮಾತ್ರ ಲೋಕದಲ್ಲಿಯೂ ವೈದಿಕವ್ಯವಹಾರದಲ್ಲಿಯೂ ಈ ಎರಡು ಅರ್ಥಗಳಲ್ಲಿ ಆ ಶಬ್ದಗಳನ್ನು ಪರ್ಯಾಯವಾಗಿ ಬಳಸುತ್ತಾನೆ. ಕೆಲವು ಜನರು ಮಾತ್ರ ಅಲ್ಪ ಸಂಖ್ಯೆಯಲ್ಲಿ ಈ ಅರ್ಥಗಳನ್ನಿಟ್ಟು ಮಾತಾಡುವುದರಿಂದ ಇವು ಅಮುಖ್ಯಾರ್ಥಗಳೆಂದು ನಾವು ಹೇಳಿದ್ದೇವೆ (೧೧). ಉದಾಹರಣೆಗೆ, ತತ್ತ್ವಜ್ಞಾನಿಯು ಲೌಕಿಕವ್ಯವಹಾರದಲ್ಲಿ ಮಾತಾಡುವಾಗ 'ಈಗ ನಾನು ಹೋಗುತ್ತೇನೆ' ಎಂದು ಹೇಳುವುದುಂಟಷ್ಟೆ, ಆಗ ಕೂಟಸ್ಥನಿಂದ ಚಿದಾಭಾಸ ನನ್ನು ಪೃಥಕ್ಕರಿಸಿ 'ಚಿದಾಭಾಸ' ಎಂಬ ಅರ್ಥದಲ್ಲಿ 'ನಾನು' ಶಬ್ದವನ್ನು ಬಳಸಿರುತ್ತಾನೆ (೧೨). ಈ ವಿದ್ವಾಂಸನೇ ವೈದಿಕ ವ್ಯವಹಾರದಲ್ಲಿ ಶಾಸ್ತ್ರೀಯ ದೃಷ್ಟಿಯನ್ನವಲಂಬಿಸಿ 'ನಾನು ಸಂಗರಹಿತ' 'ನಾನು ಚಿದಾತ್ಮ' ಎಂದು ಹೇಳುತ್ತಾನೆ. ಇಲ್ಲಿ 'ನಾನು' ಶಬ್ದಕ್ಕೆ ಲಕ್ಷಣಾವೃತ್ತಿಯಿಂದ ಕೂಟಸ್ಥನೆಂದು ಮಾತ್ರ ಅರ್ಥ (೧೩).

ಈಗ ಇನ್ನೊಂದು ಸಂಶಯ ಬರುತ್ತದೆ. ಕೂಟಸ್ಥ ಚಿದಾಭಾಸ - ಎಂಬೆರಡು ಅಹಂ ಶಬ್ದದ ಅಮುಖ್ಯಾರ್ಥಗಳೆಂದು ಹೇಳಿದಿರಿ. ಇವರಲ್ಲಿ **'ಅಹಂ ಬ್ರಹ್ಮಾಸ್ಮಿ'** ಎಂದು ತಿಳಿದುಕೊಳ್ಳತಕ್ಕವರು ಯಾರು? ಅಜ್ಞಾನನಿವೃತ್ತಿಗಾಗಿ ಹಾಗೆ ತಿಳಿದುಕೊಳ್ಳಬೇಕಾಗಿದೆ. ಅವನು ಕೂಟಸ್ಥನಲ್ಲ. ಕೂಟಸ್ಥನು ಅಸಂಗಚಿದ್ರೂಪನಾದ್ದರಿಂದ ಅವನಲ್ಲಿ ಅಜ್ಞಾನವು

ನಿವೃತ್ತವಾಗಿಬಿಟ್ಟಿರುತ್ತದೆ. ಅವನಲ್ಲಿ ಜ್ಞಾನವು ಹುಟ್ಟುತ್ತದೆ ಎನ್ನುವುದೂ ತಪ್ಪಾಗುತ್ತದೆ. ಅಸಂಗನಲ್ಲಿ ಜ್ಞಾನವೆಂಬ ಧರ್ಮವು ಹುಟ್ಟಲಾರದು. ಇನ್ನು ಚಿದಾಭಾಸನು '**ಅಹಂ ಬ್ರಹ್ಮಾಸ್ಮಿ**' ಎಂದು ತಿಳಿದುಕೊಳ್ಳುತ್ತಾನೆ ಎನ್ನುವುದೂ ತಪ್ಪು. ಚಿದಾಭಾಸನು ಬ್ರಹ್ಮವಲ್ಲ- ಇದಿಷ್ಟು ಸಂಶಯ (೧೪). ಇದು ದೋಷವಲ್ಲ. ಚಿದಾಭಾಸನೇ ನಾನು ಬ್ರಹ್ಮ ಎಂದು ತಿಳಿದುಕೊಳ್ಳುತ್ತಾನೆ. ಚಿದಾಭಾಸನು ನಿಜವಾಗಿ ಕೂಟಸ್ಥನೇ ಆಗಿರುತ್ತಾನೆ. ಅವನಲ್ಲಿ ಆಭಾಸ ಎನ್ನುವುದು ಮಿಥ್ಯೆ. ನನ್ನಲ್ಲಿ ತೋರುತ್ತಿರುವ ಆಭಾಸತ್ವವು ಮಿಥ್ಯೆ - ಎಂದಾಗ ಬಾಧೆಯೇನೂ ಇಲ್ಲ. ''ಕನ್ನಡಿಯಲ್ಲಿ ಕಾಣುವುದು ಪ್ರತಿಬಿಂಬ. ಅದು ಮುಖವಲ್ಲ. ನನ್ನ ಕತ್ತಿನ ಮೇಲಿರುವುದೇ ಮುಖ'' - ಎಂದು ತಿಳಿದಲ್ಲಿ ಬಾಧೆ ಏನಿದೆ? (೧೫). ಶಂಕೆ - ಚಿದಾಭಾಸನು ಮಿಥ್ಯೆಯಾದರೆ ಆತನಿಗೆ ಬರುವ 'ನಾನು ಬ್ರಹ್ಮ' ಎಂಬ ಜ್ಞಾನವೂ ಮಿಥ್ಯೆಯಾಗಬೇಕಾಗುತ್ತದೆ? ಉತ್ತರ- ಹೌದು, ಮಿಥ್ಯೆಯಲ್ಲವೆಂದು ಹೇಳತಕ್ಕವರು ಯಾರು? ರಜ್ಜುಸರ್ಪವು ಮಿಥ್ಯೆಯಾದ್ದರಿಂದ ರಜ್ಜುಸರ್ಪವು ಹರಿದಾಡುತ್ತಿದೆಯೆನ್ನುವುದು ಸತ್ಯವೆಂದು ಯಾರೂ ಅಂಗೀಕರಿಸುವುದಿಲ್ಲ. ರಜ್ಜುಸರ್ಪದ ಕ್ರಿಯೆಯು ಮಿಥ್ಯೆಯೇ (೧೬). ಶಂಕೆ - ಚಿದಾಭಾಸನಿಗೆ ತೋರುವ '**ಅಹಂ ಬ್ರಹ್ಮಾಸ್ಮಿ**' ಎಂಬ ಜ್ಞಾನವು ಮಿಥ್ಯೆಯಾದರೆ, ಸಂಸಾರವು ನಿವೃತ್ತವಾಗುತ್ತದೆ ಎನ್ನುವುದು ಹೇಗೆ ಸತ್ಯವಾದೀತು? ಉತ್ತರ - ಸತ್ಯವಲ್ಲ, ಸಂಸಾರವು ಇದ್ದರಲ್ಲವೆ ನಿವೃತ್ತವಾಗುವುದು? '**ಯಕ್ಷಾನುರೂಪೋಬಲಿಃ**' ಎಂದು ಲೋಕದಲ್ಲೊಂದು ಗಾದೆಯುಂಟು. ಯಕ್ಷನಿಗೆ ತಕ್ಕ ಬಲಿ, ಭೂತಕ್ಕೆ ತಕ್ಕ ನೈವೇದ್ಯ. ಮಿಥ್ಯೆಯು ಮಿಥ್ಯೆಯಿಂದಲೇ ಹೋಗಿಬಿಡುತ್ತದೆ! ಸ್ವಪ್ನದಲ್ಲಿ ಹುಲಿ ಮೈಮೇಲೆ ಹಾರಿದೊಡನೆ ಎಚ್ಚರವಾಗಿಬಿಡುತ್ತದೆ. ಸ್ವಪ್ನವೂ ಇಲ್ಲ ಹುಲಿಯ ಹಾರಾಟವೂ ಇಲ್ಲ! (೧೭). ಚಿದಾಭಾಸನಾದ ಪುರುಷನೇ ನಿಜವಾಗಿ ಕೂಟಸ್ಥನಾಗಿದ್ದಾನೆ. ಕೂಟಸ್ಥನಾಗಿರುವುದೇ ಅವನ ಸ್ವರೂಪ. ಆದ್ದರಿಂದ ಚಿದಾಭಾಸನು 'ನಾನು ಕೂಟಸ್ಥನೇ ಹೌದು' ಎಂದು ತಿಳಿಯುವುದು ಯುಕ್ತವೆಂದು ತಿಳಿದು ಶ್ರುತಿಯು '**ಅಯಮಸ್ಮೀತಿ**' ಎಂಬಲ್ಲಿ ಅಸ್ಮಿ ಶಬ್ದವನ್ನು ಪ್ರಯೋಗಿಸಿದೆ. ಚಿದಾಭಾಸನೇ 'ನಾನು ಕೂಟಸ್ಥನಾಗಿದ್ದೇನೆ' - ಎಂದು ತಿಳಿದುಕೊಳ್ಳುತ್ತಾನೆ (೧೮). '**ಆತ್ಮಾನಂ ಚೇದ್ವಿಜಾನೀಯಾದಯಮಸ್ಮೀತಿ ಪೂರುಷಃ**' (ಬೃ.ಉ.೪-೪-೧೨) ಎಂಬ ವೇದವಾಕ್ಯದಲ್ಲಿರುವ '**ಅಸ್ಮಿ, ಪೂರುಷಃ**' ಎಂಬೆರಡು ಶಬ್ದಗಳ ಅರ್ಥವನ್ನು ವಿವರಿಸಿದ್ದಾಯಿತು. ಈಗ '**ಅಯಂ**' ಶಬ್ದದ ಅರ್ಥವೇನೆಂಬುದನ್ನು

ನೋಡೋಣ. ಲೋಕದಲ್ಲಿ ''ನಾನು ರಾಮರಾಯರ ಮಗ. ನನ್ನ ಹೆಸರು ಭೀಮರಾಯ'' ಎಂದು ಒಬ್ಬನು ಹೇಳುತ್ತಾನೆ ಎಂದುಕೊಳ್ಳೋಣ. ಆಗ ಭೀಮರಾಯನು ತನ್ನ ದೇಹವನ್ನೇ 'ಭೀಮರಾಯ' ಎಂದು ಕರೆದುಕೊಂಡಿರುತ್ತಾನೆ. ಈ ದೇಹವೇ ಆತ್ಮವೆಂಬ ಜ್ಞಾನವು ಅಸಂದಿಗ್ಧವೂ ಅವಿಪರ್ಯಸ್ತವೂ ಆಗಿರುತ್ತದೆ. ಎಂದರೆ ದೇಹವು ಆತ್ಮವೆಂಬ ವಿಷಯದಲ್ಲಿ ಯಾವ ಸಂದೇಹವೂ ಇರುವುದಿಲ್ಲ, ತಪ್ಪಾಗಿ ಭ್ರಮೆಯಿಂದ ಹೇಳಿದ್ದೂ ಆಗಿರುವುದಿಲ್ಲ. (ಲೋಕವ್ಯವಹಾರವು ಹಾಗಿರುವುದರಿಂದಲೇ ತಾನು ರಾಮರಾಯನ ಮಗನೆಂದು ನಿಶ್ಚಯಿಸಿ, ಹೇಳಿಕೊಂಡಿರುವುದು). ಹಾಗೆಯೇ ಪ್ರತ್ಯಗಾತ್ಮನ ವಿಷಯದಲ್ಲಿ ಅಸಂದಿಗ್ಧವೂ ಅವಿಪರ್ಯಸ್ತವೂ ಆದ ಜ್ಞಾನವಿರಬೇಕೆಂದು ಶ್ರುತಿಯು '**ಅಯಂ**' ಶಬ್ದವನ್ನು ಪ್ರಯೋಗಿಸಿದೆ (೧೯). ಈ ಪ್ರಕಾರವಾದ ದೃಢಜ್ಞಾನವು ಪ್ರತ್ಯಗಾತ್ಮನಲ್ಲಿಯೂ ಆವಶ್ಯಕ. ಅದೇ ಮೋಕ್ಷಕ್ಕೆ ಸಾಧನವೆಂದು ಶ್ರೀಶಂಕರಭಗವತ್ಪಾದರು ಹೇಳಿದ್ದಾರೆ. ಏನೆಂದರೆ, 'ನಾನು ರಾಮರಾಯರ ಮಗ, ನಾನು ಮನುಷ್ಯ.'- ಎಂದು ಲೋಕದಲ್ಲಿ ಮಾತಾಡುವಾಗ ದೇಹವೇ ಆತ್ಮವೆಂಬ ವಿಷಯದಲ್ಲಿ ಎಷ್ಟು ದೃಢವಾದ ನಂಬಿಕೆ ಇರುತ್ತದೆಯೋ ಹಾಗೆಯೇ ದೇಹಾತ್ಮಜ್ಞಾನವನ್ನು ಬಾಧಿಸುವ '**ಅಹಂ ಬ್ರಹ್ಮಾಸ್ಮಿ**' ಎಂದು ಪ್ರತ್ಯಗಾತ್ಮನಲ್ಲಿಯೂ ಅಷ್ಟೇ ದೃಢವಾದ ಜ್ಞಾನವು ಯಾರಿಗಾಗುವುದೋ ಆತನು ಇಚ್ಛಿಸದಿದ್ದರೂ ಮುಕ್ತನಾಗಿ ಬಿಡುತ್ತಾನೆ' ಎಂದು ಆಚಾರ್ಯರು ಹೇಳಿದ್ದಾರೆ (೨೦). ಅಯಂ ಎಂದರೆ, ಇವನು ಎಂದರ್ಥ. ಪರೋಕ್ಷವಾಗಿ ಎಲ್ಲಿಯೋ ಇರತಕ್ಕವನನ್ನು 'ಇವನು' ಎನ್ನುವುದಿಲ್ಲ, 'ಅವನು' ಎನ್ನುತ್ತಾರೆ. ಆದ್ದರಿಂದ '**ಅಯಮಸ್ಮೀತಿ ಪೂರುಷಃ**' ಎಂಬಲ್ಲಿ ಅಯಂ ಎಂದರೆ ಪರೋಕ್ಷನಲ್ಲದವನನ್ನೇ ಗ್ರಹಿಸಬೇಕಾಗುತ್ತದೆಯಲ್ಲವೆ? ಹೌದು ; ಇಲ್ಲಿ ಅಯಂ ಎಂದರೆ ಈ ಪ್ರತ್ಯಗಾತ್ಮನೆಂದರ್ಥ. ಈತನು ಸ್ವಯಂಪ್ರಕಾಶ ಚೈತನ್ಯ. ಈತನು ಸ್ವಯಂಪ್ರಕಾಶನಾದ್ದರಿಂದ ಸದಾ ಅಪರೋಕ್ಷನೆಂದು ನಾವು ಒಪ್ಪಿದ್ದೇವೆ (೨೧). ಸ್ವಯಂಪ್ರಕಾಶ ಚಿದ್ರೂಪನಾದ್ದರಿಂದ ಪ್ರತ್ಯಗಾತ್ಮನು ಅಪರೋಕ್ಷನೆಂಬುದು ಸರಿ. ಆದರೆ ಪೂರ್ವೋಕ್ತವಾಕ್ಯದಲ್ಲಿ 'ಅಯಂ' ಎಂಬುದರಿಂದ ಅಪರೋಕ್ಷನೆಂದು ಸ್ವೀಕರಿಸಿದರೆ ೧೪ನೆಯ ಶ್ಲೋಕದಲ್ಲಿ ಹೇಳಿದಂತೆ 'ನಾನು' ಎಂದರೆ ಚಿದಾಭಾಸನಾಗುತ್ತಾನೆ. ಕೂಟಸ್ಥನೇ (ಪ್ರತ್ಯಗಾತ್ಮನೇ) ಪರೋಕ್ಷನಾಗಿ ಬಿಡುತ್ತಾನೆ. ಆ ಶ್ಲೋಕದಲ್ಲಿ ಹೇಳಿದಂತೆಯೇ ಜ್ಞಾನ -ಅಜ್ಞಾನಗಳೆರಡೂ ಒಬ್ಬನಲ್ಲಿಯೇ ಇವೆಯೆಂದಾಗುತ್ತದೆ. ಇದೆಲ್ಲವೂ

ನಿತ್ಯನೂ ಅಪರೋಕ್ಷನೂ ಆದ ಆತ್ಮನಲ್ಲಿ ವಿರುದ್ಧವಲ್ಲವೆ? ವಿರುದ್ಧವಲ್ಲ. 'ದಶಮಮನುಷ್ಯ'ನಲ್ಲಿ ಘಟಿಸುವಂತೆ ಇದು ಉಪಪನ್ನವಾಗುತ್ತದೆ (೨೨). (ದಶಮನ ವಿಷಯದಲ್ಲೊಂದು ಕಥೆ ಇದೆ. ಹತ್ತು ಜನ ಮಂಕರು ಒಟ್ಟು ಸೇರಿ ಪ್ರಯಾಣ ಮಾಡುತ್ತಿದ್ದರು. ತಾವು ಹತ್ತು ಜನರಿದ್ದೇವೆ ಎಂದು ಅವರಿಗೆ ಗೊತ್ತಿತ್ತು. ದಾರಿಯಲ್ಲೊಂದು ಹೊಳೆ ಇತ್ತು. ಪ್ರವಾಹವಿದ್ದುದರಿಂದ ಎಲ್ಲರೂ ಈಜಿ ಆಚೆಯ ದಡವನ್ನು ಸೇರಿದರು. ಅನಂತರ ನಾವೆಲ್ಲರೂ ದಾಟಿ ಬಂದೆವೆ? ಎಂಬ ಸಂದೇಹದಿಂದ ಒಬ್ಬನು ಎಣಿಸಿದನು. ಒಂದು, ಎರಡು, ಮೂರು - ಹೀಗೆ ಒಂಬತ್ತು ಜನರನ್ನೆಣಿಸಿದನು. ಹತ್ತನೆಯವನು ಎದುರಿಗಿಲ್ಲ! ಅವನು ಮುಳುಗಿಹೋದನೆಂದು ಹಾಹಾಕಾರ ಹುಟ್ಟಿತು. ಎಲ್ಲರೂ ತನ್ನನ್ನು ಬಿಟ್ಟು ಉಳಿದವರನ್ನು ಎಣಿಸುತ್ತಿದ್ದರು! ಯಾರೋ ಒಬ್ಬನು ಹೊಳೆಯಲ್ಲಿ ಮುಳುಗಿಹೋದನೆಂದು ಅಳತೊಡಗಿದರು. ಆಗ ಇನ್ನೊಬ್ಬ ಪ್ರಯಾಣಿಕನು ಬಂದು ಅಳುವುದಕ್ಕೆ ಕಾರಣವೇನೆಂದು ವಿಚಾರಿಸಿ, ತಾನೇ ಎಣಿಸಿ ನೋಡಿದಾಗ ಹತ್ತು ಜನರಿದ್ದರು. 'ಯಾರೂ ಮುಳುಗಿಲ್ಲ, ಎಣಿಸಿನೋಡಿರಿ!' ಎಂದಾಗ ಒಬ್ಬನು ಎಣಿಸಿ ಒಂಬತ್ತರವರೆಗೆ ಹೋಗಿ 'ಹತ್ತನೆಯವನು ಇಲ್ಲ' ಎಂದನು. ಆತನ ದಡ್ಡತನಕ್ಕೆ ಆ ಪ್ರಯಾಣಿಕನು ನಕ್ಕು 'ನೀನೇ ಹತ್ತನೆಯವನು' ಎಂದು ಹೇಳಿದನು. ಹತ್ತನೆಯವನು ಸಿಕ್ಕಿದ! ಆ ಮಂಕರ ಅಳು ನಿಂತಿತು. ಈ ಹತ್ತನೆಯವನೇ ದಶಮ ಪುರುಷ). ತಾನು ಎಣಿಸಬೇಕಾದ ಒಂಬತ್ತು ಜನರು ಎದುರಿಗಿರುತ್ತಾರೆ. ಹತ್ತನೆಯವನು ಎದುರಿಗೆ ಒಂಬತ್ತು ಜನರನ್ನು ನೋಡುತ್ತಿದ್ದರೂ ಎಣಿಸುತ್ತಿರುವ ತನ್ನನ್ನೇ ಮರೆತು 'ನಾನು ಹತ್ತನೆಯವನು' ಎಂಬುದನ್ನು ತಿಳಿದುಕೊಳ್ಳುವುದಿಲ್ಲ (೨೩). ಭ್ರಾಂತನಾದ ಆ ಮನುಷ್ಯನು 'ದಶಮನು ಕಾಣಿಸುತ್ತಿಲ್ಲ, ಅವನು ಇಲ್ಲವೇ ಇಲ್ಲ' ಎನ್ನುತ್ತಾನೆ. ಭ್ರಾಂತಿಯು ಹೋದಾಗ 'ನಾನೇ ಹತ್ತನೆಯವನು' ಎಂದುಕೊಳ್ಳುತ್ತಾನೆ. ದಶಮನನ್ನರಿಯದಿರುವುದು ಅಜ್ಞಾನಕೃತವಾದ ಆವರಣವೆಂದು ವಿದ್ವಾಂಸರು ಹೇಳುತ್ತಾರೆ (೨೪). ಹತ್ತನೆಯವನು ಹೊಳೆಯಲ್ಲಿ ಮುಳುಗಿ ಸತ್ತುಹೋದನೆಂದು ಆತನು ಅಳುತ್ತಾನೆ. ಈ ಅಳುವುದೇ ಮೊದಲಾದದ್ದು ಅಜ್ಞಾನಜನ್ಯವಾದ ವಿಕ್ಷೇಪವೆಂದು ವಿದ್ವಾಂಸರು ತಿಳಿದಿದ್ದಾರೆ (೨೫). ಆಪ್ತನಾದವನು ''ಅಯ್ಯಾ, ದಶಮನು ಸಾಯಲಿಲ್ಲ, ಅವನು ಬದುಕಿದ್ದಾನೆ!'' ಎಂದು ಹೇಳಿದಾಗ ಈ ಭ್ರಾಂತನಿಗೆ ಅಷ್ಟು ಮಾತ್ರ ಗೊತ್ತಾಗುತ್ತದೆ. ದಶಮನು ಯಾರೆಂಬುದು ತಿಳಿಯುವುದಿಲ್ಲ, ಇದು ಪರೋಕ್ಷಜ್ಞಾನ. ಸ್ವರ್ಗಾದಿಲೋಕಗಳಿವೆ - ಎಂದು ತಿಳಿದುಕೊಂಡಂತೆ

ಇದು (೨೬). ಅನಂತರ ಆಪ್ತನಾದವನು ಎಲ್ಲರನ್ನೂ ಎಣಿಸಿ ತೋರಿಸಿ ನೀನೇ ದಶಮ - ಎಂದು ಹೇಳಿದಾಗ ತಾನೇ ದಶಮನೆಂಬ ಅಪರೋಕ್ಷಜ್ಞಾನ ಹುಟ್ಟುತ್ತದೆ. ಆಗ ಅಳುವನ್ನು ನಿಲ್ಲಿಸಿ ಸಂತೋಷಪಡುತ್ತಾನೆ! (೨೭). ಈ ಪ್ರಕಾರವಾಗಿ ಮೊದಲು ಅಜ್ಞಾನ, ಅದರಿಂದ ಆವರಣ, ಆಮೇಲೆ ವಿಕ್ಷೇಪ, ಪರೋಕ್ಷಜ್ಞಾನ, ಅಪರೋಕ್ಷ ಜ್ಞಾನ, ಶೋಕಪರಿಹಾರ, ತೃಪ್ತಿ(ಸಂತೋಷ)ಗಳು ದಶಮನಲ್ಲಿ ಹೇಗೆ ಆದವೋ ಹಾಗೆಯೇ ಚಿದಾತ್ಮನ ವಿಷಯದಲ್ಲಿಯೂ ಕ್ರಮವಾಗಿ ಆಗುತ್ತದೆ ಎಂದು ತಿಳಿಯತಕ್ಕದ್ದು (೨೮).

ಈ ಕ್ರಮವು ಹೀಗಿರುತ್ತದೆ : ಚಿದಾಭಾಸನಾದ ಜೀವನು ಭೋಗಸಾಮಗ್ರಿಗಳ ಸಂಪಾದನೆಯಲ್ಲಿ ತೊಡಗಿ ಸಂಸಾರದಲ್ಲಿ ಆಸಕ್ತನಾಗಿರುತ್ತಾನೆ. ವೇದಶಾಸ್ತ್ರಗಳನ್ನು ವಿಚಾರಮಾಡುವುದಕ್ಕೆ ಮೊದಲು ತಾನು ಸ್ವಯಂಪ್ರಕಾಶನಾದ ಕೂಟಸ್ಥನೆಂದು ತಿಳಿದೇ ಇರುವುದಿಲ್ಲ. ಇದೇ ಅಜ್ಞಾನ (೨೯). ಚಿದಾತ್ಮ ವಿಷಯವು ಪ್ರಸಕ್ತವಾದಾಗ 'ಕೂಟಸ್ಥನೆಂಬವನು ಯಾರೋ ತಿಳಿಯದು. ನನಗೆ ಕಾಣಿಸುವುದಿಲ್ಲ, ಅವನು ಇಲ್ಲವೇ ಇಲ್ಲ' ಎಂದು ಹೇಳುತ್ತಾನೆ. ಇದು ಅಜ್ಞಾನಜನ್ಯವಾದ ಆವರಣ. ಅಲ್ಲದೆ 'ನಾನೇ ಕರ್ತ, ನಾನೇ ಭೋಕ್ತ' ಎಂದು ತನ್ನಲ್ಲಿ ಕರ್ತೃತ್ವ ಭೋಕ್ತೃತ್ವಗಳನ್ನು ಆರೋಪಿಸಿ ಕೊಂಡಿರುತ್ತಾನೆ. ಇದಕ್ಕೆ ಕಾರಣವು ಸ್ಥೂಲಶರೀರ, ಸೂಕ್ಷ್ಮಶರೀರಗಳೆಂಬ ಎರಡು ದೇಹಗಳನ್ನು ಚಿದಾಭಾಸನು ಹೊಂದಿರುವುದೇ ಆಗಿದೆ. ಇದೆಲ್ಲವೂ ವಿಕ್ಷೇಪವೇ (೩೦). ಶಾಸ್ತ್ರವಿಚಾರವನ್ನು ಮಾಡಿದ ಮೇಲೆ 'ಕೂಟಸ್ಥನಾದ ಆತ್ಮನು ಇದ್ದಾನೆ' ಎಂದಿಷ್ಟು ಮಾತ್ರ ತಿಳಿದುಕೊಳ್ಳುತ್ತಾನೆ. ಇದು ಪರೋಕ್ಷಜ್ಞಾನ. ಅನಂತರ ಶ್ರವಣಮನನಾದಿಗಳಿಂದ ಇದು ಪಕ್ವವಾದಾಗ 'ನಾನೇ ಕೂಟಸ್ಥನಾದ ಆತ್ಮ' ಎಂಬ ಜ್ಞಾನ ಹುಟ್ಟುತ್ತದೆ! ಇದು ಅಪರೋಕ್ಷಜ್ಞಾನ (೩೧). ಅನಂತರ ನಾನು ಕರ್ತ. ನಾನು ಭೋಕ್ತ ಎಂಬ ಅಜ್ಞಾನದಿಂದುಂಟಾದ ಶೋಕವು ತೊಲಗುತ್ತದೆ. ಅನಂತರ 'ನನ್ನ ಕರ್ತವ್ಯವು ಮುಗಿಯಿತು, ಪಡೆಯಬೇಕಾದದ್ದು ದೊರಕಿತು' ಎಂದು ತೃಪ್ತಿಯಿಂದ ಸಂತೋಷಿಸುತ್ತಾನೆ. ಇದೇ ತೃಪ್ತಿ (೩೨). ಈ ಪ್ರಕಾರವಾಗಿ ಚಿದಾತ್ಮನ ವಿಷಯದಲ್ಲಿ ಅಜ್ಞಾನ, ಆವರಣ, ವಿಕ್ಷೇಪ, ಪರೋಕ್ಷ ಜ್ಞಾನ, ಶೋಕನಿವೃತ್ತಿ ತೃಪ್ತಿ ಎಂಬ ಏಳು ವ್ಯವಸ್ಥೆಗಳು ನಿರ್ಬಾಧವಾಗಿ ಸಂಭವಿಸುತ್ತವೆ. ವಿಕ್ಷೇಪಗಳು ಬಂಧಕಾರಿಗಳು (೩೩-೩೪). ಇವುಗಳ ಸ್ವರೂಪ, ಕಾರ್ಯಗಳನ್ನೀಗ ಪರಿಶೀಲಿಸಬಹುದು. ಆತ್ಮವಿಚಾರಕ್ಕೆ ಮೊದಲು

ಆತ್ಮವಿಚಾರವಾಗಿ ನನಗೇನೂ ಗೊತ್ತಿಲ್ಲವೆಂದು ಉದಾಸೀನನಾಗಿರಲು ಕಾರಣವಾದದ್ದು ಅಜ್ಞಾನವೆನಿಸುತ್ತದೆ. ಶಾಸ್ತ್ರೋಕ್ತಮಾರ್ಗವನ್ನು ಉಲ್ಲಂಘಿಸಿ ಬರಿಯ ತರ್ಕದಿಂದ ವಾದಿಸುತ್ತ, ಕೂಟಸ್ಥನಾದ ಆತ್ಮನೆಂಬವನು ಇಲ್ಲ, ಆದ್ದರಿಂದಲೇ ಕಾಣುವುದಿಲ್ಲ- ಎಂದು ವಿಪರೀತವಾಗಿ ನಡೆದುಕೊಳ್ಳುವುದು ಆವರಣದ ಫಲ (೩೫-೩೬). ಸ್ಥೂಲದೇಹ ಸೂಕ್ಷ್ಮದೇಹಗಳೆಂಬ ಶರೀರದ್ವಯದಿಂದ ಕೂಡಿದ ಚಿದಾಭಾಸವನ್ನೇ ವಿಕ್ಷೇಪವೆನ್ನಬಹುದು. ಬಂಧಕವಾದ ಸಂಸಾರವು ಚಿದಾಭಾಸನ ಕಾರ್ಯ. ಕರ್ತೃತ್ವ, ಭೋಕ್ತೃತ್ವ, ಪ್ರಮಾತೃತ್ವ, ಇವುಗಳಿಂದಾಗುವ ಶೋಕ - ಇವೇ ಸಂಸಾರ (೩೭). ಈಗೊಂದು ಪ್ರಶ್ನೆ. ಚಿದಾಭಾಸನಿಗೆ ಏಳು ಅವಸ್ಥೆಗಳಿವೆಯೆಂದು ಹಿಂದೆ ಹೇಳಿದ್ದು ಕೂಡುವುದಿಲ್ಲ. ಅಜ್ಞಾನ, ಆವರಣಗಳಾದಮೇಲೆ ವಿಕ್ಷೇಪ. ವಿಕ್ಷೇಪದ ಭೇದವೇ ಚಿದಾಭಾಸ-ಎನ್ನುತ್ತೀರಿ. ಚಿದಾಭಾಸನಿಗೆ ಮೊದಲೇ ಇದ್ದ ಅಜ್ಞಾನ, ಆವರಣಗಳು - ಚಿದಾಭಾಸನ ಅವಸ್ಥೆಗಳಾಗುವುದು ಹೇಗೆ? ನಿಜ; ಈ ಏಳು ಅವಸ್ಥೆಗಳು ಉಂಟು. ಇವುಗಳಲ್ಲಿ ಯಾವುದೂ ಅಸಂಗನಾದ ಆತ್ಮನಿಗಿಲ್ಲ. ಆದ್ದರಿಂದ ಪರಿಶೇಷಾತ್ ಅಜ್ಞಾನ, ಆವರಣಗಳು ಚಿದಾತ್ಮನಿಗೆ ಸೇರುತ್ತವೆ. ಏಕೆಂದರೆ ಚಿದಾಭಾಸನಲ್ಲಿಯೂ ಅವು ಅನುವೃತ್ತವಾಗಿ ಇದ್ದೇ ಇರುತ್ತವೆ (೩೮). ಶಂಕೆ - ಒಳ್ಳೆಯದು. ಅಜ್ಞಾನ, ಆವರಣಗಳಿಗೆ ಮೊದಲು ವಿಕ್ಷೇಪವಿರುವುದೇ ಇಲ್ಲ. ಉತ್ತರ - ಈ ಜನ್ಮದ ವಿಕ್ಷೇಪವಿಲ್ಲದಿದ್ದರೂ ಜನ್ಮಾಂತರದ ವಿಕ್ಷೇಪ ಸಂಸ್ಕಾರವು ಇದ್ದೇ ಇರುತ್ತದೆ. ಅಜ್ಞಾನ, ಆವರಣಗಳು ಚಿದಾಭಾಸನಲ್ಲಲ್ಲದೆ ಇನ್ನೆಲ್ಲಿ ಇರಲು ಸಾಧ್ಯ? ಸಪ್ತಾವಸ್ಥೆಗಳಿಗೆ ಕಾರ್ಯಕಾರಣಭಾವವನ್ನು ತೋರಿಸುವಾಗ ಅಜ್ಞಾನ, ಆವರಣಗಳು ಚಿದಾಭಾಸನಿಗಿಂತ ಮೊದಲು ಬರುತ್ತವೆ, ಇದರಲ್ಲಿ ವಿರೋಧವೇನೂ ಇಲ್ಲ (೩೯). ಶಂಕೆ - ಅಪ್ರಸಿದ್ಧವಾದ ಸಂಸ್ಕಾರವನ್ನು ಒಪ್ಪಿಕೊಂಡು ಇವೆರಡು ಚಿದಾಭಾಸನ ಅವಸ್ಥೆಗಳೆಂದು ಸಾಧಿಸುವುದೇಕೆ? ಅವೆರಡೂ ಬ್ರಹ್ಮದ ಅವಸ್ಥೆಗಳೆಂದೇಕೆ ಹೇಳಬಾರದು? ಅಜ್ಞಾನ, ಆವರಣಗಳಿಗೆ ಅಧಿಷ್ಠಾನವಾಗಿ ಬ್ರಹ್ಮವನ್ನು ಹೇಗಿದ್ದರೂ ಒಪ್ಪಿಕೊಳ್ಳಲೇ ಬೇಕಷ್ಟೆ?- ಈ ರೀತಿ ಶಂಕಿಸಬೇಕಾದ್ದಿಲ್ಲ. ಎಲ್ಲ ಅವಸ್ಥೆಗಳೂ ಬ್ರಹ್ಮದಲ್ಲಿಯೇ ಆರೋಪಿತವಾಗಿವೆ! ಆರೋಪಿತ ವಾದವುಗಳಲ್ಲಿಯೂ ಲೌಕಿಕವಾದ ವಸ್ತುಸ್ಥಿತಿಯನ್ನು ನಾವು ಹೇಳಿದ್ದು!(೪೦) ಶಂಕೆ - ಆದರೆ ನಾನು ಸಂಸಾರಿ, ನಾನು ತತ್ತ್ವಜ್ಞಾನವನ್ನು ಪಡೆದಿದ್ದೇನೆ, ಶೋಕರಹಿತನಾಗಿದ್ದೇನೆ, ಸಂತುಷ್ಟನಾಗಿದ್ದೇನೆ - ಎಂಬ ಮುಂದಿನ ನಾಲ್ಕು ಅವಸ್ಥೆಗಳು ಮಾತ್ರ ಜೀವನಲ್ಲಿ

ತೋರುತ್ತವೆ. ಅವು ಬ್ರಹ್ಮನಿಷ್ಠವಲ್ಲ. ಉತ್ತರ - ಹೀಗೆ ನೀನು ಹೇಳುರುವುದಾದರೆ ನಾನು ಅಜ್ಞ, ನನ್ನ ದೃಷ್ಟಿಯಲ್ಲಿ ಕೂಟಸ್ಥ ಬ್ರಹ್ಮವು ಇಲ್ಲ, ಇದ್ದಂತೆ ತೋರುವುದೂ ಇಲ್ಲ - ಎಂಬ ಅಜ್ಞಾನ, ಆವರಣಗಳೂ ಜೀವನಲ್ಲಿಯೇ ತೋರುತ್ತವೆ ಎಂದು ಹೇಳಬೇಕಾಗುತ್ತದೆ. ಪೂರ್ವೋಕ್ತ ರೀತಿಯಲ್ಲಿ ಅಜ್ಞಾನ ಆವರಣಗಳು ಚಿದಾಭಾಸನ ಅವಸ್ಥೆಗಳೆಂದು ತಿಳಿಯತಕ್ಕದ್ದು (೪೧-೪೨). ಹಾಗಾದರೆ ಬ್ರಹ್ಮವು ಅಜ್ಞಾನಕ್ಕೆ ಆಶ್ರಯವೆಂದು ಪೂರ್ವಾಚಾರ್ಯರು ಏಕೆ ಹೇಳಿದರು? ಎಂದರೆ ಬ್ರಹ್ಮವು ಅಜ್ಞಾನಕ್ಕೆ ಅಧಿಷ್ಠಾನವಾದ್ದರಿಂದ ಆಶ್ರಯವೆಂದು ಹೇಳಿದರು, ಅಜ್ಞಾನಕ್ಕೆ ಜೀವನು ಅಭಿಮಾನಿಯಾದ್ದರಿಂದ ಅದು ಜೀವನ ಅವಸ್ಥಾಭೇದವೆಂದು ನಾವು ಹೇಳಿದ್ದೇವೆ. ವಿರೋಧವೇನೂ ಇಲ್ಲ (೪೩).

ಪರೋಕ್ಷಜ್ಞಾನ, ಅಪರೋಕ್ಷಜ್ಞಾನಗಳೆರಡರಿಂದ ಅಜ್ಞಾನವು ನಾಶವಾದಮೇಲೆ, ಬ್ರಹ್ಮವು ತೋರುವುದಿಲ್ಲ, ಬ್ರಹ್ಮವಿಲ್ಲ - ಎಂಬ ಎರಡು ವಿಧವಾದ ಆವರಣವೂ ನಾಶವಾಗುವುದು. ಅವುಗಳಲ್ಲಿ ಪರೋಕ್ಷಜ್ಞಾನದಿಂದ ಬ್ರಹ್ಮವು ಇಲ್ಲವೆಂಬ ಅಸತ್ತ್ವಾಪಾದಕ ಆವರಣ ಹೇತುವೂ, ಅಪರೋಕ್ಷ ಜ್ಞಾನದಿಂದ ಬ್ರಹ್ಮವು ಗೋಚರಿಸುವುದಿಲ್ಲವೆಂಬ ಅಭಾನಾವರಣ ಹೇತುವೂ ನಾಶವಾಗುತ್ತವೆ (೪೪-೪೫). ಹೀಗೆ ಅಭಾನಾವರಣವೂ ತೊಲಗಲಾಗಿ ಆತ್ಮನಲ್ಲಿ ಜೀವತ್ವಾರೋಪವು ಕ್ಷಯಿಸಿ ಹೋಗುತ್ತದೆ. ಆಗ ಜೀವಭಾವದಿಂದುಂಟಾದ ಕರ್ತೃತ್ವ, ಭೋಕ್ತೃತ್ವಾದಿ ಶೋಕಮಯಸಂಸಾರವು ಸಹಜವಾಗಿ ಹೊರಟುಹೋಗುತ್ತದೆ. ಹೀಗೆ ಸರ್ವಸಂಸಾರಭ್ರಮವೂ ತೊಲಗಲು, ತಾನು ನಿತ್ಯಮುಕ್ತನೆಂಬುದು ಗೊತ್ತಾಗುವುದು. ಅದರಿಂದ ತೃಪ್ತಿಯು ನಿರ್ಬಾಧವಾಗಿ ನಿಂತುಬಿಡುವುದು. ಮುಂದೆ ಯಾವ ಶೋಕವೂ ಹುಟ್ಟುವುದೇ ಇಲ್ಲ (೪೬-೪೭). ಇಲ್ಲಿ ಜೀವಗತವಾದ ಅಜ್ಞಾನ, ಆವರಣ - ಮುಂತಾದ ಸಪ್ತಾವಸ್ಥೆಗಳನ್ನು, ಹೇಳಿದ್ದೇಕೆಂದರೆ, **'ಆತ್ಮಾನಂ ಚೇದ್ವಿಜಾನೀಯಾತ್ ...'** ಎಂಬ ಉಪನಿಷದ್ವಾಕ್ಯವು ಅಪರೋಕ್ಷಜ್ಞಾನ, ಶೋಕನಿವೃತ್ತಿ - ಎಂಬೆರಡು ಅವಸ್ಥೆಗಳು ಜೀವಗತವೆಂದು ತಿಳಿಸುತ್ತದೆ. ಇದನ್ನು ವಿವರಿಸುವುದಕ್ಕಾಗಿ ನಾವು ಇಷ್ಟನ್ನು ಬೆಳೆಸಬೇಕಾಯಿತು (೪೮).

**'ಅಯಮಸ್ಮೀತಿ ಪೂರುಷಃ'** ಎಂಬಲ್ಲಿ **' ಅಯಂ'** ಪದವು ಆತ್ಮನು ಅಪರೋಕ್ಷನೆಂದು ತಿಳಿಸುತ್ತದೆ ಎಂದು ಹೇಳಿದೆಯಷ್ಟೆ. ಈ ಅಪರೋಕ್ಷತ್ವವು ಎರಡು ವಿಧ. ''ಚಿದ್ರೂಪನಾದ ಆತ್ಮನು ಸ್ವಪ್ರಕಾಶನಾಗಿದ್ದಾನೆ. ತನ್ನ

ಪ್ರತೀತಿಗಾಗಿ ಇನ್ನೊಂದನ್ನೂ ಆತನು ಅಪೇಕ್ಷಿಸುವುದಿಲ್ಲ'' - ಎಂಬುದೊಂದು ವಿಧ. ಬುದ್ಧಿಯು ಆತ್ಮನನ್ನು ಸ್ವಪ್ರಕಾಶನೆಂದು ಗ್ರಹಿಸುತ್ತದೆ - ಎಂಬುದು ಇನ್ನೊಂದು ವಿಧ (೪೯). ಇರಲಿ; ಆತ್ಮನು ಪರೋಕ್ಷಜ್ಞಾನಕ್ಕೂ ವಿಷಯನಾಗುತ್ತಾನಷ್ಟೆ, ಆಗ ಅವನು ಸ್ವಯಂಪ್ರಕಾಶನಲ್ಲವೋ? ಎಂದರೆ, ಸ್ವಯಂಪ್ರಕಾಶನೇ. ಆತ್ಮನ ಸ್ವರೂಪವೇನೂ ಬದಲಾವಣೆಯಾಗುವುದಿಲ್ಲ. ಸ್ವಯಂಪ್ರಕಾಶನಾದ ಆತ್ಮನು ಇದ್ದಾನೆ - ಎಂದು ಪರೋಕ್ಷಜ್ಞಾನಕ್ಕೆ ವಿಷಯನಾಗುತ್ತಾನೆ (೫೦) ಶಂಕೆ - ಪ್ರತ್ಯಗಭಿನ್ನಬ್ರಹ್ಮಜ್ಞಾನವು ಪರೋಕ್ಷ ವಾಗುವುದು ಹೇಗೆ? ಇದು ವಿರುದ್ಧವಾದ್ದರಿಂದ ಬಾಧಿತವಾಗುತ್ತದೆಯಲ್ಲವೆ? ಉತ್ತರ - ಹಾಗಲ್ಲ. 'ಅಹಂ ಬ್ರಹ್ಮ' ಎಂಬ ಅಂಶವನ್ನು ಬಿಟ್ಟು 'ಬ್ರಹ್ಮ ಅಸ್ತಿ' ಎಂದಿಷ್ಟೇ ಜ್ಞಾನಾಕಾರವಾದರೆ, ಅದು ಪರೋಕ್ಷಜ್ಞಾನವೇ ಆಗುತ್ತದೆ. ಹಾಗೆ ಜ್ಞಾನವು ಬರಬಹುದು - ಅದರಲ್ಲಿ ಬಾಧೆ ಏನೂ ಇಲ್ಲ, ಅದು ಭ್ರಮಜ್ಞಾನವಲ್ಲ (೫೧). ಅದು ಭ್ರಮಜ್ಞಾನವಾಗಬೇಕಾದರೆ ಈ ನಾಲ್ಕರಲ್ಲಿ ಒಂದು ಪ್ರಕಾರವಾದರೂ ಇರಬೇಕು. ೧.ಆಮೇಲೆ ಹುಟ್ಟುವ ಜ್ಞಾನದಿಂದ ಬಾಧಿತವಾದರೆ ೨. ಬ್ರಹ್ಮದ ವಿಶಿಷ್ಟ ಸ್ವರೂಪವು ಜ್ಞಾನಗೋಚರ ವಾಗದಿದ್ದರೆ ೩.ಅಪರೋಕ್ಷವಾಗಿ ಗೃಹೀತವಾಗಬೇಕಾದದ್ದು ಪರೋಕ್ಷವಾಗಿ ಗೃಹೀತವಾದರೆ ೪. ಅಥವಾ ಬ್ರಹ್ಮದಲ್ಲಿ ಒಂದಂಶವು ಮಾತ್ರ ಗೃಹೀತವಾದರೆ. ಈ ನಾಲ್ಕು ಪ್ರಕಾರಗಳಲ್ಲಿ ಒಂದಾಗಿದ್ದರೆ ಅದು ಭ್ರಾಂತಿಯಾಗುತ್ತದೆ. 'ಬ್ರಹ್ಮ ಅಸ್ತಿ' ಎಂಬ ಪರೋಕ್ಷಜ್ಞಾನವು ಭ್ರಮೆಯಾಗಲು ಕಾರಣವೇನೂ ಇಲ್ಲ. 'ಬ್ರಹ್ಮ ನಾಸ್ತಿ' ಎಂಬುದಕ್ಕೆ ಪ್ರಬಲವಾದ ಆಧಾರವಿದ್ದಿದ್ದರೆ ಇದು ಭ್ರಮೆಯಾಗುತ್ತಿತ್ತು. ಅಂತಹ ಆಧಾರವೇನೂ ನಮಗೆ ಕಾಣದು. ಆದ್ದರಿಂದ 'ಬ್ರಹ್ಮ ಇದೆ' ಎಂಬುದಕ್ಕೆ ಬಾಧೆ ಇಲ್ಲ(೫೨). ಇನ್ನು ಎರಡನೆಯ ಪ್ರಕಾರದಂತೆ ಬ್ರಹ್ಮದ ಸ್ವರೂಪವು ಹೇಗಿದೆ ಎಂದು ವಿಶಿಷ್ಟಾಂಶವು ತೋರುವುದಿಲ್ಲವಾದ್ದರಿಂದ ಭ್ರಮೆ ಎನ್ನಲೂ ಸಾಧ್ಯವಿಲ್ಲ. ಆಗ 'ಸ್ವರ್ಗವಿದೆ' ಎಂಬ ಸಾಮಾನ್ಯಜ್ಞಾನವೂ ಭ್ರಮೆಯಾಗಬೇಕಾದೀತು. ಆದ್ದರಿಂದ ಈ ಎರಡನೆಯ ಪ್ರಕಾರವು ಭ್ರಮೆಗೆ ಹೇತುವಲ್ಲ(೫೩). ಇನ್ನು ಮೂರನೆಯ ಪ್ರಕಾರದಂತೆ ಅಪರೋಕ್ಷವಾಗಿ ಗೃಹೀತವಾಗಬೇಕಾದ ಬ್ರಹ್ಮವು ಪರೋಕ್ಷವಾಗಿ ಗೃಹೀತವಾದ್ದರಿಂದ 'ಅಸ್ತಿ ಬ್ರಹ್ಮ' ಎಂಬ ಜ್ಞಾನವು ಭ್ರಮೆಯೆನಿಸಬಹುದಲ್ಲವೆ? ಇಲ್ಲ; ಪ್ರಕೃತದಲ್ಲಿ ''ಬ್ರಹ್ಮವು ಯಾವಾಗಲೂ ಪರೋಕ್ಷವೇ ಸರಿ. ಅಪರೋಕ್ಷವಾಗುವುದಿಲ್ಲ''

ಎಂದೇನೂ ತಿಳಿದಿಲ್ಲ. ಇಲ್ಲಿ ಅಪರೋಕ್ಷ (ಪ್ರತ್ಯಕ್ಷ)ವಾಗಿಲ್ಲವಾದ್ದರಿಂದ ಸಹಜವಾಗಿ ಪರೋಕ್ಷಜ್ಞಾನವಾಗಿದೆ *(೫೪). ಇನ್ನು ನಾಲ್ಕನೆಯ ಪ್ರಕಾರದಂತೆ, ಒಂದಂಶವು ಗೃಹೀತವಾಗದುದರಿಂದ 'ಅಸ್ತಿ ಬ್ರಹ್ಮ' ಎಂಬ ಜ್ಞಾನವು ಭ್ರಮೆಯಾಗಲಿ ಎನ್ನುವುದೂ ಯುಕ್ತವಲ್ಲ. ಆ ಪಕ್ಷದಲ್ಲಿ ಘಟವನ್ನು ಎದುರಿಗೆ ನೋಡಿದಾಗ ಬರುವ ಘಟಜ್ಞಾನವೂ ಭ್ರಮೆ ಇನ್ನಬೇಕಾದೀತು, ಘಟದ ಎಲ್ಲ ಅಂತರ್ಗತ ಭೇದಗಳನ್ನು ನೋಡಿಲ್ಲವಾದ್ದರಿಂದ. ''ಘಟವು ಸಾವಯವವಾದ್ದರಿಂದ ಅಂಶಗಳಿವೆ. ಬ್ರಹ್ಮವು ನಿರವಯವವಾದ್ದರಿಂದ ಅಂಶಗಳೇ ಇಲ್ಲ, ಬ್ರಹ್ಮದ ಅಂಶಜ್ಞಾನ - ಎಂಬ ಮಾತೇ ಸರಿಯಲ್ಲ'' ಎಂದು ಸಮಾಧಾನ ಹೇಳುವುದೂ ಯುಕ್ತವಲ್ಲ. ಚರಾಚರ ವಸ್ತುಗಳೆಲ್ಲವೂ ಬ್ರಹ್ಮಕ್ಕೆ ಉಪಾಧಿಗಳಾದ್ದರಿಂದ, ಉಪಾಧಿಸಂಬಂಧದಿಂದ ಬ್ರಹ್ಮವು ಸಾವಯವವಾಗ-ಬಹುದು. ಆದ ಕಾರಣ 'ಅಸ್ತಿ ಬ್ರಹ್ಮ' ಎಂಬುದು ಏಕಾಂಶಜ್ಞಾನವಾಗಿ ಭ್ರಮೆಯಾಗಬಹುದಲ್ಲವೆ? (೫೫). ಇಲ್ಲ; 'ಅಸ್ತಿ ಬ್ರಹ್ಮ' ಎಂಬ ಪರೋಕ್ಷಜ್ಞಾನದಿಂದ 'ಆತ್ಮನಿಲ್ಲ' ಎಂಬ ಅಸತ್ತ್ವಾಂಶವು ನಿವೃತ್ತವಾಗುತ್ತದೆ. ಅಪರೋಕ್ಷಜ್ಞಾನದಿಂದ 'ಆತ್ಮನು ತೋರುವುದಿಲ್ಲ' ಎಂಬ ಅಭಾನಾಂಶವು ನಿವೃತ್ತವಾಗುತ್ತದೆ (೫೬).'ಅಸ್ತಿ ಬ್ರಹ್ಮ' ಎಂಬ ಜ್ಞಾನವು ಜ್ಞಾನಕ್ಕೆ ಒಂದು ಮೆಟ್ಟಿಲಿನಂತೆ ಕಾರಣವಾದ್ದರಿಂದ ಭ್ರಮೆಯಲ್ಲ. ಹೇಗೆಂದರೆ, ಮೂಢನಿಗೆ 'ದಶಮನಿದ್ದಾನೆ' ಎಂದಾಗುವ ಜ್ಞಾನವು ಪರೋಕ್ಷವಾದದ್ದಷ್ಟೆ. ಅದು ಭ್ರಾಂತಿ ಯಲ್ಲ. ಹಾಗೆಯೇ ಬ್ರಹ್ಮವಿದೆಯೆಂಬ ಪರೋಕ್ಷಜ್ಞಾನವೂ ಭ್ರಮೆಯಲ್ಲ. ಅದು ಅಪರೋಕ್ಷಜ್ಞಾನಕ್ಕೆ ಬೇಕಾದ ಒಂದು ಅಂಶ. ಅಜ್ಞಾನದ ಆವರಣ ಉಭಯತ್ರ ಇದ್ದೇ ಇದೆ (೫೭).

'ಅಯಮಾತ್ಮಾ ಬ್ರಹ್ಮ' ಎಂಬ ಮಹಾವಾಕ್ಯದ ಅರ್ಥವನ್ನು ಪೂರ್ಣವಾಗಿ ವಿಚಾರಮಾಡಿದಾಗ 'ಅಯಂ' ಎಂಬ ವ್ಯಕ್ತಿಯಾರೆಂದು ತಿಳಿದು ಆತ್ಮನ ಅಪರೋಕ್ಷಜ್ಞಾನವಾಗುತ್ತದೆ. 'ದಶಮನು ನೀನೇ' ಎಂದಾಗ ದಶಮನು ತಾನೇ ಎಂದು ತಿಳಿಯುವಂತೆ ಆತ್ಮನು ತಾನೇ ಎಂದು ಅಪರೋಕ್ಷಜ್ಞಾನವು ಹುಟ್ಟುತ್ತದೆ (೫೮). 'ದಶಮನಿದ್ದಾನೆ' ಎಂದು ಆಪ್ತನು ಹೇಳಿದಾಗ ಅವನು

* ಹೇಗೆಂದರೆ, ಹನುಮಂತನು ಅಶೋಕವನದಲ್ಲಿ ಸೀತೆಯನ್ನು ಪ್ರತ್ಯಕ್ಷವಾಗಿ ನೋಡುವುದಕ್ಕೆ ಮೊದಲು, 'ಲಂಕೆಯಲ್ಲಿ ಸೀತೆ ಇದ್ದಾಳೆ' ಎಂದು ಪರೋಕ್ಷವಾಗಿ ತಿಳಿದಿದ್ದನು. ಅದು ಸಹಜವಾದ ಆರಂಭದ ಪರೋಕ್ಷಜ್ಞಾನ. ಆದರೆ ಭ್ರಮೆಯಲ್ಲ. ಸೀತೆಯು ಪ್ರತ್ಯಕ್ಷಳಾಗುವುದಿಲ್ಲ- ಎಂದು ತಿಳಿದಿದ್ದರೆ ಭ್ರಮೆಯಾಗುತ್ತಿತ್ತು.

ಯಾರು? - ಎಂದು ಮೂಢನು ಕೇಳಿದಾಗ, ದಶಮನು ನೀನೇ ಎಂದು ಉತ್ತರಬರುತ್ತದೆ. ಆಗ ಮೂಢನು ಒಂದು, ಎರಡು -ಎಂದು ಎಣಿಸಿನೋಡಿ ತಾನೇ ದಶಮನೆಂದು ದೃಢಪಡಿಸಿಕೊಳ್ಳುತ್ತಾನೆ. ಮರೆತುಹೋದ್ದನ್ನು ಸ್ಮರಿಸಿಕೊಳ್ಳುತ್ತಾನೆ. 'ದಶಮನು ನೀನೇ' ಎಂದಾಗ ಯಾವ ಜ್ಞಾನ ಹುಟ್ಟುವುದೋ ಆ ಜ್ಞಾನವೇನೂ ಬಾಧಿತವಾಗುವುದಿಲ್ಲ. ಎಣಿಸುವಾಗ ಆದಿ ಮಧ್ಯಾವ ಸಾನಗಳಲ್ಲಿ ಯಾವನೋ ಒಬ್ಬನು ದಶಮನಾಗಿರಬಹುದೆ? ಎಂಬ ಸಂಶಯವೂ ಇರುವುದಿಲ್ಲ (೫೯-೬೦). ಹಾಗೆಯೇ ಪ್ರಕೃತದಲ್ಲಿಯೂ **'ಸದೇವ ಸೌಮ್ಯೇದಮಗ್ರ ಆಸೀತ್ ಏಕಮೇವಾದ್ವಿತೀಯಂ ಬ್ರಹ್ಮ'** (ಛಾಂ.ಉ.೬-೨-೧) ಇತ್ಯಾದಿ ವಾಕ್ಯಗಳಿಂದ ಬ್ರಹ್ಮವಿದೆ ಎಂದು ನಿಶ್ಚಯಿಸಿಕೊಳ್ಳುತ್ತಾನೆ. ಅನಂತರ **'ಅನೇನ ಜೀವೇನ ಆತ್ಮನಾ ಅನುಪ್ರವಿಶ್ಯ'** ಇತ್ಯಾದಿ ವಾಕ್ಯಗಳಿಂದ ಆ ಬ್ರಹ್ಮವು ತನ್ನ ಶರೀರದಲ್ಲಿ ಪ್ರವೇಶಿಸಿದೆ ಎಂದೂ ಅದು ಪ್ರತ್ಯಕ್ ಸ್ವರೂಪವಾಗಿದೆಯೆಂದೂ ಗೊತ್ತುಮಾಡಿಕೊಳ್ಳುತ್ತಾನೆ. ಆಮೇಲೆ **'ತತ್ತ್ವಮಸಿ'** ಇತ್ಯಾದಿ ವಾಕ್ಯಗಳಿಂದ ಅದ್ವಿತೀಯವಾದ ಆ ಬ್ರಹ್ಮವು ತಾನೇ ಎಂದು ತಿಳಿದು **'ಅಹಂ ಬ್ರಹ್ಮಾಸ್ಮಿ'** ಎಂದು ಸಾಕ್ಷಾತ್ಕಾರ ಮಾಡಿಕೊಳ್ಳುತ್ತಾನೆ (೬೧). ಅಂತೆಯೇ ಅನ್ನಮಯ, ಪ್ರಾಣಮಯ, ಮನೋಮಯ, ವಿಜ್ಞಾನಮಯ ಮತ್ತು ಆನಂದಮಯ ಕೋಶಗಳನ್ನು ಶೋಧಿಸಿದಾಗಲೂ ತಾನು ಬ್ರಹ್ಮ ಎಂಬ ಬುದ್ಧಿ ಬಾಧಿತವಾಗುವುದಿಲ್ಲ. ಏವಂಚ ಬ್ರಹ್ಮದ ಅಪರೋಕ್ಷಜ್ಞಾನವು ಸುಪ್ರತಿಷ್ಠಿತವಾಗಿ ನಿಂತು ಬಿಡುತ್ತದೆ (೬೨). ಮೊದಲು ಹುಟ್ಟುವುದು ಪರೋಕ್ಷಜ್ಞಾನ. ವಿಚಾರಮಾಡಿದ ಮೇಲೆ ಅನಂತರ ಹುಟ್ಟುವುದು ಅಪರೋಕ್ಷಜ್ಞಾನ. ಇದಕ್ಕೊಂದು ಉದಾಹರಣೆಯನ್ನು ಕೊಡಬಹುದು. ತೈತ್ತಿರೀಯೋಪನಿಷತ್ತಿನಲ್ಲಿ **'ಯತೋ ವಾ ಇಮಾನಿ ಭೂತಾನಿ ಜಾಯಂತೇ'.....** ಇತ್ಯಾದಿ ವಚನಗಳಿವೆ. ವರುಣನು ತನ್ನ ಪುತ್ರನಾದ ಭೃಗುವಿಗೆ ''ಜಗತ್ತಿನ ಜನ್ಮಸ್ಥಿತಿನಾಶಗಳಿಗೆ ಕಾರಣವಾದದ್ದು ಬ್ರಹ್ಮ'' ಇತ್ಯಾದಿ ವಚನಗಳಿಂದ ಉಪದೇಶಿಸಿದ್ದಾನೆ. ಭೃಗುವು ಇದರಿಂದ ಪರೋಕ್ಷವಾಗಿ ಬ್ರಹ್ಮಲಕ್ಷಣವನ್ನು ಅರಿತನು. ಪಂಚಕೋಶಾದಿಗಳ ವಿಚಾರಮಾಡಿದ ಮೇಲೆ ಆತನು ಪ್ರತ್ಯಗಾತ್ಮನ ಸಾಕ್ಷಾತ್ಕಾರವನ್ನು ಮಾಡಿಕೊಂಡನು (೬೩). ಭೃಗುವಿನ ತಂದೆಯಾದ ವರುಣನು ಭೃಗುವಿಗೆ 'ನೀನೇ ಪ್ರತ್ಯಗಾತ್ಮನಾಗಿದ್ದೀಯೆ' ಎಂದೇನೂ ಹೇಳಲಿಲ್ಲ. ಆದರೂ ಅನ್ನ, ಪ್ರಾಣ, ಮನಸ್ಸು- ಮುಂತಾದ ವಿಚಾರ ಸ್ಥಳಗಳನ್ನು ಹೇಳಿದ್ದಾನೆ (೬೪). ಶಂಕೆ - ಅನ್ನಾದಿ ಕೋಶಗಳನ್ನು

ವಿಚಾರಮಾಡಿದಾಗ ಪ್ರತ್ಯಕ್ ಆದ ಜೀವಾತ್ಮನ ಸಾಕ್ಷಾತ್ಕಾರವಾಗಬಹುದು. ಬ್ರಹ್ಮದ ಸಾಕ್ಷಾತ್ಕಾರ ಹೇಗಾಗುತ್ತದೆ? ಉತ್ತರ - ಪ್ರತ್ಯಗಾತ್ಮನೇ ಬ್ರಹ್ಮವಾದ್ದರಿಂದ ಅದು ಬ್ರಹ್ಮಸಾಕ್ಷಾತ್ಕಾರವೆಂದು ತಿಳಿಯಬಹುದು. ಪಂಚಕೋಶಗಳನ್ನು ವಿಚಾರಮಾಡಿ ತಾನು ಆನಂದಸ್ವರೂಪನೆಂದು ಭೃಗು ತಿಳಿಯುತ್ತಾನಷ್ಟೆ ಆಗ **''ಆನಂದಾದ್ಧ್ಯೇವ ಖಲ್ವಿಮಾನಿಭೂತಾನಿ ಜಾಯಂತೇ ...''** (ತೈ.ಉ.೩-೬) ಇತ್ಯಾದಿ ವಚನಗಳಿಂದ ಬ್ರಹ್ಮಲಕ್ಷಣವನ್ನು ಆನಂದದಲ್ಲಿಯೇ ಸಮನ್ವಯ ಮಾಡಿಕೊಂಡಿದ್ದಾನೆ. ಇದರಿಂದ ಪ್ರತ್ಯಗಾದ ಆನಂದವೇ ಬ್ರಹ್ಮವೆಂದು ಬ್ರಹ್ಮಸಾಕ್ಷಾತ್ಕಾರವಾಗಿಯೇ ಇದೆ (೬೫). **''ಸತ್ಯಂ ಜ್ಞಾನಮನಂತಂ ಬ್ರಹ್ಮ''** (ತೈ.ಉ.೨-೧-೧) ಎಂದು ಬ್ರಹ್ಮದ ಸ್ವರೂಪಲಕ್ಷಣ. ಅದೇ ಪ್ರತ್ಯಗಾತ್ಮ ಹೇಗಾದೀತು? - ಎಂದು ಶಂಕಿಸಬೇಕಾಗಿಲ್ಲ. ಸ್ವರೂಪಲಕ್ಷಣವನ್ನು ಹೇಳಿದ ಶ್ರುತಿಯೇ **'ಯೋ ವೇದ ನಿಹಿತಂ ಗುಹಾಯಾಂ ಪರಮೇ ವ್ಯೋಮನ್'** (ತೈ.ಉ.೨-೧-೨) ಎಂದು ಈ ಪಂಚಕೋಶಗಳ ಒಳಗೆ ಆ ಬ್ರಹ್ಮವಿದೆಯೆಂದು ತಿಳಿಸಿದೆ. ಅದೇ ಪ್ರತ್ಯಗಾತ್ಮ (೬೬). ಇದಿಷ್ಟು ತೈತ್ತಿರೀಯ ಶ್ರುತಿಯ ಪರ್ಯಾಲೋಚನೆಯಾಯಿತು.

ಛಾಂದೋಗ್ಯದಲ್ಲಿಯೂ ಈ ವಿಚಾರವೇ ಇದೆ. **'ಯ ಆತ್ಮಾ ಅಪಹತಪಾಪ್ಮಾ ವಿಜರೋ ವಿಮೃತ್ಯುರ್ವಿಶೋಕಃ'** (ಛಾಂ.ಉ.೮-೭-೧) ಇತ್ಯಾದಿವಾಕ್ಯಪ್ರತಿಪ್ರಾದಿತವಾದ ಲಕ್ಷಣದಿಂದ ಆತ್ಮಸ್ವರೂಪವನ್ನು ಇಂದ್ರನು ಪರೋಕ್ಷವಾಗಿ ತಿಳಿದುಕೊಂಡನು. ಆಮೇಲೆ ವಿಚಾರಮಾಡಿ ಸ್ಥೂಲ ಸೂಕ್ಷ್ಮಕಾರಣಗಳೆಂಬ ಶರೀರತ್ರಯವೂ ಆತ್ಮನಲ್ಲವೆಂದು ನಿರ್ಧರಿಸಿ ಆತ್ಮನ ಅಪರೋಕ್ಷಜ್ಞಾನವನ್ನು ಪಡೆಯುವುದಕ್ಕಾಗಿ ನಾಲ್ಕು ಸಲ ತನ್ನ ಗುರುವಿನ ಬಳಿಗೆ ಹೋಗಿದ್ದನು (೬೭). ಐತರೇಯೋಪನಿಷತ್ತಿನಲ್ಲಿ **'ಆತ್ಮಾ ವಾ ಇದಮೇಕ ಏವಾಗ್ರ ಆಸೀತ್'** (ಐ.ಉ.೧-೧) ಎಂದು ಬ್ರಹ್ಮದ ಲಕ್ಷಣವನ್ನು ಮೊದಲು ಹೇಳಿದೆ. ಅನಂತರ **'ಸ ಐಕ್ಷತ ಲೋಕಾನ್ನು ಸೃಜಾ ಇತಿ'** (ಐ.ಉ.೪-೧-೨) ಎಂದು ಆರಂಭಿಸಿ **'ತಸ್ಯತ್ರಯ ಆವಸಥಾಸ್ತ್ರಯಃ ಸ್ವಪ್ನಾಃ....'** ಎಂದು ಪರಮಾತ್ಮನಲ್ಲಿ ಜಗತ್ತನ್ನು ಅಧ್ಯಾರೋಪಿಸಲಾಗಿದೆ. ಆಮೇಲೆ **'ಸ ಜಾತೋ ಭೂತಾನ್ಯಭಿವ್ಯೈಕ್ಷತ'** (ಐ.ಉ.೪-೩-೧೨) ಎಂದು ಆರೋಪಿತ ಜಗತ್ತಿಗೆ ಅಪವಾದವನ್ನು ಹೇಳಿ **'ಸ ಏತಮೇವ ಪುರುಷಂ ಬ್ರಹ್ಮ ತತಮಪಶ್ಯತ್'** (ಐ.ಉ.೪-೩-೧೩) ಎಂದು ಬ್ರಹ್ಮವು ಪ್ರತ್ಯಗಾತ್ಮ ಸ್ವರೂಪವಾಗಿದೆ - ಎಂದು

ತಿಳಿಸಿದೆ. ಪುನಃ ಜ್ಞಾನಸಾಧನವಾದ ವೈರಾಗ್ಯವು ಹುಟ್ಟಲೆಂದು **'ಪುರುಷೇ ಹ ವಾ'** (ಐ.ಉ.೫-೪-೧) ಮುಂತಾದವಚನಗಳಿಂದ ಗರ್ಭವಾಸಾದಿ ದುಃಖವನ್ನು ವಿವರಿಸಿದೆ. ಆಮೇಲೆ ತತ್ತ್ವಂ ಪದಾರ್ಥಗಳನ್ನು ಪರಿಶೋಧಿಸಿ **'ಪ್ರಜ್ಞಾನಂ ಬ್ರಹ್ಮ'** (ಐ.ಉ.೫-೩) ಪ್ರಜ್ಞಾನ ಸ್ವರೂಪನಾದ ಆತ್ಮನೇ ಬ್ರಹ್ಮವೆಂದು ಸ್ಪಷ್ಟವಾಗಿ ತಿಳಿಸಿಕೊಟ್ಟಿದೆ (೬೮). ಈ ಪ್ರಕಾರವಾಗಿ ಎಲ್ಲ ಉಪನಿಷತ್ತುಗಳಲ್ಲಿರುವ ಅವಾಂತರವಾಕ್ಯಗಳಿಂದಲೂ ಬ್ರಹ್ಮಜ್ಞಾನವೂ ಪರೋಕ್ಷವಾಗಿ ಬರುತ್ತದೆ. ಮಹಾವಾಕ್ಯಗಳ ವಿಚಾರದಿಂದ ಅಪರೋಕ್ಷಜ್ಞಾನವಾಗುತ್ತದೆ. ಶ್ರೀಶಂಕರಾಚಾರ್ಯರು ರಚಿಸಿದ ವಾಕ್ಯವೃತ್ತಿಯೆಂಬ ಗ್ರಂಥದಲ್ಲಿ 'ಬ್ರಹ್ಮದ ಅಪರೋಕ್ಷಜ್ಞಾನವನ್ನುಂಟು ಮಾಡುವುದಕ್ಕೆ ಈ ನಾಲ್ಕು ಮಹಾವಾಕ್ಯಗಳು ಉಪಯುಕ್ತವಾಗುತ್ತವೆ' ಎಂದು ಉಕ್ತವಾಗಿದೆ. ಇದರಲ್ಲಿ ವಿವಾದವಿಲ್ಲ (೬೯-೭೦). **'ತತ್ತ್ವಮಸಿ'** ಎಂಬ ಮಹಾವಾಕ್ಯದಿಂದಾಗುವ ಅಪರೋಕ್ಷಜ್ಞಾನವನ್ನು ವಾಕ್ಯವೃತ್ತಿಯಲ್ಲಿ ಮುಂದೆ ಹೇಳುವಂತೆ ಉಪಪಾದಿಸಿದ್ದಾರೆ. ತ್ವಂ - ಎಂದರೆ ನೀನು ಎಂಬ ಅರ್ಥವು ಪ್ರಸಿದ್ಧವಾಗಿದೆಯಷ್ಟೆ ಆ ಪದದಿಂದ ಉಪದೇಶಕ್ಕೆ ಒಳಗಾಗುವ ಶಿಷ್ಯನು ಯಾವುದನ್ನು ಗ್ರಹಿಸಬೇಕೆಂದರೆ - ನಾವು 'ಅಹಂ-ನಾನು' ಎನ್ನುವಾಗ ಅಹಂ ಶಬ್ದಕ್ಕೂ ಅದರಿಂದಾಗುವ ಜ್ಞಾನಕ್ಕೂ ವಿಷಯವಾದದ್ದು ಅಂತಃಕರಣವೆಂಬ ಉಪಾಧಿಗೆ ಒಳಪಟ್ಟ ಚಿದಾತ್ಮ. 'ತ್ವಂ-ನೀನು' ಎಂದಾಗಲೂ ಅಂತಃಕರಣೋಪಾಧಿಯುಳ್ಳ ಚಿದಾತ್ಮನೆಂದರ್ಥ. ಇದು ವಾಚ್ಯಾರ್ಥ (೭೧). ಇನ್ನು 'ತತ್' ಪದದ ಅರ್ಥ ಯಾವುದು? ಮಾಯೋಪಾಧಿಯೂ ಜಗತ್ತಿಗೆ ಕಾರಣನೂ ಸರ್ವಜ್ಞತ್ವಸರ್ವಶಕ್ತತ್ವಾದಿಲಕ್ಷಣಗಳುಳ್ಳವನೂ ಪರೋಕ್ಷತಾಧರ್ಮ ವಿಶಿಷ್ಟನೂ (ಪರೋಕ್ಷನೂ) ಮತ್ತು ಸಚ್ಚಿದಾನಂದಸ್ವರೂಪನೂ ಆದವನು ತತ್‌ಪದದ ವಾಚ್ಯಾರ್ಥ. ಇಲ್ಲಿ 'ಮತ್ತು' ಶಬ್ದಕ್ಕೆ ಮೊದಲು ಹೇಳಿದ್ದು ಆತ್ಮನ ತಟಸ್ಥ ಲಕ್ಷಣ. ಅನಂತರ ಹೇಳಿದ ಸಚ್ಚಿದಾನಂದ ಸ್ವರೂಪನೆಂಬುದು ಬ್ರಹ್ಮದ ಸ್ವರೂಪಲಕ್ಷಣ (೭೨). ಈಗ 'ಅಸಿ' ಎಂಬ ಪದವಿರುವುದರಿಂದ ಈ ಎರಡು ಪದಾರ್ಥಗಳಿಗೂ ಅಭೇದವಿದೆಯಂದು ವಾಕ್ಯಾರ್ಥವಾಗುತ್ತದೆ. ಹಿಂದೆ ಹೇಳಿದ ಆ ಎರಡು ಶಬ್ದಗಳ ವಾಚ್ಯಾರ್ಥಗಳಿಗೆ ಅಭೇದವು ಬಾಧಿತವಾಗಿರುವುದರಿಂದ ಲಕ್ಷಣಾವೃತ್ತಿಯನ್ನಾಶ್ರಯಿಸಿ ಅವುಗಳ ಅರ್ಥವನ್ನು ಬೇರೆಯಾಗಿ ಗ್ರಹಿಸಬೇಕು. ಏಕೆಂದರೆ, ಒಂದೇ ವಸ್ತು ಪ್ರತ್ಯಕ್ - ಪರೋಕ್ಷ

ಎಂದು ಎರಡೂ ಆಗಲಾರದು. ಹಾಗೆಯೇ ಒಂದು ವಸ್ತು ಪರಿಚ್ಛಿನ್ನ ಅಪರಿಚ್ಛಿನ್ನ ಎಂದು ಎರಡೂ ಆಗಲಾರದು. ಆದ್ದರಿಂದ ಈ ವಿರೋಧವನ್ನು ಪರಿಹರಿಸುವುದಕ್ಕಾಗಿ ಲಕ್ಷಣಾವೃತ್ತಿಯನ್ನು ಆಶ್ರಯಿಸಬೇಕಾಗಿದೆ (೭೩).

**ತತ್ತ್ವಮಸಿ** - ಮುಂತಾದ ವಾಕ್ಯಗಳಲ್ಲಿ ಆಶ್ರಯಿಸಬೇಕಾದ ಲಕ್ಷಣಾವೃತ್ತಿಗೆ ಭಾಗಲಕ್ಷಣಾ ಎಂದು ಹೆಸರು. ಭಾಗತ್ಯಾಗಲಕ್ಷಣಾ ಎಂದರೂ ಇದೇ. **ಸೋಽಯಂ ದೇವದತ್ತಃ** = ಅವನೇ ಈ ದೇವದತ್ತ ಎಂಬಲ್ಲಿ ಆಶ್ರಯಿಸುವ ಲಕ್ಷಣೆಯೇ ಇದು. ಅಲ್ಲಿ ಸಃ ಅಯಂ ಎಂಬ ಪದಗಳಿಗೆ ಆಶ್ರಯಿಸುವ ಜಹದಜಹಲ್ಲಕ್ಷಣಾ ಎಂದರೆ ಈ ಭಾಗತ್ಯಾಗಲಕ್ಷಣೆಯೇ. ಜಹತ್ = ವಾಚ್ಯಾರ್ಥದಲ್ಲಿರುವ ಒಂದಂಶವನ್ನು ತ್ಯಜಿಸುವ. ಅಜಹತ್ = ವಾಚ್ಯಾರ್ಥದಲ್ಲಿ ಇನ್ನೊಂದು ಅಂಶವನ್ನು ತ್ಯಜಿಸದಿರುವ, ಇದು ಬರಿಯ ಜಹಲ್ಲಕ್ಷಣೆಯೂ ಅಲ್ಲ, ಬರಿಯ ಅಜಹಲ್ಲಕ್ಷಣೆಯೂ ಆಲ್ಲ (೭೪). ಇಲ್ಲಿ ಪೀಠಿಕೆಯಾಗಿ ಹೇಳಬೇಕಾದದ್ದಿದೆ. ಒಂದು ವಾಕ್ಯದ ಅರ್ಥವಾಗಬೇಕಾದರೆ ಆಕಾಂಕ್ಷೆ, ಯೋಗ್ಯತೆ, ಆಸಕ್ತಿ ತಾತ್ಪರ್ಯ - ಇವುಗಳ ಜ್ಞಾನವಿರಬೇಕು. ಆಗ ಪದಾರ್ಥಗಳ ಅನ್ವಯಕ್ರಮವು ತಿಳಿದು ಬರುತ್ತದೆ. ಆದ್ದರಿಂದ ಪದಾರ್ಥಗಳ ಸಂಸರ್ಗವೇ (ಅನ್ವಯವೇ) ವಾಕ್ಯಾರ್ಥವೆನ್ನುತ್ತಾರೆ. ಪದಾರ್ಥಗಳ ಸಂಸರ್ಗದಿಂದ ಉಂಟಾಗುವ ಪದಗಳ ಸಮುದಿತಾರ್ಥವು ವಾಕ್ಯಾರ್ಥವೆಂದು ಆಭಿಪ್ರಾಯ. ಸಂಸರ್ಗವು ಕೇವಲ, ವಿಶಿಷ್ಟ ಎಂದು ಎರಡು ವಿಧ. ಸುಂದರಂ ಕಮಲಂ = ಸುಂದರಾಭಿನ್ನಕಮಲವೆಂದು ಅರ್ಥ. ಇದು ಕೇವಲ ಸಂಸರ್ಗ. ಆತ್ಯಂತ ಸುಂದರಂ ಕಮಲಂ = ಅತ್ಯಂತತ್ವವಿಶಿಷ್ಟ ಸುಂದರಾಭಿನ್ನಕಮಲವೆಂದರ್ಥ. ಇದು ವಿಶಿಷ್ಟ ಸಂಸರ್ಗ. ತತ್‌ತ್ವಮಸಿ - ಎಂಬಲ್ಲಿ ತತ್ ತ್ವಮ್ ಪದಗಳಿಗೆ ವಾಕ್ಯಾರ್ಥವು ಕೇವಲ ಸಂಸರ್ಗವೂ ಅಲ್ಲ, ವಿಶಿಷ್ಟ ಸಂಸರ್ಗವೂ ಅಲ್ಲ. ಅಖಂಡೈಕರಸವೇ ವಾಕ್ಯಾರ್ಥವೆಂದು ವಿದ್ವಜ್ಜನರು ಅಂಗೀಕರಿಸಿದ್ದಾರೆ. ಅಖಂಡೈಕರಸವೆಂದರೆ ಸ್ವಗತಾದಿಭೇದತ್ರಯ ಶೂನ್ಯ ವಸ್ತುಮಾತ್ರವೆಂದರ್ಥ. ಭಾಗತ್ಯಾಗಲಕ್ಷಣೆಯಿಂದ ಈ ಅರ್ಥವು ಲಭ್ಯವಾಗುತ್ತದೆ (೭೫). ಅದು ಹೇಗೆಂದರೆ, ಪ್ರತ್ಯಗ್‌ಬೋಧ - ಎಂದರೆ - ಸರ್ವಾಂತರನಾಗಿದ್ದು ಬುದ್ಧಿ ಮೊದಲಾದವುಗಳಿಗೆ ಸಾಕ್ಷಿಯಾಗಿ ಸ್ಫುರಿಸತಕ್ಕವನು, ಅದ್ವಿತೀಯಾನಂದರೂಪ ಪರಮಾತ್ಮನು. ಈ ಅದ್ವಿತೀಯಾನಂದ ರೂಪನಾದ ಪರಮಾತ್ಮನೇ ಪ್ರತ್ಯಗಾತ್ಮನು - ಎಂದರ್ಥ (೭೬). ಈ ಪ್ರಕಾರವಾಗಿ ಅನ್ಯೋನ್ಯತಾದಾತ್ಮ್ಯವು - ಪ್ರತ್ಯಗಾತ್ಮವೇ

ಬ್ರಹ್ಮ, ಬ್ರಹ್ಮವೇ ಪ್ರತ್ಯಗಾತ್ಮ - ಎಂಬುದು - ಯಾವಾಗ ತೋರುತ್ತದೆಯೋ ಆಗ 'ತ್ವಂ' ಎಂಬುದು ಬ್ರಹ್ಮವಲ್ಲ ಎಂಬ ಭ್ರಾಂತಿಯು ಹೊರಟುಹೋಗುತ್ತದೆ. ತತ್ ಪದಾರ್ಥವಾದ ಬ್ರಹ್ಮವು ಪರೋಕ್ಷವೆಂಬ ಜ್ಞಾನವೂ ನಿವೃತ್ತವಾಗುತ್ತದೆ. ಇದರಿಂದ ಏನಾಗುತ್ತದೆ? ಎಂದರೆ, ಕೇಳು. ಇದುವರೆಗೆ ಪ್ರತ್ಯಕ್ ಎಂದು ಯಾವ ಜ್ಞಾನವಿತ್ತೋ ಅದು ಪೂರ್ಣಾನಂದವೆಂಬ ಅಖಂಡರಸವಾಗಿ ನಿಂತುಬಿಡುತ್ತದೆ (೭೭-೭೮). ಇಷ್ಟಾದರೂ ಯಾರು ಮಹಾವಾಕ್ಯದಿಂದ ಪರೋಕ್ಷಜ್ಞಾನವು ಮಾತ್ರ ಹುಟ್ಟುತ್ತದೆ ಎನ್ನುತ್ತಾರೋ ಅವರಿಗಿರುವ ಶಾಸ್ತ್ರಸಿದ್ಧಾಂತಜ್ಞಾನವು ಬಹುದೊಡ್ಡದು ಎನ್ನಬೇಕಾಗುತ್ತದೆ ! (ಸಿದ್ಧಾಂತ ಜ್ಞಾನವಿಲ್ಲ ಎಂದರ್ಥ) (೭೯). ಪೂರ್ವಪಕ್ಷಿ :-ಒಳ್ಳೆಯದು, ಶಾಸ್ತ್ರಸಿದ್ಧಾಂತವು ಹೇಗಾದರೂ ಇದ್ದುಕೊಳ್ಳಲಿ, ಮಹಾವಾಕ್ಯದಿಂದ ಹುಟ್ಟುವ ಜ್ಞಾನವು ಪರೋಕ್ಷವೆಂದು ಯುಕ್ತಿಯಿಂದ ಸಾಧಿಸಬಹುದು. ಹೇಗೆಂದರೆ,

೧. ವಿವಾದಕ್ಕೆ ವಿಷಯವಾದ ಮಹಾವಾಕ್ಯವು ಪರೋಕ್ಷಜ್ಞಾನವನ್ನುಂಟು ಮಾಡುತ್ತದೆ.

೨. ವಾಕ್ಯವಾದ್ದರಿಂದ .

೩. ಸ್ವರ್ಗಾದಿಜನಕವಾದ ವಾಕ್ಯವು ಸ್ವರ್ಗಾದಿಗಳ ಪರೋಕ್ಷಜ್ಞಾನವನ್ನುಂಟು ಮಾಡುವಂತೆ.

೪. ಇದೂ ಹಾಗೆಯೇ ವಾಕ್ಯಜನ್ಯಜ್ಞಾನ.

೫. ಆದ್ದರಿಂದ ಈ ಜ್ಞಾನವು ಪರೋಕ್ಷವೇ ಸರಿ.

ಈ ಪ್ರಕಾರವಾದ ಅನುಮಾನದಿಂದ ಮಹಾವಾಕ್ಯಜನ್ಯಜ್ಞಾನವು ಪರೋಕ್ಷವಾಗುತ್ತದೆ - ಎಂದು ಪೂರ್ವಪಕ್ಷಿಯ ಆಶಯ. ಇದಕ್ಕೆ ಸಿದ್ಧಾಂತಿ ಹೇಳುವುದೇನೆಂದರೆ, ಈ ಅನುಮಾನದಲ್ಲಿ 'ವಾಕ್ಯವಾದ್ದರಿಂದ' ಎಂಬ ಹೇತು ಸರಿಯಾದ ಹೇತುವಲ್ಲ, ಅದು ಅನೈಕಾಂತಿಕವೆಂಬ ದುಷ್ಟಹೇತು. ಅದು ವ್ಯಭಿಚರಿತವಾಗಿದೆ. ಹೇಗೆಂದರೆ,ಹಿಂದೆತೋರಿಸಿದ ದಶಮಪುರುಷದೃಷ್ಟಾಂತ ದಲ್ಲಿ ನೀನೇ ದಶಮ - ಎಂಬ ವಾಕ್ಯದಿಂದ ಹುಟ್ಟಿದ ಜ್ಞಾನವು ಪರೋಕ್ಷವಲ್ಲ, ಅದು ಅಪರೋಕ್ಷಜ್ಞಾನವೆಂದು ಸ್ಪಷ್ಟವಾಗಿದೆ. ಆದಕಾರಣ ಈ ಅನುಮಾನವು ಅಸಂಗತವಾದದ್ದು (೮೦). ಪೂರ್ವಪಕ್ಷಿ - 'ನಾನು ಜೀವ' ಎಂಬ ಜ್ಞಾನವು ಅಪರೋಕ್ಷವೆಂದು ಮೊದಲೇ ಸಿದ್ಧವಾಗಿತ್ತು, ಆತನಿಗೆ ತಾನು

ಬ್ರಹ್ಮವಾಗಬೇಕೆಂಬ ಇಚ್ಛೆ ಇತ್ತು. ಮಹಾವಾಕ್ಯವನ್ನು ಕೇಳಿದ ಮೇಲೆ ಮೊದಲು ಸಿದ್ಧವಾಗಿದ್ದ ಅಪರೋಕ್ಷತ್ವವೂ ಹೊರಟುಹೋಯಿತು!'' ಸಿದ್ಧಾಂತಿ - ಆಹಾ! ಎಂತಹ ಯುಕ್ತಿ! (೮೧). ಅಯ್ಯೋ! ಪೂರ್ವಪಕ್ಷಿಯೆ, '**ವೃದ್ಧಿಮಿಷ್ಟವತೋ ಮೂಲಮಪಿ ನಷ್ಟಂ**' ಎಂದು ಲೋಕದಲ್ಲೊಂದು ಗಾದೆ ಇದೆ. ಬಡ್ಡಿಯು ಬರಲೆಂದು ಒಬ್ಬನು ತನ್ನ ಬಂಡವಾಳ ಹಣವನ್ನು ಒಂದು ಸಂಸ್ಥೆಯಲ್ಲಿಟ್ಟಿದ್ದ, ಬಡ್ಡಿ ಇರಲಿ, ಬಂಡವಾಳವೂ ನಾಶವಾಯಿತು - ಎಂಬ ಗಾದೆಯು ನಿನ್ನ ಅನುಗ್ರಹದಿಂದ ಸಾರ್ಥಕವಾಯಿತು! (೮೨) ಪೂರ್ವಪಕ್ಷಿ- ಇದು ಹೇಗೆ? ಜೀವನು ಅಂತಃಕರಣಾವಚ್ಛಿನ್ನನಾಗಿದ್ದಾನೆ. ಉಪಾಧಿ ಇರುವುದರಿಂದ ಪ್ರತ್ಯಕ್ಷನಾಗಬಹುದು. ಬ್ರಹ್ಮವು ಉಪಾಧಿರಹಿತವಾದದ್ದು. ಅದರ ಪ್ರತ್ಯಕ್ಷ ಜ್ಞಾನವು ಹೇಗಾದೀತು? - ಎಂದು ಪೂರ್ವಪಕ್ಷಿಯ ಆಕ್ಷೇಪ (೮೩). ಅದಕ್ಕೆ ಸಿದ್ಧಾಂತಿಯು ಹೇಳುತ್ತಾನೆ - ಹಾಗಲ್ಲ; 'ಅಂತಃಕರಣೋಪಾಧಿವಿಶಿಷ್ಟನಾದ ಜೀವನು ಬ್ರಹ್ಮವೇ' ಎಂಬ ಜ್ಞಾನದಲ್ಲಿ ಉಪಾಧಿಯು ವಿಷಯವಾಗುವುದರಿಂದ ಈ ಜ್ಞಾನವು ಸೋಪಾಧಿಕವೆ ಆಗುತ್ತದೆ. ಆದ್ದರಿಂದ ಬ್ರಹ್ಮವೂ ಪ್ರತ್ಯಕ್ಷವೇ ಆಗುತ್ತದೆ. (ಪ್ರತ್ಯಕ್ಷವೆಂದರೆ ಅಪರೋಕ್ಷ). ವಿದೇಹ ಕೈವಲ್ಯವಾಗುವವರೆಗೂ ಈ ಉಪಾಧಿಯು ಜ್ಞಾನಗೋಚರವಾಗಿಯೇ ಇರುತ್ತದೆ. ಆದ್ದರಿಂದ ಜೀವನ್ಮುಕ್ತನಿಗೆ ಬ್ರಹ್ಮದ ಅಪರೋಕ್ಷಜ್ಞಾನವಾಗಿರುತ್ತದೆ - ಎಂದೇ ತಿಳಿಯಬೇಕು (೮೪).

ಹಾಗಾದರೆ ಜೀವನ್ಮುಕ್ತಸ್ಥಿತಿಯಲ್ಲಿ ಬ್ರಹ್ಮಕ್ಕಿರುವ ಉಪಾಧಿ ಯಾವುದು? ಅಂತಃಕರಣರಾಹಿತ್ಯವು ಆಗ ಬ್ರಹ್ಮದ ಉಪಾಧಿ. ಅಂತಃಕರಣಸಾಹಿತ್ಯವು ಜೀವನ ಉಪಾಧಿ. ಅಂತಃಕರಣ ಸಹಿತವಾದದ್ದು ಜೀವವೆನಿಸಿದರೆ ಅಂತಃಕರಣ ರಹಿತವಾದದ್ದು ಬ್ರಹ್ಮವೆನಿಸುತ್ತದೆ. ಇಷ್ಟೇ ಭೇದ (೮೫). ಶಂಕೆ - ಇದು ವಿಚಿತ್ರ! ಅಂತಃಕರಣಸಾಹಿತ್ಯವು ಭಾವರೂಪವಾದದ್ದು. ಜೊತೆಯಲ್ಲಿ ಅಂತಃಕರಣ ವಿರುತ್ತದೆ. ಅದು ಉಪಾಧಿಯಾಗಬಹುದು. ಅಂತಃಕರಣ ರಾಹಿತ್ಯವು ಅಭಾವರೂಪವಾದದ್ದು. ಅಂತಃಕರಣವಿಲ್ಲದಿರುವುದೇ ಉಪಾಧಿಯಾಗಿ ಬಿಡುತ್ತದೆಯೇ? ಉತ್ತರ- ಏಕೆ ಆಗಬಾರದು? ವಿಧಿಯು ಉಪಾಧಿಯಾದರೆ ಪ್ರತಿಷೇಧವು ಏಕೆ ಉಪಾಧಿಯಲ್ಲ? ವಿಧಿಯು ಭಾವರೂಪ. ಪ್ರತಿಷೇಧವು ಅಭಾವರೂಪ. ಇವನಲ್ಲಿ ಹಣವಿದೆ ಎಂದರೆ ಉಳಿದವರಿಗಿಂತ ಇವನು ಭಿನ್ನನೆಂದಾಗುತ್ತದೆ. ಹಣವಿಲ್ಲ - ಎಂದರೂ ಉಳಿದವರಿಗಿಂತ ಭಿನ್ನನೆಂದೇ

ಆಗುತ್ತದೆ. ಸ್ವಲ್ಪ ಭೇದವಿದ್ದರೆ ಅದು ಉಪೇಕ್ಷಣೀಯ. ಚಿನ್ನದ ಸರಪಳಿಯೂ ಬಂಧಕ. ಕಬ್ಬಿಣದ ಸರಪಳಿಯೂ ಬಂಧಕ (೮೬). ಉಪನಿಷತ್ತುಗಳಲ್ಲಿ ಬ್ರಹ್ಮಪ್ರತಿಪಾದನೆಯು ಅತದ್ವ್ಯಾವೃತ್ತಿರೂಪದಿಂದ ಮತ್ತು ಸಾಕ್ಷಾತ್ ವಿಧಿ ಮುಖದಿಂದ - ಎಂದು ಎರಡು ವಿಧವಾಗಿದೆಯೆಂದು ಪೂರ್ವಾಚಾರ್ಯರು ಹೇಳಿದ್ದಾರೆ. ಅತದ್ವ್ಯಾವೃತ್ತಿ= ಅದಲ್ಲದ್ದನ್ನು ನಿಷೇಧಿಸುವುದು. ಇದು ನಿಷೇಧ ರೂಪ. ನೇತಿ ನೇತಿ ಎಂದೂ ಅಮರ್ತ್ಯ, ಅಜರ, ಅಗ್ರಾಹ್ಯ ಎಂದೂ ಪ್ರತಿಪಾದಿಸುವುದು ಅತದ್ವ್ಯಾವೃತ್ತಿ. 'ಸತ್ಯಂ ಜ್ಞಾನಮನಂತಂ ಬ್ರಹ್ಮ' ಮುಂತಾದದ್ದು ವಿಧಿರೂಪ (೮೭). ಈಗೊಂದು ಶಂಕೆ. '**ಅಹಂ ಬ್ರಹ್ಮಾಸ್ಮಿ**' ಎಂಬ ವಾಕ್ಯದಲ್ಲಿ 'ಅಹಂ' ಎಂದರೆ ಅಂತಃಕರಣವಿಶಿಷ್ಟವಾದ ಕೂಟಸ್ಥ. ಅತದ್ವ್ಯಾವೃತ್ತಿಯಿಂದ ಕೂಟಸ್ಥನನ್ನು ತ್ಯಜಿಸಿಬಿಟ್ಟರೆ 'ನಾನು ಬ್ರಹ್ಮವಾಗಿದ್ದೇನೆ' ಎಂಬ ಅಪರೋಕ್ಷಜ್ಞಾನವಾಗುವುದು ಹೇಗೆ? ಉತ್ತರ- ಹಾಗಲ್ಲ; ಭಾಗತ್ಯಾಗ ಲಕ್ಷಣೆಯಿಂದ 'ಅಹಂ' ಶಬ್ದಾರ್ಥದ ಏಕದೇಶವಾದ ಅಂತಃಕರಣವೆಂಬ ಉಪಾಧಿಗೆ ಮಾತ್ರ ತ್ಯಾಗವಾಗುತ್ತದೆ (೮೮). ಹೀಗೆ ಅಂತಃಕರಣವೆಂಬ ಭಾಗವನ್ನು ಕಳಚಿದಾಗ ಚಿದಾತ್ಮನಾದ ಕೂಟಸ್ಥನು ಮಾತ್ರ ಅವಶಿಷ್ಟನಾಗುತ್ತಾನೆ. ಆಗ '**ಅಹಂ ಬ್ರಹ್ಮಾಸ್ಮಿ**' ಎಂಬ ವಾಕ್ಯದಲ್ಲಿ ಚಿದಾತ್ಮನಾದ ಸಾಕ್ಷಿಯಲ್ಲಿ ಬ್ರಹ್ಮತ್ವವು ತೋರುತ್ತದೆ (೮೯). ''ಪ್ರತ್ಯಗಾತ್ಮನು ಸ್ವಪ್ರಕಾಶನಾದ್ದರಿಂದ ಬುದ್ಧಿವೃತ್ತಿಗೆ ಹೇಗೆ ವಿಷಯನಾಗುತ್ತಾನೆ? ಇದು ಯುಕ್ತವಲ್ಲ'' - ಎಂದರೆ ಹಾಗಲ್ಲ; ಅವನು ಸಾಕ್ಷಿಯಾಗಿ ಸ್ವಪ್ರಕಾಶನಾಗಿದ್ದರೂ ಘಟಾದಿಗಳಂತೆ ಬುದ್ಧಿವೃತ್ತಿಗೆ ಗೋಚರಿಸುತ್ತಾನೆ. 'ನಾನು ಸ್ವಪ್ರಕಾಶ' ಎಂದು ಬುದ್ಧಿಗೆ ಗೋಚರಿಸುತ್ತಾನಲ್ಲವೇ? ಶಾಸ್ತ್ರಕಾರರು ಆತನಿಗೆ ಫಲವ್ಯಾಪ್ಯತ್ವವನ್ನು ಮಾತ್ರ ನಿರಾಕರಿಸಿದ್ದಾರೆ. ಫಲವೆಂದರೆ ಬುದ್ಧಿವೃತ್ತಿಯಲ್ಲಿ ಪ್ರತಿಬಿಂಬಿಸಿದ ಚಿದಾಭಾಸ. ಚಿದಾಭಾಸನಿಂದ ಜಡವಾದ ಘಟಪಟಾದಿಗಳು ಸ್ಫುರಿಸುತ್ತವೆ. ಈತನಿಂದ ಪ್ರತ್ಯಗಾತ್ಮನು ಸ್ಫುರಿಸಬೇಕಾಗಿಲ್ಲ. ಆತನೇ ಸ್ವಯಂಪ್ರಕಾಶನಾದ್ದರಿಂದ ಸ್ಫುರಣರೂಪನಾಗಿದ್ದಾನೆ (೯೦). ಇದನ್ನೇ ಈ ಶ್ಲೋಕದಲ್ಲಿ ವಿವರಿಸುತ್ತಾರೆ - ಬುದ್ಧಿ, ಬುದ್ಧಿಯಲ್ಲಿ ಪ್ರತಿಬಿಂಬಿತ ಚಿದಾಭಾಸ ಇವೆರಡೂ ಘಟವನ್ನು ವ್ಯಾಪಿಸುತ್ತವೆ. ಘಟವಿಷಯಕಅಜ್ಞಾನವನ್ನು ಬುದ್ಧಿವೃತ್ತಿಯು ನಿವರ್ತಿಸುತ್ತದೆ. ಚಿದಾಭಾಸದಿಂದ ಘಟವು ಸ್ಫುರಿಸುತ್ತದೆ. ಘಟವು ಜಡವಸ್ತುವಾದ್ದರಿಂದ ಸ್ವತಃ ಅದು ಸ್ಫುರಿಸುವುದಿಲ್ಲ(೯೧). ಪ್ರತ್ಯಗಾತ್ಮ ಮತ್ತು ಬ್ರಹ್ಮ - ಇವರ ಏಕತ್ವವು

ಅಜ್ಞಾನದಿಂದ ಮುಚ್ಚಿಹೋಗಿದೆ. ಈ ಅಜ್ಞಾನದ ನಿವೃತ್ತಿಗಾಗಿ **'ಅಹಂ ಬ್ರಹ್ಮಾಸ್ಮಿ'** ಎಂಬ ಚಿತ್ತವೃತ್ತಿಯು ಇದನ್ನು ವ್ಯಾಪಿಸಬೇಕಾಗಿದೆ. ಆದ್ದರಿಂದ ಪ್ರತ್ಯಗಾತ್ಮನು ಚಿತ್ತವೃತ್ತಿಗೆ ವಿಷಯನಾಗುತ್ತಾನೆ. ಆದರೆ ಸ್ವತಃ ಸ್ಫುರಣಸ್ವರೂಪನೇ ಆದ್ದರಿಂದ ಅವನ ಸ್ಫುರಣೆಗೆ ಚಿದಾಭಾಸದ ವ್ಯಾಪ್ತಿಯು ಬೇಕಾಗುವುದಿಲ್ಲ, ಅದರಿಂದ ಉಪಯೋಗವೇನೂ ಇಲ್ಲ(೯೨). ಹೇಗೆಂದರೆ, ಒಂದು ಘಟವನ್ನು ಕತ್ತಲೆಯಲ್ಲಿ ನೋಡಬೇಕಾದರೆ, ಕಣ್ಣು ದೀಪಗಳೆರಡೂ ಬೇಕು. ಆದರೆ ದೀಪವನ್ನೇ ನೋಡಬೇಕಾದರೆ ಕಣ್ಣು ಇದ್ದರೆ ಸಾಕು, ಇನ್ನೊಂದು ದೀಪದ ಬೆಳಕು ಬೇಡ! (೯೩). ಚಿದಾಭಾಸವು ಸ್ಫುರಣಸ್ವಭಾವ ಉಳ್ಳದ್ದಷ್ಟೆ, ಇದರಿಂದ ಸಹಿತವಾದ ಬುದ್ಧಿ ಮತ್ತು ಅದರ ವೃತ್ತಿಗಳು ಚಿದಾಭಾಸಸಹಿತವಾಗಿರುವುದರಿಂದ, ಇದರ ವ್ಯಾಪ್ತಿಯು ಘಟಾದಿಗಳಲ್ಲಾಗುವಂತೆ ಬ್ರಹ್ಮದಲ್ಲಿಯೂ ಆಗಬಹುದಲ್ಲವೆ? ನಿಜ; ಆದರೆ ಬ್ರಹ್ಮದ ಪ್ರಕಾಶಕ್ಕಿಂತ ಬೇರೆಯಾಗಿ ತೋರುವುದಿಲ್ಲ. ಪ್ರಚಂಡಸೂರ್ಯನ ಬೆಳಕಿನಲ್ಲಿ ದೀಪದ ಬೆಳಕು ಅಡಗಿಹೋಗುವಂತೆ ಬ್ರಹ್ಮದಲ್ಲಿ ಅಡಗಿಹೋಗುವುದು. ಅದು ಪ್ರತ್ಯೇಕವಾಗಿ ತೋರುವುದೇ ಇಲ್ಲ(೯೪). ಬ್ರಹ್ಮದಲ್ಲಿ ವೃತ್ತಿವ್ಯಾಪ್ತಿಯುಂಟು, ಫಲವ್ಯಾಪ್ತಿ ಇಲ್ಲ - ಎಂದು ಹೇಳುತ್ತೀರಿ. ಇದಕ್ಕೆ ಆಧಾರವೇನು? ಆಧಾರವಿದೆ, ಅಮೃತಬಿಂದೂಪನಿಷತ್ತಿನಲ್ಲಿ ಹೀಗೆ ಹೇಳಿದೆ -

**ನಿರ್ವಿಕಲ್ಪಮನಂತಂ ಚ ಹೇತುದೃಷ್ಟಾಂತವರ್ಜಿತಮ್ ।**
**ಅಪ್ರಮೇಯಮನಾದಿಂ ಚ ಯಜ್ಜ್ಞಾತ್ವಾ ಮುಚ್ಯತೇ ಬುಧಃ ॥**

(ಅ.ಬಿ.ಉ.೯)

ಎಂದು ಬ್ರಹ್ಮವನ್ನು ವರ್ಣಿಸಲಾಗಿದೆ. 'ಅಪ್ರಮೇಯ' ಎಂಬ ಶಬ್ದವು ಬ್ರಹ್ಮದಲ್ಲಿ ಚಿದಾಭಾಸದ ಫಲವ್ಯಾಪ್ತಿ ಇಲ್ಲ- ಎಂಬುದಕ್ಕೆ ಆಧಾರ. ಕಠವಲ್ಲಿಯಲ್ಲಿ **'ಮನಸೈವೇದಮಾಪ್ತವ್ಯಂ'** ಎಂದು ಶ್ರುತವಾಗಿರುವುದರಿಂದ ವೃತ್ತಿವ್ಯಾಪ್ತಿಯು ಮಾತ್ರ ಇದೆ ಎಂದು ಗೊತ್ತಾಗುತ್ತದೆ (೯೫).

**'ಆತ್ಮಾನಂ ಚೇದ್ವಿಜಾನೀಯಾತ್ ಅಯಮಸ್ಮೀತಿ ಪೂರುಷಃ'** (ಬೃ.ಉ.೪-೪-೧೨) - ಎಂಬ ಮಂತ್ರವು ಜೀವನಲ್ಲಿ ಅಪರೋಕ್ಷಜ್ಞಾನ ಮತ್ತು ಶೋಕನಿವೃತ್ತಿ ಎಂಬ ಎರಡು ಅವಸ್ಥೆಗಳನ್ನು ತಿಳಿಸುತ್ತದೆ - ಎಂದು ಹಿಂದೆ ಹೇಳಿದ್ದೇವೆ. ಅದರಲ್ಲಿ ಯಾವ ಅಂಶವು ಅಪರೋಕ್ಷಜ್ಞಾನವೆಂಬುದು ಈಗ ಪ್ರಕೃತವಾದದ್ದು. ಸತ್ಯ, ಜ್ಞಾನ, ಅನಂತ - ಮುಂತಾದ ಲಕ್ಷಣಗಳುಳ್ಳ ಬ್ರಹ್ಮಕ್ಕೆ

ಅಭಿನ್ನವಾದ - ಎಂದರೆ, ಬ್ರಹ್ಮವೇ ಆದ ಪ್ರತ್ಯಗಾತ್ಮಸ್ವರೂಪವನ್ನು ತಿಳಿದದ್ದರಿಂದ **'ಅಹಂ ಬ್ರಹ್ಮಾಸ್ಮಿ'** ಎಂಬ ಅಪರೋಕ್ಷಜ್ಞಾನವಾಗುತ್ತದೆ. ಇದನ್ನೇ ಆ ಮಂತ್ರವು ತಿಳಿಸಿದೆ(೯೬). ಹೀಗೆ ಮಹಾವಾಕ್ಯದಿಂದ ಅಪರೋಕ್ಷಜ್ಞಾನವಾದರೂ ಅದು ದೃಢವಾಗಿ ನಿಲ್ಲಲಾರದೆಂದು ಶ್ರವಣ, ಮನನಾದಿಗಳನ್ನು ಮಾಡುತ್ತಿರಬೇಕಾಗಿ ಪೂರ್ವಾಚಾರ್ಯರು **'ಅಹಂ ಬ್ರಹ್ಮೇತಿ ವಾಕ್ಯಾರ್ಥಬೋಧಃ'** ಎಂಬ ಶ್ಲೋಕದಲ್ಲಿ ಹೇಳಿದ್ದಾರೆ. ಇದರ ಅರ್ಥ ಹೀಗೆ - **'ಅಹಂ ಬ್ರಹ್ಮಾಸ್ಮಿ'** ಎಂಬ ವಾಕ್ಯಾರ್ಥಜ್ಞಾನವು ದೃಢವಾಗಿ ನಿಲ್ಲುವವರೆಗೂ ಶಮದಮಾದಿಗುಣ ಸಹಿತನಾಗಿ ಶ್ರವಣಮನನಾದಿಗಳನ್ನು ಮತ್ತೆ ಮತ್ತೆ ಮಾಡುತ್ತಿರಬೇಕು(೯೭-೯೮). ಶ್ರುತಿಪ್ರಾಮಾಣ್ಯದಿಂದ ಈ ಆತ್ಮಜ್ಞಾನವು ಉದಿಸಿದ್ದರೂ ಅದು ದೃಢವಾಗಿ ನಿಲ್ಲದಿರಲು ಅನೇಕಕಾರಣಗಳಿವೆ. ಶ್ರುತಿವಾಕ್ಯಗಳು ಅನೇಕ ಪ್ರಕಾರ ದಲ್ಲಿರುವುದು, ಅಖಂಡೈಕರಸವಾದ ಅದ್ವಿತೀಯಬ್ರಹ್ಮವೆನ್ನುವುದು ಲೋಕಾತೀತವಾದ್ದರಿಂದ ಅಸಂಭಾವ್ಯವೆಂಬ ಮನೋಭಾವ, ನಾನು ಕರ್ತೃ, ಭೋಕ್ತೃ - ಎಂಬ ವಿಪರೀತಭಾವನೆ - ಇವು ಆತ್ಮಜ್ಞಾನದ ದೃಢತೆಯನ್ನು ಕದಲಿಸತಕ್ಕ ಕಾರಣಗಳು (೯೯). ಋಗ್ವೇದಾದಿಶಾಖಾಭೇದಗಳಿಂದಲೂ ಫಲಕಾಮನೆಗಳು ಅನೇಕವಾಗಿರುವುದರಿಂದಲೂ ಶ್ರುತಿವಿಹಿತಕರ್ಮಗಳು ಬೇರೆ ಬೇರೆಯಾಗಿರುತ್ತವೆ. ಹೀಗೆಯೇ ಬ್ರಹ್ಮದ ವಿಷಯದಲ್ಲಿಯೂ ಅನೇಕ ಅಭಿಪ್ರಾಯಗಳಿವೆ - ಎಂಬ ಶಂಕೆ ಬರುವ ಸಂಭವ ಉಂಟು. ಈ ಶಂಕೆಯನ್ನು ನಿವಾರಿಸುವುದಕ್ಕಾಗಿ ಮತ್ತೆ ಮತ್ತೆ ವೇದಾಂತಶ್ರವಣವನ್ನು ಮಾಡುತ್ತಿರಬೇಕೆಂದು ಶ್ರವಣವನ್ನು ವಿಧಿಸಿದ್ದಾರೆ (೧೦೦). ಸಕಲಉಪನಿಷತ್ತುಗಳಲ್ಲಿಯೂ ಆದಿಮಧ್ಯಾವಸಾನಗಳಲ್ಲಿ ಎಲ್ಲಿ ನೋಡಿದರೂ ಅಭಿಪ್ರಾಯಭೇದವಿಲ್ಲದೆ ಎಲ್ಲ ವಾಕ್ಯಗಳಿಗೂ ಪ್ರತ್ಯಗಾತ್ಮವೇ ಬ್ರಹ್ಮವೆಂಬ ನಿರ್ಣಯದಲ್ಲಿ ತಾತ್ಪರ್ಯವೆಂಬ ನಿಶ್ಚಯವು ಶ್ರವಣವೆನಿಸುತ್ತದೆ.(೧೦೧)

ತಾತ್ಪರ್ಯವನ್ನು ನಿರ್ಣಯಿಸಲು ಇವು ಉಪಯುಕ್ತವಾಗುತ್ತವೆ.

**ಉಪಕ್ರಮೋಪಸಂಹಾರೌ ಅಭ್ಯಾಸೋಽಪೂರ್ವತಾ ಫಲಮ್ ।**
**ಅರ್ಥವಾದೋಪಪತ್ತೀ ಚ ಲಿಂಗಂ ತಾತ್ಪರ್ಯನಿರ್ಣಯೇ ॥**

ಶಾರೀರಕ ಸೂತ್ರಗಳ ಸಮನ್ವಯಾಧ್ಯಾಯದಲ್ಲಿ ಸೂತ್ರಕಾರರೂ ವ್ಯಾಖ್ಯಾನಕಾರರೂ ಈ ಶ್ರವಣವಿಧಿಯನ್ನು ಚೆನ್ನಾಗಿ ಪ್ರತಿಪಾದಿಸಿದ್ದಾರೆ. ಪ್ರಮೇಯವಾದ ಬ್ರಹ್ಮದ ಸ್ವರೂಪವು ಅಸಂಭಾವ್ಯವೆಂಬ ಮನೋಭಾವವನ್ನು

ನೀಗಿಸುವುದಕ್ಕಾಗಿ ಮನನವು ಅವಶ್ಯಕ. ಅಸಂಭಾವ್ಯವೆಂಬಲ್ಲಿ ಬರುವ ಸಂದೇಹಗಳೆಲ್ಲವನ್ನೂ ದೂರಮಾಡಿ ಬುದ್ಧಿಯಲ್ಲಿ ಸ್ಥಿರತೆಯನ್ನುಂಟುಮಾಡುವ ಪ್ರಬಲಯುಕ್ತಿಗಳನ್ನು ದ್ವಿತೀಯಾಧ್ಯಾಯದಲ್ಲಿ ನಿರೂಪಿಸಿದ್ದಾರೆ (೧೦೨). ಹಿಂದಿನ ನಾನಾಜನ್ಮಗಳಲ್ಲಿ ಆಗಿರುವ ದೃಢಾಭ್ಯಾಸಗಳಿಂದ ದೇಹಾದಿಗಳಲ್ಲಿ ಆತ್ಮಭಾವನೆ ತಳ ಊರಿ ನಿಂತಿರುತ್ತದೆ. ಕ್ಷಣಕ್ಷಣದಲ್ಲಿಯೂ ಈ ದೇಹಾತ್ಮಭಾವನೆ ಹುಟ್ಟುತ್ತಲೇ ಇರುತ್ತದೆ. ಹಾಗೆಯೇ ಈ ಜಗತ್ತು ಸತ್ಯವೆಂಬ ಬುದ್ಧಿಯೂ ಗಟ್ಟಿಯಾಗಿ ಕುಳಿತಿರುತ್ತದೆ (೧೦೩). ವಿಪರೀತಭಾವನೆ ಎಂದರೆ ಇದು. ಈ ವಿಪರೀತಭಾವನೆಯು ಚಿತ್ತದ ಏಕಾಗ್ರತೆಯಿಂದ ಹೋಗಬೇಕು. ಬ್ರಹ್ಮೋಪದೇಶಕ್ಕೆ ಮೊದಲು ಮಾಡುವ ಸಗುಣೋಪಾಸನೆಯಿಂದಲೂ ಏಕಾಗ್ರತೆ ಮೂಡುತ್ತದೆ (೧೦೪). ಈ ವಿಪರೀತ ಭಾವನೆಯನ್ನು ಹೋಗಲಾಡಿಸುವುದಕ್ಕಾಗಿ ಬ್ರಹ್ಮಪ್ರತಿಪಾದಕವಾದ ವೇದಾಂತಶಾಸ್ತ್ರದಲ್ಲಿಯೂ ಹಲವು ಬಗೆಯ ಉಪಾಸನೆಗಳ ವಿಚಾರನ್ನು ಮಾಡಿದ್ದಾರೆ. ಮೊದಲು ಉಪಾಸನೆಯನ್ನು ಮಾಡಿ ಯಾರು ಏಕಾಗ್ರತೆಯನ್ನು ಸಂಪಾದಿಸಿಕೊಂಡಿಲ್ಲವೋ ಅವರಿಗೆ ಈಗಲಾದರೂ ಬ್ರಹ್ಮೋಪಾಸನೆಯಿಂದ ಮನಸ್ಸಿನ ಏಕಾಗ್ರತೆ ಮೂಡಲೆಂಬುದು ಅದರ ಉದ್ದೇಶವಾಗಿದೆ (೧೦೫). ಬ್ರಹ್ಮದ ವಿಷಯವಾಗಿಯೇ ಚಿಂತಿಸುವುದು , ಅದರ ವಿಷಯವಾಗಿಯೇ ಮಾತಾಡುವುದು, ಇತರ ಮುಮುಕ್ಷುಗಳೊಡನೆ ಬ್ರಹ್ಮವಿಚಾರವನ್ನೇ ಹೇಳಿ ಪರಸ್ಪರ ವಿಚಾರ ಮಾಡುವುದು - ಹೀಗೆ ಸದಾ ಬ್ರಹ್ಮ ವಿಷಯದಲ್ಲಿಯೇ ಮುಳುಗಿರುವುದನ್ನು ವಿದ್ವಾಂಸರು ಬ್ರಹ್ಮಾಭ್ಯಾಸವೆಂದು ತಿಳಿದಿದ್ದಾರೆ (೧೦೬) ಬ್ರಹ್ಮಚರ್ಯಾದಿಸಾಧನ ಸಂಪನ್ನನಾದ ಧೀರನೂ ಬ್ರಹ್ಮಭಾವವನ್ನು ಪಡೆಯಬೇಕೆಂಬ ಇಚ್ಛೆಯುಳ್ಳ ಮುಮುಕ್ಷುವೂ, ಆದವನು ಸಂಶಯಾದಿಗಳೇನೂ ಇಲ್ಲದಂತೆ ಪ್ರತ್ಯಗಾತ್ಮಸ್ವರೂಪವನ್ನು ತಿಳಿದುಕೊಂಡು, ಬ್ರಹ್ಮವೂ ಜೀವಾತ್ಮನೂ ಒಬ್ಬರೇ ಎಂಬ ಏಕತಾಜ್ಞಾನ ಸಂತತಿಯೆಂಬ ಏಕಾಗ್ರತೆಯನ್ನುಸಂಪಾದಿಸಿಕೊಳ್ಳಬೇಕು. ಅನಾತ್ಮವಿಷಯಕವಾದ ಶಬ್ದಗಳನ್ನು ಹೆಚ್ಚಾಗಿ ಚಿಂತಿಸಲೂ ಬಾರದು, ಉಚ್ಚರಿಸಲೂ ಬಾರದು. ಅದು ಮಾತುಗಳನ್ನು ವ್ಯರ್ಥಮಾಡುವ ನಿಷ್ಫಲವಾದ ಶ್ರಮ - ಎಂದು ಶ್ರುತಿಯೇ ಹೇಳಿದೆ (೧೦೭) . ಈ ಏಕಾಗ್ರತೆಯು ಬೇಕೆಂದು ಭಗವದ್ಗೀತೆಯಲ್ಲಿಯೂ ಹೇಳಿದೆ. ಶ್ರೀ ಕೃಷ್ಣನ ವಾಣಿ ಇದು -''ಯಾವ ಜನರು ಅನನ್ಯರಾಗಿ- ಎಂದರೆ - ಬ್ರಹ್ಮವು ಅನ್ಯವಸ್ತುವಲ್ಲ ಎಂದು ತಿಳಿದು ನನಗೆ ಅಭಿನ್ನರಾಗಿ ನನ್ನನ್ನು ಧ್ಯಾನಿಸುತ್ತ ಉಪಾಸನೆ ಮಾಡುತ್ತಾರೋ, ಸರ್ವದಾ ನನ್ನಲ್ಲಿಯೇ ಯಾರ ಬುದ್ಧಿಯು

ನೆಟ್ಟುಹೋಗಿರುವುದೋ ಅವರ ಯೋಗ ಕ್ಷೇಮಗಳನ್ನು ನಾನು ವಹಿಸಿಕೊಳ್ಳುತ್ತೇನೆ ''.(೧೦೮) ಈ ಪ್ರಕಾರವಾಗಿ ಶ್ರುತಿ ಸ್ಮೃತಿಗಳೆರಡೂ ಸಹ ನಿತ್ಯವೂ ಬುದ್ಧಿಯನ್ನು ಆತ್ಮನಲ್ಲಿ ಏಕಾಗ್ರವಾಗಿಟ್ಟಿರಬೇಕೆಂದು ವಿಧಿಸುತ್ತವೆ. ಇವೆಲ್ಲವೂ ವಿಪರೀತಭಾವನೆಯನ್ನು ಹೋಗಲಾಡಿಸುವುದಕ್ಕಾಗಿ (೧೦೯).

ಯಾವ ವಸ್ತು ನಿಜವಾಗಿ ಯಾವ ಸ್ವರೂಪದಲ್ಲಿದೆಯೋ ಅದನ್ನು ತ್ಯಜಿಸಿ ಬೇರೆ ಸ್ವರೂಪದಲ್ಲಿದೆಯೆಂದು ಗ್ರಹಿಸುವ ಅನ್ಯಥಾಬುದ್ಧಿಯು ವಿಪರೀತ ಭಾವನೆಯಾಗಿದೆ. ಉದಾಹರಣೆಗೆ, ತನ್ನ ತಂದೆ ತಾಯಿ ಮುಂತಾದ ಹಿತಕಾರಿಗಳಾದ ಆಪ್ತರನ್ನು ಶತ್ರುಗಳೆಂದು ಭಾವಿಸುವುದು. ಇದು ತಪ್ಪು ತಿಳುವಳಿಕೆ ಭ್ರಾಂತಿ- ಎಂದರ್ಥ. ಇದನ್ನು ಶ್ರೀ ಶಂಕರಭಗವತ್ಪಾದರು **'ಅತಸ್ಮಿನ್ ತದ್ಬುದ್ಧಿಃ '** (ಬ್ರ.ಸೂ.ಶಾಂ.ಭಾ.ಉಪೋದ್ಘಾತ) ಎಂದು ಹೇಳಿದ್ದಾರೆ. ಅದಲ್ಲದ್ದರಲ್ಲಿ ಅದು ಎಂಬ ಬುದ್ಧಿಯೇ ವಿಪರೀತ ಭಾವನೆ - ಹಗ್ಗವನ್ನು ಹಾವು ಎಂದು ಭ್ರಮಿಸುವುದು(೧೧೦) ಪ್ರಕೃತದಲ್ಲಿ ಆತ್ಮನು ದೇಹೇಂದ್ರಿಯಾದಿಗಳಿಗಿಂತ ಭಿನ್ನನಾಗಿದ್ದಾನೆ. ಈ ಜಗತ್ತು ಮಿಥ್ಯೆ ಎನ್ನುವುದು ನಿಜ ಸ್ವರೂಪ. ಇದನ್ನು ತ್ಯಜಿಸಿ ದೇಹವೇ ಆತ್ಮ, ಜಗತ್ತು ಸತ್ಯ - ಎಂದು ತಿಳಿಯುವುದು ವಿಪರೀತಭಾವನೆಯಾಗಿದೆ (೧೧೧) . ಈ ಭಾವನೆಯನ್ನು ಹೋಗಲಾಡಿಸಬೇಕು. ಆತ್ಮನು ದೇಹಾದಿಗಳಿಗಿಂತ ಅತಿರಿಕ್ತನಾಗಿದ್ದಾನೆ. ಜಗತ್ತು ಮಿಥ್ಯೆಯೇ ಸರಿ ಎಂದು ಅವುಗಳ ನಿಜಸ್ವರೂಪವನ್ನು ಸದಾ ಭಾವಿಸುತ್ತಿದ್ದರೆ ವಿಪರೀತ ಭಾವನೆಯು ನಶಿಸಿ ಹೋಗುತ್ತದೆ (೧೧೨). ಭಾವಿಸುವ ವಿಧಾನ ಹೇಗೆ? ಮಂತ್ರವನ್ನು ಜಪಿಸಿದಂತೆ, ದೇವತಾ ಮೂರ್ತಿಯನ್ನು ಧ್ಯಾನಿಸಿ ಪೂಜಿಸುವಂತೆ, ಒಂದಾನೊಂದು ನಿಯಮಪೂರ್ವಕವಾಗಿ 'ದೇಹಾದ್ಯತಿರಿಕ್ತ ನಾದವನು ಆತ್ಮ, ಮಿಥ್ಯೆ ಈ ಜಗತ್ತು ' ಎಂದು ಭಾವಿಸುತ್ತಿರಬೇಕೋ ಅಥವಾ ಲೌಕಿಕವ್ಯವಹಾರದಂತೆ ಗೊತ್ತಾದ ನಿಯಮ ಪಾಲನೆಯೇನೂ ಇಲ್ಲವೋ?(೧೧೩) ನಿಯಮವೇನೂ ಇಲ್ಲ, ಇದೆಲ್ಲವೂ ದೃಷ್ಟಫಲ. ಊಟಕ್ಕೆ ಹೇಗೆ ನಿಯಮವಿಲ್ಲವೋ ಹಾಗೇ. ಶಂಕೆ: ಊಟಕ್ಕೂ ನಿಯಮವನ್ನು ಧರ್ಮಶಾಸ್ತ್ರವು ಹೇಳುತ್ತದೆಯಲ್ಲ! ಉತ್ತರ : ನಮ್ಮ ಅಭಿಪ್ರಾಯ ಅದಲ್ಲ, ಮನುಷ್ಯನು ಹಸಿವು ಹೋಗಲೆಂದು ಊಟ ಮಾಡುತ್ತಾನೆ. ಜಪಮಾಡುವಂತೆ ಗೊತ್ತಾದ ನಿಯಮವನ್ನೇನೂ ಪಾಲಿಸಬೇಕಾಗಿಲ್ಲ. ಲಭ್ಯವಾದದ್ದನ್ನು ಹಸಿವು ಹೋಗುವಷ್ಟನ್ನು ಯಾವಾಗಲೋ ತಿನ್ನುತ್ತಾನೆ. ಹಾಗೆಯೇ ಅವಕಾಶವಾದಾಗ ಪೂರ್ವೋಕ್ತಭಾವನೆಯನ್ನು ಧೃಢ

ಮಾಡಿಕೊಳ್ಳುತ್ತಿರಬೇಕು.(೧೧೪) ನಾವು ಭೋಜನದ ದೃಷ್ಟಾಂತವನ್ನು ಕೊಟ್ಟಿದ್ದು ಸಾಮಾನ್ಯ ಜನರೂ ಊಟ ಮಾಡುವ ವಿಧಾನವನ್ನು ಕುರಿತದ್ದು. ಒಬ್ಬನು ಊಟ ಮಾಡುತ್ತಾನೆ, ಯಾವುದೋ ಕಾರಣದಿಂದ ಊಟ ಮಾಡುವುದಿಲ್ಲ, ಒಬ್ಬನು ನಿಂತುಕೊಂಡೋ ದಾರಿಯಲ್ಲಿ ಹೋಗುತ್ತಲೋ ಮಲಗಿಕೊಂಡೋ ತಿಂದು ಹಸಿವನ್ನು ಹೋಗಲಾಡಿಸಿ ಕೊಳ್ಳುತ್ತಾನೆ. ಹಾಗೆಯೇ ಬಾಯಾರಿಕೆಯನ್ನು ನೀಗಿಸಿಕೊಳ್ಳುತ್ತಾನೆ (೧೧೫). ಜಪದ ವಿಷಯವು ಹಾಗಲ್ಲ. ನಿಯಮ ಪೂರ್ವಕವಾಗಿ ಗೊತ್ತಾದ ಕಾಲದಲ್ಲಿ ಜಪವನ್ನು ಮಾಡಲೇಬೇಕು. ಮಾಡದಿದ್ದರೆ ಪ್ರತ್ಯವಾಯ (ಪಾಪ) ಉಂಟು. ನಿಯಮವನ್ನತಿಕ್ರಮಿಸಿದರೆ ಅನರ್ಥವಾದೀತು. ಮಂತ್ರಗಳನ್ನು ತಪ್ಪಾಗಿ ಉಚ್ಚರಿಸಿದರೆ, ಸ್ವರವರ್ಣಗಳ ಉಚ್ಚಾರಣೆಯಲ್ಲಿ ಲೋಪವಾದರೆ ಇಷ್ಟ ಸಿದ್ಧಿಯಾಗುವುದಿಲ್ಲ(೧೧೬) ಹಸಿವು ಎದುರಿಗೇ ಪೀಡಿಸುವುದರಿಂದ ಆ ಪೀಡೆಯನ್ನು ತಪ್ಪಿಸಿಕೊಳ್ಳುವುದಕ್ಕಾಗಿ ನಿಯಮವಿಲ್ಲದೆಯೇ ತಿನ್ನಬೇಕಾಗಿ ಬರುವ ಹಾಗೆ ವಿಪರೀತ ಭಾವನೆಯೂ ಮಾನಸಿಕ ದುಃಖವನ್ನು ತಂದೊಡ್ಡುವುದರಿಂದ ಯಾವುದೋ ಉಪಾಯದಿಂದ ಅದನ್ನು ತಪ್ಪಿಸಿಕೊಳ್ಳಬೇಕಾಗಿದೆ. ಅದಕ್ಕೆ ನಿಯಮಪಾಲನೆಯ ಕ್ರಮವೇನೂ ಇಲ್ಲ (೧೧೭). ಆ ಉಪಾಯವನ್ನು ''**ತಚ್ಚಿಂತನಂ ತತ್ಕಥನಂ.....**'' ಎಂದು ಹಿಂದೆ ೧೦೬ನೇಯ ಶ್ಲೋಕದಲ್ಲಿ ಹೇಳಿದ್ದೇವೆ. 'ಏತದೇಕಪರತ್ವ' ವನ್ನು ಹೇಳಿದ್ದರೂ ಧ್ಯಾನಕ್ಕಿರುವಂತೆ ಆಚರಣೆಯಲ್ಲಿ ನಿಯಮವೇನೂ ಇಲ್ಲ. ಶುಚಿಯಾಗಿ ಪೂರ್ವಾಭಿಮುಖವಾಗಿ ಕುಳಿತುಕೊಳ್ಳಬೇಕು- ಮುಂತಾದ ಕ್ರಮವನ್ನೇನೂ ಪಾಲಿಸಬೇಕಾಗಿಲ್ಲ (೧೧೮). ಧ್ಯಾನವು ಇಷ್ಟದೇವತಾಮೂರ್ತಿಯ ಚಿಂತನವಾಗಿರುತ್ತದೆ. ಧ್ಯಾನದ ನಡುವೆ ಬೇರೆ ಯಾವ ವಸ್ತುವಿನ ಪ್ರತೀತಿಯೂ ಬರಬಾರದು. ಬುದ್ಧಿಯು ಒಂದೇ ವಿಷಯದಲ್ಲಿ ಏಕಾಗ್ರವಾಗಿ ನಿಲ್ಲಬೇಕು. ಅತ್ಯಂತ ಚಂಚಲವಾದ ಮನಸ್ಸನ್ನು ಕಷ್ಟದಿಂದ ಒಂದೇ ಕಡೆಯಲ್ಲಿ ನಿಲ್ಲಿಸುವುದಕ್ಕೆ ಧ್ಯಾನವೆಂದು ಹೆಸರು(೧೧೯) ಮನಸ್ಸು ಬಹಳ ಚಂಚಲವೆನ್ನುವುದಕ್ಕೆ ಗೀತೆಯಲ್ಲಿ ಅರ್ಜುನನು ಹೇಳುವ ''**ಚಂಚಲಂ ಹಿ ಮನಃ ಕೃಷ್ಣ ಪ್ರಮಾಥಿ.....**'' (ಭ.ಗೀ.೬-೩೪) ಎಂಬ ಶ್ಲೋಕವನ್ನು ಸ್ಮರಿಸಿಕೊಳ್ಳಬಹುದು. ''ಕೃಷ್ಣ, ಮನಸ್ಸು ಬಹಳ ಚಂಚಲವಾದದ್ದಲ್ಲವೆ? ಅದು ಮನುಷ್ಯನನ್ನು ಅತಿಶಯವಾಗಿ ವ್ಯಾಕುಲ ಗೊಳಿಸುತ್ತದೆ. ಅದನ್ನು ನಿಗ್ರಹಿಸುವುದೆಂದರೆ, ಬೀಸುವ ಗಾಳಿಯನ್ನು ತಡೆದು ನಿಲ್ಲಿಸುವುದರ ಹಾಗೆ ಅಸಾಧ್ಯವೆಂದೇ ನನಗೆ ತೋರುತ್ತದೆ''(೧೨೦). ಯೋಗವಾಸಿಷ್ಠದಲ್ಲಿ ಈ ಶ್ಲೋಕವಿದೆ - ' **ಅಪ್ಯಬ್ಧಿಪಾನಾನ್ಮಹತಃ :.....**'

ಇತ್ಯಾದಿ. ಇದರ ಅರ್ಥವಿದು. ಸಮುದ್ರವನ್ನು ಕುಡಿಯುವುದಕ್ಕಿಂತಲೂ ಸುಮೇರು ಪರ್ವತವನ್ನು ಕಿತ್ತು ಎತ್ತುವ ಮಹಾಕಾರ್ಯಕ್ಕಿಂತಲೂ ಬೆಂಕಿಯನ್ನು ತಿನ್ನುವುದಕ್ಕಿಂತಲೂ ಸಹ, ಹೇ ಸಾಧು ಪುರುಷನೆ, ಮನಸ್ಸನ್ನು ನಿಗ್ರಹಿಸುವುದು ಕಠಿಣ (೧೨೧) ಬ್ರಹ್ಮಾಭ್ಯಾಸದಲ್ಲಿ ಹೇಳಿದ **'ತತ್ಕಥನಮನ್ಯೋನ್ಯಂ....'** ಮೊದಲಾದ ಉಪಾಯವು ದೇಹವನ್ನು ಹಗ್ಗದಿಂದ ಬಿಗಿದಂತೆ ನಿರ್ಬಂಧಿಸುವುದಿಲ್ಲ. ಇತಿಹಾಸ, ಪುರಾಣ, ಯುಕ್ತಿ, ದೃಷ್ಟಾಂತಗಳ ಮೂಲಕ ಭರತನಾಟ್ಯದಂತೆ ಮನಸ್ಸನ್ನು ವಿನೋದಪೂರ್ವಕವಾಗಿ ಒಂದೇ ಎಡೆಯಲ್ಲಿ ನಿಲ್ಲಿಸುತ್ತದೆ(೧೨೨). ಇತಿಹಾಸಾದಿಗಳಿಂದ ಧ್ಯಾನಕ್ಕೆ ವಿಕ್ಷೇಪ ಉಂಟಾಗುವುದಿಲ್ಲವೆ? ಇಲ್ಲ... 'ಆತ್ಮನು ದೇಹಾದಿರೂಪನಲ್ಲ, ಕೇವಲ ಚಿದ್ರೂಪನೇ ಆಗಿದ್ದಾನೆ. ಜಗತ್ತು ಮಿಥ್ಯೆ - ಎಂಬುದರಲ್ಲಿಯೇ ಇತಿಹಾಸಾದಿಗಳ ಪರ್ಯವಸಾನವಾಗುವುದರಿಂದ ಇತಿಹಾಸಾದಿಗಳು ಧ್ಯಾನಕ್ಕೆ ಅಡ್ಡಿಯನ್ನು ಮಾಡುವುದಿಲ್ಲ(೧೨೩) . ಆದರೆ ಕೃಷಿ, ವ್ಯಾಪಾರ, ಸೇವೆ(ನೌಕರಿ) ಮುಂತಾದ ಉದ್ಯೋಗಗಳಲ್ಲಿಯೂ ಕಾವ್ಯ, ತರ್ಕ, ಮುಂತಾದ ಗ್ರಂಥಗಳಲ್ಲಿಯೂ ಪ್ರವೃತ್ತನಾದರೆ ಬುದ್ಧಿಯು ವಿಕ್ಷಿಪ್ತವಾಗಿ ಬಿಡುತ್ತದೆ. ಅವುಗಳಲ್ಲಿ ತೊಡಗಿದಾಗ ತತ್ತ್ವಜ್ಞಾನವಾಗುವುದು ಅಸಂಭವ (೧೨೪) ಕೃಷಿ, ವಾಣಿಜ್ಯಾದಿಗಳು ಚಿತ್ತವಿಕ್ಷೇಪವನ್ನು ಮಾಡುವುದರಿಂದ ತ್ಯಾಜ್ಯಗಳಾದರೆ ಸ್ನಾನಭೋಜನಾದಿಗಳೂ ತ್ಯಾಜ್ಯವಾಗಿಬಿಡುತ್ತವೆ! ಹಾಗಲ್ಲ. ಅವುಗಳ ಪರಿಸ್ಥಿತಿ ಬೇರೆ ಇದೆ. ತತ್ತ್ವಚಿಂತನೆಯನ್ನು ಮಾಡುತ್ತಲೇ ಸ್ನಾನಭೋಜನಾದಿಗಳಲ್ಲಿ ತೊಡಗಬಹುದು. ಆಗ ಚಿತ್ತವಿಕ್ಷೇಪವು ಅತ್ಯಲ್ಪವಾದೀತು. ಏಕೆಂದರೆ ಆ ಕೆಲಸಗಳು ಮುಗಿದೊಡನೆ ತತ್ತ್ವವಿಚಾರವು ಮತ್ತೆ ಸ್ಮರಣೆಗೆ ಬಂದುಬಿಡುತ್ತದೆ (೧೨೫). ಭೋಜನಾದಿಗಳನ್ನು ಮಾಡುವಾಗ ಸ್ವಲ್ಪಹೊತ್ತು ತತ್ತ್ವವಿಚಾರವು ಬಿಟ್ಟುಹೋದರೂ ಅನರ್ಥವೇನೂ ಆಗುವುದಿಲ್ಲ. ಅನರ್ಥವಾಗುವುದು ವಿಪರೀತಭಾವನೆಯಿಂದ. ಸ್ವಲ್ಪಹೊತ್ತು ತತ್ತ್ವವಿಚಾರವನ್ನು ಮರೆತರೂ ವಿಪರೀತಭಾವನೆ ಹುಟ್ಟಲು ಸಮಯವಿರುವುದಿಲ್ಲ. ಸ್ವಲ್ಪ ಹೊತ್ತಿನಲ್ಲಿ ಮತ್ತೆ ತತ್ತ್ವವಿಚಾರವು ಸ್ಮರಣೆಗೆ ಬಂದುಬಿಡುತ್ತದೆ (೧೨೬). ಹಾಗಾದರೆ ಕಾವ್ಯತರ್ಕಾದಿಗ್ರಂಥಗಳನ್ನು ಅಭ್ಯಾಸಮಾಡತಕ್ಕವರಿಗೂ ತತ್ತ್ವವಿಚಾರವು ಸ್ಮರಣೆಗೆ ಬರಬಹುದು. ಅವನ್ನೇಕೆ ತ್ಯಜಿಸಬೇಕು? ಹಾಗಲ್ಲ; ಆವನ್ನು ಅಭ್ಯಾಸಮಾಡತಕ್ಕವರಿಗೆ ತತ್ತ್ವಸ್ಮರಣೆಗೆ ಅವಕಾಶವೇ ಇರುವುದಿಲ್ಲ. ಮನಸ್ಸು ಕಾವ್ಯತರ್ಕಾದಿಗಳ ಕಡೆಗೇ ಧಾವಿಸುತ್ತದೆ. ತತ್ತ್ವಾಭ್ಯಾಸವು ಕಾವ್ಯತರ್ಕಾದಿಗಳ

ಅಧ್ಯಯನಕ್ಕೆ ಬಾಧಕವಾದ್ದರಿಂದ 'ಈಗ ತತ್ತ್ವವಿಚಾರ ಬೇಡ' ಎಂದು ಒತ್ತಾಯದ ಉಪೇಕ್ಷೆ ಬಂದುಬಿಡುತ್ತದೆ! (೧೨೭). ಉಪನಿಷತ್ತಿನಲ್ಲಿಯೂ ಸಹ **'ತಮೇವೈಕಂ ವಿಜಾನೀಥಾತ್ಮಾನಮನ್ಯಾ ವಾಚೋ ವಿಮುಂಚಥ, ಅಮೃತಸ್ಯೈಷ ಸೇತುಃ''** (ಮುಂ.ಉ. ೨೫-೨) ಎಂದು ಹೇಳಿದೆ. ಆ ಆತ್ಮನೊಬ್ಬನನ್ನೇ ಅರಿತುಕೊಳ್ಳಿರಿ. ಇತರ ಮಾತುಗಳನ್ನು ತ್ಯಜಿಸಿರಿ - ಎಂದು ಉಪದೇಶಿಸಿದೆ. **'ವಾಚೋ ವಿಗ್ಲಾಪನಂ ಹಿ ತತ್'** (ಬೃ.ಉ. ೪-೪-೨೧) ಎಂದು ಬೋಧಿಸಿದೆ (೧೨೮). ಶಂಕೆ - ಆಹಾರಾದಿಗಳನ್ನು ತ್ಯಜಿಸಿಬಿಟ್ಟರೆ ಬದುಕಿರುವುದು ಹೇಗೆ? ಬದುಕಿದ್ದರಲ್ಲವೆ ತತ್ತ್ವಚಿಂತನೆ ನಡೆಯುತ್ತದೆ. ಉತ್ತರ - ತರ್ಕಾದಿಶಾಸ್ತ್ರಗಳನ್ನು ತ್ಯಜಿಸಿದರೆ ನೀನು ಬದುಕಿರುವುದಿಲ್ಲವೊ? ಸತ್ತು ಹೋಗುತ್ತೀಯೊ? ಅನ್ನಪಾನಗಳನ್ನು ತ್ಯಜಿಸಬೇಕೆಂದು ನಿನಗೆ ಯಾರು ಹೇಳಿದರು? ದುರಾಗ್ರಹದಿಂದ ಹೀಗೆ ವಾದಿಸುವುದೇಕೆ?(೧೨೯). ಜನಕಾದಿಗಳು ತತ್ತ್ವಜ್ಞಾನಿಗಳೆಂದು ಕೇಳಿದ್ದೇವೆ. ಅವರು ರಾಜ್ಯವನ್ನಾಳುತ್ತಿದ್ದುದು ಹೇಗೆ? ಅವರಿಗೆ ಆತ್ಮಜ್ಞಾನವು ದೃಢವಾಗಿ ನಿಂತು ಬಿಟ್ಟಿತ್ತು. ಆದ್ದರಿಂದ ಬಾಧೆ ಇರಲಿಲ್ಲ. ನಿನಗೂ ಅಷ್ಟು ದೃಢವಾಗಿದ್ದರೆ ತರ್ಕವನ್ನು ಓದು ಅಥವಾ ಕೃಷಿಯನ್ನು ಮಾಡು! ಬಾಧೆ ಇಲ್ಲ(೧೩೦).

ಜನಕರಾಜನೇ ಮೊದಲಾದ ತತ್ತ್ವವೇದಿಗಳು ಈ ಸಂಸಾರವು ನಿಃಸಾರವೆಂದೂ ಮಿಥ್ಯೆಯೆಂದೂ ದೃಢವಾಗಿ ತಿಳಿದಿದ್ದರೂ ಪ್ರಾರಬ್ಧಕರ್ಮವು ಕ್ಷಯಿಸಲೆಂದು ರಾಜ್ಯಪಾಲನೆ ಮುಂತಾದ ಕರ್ಮಗಳಲ್ಲಿ ತೊಡಗಿದ್ದರು. ಪ್ರಾರಬ್ಧಕರ್ಮವು ಕ್ಷಯಿಸಲೇಬೇಕಷ್ಟೆ? ಅದು ಒಬ್ಬೊಬ್ಬರಿಗೆ ಒಂದೊಂದು ವಿಧವಾಗಿರುತ್ತದೆ. ಅವರು ಬೇಸರಿಸದೆ ಕಷ್ಟವೆಂದು ತಿಳಿಯದೆ ಲೀಲೆಯಿಂದಲೇ ಕರ್ಮದಲ್ಲಿ ತೊಡಗಿರುತ್ತಾರೆ (೧೩೧). ಶಂಕೆ - ಜ್ಞಾನಿಗಳಾದರೂ ಪ್ರಾರಬ್ಧಕರ್ಮವಶರಾಗಿ ಕರ್ಮವನ್ನಾಚರಿಸುವುದಾದರೆ, ಅವರು ಅನಾಚಾರವನ್ನೂ ಮಾಡಬಹುದಲ್ಲವೆ? ಉತ್ತರ - ಸಾಮಾನ್ಯವಾಗಿ ಹಾಗೆ ಮಾಡುವುದಿಲ್ಲ. ಆದರೆ ಪ್ರಾರಬ್ಧದ ಬಲದಿಂದ ಅನಾಚಾರವನ್ನು ಮಾಡಲೂಬಹುದು. ಕರ್ಮಫಲವನ್ನು ತಡೆಯಲು ಯಾರಿಗೆ ಸಾಧ್ಯ? ಹೇಳು (೧೩೨). ಜ್ಞಾನಿಗಳಾಗಲಿ ಅಜ್ಞಾನಿಗಳಾಗಲಿ, ಅವರೀರ್ವರಿಗೂ ಪ್ರಾರಬ್ಧಕರ್ಮಗಳು ಸಮಾನವಾದವು. ವಿಶೇಷವೇನೆಂದರೆ, ಜ್ಞಾನಿಗಳು ಧೈರ್ಯದಿಂದ ಕರ್ಮವನ್ನಾಚರಿಸುತ್ತಾರೆ. ಅವರಿಗೆ ಕಷ್ಟವೆನಿಸುವುದಿಲ್ಲ. ಮೂಢರು

ಧೈರ್ಯವಿಲ್ಲದೆ ಕಷ್ಟಪಡುತ್ತಾರೆ(೧೩೩). ಇಬ್ಬರು ಪ್ರಯಾಣಿಕರಲ್ಲಿ ದಾರಿ ನಡೆದ ಆಯಾಸವು ಸಮವಾಗಿದ್ದರೂ ಗಮ್ಯಸ್ಥಾನವು ಹತ್ತಿರವಾಗಿದೆಯೆಂದು ಬಲ್ಲವನು ಧೈರ್ಯದಿಂದ ಬೇಗಬೇಗನೆ ಹೋಗಿಬಿಡುತ್ತಾನೆ. ಗೊತ್ತಿಲ್ಲದವನು ದೈನ್ಯದಿಂದ ಸಾಕಾಗಿ ನಿಂತುಬಿಡುತ್ತಾನೆ (೧೩೪). ಸರಿಯಾಗಿ ಆತ್ಮಸಾಕ್ಷಾತ್ಕಾರ ಮಾಡಿಕೊಂಡಿರುವ ಧೀಮಂತನಿಗೆ ವಿಪರೀತಭಾವನೆ ಇರುವುದೇ ಇಲ್ಲ. ಆತನು ಯಾವ ಭೋಗ್ಯವಸ್ತುವನ್ನು ಬಯಸಿ ಯಾವ ಆಶಾಪೂರ್ತಿಗಾಗಿ ಶರೀರ ನಿಮಿತ್ತಿಕವಾದ ಕ್ಲೇಶವನ್ನು ಅನುಭವಿಸಬೇಕಾಗಿದೆ?(೧೩೫) ಜಗತ್ತು ಮಿಥ್ಯೆಯೆಂದು ದೃಢವಾದಮೇಲೆ ಕಾಮ್ಯವಸ್ತುವೂ ಇರುವುದಿಲ್ಲ. ಅದನ್ನು ಬಯಸತಕ್ಕವನೂ ಇರುವುದಿಲ್ಲ. ಅವೆರಡೂ ಇಲ್ಲವಾದಾಗ ಅವುಗಳ ನಿಮಿತ್ತದಿಂದ ಆಗುವ ಕ್ಲೇಶವು, ಎಣ್ಣೆಯಿಲ್ಲದ ದೀಪದಂತೆ, ತಾನಾಗಿ ಆರಿಹೋಗುವುದು (೧೩೬). ಶಂಕೆ - ಕಾಮ್ಯವಸ್ತುವಿಲ್ಲದಿದ್ದರೆ ಕಾಮನೆಯೂ ಇರುವುದಿಲ್ಲವೆಂದು ಹೇಗೆ ಸಿದ್ಧವಾಗುತ್ತದೆ? ಉತ್ತರ- ಹೌದು, ಸಿದ್ಧವಾಗುತ್ತದೆ. ಮಾಯಾವಿಯಾದ ಐಂದ್ರಜಾಲಿಕನು ನಿರ್ಮಿಸಿದ ಗಂಧರ್ವನಗರದಲ್ಲಿ ಇರುವುದಷ್ಟೂ ಮಾಯಿಕ, ಅನೃತ- ಎಂದು ಬಲ್ಲವನು ಅದನ್ನೆಂದಿಗೂ ಬಯಸುವುದಿಲ್ಲ. ಅದನ್ನು ನೋಡಿ ನಗುತ್ತ ತ್ಯಜಿಸಿ ಬಿಡುತ್ತಾನೆ. ಆತನಿಗೆ ಕಾಮನೆ ಹುಟ್ಟುವುದೇ ಇಲ್ಲ(೧೩೭-೧೩೮). ವಿವೇಕಿಗೆ ಭೋಗಸಾಮಗ್ರಿಗಳಲ್ಲಿ ದೋಷಗಳೇ ಕಾಣಿಸುತ್ತವೆ. ಒಂದು ನೀತಿಶ್ಲೋಕವು ಹೇಳುವಂತೆ ''ಧನವನ್ನು ಸಂಪಾದಿಸುವುದು ಕಷ್ಟ ಅದರ ರಕ್ಷಣೆಯೂ ಕಷ್ಟ ಧನವು ನಾಶವಾದರೂ ದುಃಖ, ಖರ್ಚಾದರೂ ದುಃಖ. ಕೇವಲ ದುಃಖಕಾರಿಗಳಾದ ಈ ಧನಕನಕಾದಿಗಳಿಗೆ ಧಿಕ್ಕಾರ!'' ಎಂಬ ನಿಶ್ಚಯ ಅವನಿಗಿರುತ್ತದೆ (೧೩೯). ಸ್ತ್ರೀಯರಲ್ಲಿ ಆಕರ್ಷಕವಾದ ಸೊಗಸು ಯಾವುದಿದ್ದೀತು? ಅವಳು ಒಂದು ಮಾಂಸದ ಬೊಂಬೆ! ಯಂತ್ರಬಲದಿಂದ ತಿರುಗಾಡುವ ಅವಯವಘಟಿತವಾದ ಒಂದು ಪಂಜರ. ಅದರಲ್ಲಿರುವುದು ನರ, ಮೂಳೆ, ಕೆಲವು ಮಾಂಸದ ಮುದ್ದೆಗಳು - ಇಂತಹವೇ (೧೪೦). ಹೀಗೆಯೇ ಶಾಸ್ತ್ರಗಳಲ್ಲಿ ವಿಷಯದೋಷಗಳನ್ನು ವಿವರವಾಗಿ ತೋರಿಸಿಕೊಟ್ಟಿದ್ದಾರೆ. ಅವನ್ನು ಸದಾ ಪರಿಶೀಲಿಸತಕ್ಕವನು ಈ ದುಃಖಗಳಲ್ಲಿ ಮತ್ತೆ ಮುಳುಗುವುದುಂಟೆ? ಹಸಿವಿನಿಂದ ಪೀಡಿತನಾಗಿದ್ದರೂ ಯಾವ ವ್ಯಕ್ತಿಯೂ ವಿಷಮಿಶ್ರಿತವಾದ ಅನ್ನವನ್ನು ತಿನ್ನಲು ಇಚ್ಛಿಸುವುದಿಲ್ಲ. ಹೀಗಿರುವಾಗ ಸೊಗಸಾದ ಮೃಷ್ಟಾನ್ನವನ್ನು ಭೋಜನಮಾಡಿ

ತೃಪ್ತನಾದ ಯಾವ ವಿವೇಕಿಯು ವಿಷಾನ್ನವನ್ನು ತಿನ್ನಲು ಬಯಸುತ್ತಾನೆ? (೧೪೧-೧೪೨). ಪ್ರಾರಬ್ಧಕರ್ಮದ ಪ್ರಾಬಲ್ಯದಿಂದ ಒಬ್ಬನಿಗೆ ಭೋಗೇಚ್ಛೆಯುಂಟಾಗಬಹುದು. ಆಗಲೂ ಸಹ, ಒತ್ತಾಯಕ್ಕೆ ಸಿಕ್ಕಿದ ಬಿಟ್ಟಿ ಕೆಲಸಗಾರನು ಕೆಲಸಮಾಡುವಂತೆ, ಇಷ್ಟವಿಲ್ಲದಿದ್ದರೂ ಕ್ಲೇಶದಿಂದಲೇ ಭೋಗವನ್ನು ಅನುಭವಿಸುತ್ತಾನೆ (೧೪೩). ಶ್ರದ್ಧಾವಂತರೂ ಗೃಹಸ್ಥರೂ ಆದ ಜ್ಞಾನಿಗಳು ವಿಷಯಭೋಗವನ್ನನುಭವಿಸುತ್ತಿದ್ದರೂ ''ಅಯ್ಯೋ, ನಮ್ಮ ಪ್ರಾರಬ್ಧಕರ್ಮವು ಇನ್ನೂ ಮುಗಿಯಲಿಲ್ಲ'' ಎಂದು ಸದಾ ಕೊರಗುತ್ತಲೇ ಇರುತ್ತಾರೆ. ಇಂಥವರಿದ್ದಾರೆ (೧೪೪). ಶಂಕೆ - ಜ್ಞಾನಿಗಳಾದವರೂ ಸಂಸಾರನಿಮಿತ್ತವಾಗಿ ಕೊರಗುತ್ತಾರೆ ಎಂದಾದರೆ, ಅವರ ಜ್ಞಾನವು ವ್ಯರ್ಥವೆನ್ನಬೇಕಾಗುತ್ತದೆಯಲ್ಲವೆ? ಉತ್ತರ - ಹಾಗಲ್ಲ; ಅವರ ಕೊರಗು ಸಂಸಾರನಿಮಿತ್ತಕವಾದ ದುಃಖವಲ್ಲ. ಅದು ಸಂಸಾರದಲ್ಲಿ ಅವರಿಗಿರುವ ವೈರಾಗ್ಯ ಮಾತ್ರ. ಸಂಸಾರವು ಸತ್ಯವೆಂಬ ಭ್ರಾಂತಿಯಿಂದ ಹುಟ್ಟಿದ ಕೊರಗು ಸಾಂಸಾರಿಕದುಃಖವೆನಿಸುತ್ತದೆ (೧೪೫). ಜ್ಞಾನಿಗೆ ವಿವೇಕಜ್ಞಾನದಿಂದ ಹುಟ್ಟಿದ ಕೊರಗು ಅದು. ಆತನಿಗೆ ಸಾಂಸಾರಿಕ ಸುಖಭೋಗವು ಅತ್ಯಲ್ಪವಾದರೂ ತೃಪ್ತಿ ಇರುತ್ತದೆ. ವಿವೇಕವಿಲ್ಲದ ಮೂಢನಿಗೆ ಅನಂತಭೋಗಗಳು ಒದಗಿದರೂ ಎಂದಿಗೂ ತೃಪ್ತಿ ಇರುವುದಿಲ್ಲ (೧೪೬). ಸ್ಮೃತಿವಚನವು ಹೀಗಿದೆ - ಕಾಮ್ಯವಿಷಯಗಳ ಭೋಗದಿಂದ ಆಸೆಯು ಎಂದಿಗೂ ಶಾಂತವಾಗುವುದಿಲ್ಲ. ಹವಿಸ್ಸನ್ನು ಹಾಕಿದಷ್ಟು ಅಗ್ನಿಯ ಭುಗಿಲ್ ಎಂದು ವರ್ಧಿಸುವಂತೆ ಇನ್ನೂ ಅಧಿಕವಾಗುತ್ತದೆ (೧೪೭). 'ಭೋಗದ ಹಣೆಬರಹ ಇಷ್ಟೇ. ಇದು ಬಹುಕಷ್ಟಸಾಧ್ಯ' ಎಂದು ತಿಳಿದು ಸೇವಿಸಿದರೆ, ಅದು ತೃಪ್ತಿಯನ್ನು ನೀಡುತ್ತದೆ. ಇವನು ಕಳ್ಳನೆಂದು ತಿಳಿದರೂ ಅವನೊಡನೆ ಸ್ನೇಹದಿಂದ ವರ್ತಿಸುತ್ತಿದ್ದರೆ, ಅವನು ಸ್ವಲ್ಪದಿನಗಳಲ್ಲಿ ಮಿತ್ರನಾಗಿ ಬಿಡುತ್ತಾನೆ! ಆಗ ಕಳ್ಳನು ಇವನ ಮನೆಯಲ್ಲಿ ಕಳ್ಳತನ ಮಾಡುವುದಿಲ್ಲ! (೧೪೮). ಯೋಗಾಭ್ಯಾಸದಿಂದ ವಶೀಕೃತವಾದ ಮನಸ್ಸು ಲೀಲೆಯಿಂದ ತನಗೊದಗಿದ ಭೋಗವು ಅಲ್ಪವಾಗಿದ್ದರೂ ಆ ಸಂಕ್ಷಿಪ್ತಭೋಗವು ಕ್ಲೇಶಲಭ್ಯವೆಂದು ತಿಳಿದು ಅದನ್ನೇ ಬಹು ದೊಡ್ಡದೆಂದು ತಿಳಿದುಕೊಳ್ಳುತ್ತದೆ! ಏಕೆಂದರೆ, ಯೋಗವಶೀಕೃತವಾದ ಮನಸ್ಸಿಗೆ ಅಲ್ಪಭೋಗವೂ ನಿದಿಧ್ಯಾಸನಕ್ಕೆ ವಿಕ್ಷೇಪವನ್ನುಂಟುಮಾಡುತ್ತದೆ. ಪಳಗಿದ ಮನಸ್ಸು ಭೋಗವು ಇಷ್ಟು ಸಾಕೆಂದು ತೃಪ್ತವಾಗಿಬಿಡುತ್ತದೆ (೧೪೯). ಇದಕ್ಕೊಂದು ದೃಷ್ಟಾಂತವನ್ನು ಕೊಡಬಹುದು. ವೈರಿಯಿಂದ ಸೆರೆಹಿಡಿಯಲ್ಪಟ್ಟು

ಅನಂತರ ಬಿಡುಗಡೆಹೊಂದಿದ ರಾಜನಿಗೆ ಒಂದು ಗ್ರಾಮವನ್ನು ಕೊಟ್ಟರೂ ಅವನು ಅದರಿಂದ ಸಂತೋಷಪಡುತ್ತಾನೆ. ಆದರೆ ವೈರಿಯಿಂದ ಬಂಧನಕ್ಕಾಗಲಿ ಆಕ್ರಮಣಕ್ಕಾಗಲಿ ಒಳಗಾಗದ ರಾಜನಿಗೆ ಒಂದು ರಾಷ್ಟ್ರವೇ ವಶವಾಗಿದ್ದರೂ ಅದರಿಂದ ಆತನು ತೃಪ್ತನಾಗುವುದಿಲ್ಲ(೧೫೦).

ಇದು ಮಾಯಾಪ್ರಪಂಚವೆಂದೂ ವಿಷಯಭೋಗವು ಕೆಟ್ಟದೆಂದೂ ವಿವೇಕವು ಜಾಗೃತವಾಗಿರುವಾಗ ಪ್ರಾರಬ್ಧಕರ್ಮವು ಭೋಗೇಚ್ಛೆಯನ್ನು ಉಂಟುಮಾಡುವುದು ಹೇಗೆ? ಎಂಬ ಆಕ್ಷೇಪವು ಬರುತ್ತದೆ.(೧೫೧) ನಿಜ; ಇದೇನೂ ದೋಷವಲ್ಲ, ಕರ್ಮವು ಇಚ್ಛಾಪ್ರಾರಬ್ಧ, ಅನಿಚ್ಛಾಪ್ರಾರಬ್ಧ, ಪರೇಚ್ಛಾ ಪ್ರಾರಬ್ಧವೆಂದು ಮೂರು ವಿಧ (೧೫೨). ಅಪಥ್ಯವಾದ ಆಹಾರವನ್ನೂ ಮದ್ಯಾದಿಗಳನ್ನೂ ಸೇವಿಸತಕ್ಕವರು, ಕಳ್ಳರು, ರಾಜಪತ್ನಿಯರಲ್ಲಿ ಅನುರಕ್ತರು - ಈ ಬಗೆಯ ಜನರು ತಮಗೆ ಒದಗುವ ಅನರ್ಥಗಳನ್ನು ತಿಳಿದಿದ್ದರೂ ಆ ಕಾರ್ಯಗಳಲ್ಲಿ ತೊಡಗಲು ಇಚ್ಛಿಸುತ್ತಾರೆ. ಇದು ಇಚ್ಛಾ ಪ್ರಾರಬ್ಧ(೧೫೩). ಈ ಅನುಚಿತ ಕಾರ್ಯಗಳಿಂದ ಅವರನ್ನು ತಡೆಯಲು ಈಶ್ವರನಿಗೂ ಸಾಧ್ಯವಿಲ್ಲ! ಏಕೆಂದರೆ ಈಶ್ವರನಾದ ಶ್ರೀಕೃಷ್ಣನೇ ಭಗವದ್ಗೀತೆಯಲ್ಲಿ ''ವಿವೇಕಿಯಾದವನೂ ಸಹ ತನ್ನ ಜನ್ಮಾಂತರದ ಸಂಸ್ಕಾರಕ್ಕೆ ಅನುಗುಣವಾಗಿ ನಡೆಯುತ್ತಾನೆ. ಹೀಗೆಯೇ ಇತರ ಎಲ್ಲ ಜೀವಿಗಳೂ ತಮ್ಮ ಪೂರ್ವಾರ್ಜಿತ ಕರ್ಮದಂತೆ ನಡೆಯುತ್ತಾರೆ. ಬಲಾತ್ಕಾರದ ನಿಗ್ರಹವು ಏನು ಮಾಡೀತು?'' ಎಂದು ಅರ್ಜುನನಿಗೆ ಹೇಳಿದ್ದಾನೆ(೧೫೪-೧೫೫). ಅವಶ್ಯವಾಗಿ ಆಗಿಯೇ ತೀರುವ ದುಃಖಾದಿಗಳಿಗೆ ಪರಿಹಾರವು ಇದ್ದಿದ್ದರೆ, ನಳ ಶ್ರೀರಾಮ ಯುಧಿಷ್ಠಿರರು ದುಃಖಕಾರಿಗಳಾದ ವಿಪತ್ತುಗಳನ್ನು ಅನುಭವಿಸುತ್ತಿರಲಿಲ್ಲ. '' ಹೀಗೆ ಪ್ರಾರಬ್ಧಕರ್ಮಗಳಿಗೆ ಪ್ರತೀಕಾರವೇ ಇಲ್ಲದೆ ಹೋದರೆ, ಈಶ್ವರನ ಈಶತ್ವವೇ ಹೋಗಬೇಕಾದೀತು'' - ಎಂದು ಆಪಾದಿಸಬಾರದು. ಪ್ರಾರಬ್ಧ ಕರ್ಮಗಳನ್ನು ಅವಶ್ಯವಾಗಿ ಅನುಭವಿಸಲೇ ಬೇಕು ಎಂಬ ನಿಯಮವನ್ನು ಈಶ್ವರನೇ ಗೊತ್ತುಮಾಡಿರುತ್ತಾನೆ! (೧೫೬-೧೫೭). ಇನ್ನು ಅನಿಚ್ಛಾಪ್ರಾರಬ್ಧವೆಂಬುದೂ ಉಂಟೆಂದು ಶ್ರೀಕೃಷ್ಣಾರ್ಜುನರಲ್ಲಿ ನಡೆದ ಪ್ರಶ್ನೋತ್ತರಗಳಿಂದ ತಿಳಿದುಬರುತ್ತದೆ. ಅದನ್ನು ಕೇಳು. ಅರ್ಜುನನ ಪ್ರಶ್ನೆ ಇದು- '' ಶ್ರೀಕೃಷ್ಣ ಈ ಮನುಷ್ಯನು, ತನಗೆ ಇಚ್ಛೆ ಇಲ್ಲದಿದ್ದರೂ ಇನ್ನೊಬ್ಬರು ಬಲಾತ್ಕಾರದಿಂದ ಪ್ರೇರಿಸುತ್ತಿರುವಂತೆ, ಪಾಪ ಕಾರ್ಯವನ್ನು ಮಾಡುತ್ತಾನಲ್ಲ, ಅದೇಕೆ?'' (೧೫೮-೧೫೯). ಈ ಪ್ರಶ್ನೆಗೆ ಶ್ರೀಕೃಷ್ಣನ

ಉತ್ತರವಿದು - ''ಇದೇ ಕಾಮ. ಇದೇ ಪರಿಣಮಿಸಿ ಕ್ರೋಧವೆನಿಸುತ್ತದೆ. ರಜೋಗುಣದಿಂದ ಹುಟ್ಟಿದ್ದು ಇದು. ಇದಕ್ಕೆ ಬಹಳ ಆಹಾರಬೇಕು. ಪಾಪಿಷ್ಠವಾದದ್ದು ಇದು. ಅರ್ಜುನ, ಈ ಸಂಸಾರದಲ್ಲಿ ಕಾಮರೂಪವಾದ ಈ ಕ್ರೋಧವು ವೈರಿಯೆಂದು ತಿಳಿ. ರಜೋಗುಣದಿಂದ ಹುಟ್ಟಿದ ಕಾಮವೋ ಕ್ರೋಧವೋ ಮನುಷ್ಯನನ್ನು ಪಾಪಕರ್ಮಾಚರಣೆಗೆ ಒತ್ತಾಯದಿಂದ ತಳ್ಳುತ್ತದೆ (೧೬೦). ಅರ್ಜುನ, ಸ್ವಾಭಾವಿಕವಾದ ರಜೋಗುಣದಿಂದ ನಡೆದ ನಿನ್ನ ಪ್ರಾರಬ್ಧಕರ್ಮದಿಂದ ನಿಬದ್ಧನಾಗಿದ್ದೀಯೆ. ಯುದ್ಧಮಾಡುವುದಿಲ್ಲವೆಂದು ಮೋಹವಶನಾಗಿ ಹೇಳುತ್ತಿದ್ದೀಯೆ. ಇಚ್ಛೆಯಿಲ್ಲದಿದ್ದರೂ ಯುದ್ಧವನ್ನು ಮಾಡುತ್ತೀಯೆ'' ಎಂದಿದ್ದಾನೆ. ಈ ಸಂವಾದದಿಂದ ಅನಿಚ್ಛಾಪ್ರಾರಬ್ಧ ಉಂಟೆಂದು ಗೊತ್ತಾಗುತ್ತದೆ (೧೬೧). ತಮಗೆ ಇಚ್ಛೆ ಇಲ್ಲದಿರಲಿ ಅಥವಾ ಇಚ್ಛೆ ಇರಲಿ, ಕೆಲವರು ಆ ಕರ್ಮವನ್ನು ಸ್ವತಃ ಮಾಡದೆ ಇನ್ನೊಬ್ಬರ ದಾಕ್ಷಿಣ್ಯಕ್ಕೆ ಮಣಿದು ಮಾಡಿ ಸುಖದುಃಖಗಳನ್ನು ಅನುಭವಿಸುತ್ತಾರೆ. ಇದು ಪರೇಚ್ಛಾಪ್ರಾರಬ್ಧ ವೆನಿಸಿದೆ (೧೬೨). ಶಂಕೆ-ಹಾಗಾದರೆ '**ಕಿಮಿಚ್ಛನ್ ಕಸ್ಯ ಕಾಮಾಯ ಶರೀರಮನುಸಂಜ್ವರೇತ್**' (ಶಾಟ್ಯಾಂ. ಉ. ೨೨) ಎಂಬ ಶ್ರುತಿವಾಕ್ಯವು ತತ್ತ್ವಜ್ಞನಿಗೆ ಇಚ್ಛಾನಿಷೇಧವನ್ನು ಮಾಡಿದ್ದು ಹೇಗೆ? ಉತ್ತರ- ಅದು ಇಚ್ಛಾ ನಿಷೇಧವಲ್ಲ. ಇಚ್ಛೆಯು ಕಾರ್ಯಜನಕವಲ್ಲವೆಂದೂ ಅದು ಹುರಿದ ಬೀಜದಂತೆ ಆಗಿ ಬಿಡುತ್ತದೆಯೆಂದೂ ಅಭಿಪ್ರಾಯ (೧೬೩). ಹುರಿದ ಬೀಜಗಳು ತಮ್ಮ ಸ್ವರೂಪದಲ್ಲಿ ಇರುತ್ತವೆ. ಆದರೆ ಮೊಳಕೆಯನ್ನು ಹುಟ್ಟಿಸಲಾರವು. ಹಾಗೆಯೇ ವಿಷಯವು ಮಾಯಿಕವಾದ್ದರಿಂದ ಇಲ್ಲವೆಂದೆಣಿಸಿ, ಆತ್ಮಜ್ಞಾನಿಯ ಇಚ್ಛೆಯು ಕಾರ್ಯದಲ್ಲಿ ಪ್ರವೃತ್ತವಾಗುವುದಿಲ್ಲ (೧೬೪). ಕಾರ್ಯವನ್ನೇನು ಹುಟ್ಟಿಸದಿದ್ದಮೇಲೆ ಜ್ಞಾನಿಗೆ ಇಚ್ಛೆಯಾದರೂ ಯಾವ ಫಲಕ್ಕಾಗಿ ಹುಟ್ಟಬೇಕು? ಹುರಿದ ಬೀಜದಿಂದ ಮೊಳಕೆ ಹುಟ್ಟದಿದ್ದರೂ ತಿನ್ನುವುದಕ್ಕೆ ಬರುತ್ತವೆಯಲ್ಲವೆ? ಹಾಗೆಯೇ ಜ್ಞಾನಿಯ ಇಚ್ಛೆಯಿಂದ ಸ್ವಲ್ಪ ಲೌಕಿಕಭೋಗವು ಉಂಟಾಗ ಬಹುದು. ಆದರಿಂದ ಹೆಚ್ಚಿನ ವಿಪತ್ತೇನೂ ಸಂಭವಿಸುವುದಿಲ್ಲ (೧೬೫).

ಹೀಗೆ ಪ್ರಾರಬ್ಧಕರ್ಮವು ಜ್ಞಾನಿಗೆ ಆಪಾತಭೋಗವನ್ನಿತ್ತು ಚರಿತಾರ್ಥವಾಗುವುದರಿಂದ ಕ್ಷಯಿಸುತ್ತದೆ. ಭೋಗದಿಂದ ಇನ್ನಾವ ವ್ಯಸನವೂ ಹುಟ್ಟುವುದಿಲ್ಲ. ಭೋಗಿಸಲ್ಪಡುವ ವಸ್ತು ಸತ್ಯವೆಂಬ ಭ್ರಾಂತಿಯು ವ್ಯಸನಕ್ಕೆ ನಿಮಿತ್ತ. ಜ್ಞಾನಿಗೆ ವಿಷಯವಸ್ತು ಮಿಥ್ಯವೆಂಬ ಜ್ಞಾನವಿರುವುದರಿಂದ ವ್ಯಸನಕ್ಕೆ ಅವಕಾಶವಿರುವುದಿಲ್ಲ (೧೬೬). ಭ್ರಮೆಯೆಂದರೆ ''ಈ ಭೋಗವು

ಕ್ಷೀಣಿಸದಿರಲಿ. ಇದು ಉತ್ತರೋತ್ತರವಾಗಿ ವರ್ಧಿಸುತ್ತಲೇ ಹೋಗಲಿ. ವಿಘ್ನಗಳು ನನ್ನ ಸುಖಕ್ಕೆ ಅಡ್ಡಿಬಾರದಿರಲಿ. ಈ ಸುಖಭೋಗದಿಂದ ನಾನು ಧನ್ಯನಾದೆ'' ಎಂಬ ಭಾವನೆ(೧೬೭). ಈ ಭಾವನೆಯೆಂಬ ಚಿಂತೆಯೇ ಒಂದು ವಿಷವಾಗಿದೆ. ''ಯಾವುದು ಆಗಲಾರದೋ ಅದು ಎಂದಿಗೂ ಆಗುವುದಿಲ್ಲ, ಯಾವುದು ಆಗಬೇಕೋ ಅದು ಆಗದೇ ಇರುವುದಿಲ್ಲ'' ಎಂಬ ನಿಶ್ಚಯವು ಆ ಚಿಂತಾವಿಷವನ್ನು ಹೋಗಲಾಡಿಸುತ್ತದೆ (೧೬೮). ಜ್ಞಾನಿ ಮತ್ತು ಅಜ್ಞಾನಿಗಳಿಗೆ ಸುಖದುಃಖಭೋಗವು ಸಮವಾಗಿರುತ್ತದೆ. ಆದರೆ ಅಜ್ಞಾನಿಯಾದ ಭ್ರಾಂತನು ವ್ಯಸನಕ್ಕೆ ಈಡಾಗುತ್ತಾನೆ. ಜ್ಞಾನಿಯ ಬಳಿ ವ್ಯಸನವು ಸುಳಿಯುವುದಿಲ್ಲ. ಅಸಾಧ್ಯವಾದದ್ದು ಸಾಧ್ಯವಾಗಬೇಕೆಂದು ಸಂಕಲ್ಪಿಸಿ ಕೊಳ್ಳುವುದರಿಂದ ಭ್ರಾಂತನಿಗೆ ಒದಗುವ ಕಷ್ಟವು ಅತಿಯಾಗುತ್ತದೆ. ಯಾವಾತನು ಸುಖದುಃಖಭೋಗವೆಲ್ಲವೂ ಮಾಯಿಕವೆಂದು ತಿಳಿದು ಅವುಗಳಲ್ಲಿ ಆಸಕ್ತಿಯನ್ನು ದೂರಮಾಡಿರುವನೋ ಆ ಜ್ಞಾನಿಯು ಸುಖ ವನ್ನನುಭವಿಸುತ್ತಿದ್ದರೂ ಅದು ಬೇಕೆಂದು ಸಂಕಲ್ಪಿಸುವುದೇ ಇಲ್ಲ- ಅವನಿಗೆ ವ್ಯಸನವೆಲ್ಲಿಂದ ಬಂದೀತು? (೧೬೯-೧೭೦). ''ಈ ಜಗತ್ತಿನ ರಚನೆ ಊಹೆಗೂ ನಿಲುಕುವುದಿಲ್ಲ. ಇದು ಕನಸಿನಂತೆ, ಇಂದ್ರಜಾಲದಂತೆ ಇದೆ, ಈಗ ಕಾಣಿಸತಕ್ಕದ್ದು ಇನ್ನೊಂದು ಕ್ಷಣದಲ್ಲಿ ನಾಶವಾಗುತ್ತದೆ'' ಎಂದು ಈ ಜಗತ್ತಿನ ಪರಿಸ್ಥಿತಿಯನ್ನು ಯಾವ ವಿವೇಕಿಯು ತಿಳಿದಿದ್ದಾನೋ ಅವನು ಇದರಲ್ಲಿ ಹೇಗೆ ಅನುರಕ್ತನಾದಾನು? (೧೭೧). ತನಗೆ ಬೀಳುವ ಕನಸು ಪರೋಕ್ಷವೇನಲ್ಲ. ಅದನ್ನು ತಾನೇ ಸಾಕ್ಷಾತ್ಕರಿಸುತ್ತಾನೆ. ಆಮೇಲೆ ಜಾಗರವನ್ನು ಅನುಭವಿಸುತ್ತಾನೆ. ಇವೆರಡನ್ನೂ ಅನುಭವಿಸುತ್ತಿರುವ ವಿವೇಕಿಯು ಎಚ್ಚರಿಕೆಯಿಂದ ಪ್ರತಿದಿನವೂ ವಿಮರ್ಶಿಸುತ್ತಿರಬೇಕು. ಕನಸು ಜಾಗರಗಳಲ್ಲಿ ಯಾವುದು ಸತ್ಯ? - ಎಂದು ಮತ್ತೆ ಮತ್ತೆ ಚಿಂತಿಸಬೇಕು (೧೭೨). ಇವೆರಡೂ ಸಮವಾಗಿವೆಯೆಂಬುದನ್ನು ದೀರ್ಘಕಾಲ ವಿಚಾರಮಾಡಿದಾಗ ಬುದ್ಧಿಶಾಲಿಗೆ ಕನಸಿನಂತೆ ಜಾಗರವೂ ಮಿಥ್ಯೆ - ಎಂಬುದು ದೃಢವಾಗುತ್ತದೆ. ಆಗ ಈ ಜಾಗ್ರತ್ ಪ್ರಪಂಚವು ಸತ್ಯವೆಂಬ ಬುದ್ಧಿ ನಿವೃತ್ತವಾಗುತ್ತದೆ. ಅನಂತರ ಹಿಂದಿನಂತೆ ಈ ಸಂಸಾರದಲ್ಲಿ ಅನುರಕ್ತನಾಗುವುದಿಲ್ಲ(೧೭೩). ಇದರ ರಚನೆ ಊಹೆಗೆ ನಿಲುಕದ್ದರಿಂದ ಈ ದ್ವೈತಪ್ರಪಂಚವು ಇಂದ್ರಜಾಲವೇ ಸರಿ - ಎಂಬುದನ್ನು ಮರೆಯದೆ ಇದ್ದವನಿಗೆ ಪ್ರಾರಬ್ಧಭೋಗದಿಂದಾಗುವ ಹಾನಿ ಯಾವುದು? (೧೭೪). ಈ ವಿಷಯವನ್ನು ಸ್ಮರಣೆಯಲ್ಲಿಡಬೇಕು. ''ಈ ಜಗತ್ತು ಇಂದ್ರಜಾಲದಂತೆ ಮಿಥ್ಯೆ

ಎಂಬುದನ್ನು ಅನುಸಂಧಾನ ಮಾಡುತ್ತಿರುವುದು ಆವಶ್ಯಕ - ಎಂಬ ವಿಷಯದಲ್ಲಿ ತತ್ತ್ವಜ್ಞಾನದ ಆಗ್ರಹವಿರುತ್ತದೆ. ಕರ್ಮಫಲಭೋಗವಿಲ್ಲ - ಎಂಬುದು ಅದಕ್ಕೆ ಸಂಬಂಧಿಸಿದ್ದಲ್ಲ. ಪ್ರಾರಬ್ಧಕರ್ಮವು ಜೀವನಿಗೆ ಸುಖದುಃಖಗಳನ್ನು ಕೊಟ್ಟೇಕೊಡುತ್ತದೆ - ಎಂಬ ಕರ್ಮಫಲದ ವಿಚಾರದಲ್ಲಿ ಆಗ್ರಹವಿದೆ. ಕರ್ಮಫಲಭೋಗವು ಸತ್ಯ - ಎಂದು ಸಾಧಿಸುವುದು ಅದಕ್ಕೆ ಸಂಬಂಧಿಸಿದ್ದಲ್ಲ'' (೧೭೫).

ವಿದ್ಯೆ (ಜಗನ್ಮಿಥ್ಯಾತ್ವಜ್ಞಾನ) ಮತ್ತು ಪ್ರಾರಬ್ಧಗಳಿಗೆ ಪರಸ್ಪರ ವಿರೋಧವೇನೂ ಇಲ್ಲ. ಏಕೆಂದರೆ, ಇವುಗಳ ವಿಷಯಗಳು ವಿಭಿನ್ನವಾಗಿವೆ. ವಿದ್ಯೆಗೆ ವಿಷಯವಾದದ್ದು ಜಗತ್ತು ಸತ್ಯವಲ್ಲ ಎನ್ನುವುದು. ಪ್ರಾರಬ್ಧಕ್ಕೆ ವಿಷಯವಾದದ್ದು ಸುಖದುಃಖಪ್ರದಾನ. ಮಿಥ್ಯೆಯಾದದ್ದೂ ಸುಖದುಃಖಗಳನ್ನು ಕೊಡಬಹುದು. ಇಂದ್ರಜಾಲವು ಮಿಥ್ಯೆ ಎನ್ನುವುದು ಎಲ್ಲರಿಗೂ ಗೊತ್ತಿದೆ. ಆದರೂ ಜನರು ಅದನ್ನು ನೋಡಲು ಹೋಗುತ್ತಾರೆ. ಇಂದ್ರಜಾಲದಿಂದ ಮನೋರಂಜನೆಯಾಗುವುದು ಸ್ಪಷ್ಟವಾಗಿದೆಯಲ್ಲವೆ? (೧೭೬). ಜಗತ್ತು ಸತ್ಯವೆಂದು ತೋರಿಸಿಕೊಟ್ಟು ಪ್ರಾರಬ್ಧವು ಭೋಗವನ್ನುಂಟುಮಾಡಿದರೆ ಆಗ ಅದು ವಿದ್ಯೆಗೆ ವಿರೋಧಿಯಾಗುತ್ತಿತ್ತು. ಕೇವಲ ಭೋಗವನ್ನುಂಟು ಮಾಡಿದ್ದರಿಂದಲೇ ಜಗತ್ತು ಸತ್ಯವೆಂದು ಆಗಿಬಿಡುವುದಿಲ್ಲ(೧೭೭). ಅಲ್ಲದೆ ಕನಸಿನಲ್ಲಿ ಬರುವ ವಸ್ತುಗಳೆಲ್ಲವೂ ಕಲ್ಪಿಸಿಕೊಂಡವು. ಜಾಗ್ರತ್ತಿನಲ್ಲಾಗುವ ಸುಖದುಃಖಗಳಂತೆ ಕನಸಿನಲ್ಲೂ ಯಾವ ನ್ಯೂನತೆಯೂ ಇಲ್ಲದ ಸುಖದುಃಖಗಳಾಗುತ್ತವೆ. ಆದ್ದರಿಂದ ಅಸತ್ಯವಾದ ಮಿಥ್ಯಾವಸ್ತುಗಳಿಂದ ಭೋಗವು ಪ್ರಾಪ್ತವಾಗುತ್ತದೆಯೆಂದು ಒಪ್ಪಿಕೊಳ್ಳಲೇಬೇಕು (೧೭೮). ಪ್ರಾರಬ್ಧಕರ್ಮವು ವಿದ್ಯೆಗೆ ವಿರೋಧಿಯಾಗಿದ್ದರೆ ಆಗ ಅದು ಜಗತ್ತಿಗೆ ಸತ್ಯವನ್ನುಂಟುಮಾಡಿ - ಎಂದರೆ - ಜಗತ್ತು ಸತ್ಯವೆಂಬ ಭ್ರಮೆಯನ್ನು ಉಂಟುಮಾಡಿ ಸುಖದುಃಖಭೋಗವನ್ನು ಕೊಡಬೇಕಾಗಿತ್ತು. ಹಾಗೆ ಮಾಡುವುದಿಲ್ಲ. ಜಗತ್ತು ಮಿಥ್ಯೆ ಎಂಬ ಜ್ಞಾನವು ವಿವೇಕಿಗೆ ಇದ್ದೇ ಇರುತ್ತದೆ. ಅದು ಮಾಯಿಕವೆಂದು ತಿಳಿದ ಮಾತ್ರದಿಂದ ಜಗತ್ತೇ ವಿಲಯವಾಗಿ ಬಿಡುವುದಿಲ್ಲ. ಆದ್ದರಿಂದ ಪ್ರಾರಬ್ಧಕರ್ಮವು ವಿದ್ಯಾವಿರೋಧಿಯಲ್ಲ(೧೭೯). ಇಂದ್ರಜಾಲವನ್ನು ನೋಡುವ ಜನರು ಲೋಕದಲ್ಲಿಯೂ ಇಂದ್ರಜಾಲವೆಂದು ತಿಳಿದೂ ವಿನೋದಿಸುತ್ತಾರೆ. ಹಾಗೆಯೇ ಜಗತ್ತು ಮಾಯೆಯೆಂಬ ಬುದ್ಧಿಯೂ

ಸಹ ಅದರಿಂದಾಗುವ ಸುಖದುಃಖಭೋಗವನ್ನು ಪಡೆಯುತ್ತಲೇ ಇರುವುದು (೧೮೦). ಈ ವಿಷಯದಲ್ಲೊಂದು ಶಂಕೆ ಹುಟ್ಟುತ್ತದೆ. ''**ಯತ್ರ ತ್ವಸ್ಯ ಸರ್ವಮಾತ್ಮೈವಾಭೂತ್ ತತ್ಕೇನ ಕಂ ಪಶ್ಯೇತ್**'' (ಬೃ.ಉ.೪-೫-೧೨) ಇತ್ಯಾದಿ ಶ್ರುತಿವಚನ ವಿದೆಯಷ್ಟೆ. ''ಯಾವ ವಿದ್ಯಾವಸ್ಥೆಯಲ್ಲಿ ಸಮಸ್ತ ಜಗತ್ತು ಜ್ಞಾನಿಗೆ ತನ್ನ ಆತ್ಮವೇ ಆಗಿಬಿಡುವುದೋ ಆಗ ಯಾವನು ಯಾವ ಕಣ್ಣಿನಿಂದ ಯಾವ ದೃಶ್ಯವನ್ನು ನೋಡುವನು? ಯಾವುದನ್ನು ಯಾವುದರಿಂದ ಮೂಸುವನು? ಯಾವ ಮಾತನ್ನು ಯಾವ ವಾಗಿಂದ್ರಿಯದಿಂದ ಆಡುವನು?'' ಇತ್ಯಾದಿಯಾಗಿ ಶ್ರುತಿಯು ವಿವಿಧ ರೀತಿಯಲ್ಲಿ ಘೋಷಿಸಿದೆ. ಇದರಿಂದ ದ್ವೈತವನ್ನು ಅಲ್ಲಗಳೆದ ಮೇಲೆಯೇ ವಿದ್ಯೆಯು (ಆತ್ಮಜ್ಞಾನವು) ಹುಟ್ಟುತ್ತದೆ. ದ್ವೈತಜ್ಞಾನವಿರುವಾಗ ಹುಟ್ಟುವುದಿಲ್ಲವೆಂದು ಸಿದ್ಧವಾಗುತ್ತದೆ. ಹೀಗಿರುವಾಗ ಆತ್ಮಜ್ಞಾನಿಯು ಸುಖದುಃಖಗಳನ್ನು ಅನುಭವಿಸುತ್ತಾನೆನ್ನುವುದು ಹೇಗೆ ಯುಕ್ತವಾಗುತ್ತದೆ?'' (೧೮೧-೧೮೨). ಈ ಶಂಕೆಗೆ ಬಾದರಾಯಣಾಚಾರ್ಯರೇ ಶಾರೀರಿಕ ಸೂತ್ರದಲ್ಲಿ ''**ಸ್ವಾಪ್ಯಯಸಂಪತ್ತ್ಯೋರನ್ಯತರಾಪೇಕ್ಷಮಾವಿಷ್ಕೃತಂ ಹಿ**'' (೪-೪-೧೬) ಎಂದು ಸಮಾಧಾನವನ್ನು ಹೇಳಿದ್ದಾರೆ. '**ಯತ್ರ ತ್ವಸ್ಯ ಸರ್ವಮಾತ್ಮೈವಾಭೂತ್ ...**' (ಬೃ.ಉ.೪-೫-೧೫) ಇತ್ಯಾದಿ ಶ್ರುತಿಯು ಸುಷುಪ್ತಿ ಅಥವಾ ವಿದೇಹಮುಕ್ತಿ - ಇವುಗಳಲ್ಲೊಂದನ್ನು ಕುರಿತು ಹೇಳಿದೆ. ಜೀವನ್ಮುಕ್ತನಿಗೆ ವಿದ್ಯಾವಸ್ಥೆಯಲ್ಲಿ ಜಗತ್ತೇ ವಿಲಯವಾಗಿಬಿಡುತ್ತದೆಯೆಂದು ಆ ಶ್ರುತಿಯ ಆಶಯವಲ್ಲ. ಹಾಗಾಗಿದ್ದರೆ ಯಾಜ್ಞವಲ್ಕ್ಯರೇ ಮೊದಲಾದವರು ಬ್ರಹ್ಮವಿದ್ಯೆಗೆ ಆಚಾರ್ಯರಾಗುತ್ತಿರಲಿಲ್ಲ! ಅದ್ವೈತಜ್ಞಾನವಿಲ್ಲದಪಸು ಆಚಾರ್ಯನಾಗುವುದಿಲ್ಲ. ಆತನು ದ್ವೈತವನ್ನು ಕಾಣದೇ ಹೋದರೆ ಶಿಷ್ಯನೂ ಇರುವುದಿಲ್ಲ! ಶಿಷ್ಯಬೋಧನೆಗಾಗಿ ಅವನಿಂದ ಮಾತು ಹೊರಡುವುದಿಲ್ಲ! ಆದ್ದರಿಂದ '**ಯತ್ರ ತ್ವಸ್ಯ ಸರ್ವಮಾತ್ಮೈವಾಭೂತ್...**' (ಬೃ.ಉ.೪-೫-೧೫) ಎಂಬ ಶ್ರುತಿಯು ಸುಷುಪ್ತಿಯ ಸ್ಥಿತಿಯನ್ನೋ ವಿದೇಹ ಮುಕ್ತಿಯನ್ನೋ ವರ್ಣಿಸುತ್ತದೆ ಎಂದು ತಿಳಿಯಬೇಕು (೧೮೩-೧೮೪) ಹಾಗಾದರೆ ನಿರ್ವಿಕಲ್ಪಕಸಮಾಧಿಯನ್ನೇ ಅಪರೋಕ್ಷ ಬ್ರಹ್ಮವಿದ್ಯೆಯೆಂದೇಕೆ ತಿಳಿಯಬಾರದು? ಅದರಲ್ಲಿ ದ್ವೈತದರ್ಶನವಿರುವುದಿಲ್ಲ - ಎಂದು ಆಕ್ಷೇಪಿಸುವುದಾದರೆ, ಸುಷುಪ್ತಿಯಲ್ಲಿಯೂ ದ್ವೈತದರ್ಶನ ವಿರುವುದಿಲ್ಲ. ಅದನ್ನೇಕೆ ಆತ್ಮಜ್ಞಾನವೆಂದು ಗ್ರಹಿಸಬಾರದು? ಎಂಬ ಪ್ರಶ್ನೆ ತಿರುಗಿ ಬರುತ್ತದೆ

(೧೮೫). ಎಲ್ಲರಿಗೂ ಸುಷುಪ್ತಿಯನ್ನು ಆತ್ಮವಿದ್ಯೆ ಯೆನ್ನಲಾಗುವುದಿಲ್ಲ - ಎನ್ನುವುದಾದರೆ ಆತ್ಮಜ್ಞಾನವೇ ಆತ್ಮವಿದ್ಯೆ ಎಂದು ಅಂಗೀಕರಿಸುವುದು ಉತ್ತಮ. ದ್ವೈತವು ಆಗ ವಿಲಯವಾಗಬೇಕಾಗಿಲ್ಲ! (೧೮೬). ಹಾಗಲ್ಲ; ಆತ್ಮಜ್ಞಾನ ಮತ್ತು ದ್ವೈತವಿಲಯ - ಇವೆರಡೂ ಸೇರಿ ಆತ್ಮವಿದ್ಯೆಯಾಗುತ್ತದೆ ಎನ್ನುತ್ತೇನೆ - ಎಂದು ಪೂರ್ವಪಕ್ಷಿಯ ಮತ. ಅದಕ್ಕೆ ಸಿದ್ಧಾಂತಿಯ ಉತ್ತರ - ಹಾಗಿದ್ದರೆ ಘಟಪಟಾದಿ ಜಡವಸ್ತುಗಳಿಗೆ ಆತ್ಮವಿದ್ಯೆಯಲ್ಲಿ ಅರ್ಧಭಾಗ ಬಂದಿದೆ ಎನ್ನಬೇಕಾದೀತು! ಘಟಪಟಾದಿಗಳಿಗೂ ದ್ವೈತಜ್ಞಾನವಿಲ್ಲದ್ದರಿಂದ ದ್ವೈತವು ವಿಲಯವಾಗಿರುತ್ತದೆ! (೧೮೭). ಸೊಳ್ಳೆಗಳ ಕಾಟ, ಭಾರೀ ಶಬ್ದ - ಮುಂತಾದ ವಿಕ್ಷೇಪಗಳು ಸಮಾಧಿಸ್ಥಪುರುಷರಿಗೆ ಒದಗಬಹುದು. ಘಟಪಟಾದಿಗಳಿಗೆ ಯಾವ ವಿಕ್ಷೇಪವೂ ಬರುವುದಿಲ್ಲವಾದ್ದರಿಂದ ಅವುಗಳಿಗಿರುವ ದ್ವೈತವಿಲಯವು ಇನ್ನೂ ದೃಢವಾದದ್ದು! (೧೮೮). ಹಾಗಿದ್ದರೆ ಆತ್ಮಜ್ಞಾನವೇ ವಿದ್ಯೆ ಎನ್ನುತ್ತೇನೆ - ಎನ್ನುವುದಾದರೆ 'ಬಹಳ ಒಳ್ಳೆಯದು. ನಿನಗೆ ಸುಖವಾಗಲಿ!' ಎಂದು ಸಿದ್ಧಾಂತಿಯ ಉತ್ತರ. ಅದಕ್ಕೆ ಪೂರ್ವಪಕ್ಷಿಯು ''ಚಿತ್ತವು ದುಷ್ಟವಾಗಿದ್ದರೆ ವಿಕ್ಷೇಪ ಒದಗುತ್ತದೆ. ಆದ್ದರಿಂದ ಚಿತ್ತವೃತ್ತಿಯನ್ನು ನಿರೋಧಿಸುವುದು ಮುಖ್ಯವಾದದ್ದು'' ಎಂದು ಹೇಳಿಬಿಡುತ್ತಾನೆ. ಸಿದ್ಧಾಂತಿಯು ''ಆಗಬಹುದು; ಚಿತ್ತವನ್ನು ನೀನು ಸುಖವಾಗಿ ನಿರೋಧಿಸು'' ಎಂದು ಉತ್ತರಿಸುತ್ತಾನೆ (೧೮೯). ಯೋಗದಿಂದ ಚಿತ್ತನಿರೋಧವು ನಮಗೂ ಇಷ್ಟವಾದದ್ದು. ಅದರಿಂದ ಚಿತ್ತದೋಷವು ಹೋಗುವುದರಿಂದ ಜಗತ್ತು ಮಾಯಾಮಯವೆಂಬುದನ್ನು ಸರಿಯಾಗಿ ಅರಿತುಕೊಳ್ಳುವುದಕ್ಕೆ ಚಿತ್ತಶುದ್ಧಿ ಆವಶ್ಯಕ. **'ಕಿಮಿಚ್ಛನ್ ಕಸ್ಯ ಕಾಮಾಯ'** (ಶಾಟ್ಯಾ.ಉ.೨೨) ಎಂಬ ಶ್ರುತಿಯಲ್ಲಿ ಕಿಮಿಚ್ಛನ್ ಎಂಬುದರ ತಾತ್ಪರ್ಯಾರ್ಥವು ಹೀಗಿದೆ - ''ಇಚ್ಛಿಸಿದರೂ ಅಜ್ಞನಂತೆ ಇಚ್ಛಿಸಬಾರದು. ದಾಕ್ಷಿಣ್ಯಕ್ಕೆ ಕಟ್ಟುಬಿದ್ದವನಂತೆ ಅನಾಸಕ್ತಿಯಿಂದಲೇ ಪ್ರವೃತ್ತನಾಗ ಬಹುದು'' (೧೯೦). ಈ ರೀತಿಯಲ್ಲಿ ಶ್ರುತ್ಯಭಿಪ್ರಾಯವನ್ನು ಹೇಳುವುದಕ್ಕೆ ಪ್ರಾಮಾಣಿಕರಾದ ಹಿರಿಯರು ಹೇಳಿರುವ ಈ ಶ್ಲೋಕಗಳು ಪ್ರಮಾಣಗಳಾಗಿವೆ-

**ರಾಗೋ ಲಿಂಗಮಬೋಧಸ್ಯ ಚಿತ್ತವ್ಯಾಯಾಮಭೂಮಿಷು ।**
**ಕುತಃ ಶಾದ್ವಲತಾ ತಸ್ಯ ಯಸ್ಯಾಗ್ನಿಃ ಕೋಟರೇ ತರೋಃ ॥**

ಅರ್ಥ : ಮನಸ್ಸಿನ ನಾನಾ ಪ್ರಸಕ್ತಿಗಳಲ್ಲಿ ವಿಷಯಾಭಿಲಾಷೆಯು ಅಜ್ಞಾನದ ಚಿಹ್ನೆಯಾಗಿದೆ. ಮರದ ಪೊಟರೆಯಲ್ಲಿ ಬೆಂಕಿ ಉರಿಯುತ್ತಿರುವಾಗ ಮರದ

ಎಲೆ ಹಸುರಾಗಿರುವುದುಂಟೆ?

**ಶಾಸ್ತ್ರಾರ್ಥಸ್ಯ ಸಮಾಪ್ತತ್ವಾತ್ ಮುಕ್ತಿಃ ಸ್ಯಾತ್ ತಾವತಾಪಿ ತೇ ।**
**ರಾಗಾದಯಃ ಸಂತು ಕಾಮಂ ನ ತದ್ಭಾವೋಽಪರಾಧ್ಯತಿ ॥**

ಅರ್ಥ : ಅದ್ವಿತೀಯನೂ ಅಸಂಗನೂ ಆದ ಆತ್ಮನ ಜ್ಞಾನದಿಂದ ಮುಕ್ತಿಯಾಗುತ್ತದೆ ಎಂದು ಶಾಸ್ತ್ರದ ತಾತ್ಪರ್ಯ, ಇಷ್ಟು ಮನಸ್ಸಿಗೆ ನಾಟಿದ ಮೇಲೆ ನಿನಗೆ ಮುಕ್ತಿಯು ದೊರಕಿಬಿಡುತ್ತದೆ. ರಾಗ, ಕೋಪ ಮೊದಲಾದವು ಹೋಗದೆ ಉಳಿದಿವೆಯಲ್ಲ- ಎಂದರೆ, ಇದ್ದುಕೊಳ್ಳಲಿ. ಅವುಗಳ ಅಸ್ತಿತ್ವದಿಂದ ದೋಷವೇನೂ ಇಲ್ಲ.

ಇವುಗಳಲ್ಲಿ ಮೊದಲನೆಯ ಶ್ಲೋಕವು ಜ್ಞಾನಿಯಲ್ಲಿ ರಾಗ (ಕಾಮನೆ)ವನ್ನು ನಿಷೇಧಿಸುತ್ತದೆ. ಎರಡನೆಯ ಶ್ಲೋಕವು ರಾಗಾದಿಗಳ ಇರವನ್ನು ಅನುಮೋದಿಸುತ್ತದೆ. ಈ ಎರಡು ಬಗೆಯ ಆಧಾರಗಳಿಂದ ಮೇಲ್ಕಂಡಂತೆ ಇವುಗಳ ತಾತ್ಪರ್ಯವನ್ನು ಹೇಳಿದ್ದೇವೆ. ಹೀಗೆ ಹೇಳಿದರೆ ಮಾತ್ರ ಅವುಗಳಲ್ಲಿರುವ ಪರಸ್ಪರವಿರೋಧವು ಪರಿಹೃತವಾಗುತ್ತದೆ (೯೧). 'ಕಿಮಿಚ್ಛನ್' ಎಂಬ ಒಂದು ಅಂಶದ ಅಭಿಪ್ರಾಯವನ್ನು ಹೇಳಿದ್ದಾಯಿತು. ಈಗ 'ಕಸ್ಯ ಕಾಮಾಯ' ಎಂಬ ಅಂಶದ ಆಶಯವೇನೆಂಬುದನ್ನು ಹೇಳಬೇಕಾಗಿದೆ. ಜಗತ್ತು ಮಿಥ್ಯೆಯೆಂದೂ ಹಾಗೆಯೇ ತನ್ನ ಪ್ರತ್ಯಗಾತ್ಮನು ಅಸಂಗನೆಂದೂ ತಿಳಿದ ಮೇಲೆ ವಿಷಯಭೋಕ್ತೃವೇ ಇಲ್ಲವೆಂದು ವಿದಿತವಾಗುತ್ತದೆ. ಈ ಅಭಿಪ್ರಾಯದಿಂದ **'ಕಸ್ಯ ಕಾಮಾಯ'** ಎಂದು ಶ್ರುತಿಯು ಹೇಳುತ್ತದೆ. ಭೋಕ್ತೃವೇ ಇಲ್ಲದಾಗ ಯಾರ ಕಾಮನೆ ಸಿದ್ಧಿಸ ಬೇಕಾಗಿದೆ? ಎಂಬ ಪ್ರಶ್ನೆ ಸಮೀಚೀನವಾದದ್ದೇ ಸರಿ (೯೨). ಆತ್ಮನು ಅಸಂಗನಾದ್ದರಿಂದ ಭೋಕ್ತೃವೇ ಅಲ್ಲ. ಭೋಕ್ತೃವಾಗುವ ಪ್ರಸಕ್ತಿಯೇ ಇಲ್ಲದಾಗ ಅದನ್ನು ನಿಷೇಧಿಸುವುದೇಕೆ? ಎಂಬ ಪ್ರಶ್ನೆಗೆ ಉತ್ತರವಿದು - **'ನವಾ ಅರೇ ಪತ್ಯುಃ ಕಾಮಾಯ ಪತಿಃ ಪ್ರಿಯೋ ಭವತಿ'** (ಬೃ.ಉ.೪-೫-೬) ಎಂದು ಆರಂಭಿಸಿ **'ಆತ್ಮನಸ್ತು ಕಾಮಾಯ ಸರ್ವಂ ಪ್ರಿಯಂ ಭವತಿ'** (ಬೃ.ಉ.೪-೫-೬; ೨-೪-೫) ಎಂಬಲ್ಲಿಯವರೆಗೆ ಯಾಜ್ಞವಲ್ಕ್ಯರು ತಮ್ಮ ಪತ್ನಿಯಾದ ಮೈತ್ರೇಯಿಗೆ, ಪತಿ ಪತ್ನಿ ಮುಂತಾದ ಸರ್ವಪದಾರ್ಥವೂ ಆಯಾ ಪದಾರ್ಥಕ್ಕಾಗಿ ಪ್ರಿಯ ವಾಗುವುದಿಲ್ಲ, ಆತ್ಮನ (ತನ್ನ) ಭೋಗಕ್ಕಾಗಿ ಪ್ರಿಯವಾಗುತ್ತದೆ ಎಂದು ವಿಸ್ತಾರವಾಗಿ ಉಪದೇಶಿಸಿದ್ದಾರೆ. ಇದು ಬೃಹದಾರಣ್ಯಕಶ್ರುತಿಯಲ್ಲಿ ವರ್ಣಿಸಿದ ಪ್ರಸಂಗವಾಗಿದೆ. ಆದ್ದರಿಂದ

ಆತ್ಮನಿಗೆ ಭೋಕ್ತೃವಾಗುವ ಪ್ರಸಕ್ತಿಯುಂಟು(೧೯೩). ಹಾಗಾದರೆ ಭೋಕ್ತೃವಾದ ಆತ್ಮನು ಯಾರು? ಕೂಟಸ್ಥನೊ? ಚಿದಾಭಾಸನೊ? ಅಥವಾ ಉಭಯಾತ್ಮಕನೊ? ಕೂಟಸ್ಥನಂತೂ ಅಲ್ಲ, ಅವನು ಅಸಂಗನಾದ್ದರಿಂದ ಭೋಕ್ತೃವಾಗುವುದಿಲ್ಲ(೧೯೪). ಏಕೆಂದರೆ, ಸುಖದುಃಖಗಳಲ್ಲಿಡುವ ಅಭಿಮಾನವು ಭೋಗವೆನಿಸುತ್ತದೆ. ನಾನು ಸುಖಿ, ನಾನು ದುಃಖಿ - ಎಂದು ತಿಳಿದುಕೊಳ್ಳುವ ಮಾನಸವಿಕಾರ ಅದು. ಯಾವ ವಿಕಾರವೂ ಇಲ್ಲದವನು ಕೂಟಸ್ಥ. ಕೂಟಸ್ಥನೂ ಹೌದು ವಿಕಾರಿಯೂ ಹೌದು ಎನ್ನುವುದು ಪರಸ್ಪರ ವಿರುದ್ಧವಾದದ್ದು. ಆದ್ದರಿಂದ ಕೂಟಸ್ಥನು ಸುಖದುಃಖಗಳ ಭೋಕ್ತೃವಾಗುವುದಿಲ್ಲ(೧೯೫). ಹಾಗಾದರೆ ಚಿದಾಭಾಸನು ವಿಕಾರಿಯಾದ್ದರಿಂದ ಚಿದಾಭಾಸನೇ ಭೋಕ್ತೃವೆನ್ನಬಹುದಲ್ಲವೆ? ಇಲ್ಲಿ ವಿಚಾರಮಾಡಬೇಕಾದ್ದಿದೆ. ಬುದ್ಧಿಯೆಂಬ ಉಪಾಧಿಯಿಂದ ಕೂಡಿದ ಕೂಟಸ್ಥನು ಚಿದಾಭಾಸನೆನಿಸುತ್ತಾನೆ. ಬುದ್ಧಿಯು ವಿಕಾರಿಯಾದದ್ದು. ಇದು ವಿಕಾರಿಯಾದರೂ ತನಗೊಂದು ಅಧಿಷ್ಠಾನವಿಲ್ಲದೆ ಕೇವಲ ಆಭಾಸರೂಪವಾಗಿ ಇರುವುದಿಲ್ಲ. ಅಧಿಷ್ಠಾನವೇ ಕೂಟಸ್ಥ. ಆದ್ದರಿಂದ ಕೇವಲ ಚಿದಾಭಾಸವೇ ಭೋಕ್ತೃವೆಂದು ಹೇಳಲಾಗುವುದಿಲ್ಲ(೧೯೬). ಆದ್ದರಿಂದಲೇ ಲೋಕದಲ್ಲಿ ಕೂಟಸ್ಥ-ಚಿತ್ತ ಇವೆರಡೂ ಸೇರಿ ಉಭಯಾತ್ಮಕನು ಭೋಕ್ತೃವೆಂದು ಜನರು ಹೇಳುತ್ತಾರೆ. ಆದರೆ ಉಭಯಸ್ವರೂಪನಾಗಿ ಒಬ್ಬ ವ್ಯಕ್ತಿ ಇರುವುದು ಹೇಗೆ ಘಟಿಸುತ್ತದೆ? **'ಅಸಂಗೋ ಹ್ಯಯಂ ಪುರುಷಃ'** (ಬೃ.ಉ.೪-೩-೧೫) ಇತ್ಯಾದಿ ಶ್ರುತಿಗಳು ಯಾರನ್ನು ಅಸಂಗನೆಂದು ವರ್ಣಿಸಿವೆಯೋ ಆತನನ್ನು **'ಯೋಽಯಂ ವಿಜ್ಞಾನಮಯಃ ಪ್ರಾಣೇಷು'** (ಬೃ.ಉ.೪-೩-೭) ಇತ್ಯಾದಿ ವಾಕ್ಯಗಳಿಂದ ಬುದ್ಧಿಸಾಕ್ಷಿಯೆಂದೂ ವರ್ಣಿಸಿವೆ. ಆದ್ದರಿಂದ ಭೋಕ್ತೃವು ಉಭಯಸ್ವರೂಪನಾಗಿರುವುದು ಪ್ರಾಮಾಣಿಕವಾಗುತ್ತದೆಯಲ್ಲವೆ? ಇಲ್ಲ. ಶ್ರುತಿಯಲ್ಲಿ ಅದಕ್ಕೂ ಮುಂದೆ ಹೋಗಿ ಬುದ್ಧ್ಯುಪಾಧಿಕನಾದ ಆತ್ಮನಿಂದ ಆರಂಭಿಸಿ ಕಡೆಗೆ ಕೂಟಸ್ಥನಲ್ಲಿಯೇ ಪರ್ಯವಸಾನವನ್ನು ಮಾಡಲಾಗಿದೆ(೧೯೭). ಹೇಗೆಂದರೆ, ಬೃಹದಾರಣ್ಯಕದಲ್ಲಿ **'ಕತಮ ಆತ್ಮಾ'** (ಬೃ.ಉ.೪-೩-೭) ಎಂಬ ಪ್ರಶ್ನೆಗೆ ಯಾಜ್ಞವಲ್ಕ್ಯ ಮಹರ್ಷಿಗಳು ಉತ್ತರಿಸುತ್ತ **'ಅಸಂಗೋ ಹ್ಯಯಂ ಪುರುಷಃ'** (ಬೃ.ಉ.೪-೩-೧೫)ಎಂದು ಹೇಳಿ ಮುಗಿಸಿದ್ದಾರೆ. ಇದರಿಂದ ಕೂಟಸ್ಥನೇ ಆತ್ಮನೆಂದು ಸಿದ್ಧವಾಗುತ್ತದೆ (೧೯೮). ಐತರೇಯೋಪನಿಷತ್ತು ಮೊದಲಾದವುಗಳಲ್ಲಿಯೂ ಸಹ **'ಕೋಽಯಮಾತ್ಮಾ'**(ಐ.ಉ.೬-೫-೧)

ಮುಂತಾದ ಪ್ರಶ್ನೆಯನ್ನೆತ್ತಿ ಅಂತಃಕರಣಾವಚ್ಛಿನ್ನನಾದ ಆತ್ಮನನ್ನಾರಂಭಿಸಿ ಕೂಟಸ್ಥನೇ ಆತ್ಮನೆಂದು ನಿರ್ಣಯಿಸಲ್ಪಟ್ಟಿದೆ. ಇವೆಲ್ಲವನ್ನೂ ಪರ್ಯಾಲೋಚಿಸಿದಾಗ ಉಭಯಾತ್ಮಕನಾದ ಭೋಕ್ತೃವಿರುವುದು ಮಿಥ್ಯೆಯೆಂದೂ ಕೂಟಸ್ಥನು ಅಸಂಗನಾದ್ದರಿಂದ ಭೋಕ್ತೃವಲ್ಲವೆಂದೂ ಸಿದ್ಧವಾಗುತ್ತದೆ(೧೯೯). ಭೋಕ್ತೃವಿರುವುದು ಮಿಥ್ಯೆಯಾದರೆ ಲೋಕದಲ್ಲಿ ಜನರು 'ನಾನು ಭೋಕ್ತಾ ನಾನು ಭೋಕ್ತಾ, ನಾನು ಸುಖೀ, ನಾನು ದುಃಖೀ'- ಎಂದು ಹೇಳಿಕೊಳ್ಳುತ್ತಾರಲ್ಲ, ಇಲ್ಲಿ 'ನಾನು' ಎಂದರೆ ಯಾರು? ಇದಕ್ಕೆ ಉತ್ತರವೇನೆಂದರೆ - ಈ ಚಿದಾಭಾಸನೇ ಕೂಟಸ್ಥನಲ್ಲಿರುವ ನಿತ್ಯತ್ವವನ್ನು ಅವಿವೇಕದಿಂದ ತನ್ನಲ್ಲಿ ಆರೋಪಿಸಿಕೊಂಡು, ತನ್ನಲ್ಲಿರುವ ಭೋಕ್ತೃತ್ವವನ್ನೂ ಸತ್ಯವೆಂದೇ ಭ್ರಮಿಸಿರುತ್ತಾನೆ. ಈ ಭೋಗವನ್ನು ಎಂದಿಗೂ ತ್ಯಜಿಸಲು ಬಯಸುವುದೇ ಇಲ್ಲ! (೨೦೦). ಆದ್ದರಿಂದ **'ಆತ್ಮನಸ್ತು ಕಾಮಾಯ ಸರ್ವಂ ಪ್ರಿಯಂ ಭವತಿ'**(ಬೃ.ಉ.೪-೫-೬;೩-೪-೫) ಎಂಬಲ್ಲಿ ಭೋಗವು ಆತ್ಮಶೇಷವೆಂದು ಪ್ರತಿಪಾದಿತವಾಗಿದೆ. ಆತ್ಮನೆಂದರೆ ಲೋಕವ್ಯವಹಾರದಲ್ಲಿರುವ ಉಭಯಾತ್ಮಕನೇ ಹೊರತು ಕೂಟಸ್ಥನಲ್ಲ. ಆತ್ಮಶೇಷವೆಂದರೆ ಆತ್ಮನಿಗಾಗಿ ಸಲ್ಲತಕ್ಕದ್ದು ಎಂದರ್ಥ. ಈ ಉಭಯಾತ್ಮಕನಾದ ಆತ್ಮನು ಭೋಕ್ತೃವಾಗಿ ತನ್ನ ಭೋಗಕ್ಕೋಸ್ಕರ ಪತಿ, ಪತ್ನೀ- ಮುಂತಾದ ಭೋಗ್ಯವಸ್ತುವನ್ನು ಅಪೇಕ್ಷಿಸುತ್ತಾನೆಂದು ಲೋಕಸಿದ್ಧವಾದ ವೃತ್ತಾಂತವನ್ನೇ ಶ್ರುತಿಯು ಅನುವಾದಿಸಿದೆ. ಲೋಕವ್ಯವಹಾರವಿರುವಂತೆ ತಾನೂ ಹೇಳಿದೆ (೨೦೧). ಲೋಕಸಿದ್ಧವಾದ್ದನ್ನೇ ಬಿಡಿಸಿ ಹೇಳಿದ್ದೇಕೆಂದರೆ, ''ಎಲ್ಲ ವಿಧದ ಭೋಗ್ಯಗಳೂ ಭೋಕ್ತೃಶೇಷವಾಗಿವೆ. ಭೋಕ್ತೃವಾದ ತನ್ನ ಸುಖಕ್ಕಾಗಿ ಎಲ್ಲ ಭೋಗ್ಯಗಳನ್ನೂ ಮನುಷ್ಯನು ಬಯಸುತ್ತಾನೆ. ಮುಖ್ಯನಾದವನು ತಾನೇ ಹೊರತು ಭೋಗ್ಯವಸ್ತುಗಳಲ್ಲ, ಆದ್ದರಿಂದ, ಎಲೈ ಮಾನವ, ಪ್ರಧಾನನಾದ ನಾನು ಎಂಬ ಆತ್ಮನಲ್ಲಿ ಆಸಕ್ತಿಯನ್ನು ಬೆಳಸಿಕೊ. ನಾನು ಯಾರು? ಎಂಬುದನ್ನು ಚೆನ್ನಾಗಿ ತಿಳಿದುಕೊ ಎಂದು ಆತ್ಮಾನುರಾಗವನ್ನು ವಿಧಿಸುವುದಕ್ಕಾಗಿ ಹೇಳಿದೆ'' (೨೦೨). ಭಾಗವತಪುರಾಣದಲ್ಲಿ ಒಂದು ಶ್ಲೋಕವಿದೆ. ಭಕ್ತನು ಪರಮಾತ್ಮನಲ್ಲಿ ಬೇಡಿಕೊಳ್ಳುತ್ತಾನೆ - ''ಸ್ವಾಮಿ, ಆತ್ಮಜ್ಞಾನಶೂನ್ಯರಾದ ಅವಿವೇಕಿಗಳು ಭೋಗ್ಯವಸ್ತುಗಳಲ್ಲಿ ದೃಢವಾದ ಯಾವ ಪ್ರೀತಿಯನ್ನಿಟ್ಟಿರುತ್ತಾರೋ ಆ ದೃಢವಾದ ಪ್ರೀತಿಯು ಸದಾ ನಿನ್ನನ್ನು ಸ್ಮರಿಸುವ ನನ್ನ ಹೃದಯದಿಂದ ಹೋಗದಿರಲಿ'' ಎಂದು (೨೦೩). ಈ ಪುರಾಣೋಕ್ತ ದೃಷ್ಟಾಂತದಂತೆ ಲೋಕ

ಸುಖದಿಂದ ವಿರಕ್ತನಾದ ವಿವೇಕಿಯು ಎಲ್ಲ ಭೋಗ್ಯ ಜಾತಗಳಲ್ಲಿಯೂ ಇಟ್ಟಿರುವ ಪ್ರೀತಿಯನ್ನು ಹಿಂತೆಗೆದುಕೊಂಡು ಅದನ್ನು ಭೋಕ್ತೃವಾದ ತನ್ನಲ್ಲಿರಿಸಿ ತಾನು ಯಾರೆಂದು ತಿಳಿಯಲು ಪ್ರಯತ್ನಿಸುತ್ತಾನೆ (೨೦೪). ಪಾಮರನಾದ ಮನುಷ್ಯನು ಹಾರ, ಚಂದನ, ಸ್ತ್ರೀ, ವಸ್ತ್ರ ಚಿನ್ನ - ಮುಂತಾದ ವಿಷಯಗಳಲ್ಲಿ ಪ್ರಮಾದಮಾಡದೆ ಎಚ್ಚರಿಕೆಯಿಂದ ಹೇಗೆ ಆಸಕ್ತನಾಗಿರುವನೋ ಹಾಗೆ ಮುಮುಕ್ಷುವು , ಆತ್ಮನ ವಿಚಾರದಲ್ಲಿ ಪ್ರಮಾದಿಸದೆ ಎಚ್ಚರಿಕೆಯಿಂದ ಆತ್ಮಚಿಂತನೆಯಲ್ಲಿಯೇ ತೊಡಗಿರುತ್ತಾನೆ (೨೦೫). ಪ್ರತಿವಾದಿಗಳನ್ನು ಜಯಿಸಬೇಕೆಂಬ ಪಂಡಿತನು ಕಾವ್ಯನಾಟಕಗಳಲ್ಲಿಯೂ ತರ್ಕಾದಿಶಾಸ್ತ್ರ ಗಳಲ್ಲಿಯೂ ಆಸಕ್ತನಾಗಿ ಅವುಗಳ ಚಿಂತನೆಯನ್ನೇ ಹೇಗೆ ನಿರಂತರವೂ ಮಾಡುತ್ತಿರುವನೋ ಹಾಗೆ ಮುಮುಕ್ಷುವು ಆತ್ಮವಿಚಾರವನ್ನೇ ಸದಾ ಮಾಡುತ್ತಿರಬೇಕು (೨೦೬). ಸ್ವರ್ಗಾದಿಫಲಗಳನ್ನು ಬಯಸತಕ್ಕವನು ಜಪ, ಯೋಗಾಭ್ಯಾಸ, ಉಪಾಸನೆಗಳನ್ನು ಎಷ್ಟು ಶ್ರದ್ಧೆಯಿಂದ ಮಾಡುತ್ತಾನೋ ಹಾಗೆಯೇ ಮುಮುಕ್ಷುವು ಆತ್ಮವಿಚಾರವನ್ನು ಶ್ರದ್ಧೆಯಿಂದ ಮಾಡಬೇಕು (೨೦೭). ಅಣಿಮಾ, ಮಹಿಮಾದಿ ಸಿದ್ಧಿಗಳನ್ನು ಪಡೆಯಬೇಕೆಂದಿರುವ ಯೋಗಿಯು ಚಿತ್ತದ ಏಕಾಗ್ರತೆಯನ್ನು ಬಹುಶ್ರಮದಿಂದ ಹೇಗೆ ಸಾಧಿಸುವನೋ ಹಾಗೆ ವಿವೇಕಿಯು ಮೋಕ್ಷೇಚ್ಛೆಯಿಂದ ಆತ್ಮವಿವೇಚನೆಯನ್ನು ಮಾಡುತ್ತಿರಬೇಕು (೨೦೮). ಇದುವರೆಗೆ ಹೇಳಿದಂತೆ ಶಾಸ್ತ್ರಾದಿಚಿಂತನೆಗಳನ್ನು ಮಾಡತಕ್ಕವರಿಗೆ ಅಭ್ಯಾಸದ ದೃಢತೆಯಿಂದ ಆಯಾವಿಷಯಗಳಲ್ಲಿ ಪ್ರಾವೀಣ್ಯವು ಹೇಗೆ ವರ್ಧಿಸುವುದೋ ಹಾಗೆಯೇ ಮುಮುಕ್ಷುವಿಗೆ ದೃಢವಾದ ಚಿಂತನೆಯಿಂದ ಆತ್ಮನು ಶರೀರಾದಿಗಳಿಗಿಂತ ವ್ಯತಿರಿಕ್ತನೆಂದೂ ಅಸಂಗನೆಂದೂ ಜ್ಞಾನವು ಸ್ಫುಟವಾಗಿ ಬರುತ್ತದೆ (೨೦೯).

ಮುಂದೆ ಹೇಳುವ ಅನ್ವಯ ವ್ಯತಿರೇಕಗಳಿಂದ ಭೋಕ್ತೃವಿನ ಸ್ವರೂಪವನ್ನು ವಿವೇಚಿಸತಕ್ಕವನು ಜಾಗ್ರತ್ ಸ್ವಪ್ನ ಸುಷುಪ್ತಿಗಳಲ್ಲಿ ಸಾಕ್ಷಿಯಾದ ಆತ್ಮನು ಅಸಂಗನೆಂಬುದನ್ನು ನಿಶ್ಚಿತವಾಗಿ ತಿಳಿಯುತ್ತಾನೆ (೨೧೦). ಜಾಗ್ರತ್, ಸ್ವಪ್ನ ಸುಷುಪ್ತಿಯೆಂಬ ಮೂರು ಅವಸ್ಥೆಗಳ ನಡುವೆ ಯಾವ ಯಾವ ಅವಸ್ಥೆಯಲ್ಲಿ ಸ್ಥೂಲ, ಸೂಕ್ಷ್ಮ, ಆನಂದಗಳನ್ನು ಕಂಡು ಅನುಭವಿಸುತ್ತಾನೋ ಅವು ಆಯಾ ಅವಸ್ಥೆಗೆ ಮಾತ್ರ ಕಟ್ಟುಬಿದ್ದವು. ಉಳಿದ ಅವಸ್ಥೆಗಳಲ್ಲಿರುವುದಿಲ್ಲ. ಆದರೆ ಅವನ್ನು ಕಾಣತಕ್ಕ ದ್ರಷ್ಟೃವು ಮಾತ್ರ ಒಬ್ಬನೇ ಅನುಗತವಾಗಿ ಇರುತ್ತಾನೆ ಎಂಬುದು ಗೊತ್ತಾಗುತ್ತದೆ. ಇದು ಎಲ್ಲರಿಗೂ ಸಂಮತವಾದದ್ದು (೨೧೧).

ಶ್ರುತಿಯಲ್ಲಿಯೂ ಇದನ್ನು ನಗಾರಿಹೊಡೆದಂತೆ ಘೋಷಿಸಲಾಗಿದೆ. ಏನೆಂದರೆ **'ಸ ಯತ್ತತ್ರ ಯತ್ಕಿಂಚಿತ್ ಪಶ್ಯತ್ಯನನ್ವಾಗತಸ್ತೇನ ಭವತ್ಯಸಂಗೋ ಹ್ಯಯಂ ಪುರುಷಃ'** (ಬೃ. ಉ. ೪-೩-೧೫)- ಇತ್ಯಾದಿ. ''ಈ ಆತ್ಮನು ಜಾಗ್ರದಾದ್ಯವಸ್ಥೆಗಳಲ್ಲಿ ಏನೇನನ್ನು ನೋಡುವನೋ ಅದನ್ನು ಆ ಅವಸ್ಥೆಯಲ್ಲಿಯೇ ಬಿಟ್ಟು ಮುಂದಿನ ಅವಸ್ಥೆಗೆ ತೆರಳುವನು. ಆ ದೃಶ್ಯವನ್ನು ತನ್ನೊಡನೆ ಒಯ್ಯುವುದಿಲ್ಲ. ಈ ಪುರುಷನು ಅಸಂಗನಲ್ಲವೆ? ಪುಣ್ಯ ಪಾಪಗಳ ಫಲವಾದ ಸುಖದುಃಖಗಳನ್ನು ಸಾಕ್ಷಿಯಾಗಿ ನೋಡಿ ಮುಂದಕ್ಕೆ ಸಾಗುವನು (೨೧೨). ಜಾಗ್ರತ್ ಸ್ವಪ್ನ ಸುಷುಪ್ತಿಗಳಲ್ಲಿ ಕಾಣುವ ಪ್ರಪಂಚವು ಯಾರಿಂದ ಪ್ರಕಾಶಿತವಾಗಿದೆಯೋ ಅಂತಹ ಸತ್ಯಜ್ಞಾನಾನಂದಸ್ವರೂಪದ ಬ್ರಹ್ಮವೇ ನಾನು ಎಂಬುದನ್ನರಿತವನು ಕರ್ತಾ, ಭೋಕ್ತಾ- ಇತ್ಯಾದಿ ಸಕಲ ಬಂಧಗಳಿಂದಲೂ ಬಿಡುಗಡೆ ಹೊಂದುತ್ತಾನೆ (೨೧೩). ಜಾಗ್ರತ್, ಸ್ವಪ್ನ, ಸುಷುಪ್ತಿ- ಈ ಅವಸ್ಥೆಗಳಲ್ಲಿಯೂ ಸಾಕ್ಷಿಯಾದ ಆತ್ಮನು ಒಬ್ಬನೇ. ಈ ವಿವೇಕಜ್ಞಾನದಿಂದ ಅವಸ್ಥಾತ್ರಯಾತಿರಿಕ್ತನಾದ ಆತ್ಮನು ಎಂದು ತಿಳಿದವನಿಗೆ ಪುನರ್ಜನ್ಮವಿಲ್ಲ. ಪ್ರಕೃತಶರೀರದ ಪಾತವಾದಮೇಲೆ ಇನ್ನೊಂದು ಶರೀರದ ಪ್ರಾಪ್ತಿ ಇಲ್ಲವೆಂದರ್ಥ.(೨೧೪). ''ಜಾಗ್ರದಾದಿ ಅವಸ್ಥಾತ್ರಯದಲ್ಲಿ ಭೋಗ್ಯವಾದ ಯಾವ ಸ್ಥೂಲ, ಸೂಕ್ಷ್ಮ, ಆನಂದಗಳುಂಟೋ ಅಂತೆಯೇ ವಿಶ್ವ, ತೈಜಸ, ಪ್ರಾಜ್ಞರೆಂಬ ಹೆಸರಿನ ಭೋಕ್ತೃಗಳುಂಟೋ ಮತ್ತೆ ಯಾವ ಭೋಗಗಳುಂಟೋ ಅವೆಲ್ಲವುಗಳಿಗೂ ವಿಲಕ್ಷಣನೂ ಚಿನ್ಮಾತ್ರನೂ ಕಲ್ಯಾಣ (ಸದಾಶಿವ) ಸ್ವರೂಪನೂ ಸರ್ವಸಾಕ್ಷಿಯೂ ಆದ ಪರಮಾತ್ಮನೇ ನಾನು'' (೨೧೫). ಈ ರೀತಿಯಲ್ಲಿ ಆತ್ಮತತ್ತ್ವವನ್ನು ನಿಶ್ಚಯಿಸಿದಮೇಲೆ ಭೋಕ್ತೃತ್ವವು ಯಾರಿಗುಂಟು? ಅಸಂಗನಾದ ಆತ್ಮನಿಗಿಲ್ಲ. ಏವಂಚ ವಿಜ್ಞಾನಮಯನೆಂದು ಹೇಳಲ್ಪಡುವ ವಿಕಾರಿಯಾದ ಚಿದಾಭಾಸನೇ ಭೋಕ್ತೃವಾಗಿ ಉಳಿಯುತ್ತಾನೆ (೨೧೬). ಶಂಕೆ - **'ಕಸ್ಯ ಕಾಮಾಯ ಶರೀರಮನುಸಂಜ್ವರೇತ್'** (ಬೃ. ಉ. ೪-೪-೧೨) ಎಂಬಲ್ಲಿ ಭೋಕ್ತೃವೇ ಇಲ್ಲವೆಂಬ ಅಭಿಪ್ರಾಯದಿಂದ 'ಕಸ್ಯಕಾಮಾಯ' ಎಂಬ ಶ್ರುತಿ ವಚನ ಹೊರಟಿದೆ - ಎಂದು ಹೇಳಲಾಗಿದೆ. ಈಗ ಚಿದಾಭಾಸನೇ ಭೋಕ್ತೃವೆಂದು ಹೇಳಿದರೆ ಪರಸ್ಪರವಿರುದ್ಧವಾಗುವುದಿಲ್ಲವೆ? ಉತ್ತರ - ಇಲ್ಲ. ಪಾರಮಾರ್ಥಿಕವಾಗಿ ಭೋಕ್ತೃವಿಲ್ಲ ಎಂದು ಹಿಂದೆ ಹೇಳಿದುದರ ಅಭಿಪ್ರಾಯ. **'ಜೀವೇಶಾವಾಭಾಸೇನ ಕರೋತಿ'** (ನೃಂ. ಉ. ತಾ. ಉ. ೯) ಎಂಬ ಶ್ರುತಿಪ್ರಾಮಾಣ್ಯದಿಂದಲೂ ಸುಖದುಃಖಭೋಗಗಳ ಭೋಕ್ತೃವಾಗಿ ದೃಶ್ಯನೆಂಬ

ಅನುಭವವಿರುವುದರಿಂದಲೂ ಚಿದಾಭಾಸನು ಪಾರಮಾರ್ಥಿಕನಲ್ಲ. ಜಗತ್ತು ಇಂದ್ರಜಾಲವೆಂದು ಶ್ರುತಿಯೇ ಹೇಳಿದೆ. ಮಿಥ್ಯಾಭೂತವಾದ ಈ ಜಗತ್ತಿನಲ್ಲಿ ಸೇರಿಹೋಗಿರುವುದರಿಂದ ಈತನ ಸ್ವರೂಪವೂ ಮಿಥ್ಯೆಯೇ (೨೧೭). ಸುಷುಪ್ತಿ ಮೂರ್ಛಾವಸ್ಥೆಗಳಲ್ಲಿ ಜಗತ್ತೆಲ್ಲವೂ ಲಯವಾದಂತೆಯೇ ಚಿದಾಭಾಸನ ಲಯವೂ ಆಗುತ್ತದೆಯೆನ್ನುವುದು ಸಹ ಸಾಕ್ಷಿಯ ಅನುಭವಕ್ಕೆ ಬಂದಿರುತ್ತದೆ. ಇದರಿಂದಲೂ ಚಿದಾಭಾಸನು ಮೃಷಾ ಎಂದು ಗೊತ್ತಾಗುತ್ತದೆ. ಹೀಗೆ ಚಿದಾಭಾಸನಿಗೆ ಮನದಟ್ಟಾದಾಗ ಕೂಟಸ್ಥನಿಗಿಂತ ತಾನು ಭಿನ್ನನೆಂಬುದನ್ನು ಮತ್ತೆ ಮತ್ತೆ ವಿವೇಚಿಸಿಕೊಳ್ಳುತ್ತಾನೆ (೨೧೮). ಹೀಗೆ ವಿವೇಚಿಸಿ ತಾನು ನಾಶವಾಗತಕ್ಕವನೆಂದು ನಿಶ್ಚಯವಾದೊಡನೆ ಈ ವಿಷಯಭೋಗವನ್ನು ಮತ್ತೆ ಬಯಸುವುದಿಲ್ಲ. ಸಾಯತಕ್ಕವನು ತನ್ನನ್ನು ಭೂಶಯ್ಯೆಯಲ್ಲಿ ಮಲಗಿಸಿದಾಗ ಮದುವೆಯಾಗಲು ಬಯಸುತ್ತಾನೆಯೆ! (೨೧೯) ಅಷ್ಟೇ ಅಲ್ಲ, ಆತನು ಹಿಂದಿನಂತೆ ನಾನು ಭೋಕ್ತಾ ಎಂದು ಹೇಳಿಕೊಳ್ಳಲು ಸಹ ನಾಚಿಕೆಪಡುತ್ತಾನೆ. ಮೂಗುಕತ್ತರಿಸಿ ಹೋದವನು ಮುಖತೋರಿಸಲು ನಾಚುವಂತೆ. ನಾಚುತ್ತಲೇ ತನ್ನ ಪ್ರಾರಬ್ಧಕರ್ಮಫಲವನ್ನು ಅನುಭವಿಸುತ್ತಾನೆ (೨೨೦). ಹೀಗೆ ತನ್ನಲ್ಲಿ ಭೋಕ್ತೃತ್ವವಿದೆಯೆಂದು ಹೇಳಿಕೊಳ್ಳಲು ಸಹ ಈ ಜೀವನು ನಾಚಿಕೆಪಡುತ್ತಿರುವಾಗ, ಈ ಭೋಕ್ತೃತ್ವವನ್ನು ಸಾಕ್ಷಿಯಾದ ಕೂಟಸ್ಥನಲ್ಲಿ ಆರೋಪಿಸುತ್ತಾನೆಂಬ ಹೇಳಿಕೆಯೇ ಹಾರಿಹೋಗುತ್ತದೆ. ಆರೋಪಿಸುತ್ತಾನೆ ಎಂಬುದು ಅರ್ಥವಿಲ್ಲದ ಹೇಳಿಕೆ (೨೨೧). ಈ ಅಭಿಪ್ರಾಯದಿಂದ ಶ್ರುತಿಯು ನಿಃಶಂಕೆಯಿಂದ **'ಕಸ್ಯ ಕಾಮಾಯ'** ಎಂದು ಆಕ್ಷೇಪಿಸುತ್ತದೆ. ಕೂಟಸ್ಥನೂ ಭೋಕ್ತೃವಲ್ಲ, ಚಿದಾಭಾಸನೂ ಪರಮಾರ್ಥದಲ್ಲಿ ಭೋಕ್ತೃವಲ್ಲ. ಹೀಗಿರುವಾಗ ಭೋಕ್ತೃ ಯಾರಿದ್ದಾರೆ? ಯಾರೂ ಇಲ್ಲ- ಎಂದು ಅಭಿಪ್ರಾಯ. ಆದ್ದರಿಂದ ಶರೀರದಿಂದಾಗುವ ಕಷ್ಟವೂ ಜ್ಞಾನಿಗೆ ಇಲ್ಲ (೨೨೨). ಸ್ಥೂಲ, ಸೂಕ್ಷ್ಮ, ಕಾರಣ - ಎಂದು ಶರೀರವು ಮೂರು ವಿಧ. ಆದ್ದರಿಂದ ಆಯಾ ಶರೀರಗಳಿಗೆ ಅನ್ವಯಿಸಿ ಜ್ವರವೂ (ಕಷ್ಟವೂ) ಮೂರುವಿಧವಾಗಿ ಇದ್ದೇ ಇದೆ. ಸ್ಥೂಲ ಶರೀರದ ಜ್ವರಗಳಿವು - ವಾತ ಪಿತ್ತ ಶ್ಲೇಷ್ಮಗಳೆಂಬ ತ್ರಿದೋಷಗಳಿಂದ ಹುಟ್ಟುವ ವ್ಯಾಧಿಗಳು. ಇವು ಕೋಟಿಗಟ್ಟಲೆ ಇವೆ. ಆಮೇಲೆ ದುರ್ಗಂಧ, ಕುರೂಪ, ಸುಡುವುದು, ಮುರಿಯುವುದು, ಕತ್ತರಿಸಿಹೋಗುವುದು - ಇವೆಲ್ಲವೂ ಸ್ಥೂಲಶರೀರದ ಜ್ವರಗಳು (೨೨೩-೨೨೪). ಇನ್ನು ಕಾಮ, ಕ್ರೋಧ, ಲೋಭ, ಮೋಹಾದಿಗಳು ಲಿಂಗಶರೀರದ - ಎಂದರೆ - ಸೂಕ್ಷ್ಮಶರೀರದ ಜ್ವರಗಳು.

ಶಮ, ದಮಾದಿಗಳೂ ಸಹ ಜ್ವರಗಳೇ. ಕಾಮಾದಿಗಳು ಪ್ರಾಪ್ತವಾಗಿ ಬಾಧಿಸಿದರೆ, ಶಮದಮಾದಿಗಳು ಅಪ್ರಾಪ್ತವಾದ್ದರಿಂದ ಬಾಧಿಸುತ್ತವೆ! (೨೨೫).

ಅಜ್ಞಾನವೇ ಕಾರಣಶರೀರ. ಆತ್ಮನು ಇದನ್ನು ಪಡೆದಮೇಲೆ ತಾನು ಯಾರೆಂದು ತನ್ನ ಸ್ವರೂಪವನ್ನೇ ತಿಳಿದಿರುವುದಿಲ್ಲ. ಪಂಚಭೂತಗಳೇ ಮೊದಲಾದವು ಯಾವ ಮೂಲದವು ? - ಎಂದು ಹೊರಗಿನ ವಿಷಯವೂ ಗೊತ್ತಿರುವುದಿಲ್ಲ, ಕಾರಣಶರೀರದಲ್ಲಿ ವಿಲಯವಾಗಿ ಹೋದನೋ ಎಂಬಂತೆ ಆಗಿಬಿಡುತ್ತಾನೆ. ಈ ಕಾರಣಶರೀರವು ಮುಂದಿನ ನಾನಾದುಃಖಗಳಿಗೆ ಕಾರಣವೂ ಆಗಿದೆ - ಎಂದು ಇಂದ್ರನು ತನ್ನ ಗುರುವಾದ ಪ್ರಜಾಪತಿಗೆ ಹೇಳಿಕೊಂಡಿದ್ದಾನೆ. ಈ ವಿಚಾರವು ಛಾಂದೋಗ್ಯದಲ್ಲಿ ಬಂದಿದೆ(೮-೧೧-೨). ತ್ರಿವಿಧಗಳಾದ ಈ ಜ್ವರಗಳು ಸ್ಥೂಲಸೂಕ್ಷ್ಮಶರೀರಗಳಿಗೆ ಸಹಜವಾಗಿ ಅಂಟಿಕೊಂಡೇ ಇರುತ್ತವೆ. ಶರೀರಗಳು ನಾಶವಾದಾಗ ಮಾತ್ರ ಇವು ಇರುವುದಿಲ್ಲ. ಈ ಜ್ವರಗಳು ಇಲ್ಲವೆಂದರೆ ಮೇಲ್ಕಂಡ ಮೂರು ಶರೀರಗಳೂ ಇಲ್ಲವೆಂದರ್ಥ(೨೨೬-೨೨೭). ನೂಲುಗಳಿಂದ ವಿಯುಕ್ತವಾದಮೇಲೆ ವಸ್ತ್ರವೂ ಉಣ್ಣೆಕೂದಲುಗಳಿಂದ ವಿಯುಕ್ತವಾದಮೇಲೆ ಕಂಬಳಿಯೂ ಮಣ್ಣಿನಿಂದ ವಿಯುಕ್ತವಾದಮೇಲೆ ಗಡಿಗೆಯೂ ಹೇಗೆ ಇರುವುದಿಲ್ಲವೋ ಹಾಗೆ ಈ ತ್ರಿವಿಧಜ್ವರಗಳಿಂದ ಬಿಡುಗಡೆಯಾದಾಗ ಈ ಶರೀರಗಳೂ ಇರುವುದಿಲ್ಲ! ಶರೀರವಿರುವವರೆಗೂ ಈ ಜ್ವರ ತಪ್ಪಿದ್ದಲ್ಲ - ಎಂದು ಅಭಿಪ್ರಾಯ (೨೨೮). ಜ್ವರಗಳಿರುವ ಈ ಶರೀರತ್ರಯದ ಸಂಬಂಧವಲ್ಲದೆ ಚಿದಾಭಾಸನಲ್ಲಿ ಸ್ವತಃ ಯಾವ ಜ್ವರವೂ ಇಲ್ಲ. ಚಿತ್ತಿನಲ್ಲಿ ಕೇವಲ ಪ್ರಕಾಶ ಸ್ವರೂಪವನ್ನು ಮಾತ್ರ ಜ್ಞಾನಿಗಳು ತಿಳಿದುಹೇಳಿದ್ದಾರೆ. ಕೇವಲ ಪ್ರಕಾಶದ ಪ್ರತಿಬಿಂಬವೇ ಚಿದಾಭಾಸವಾಗಿದೆ. ಚಿದಾಭಾಸದಲ್ಲಿಯೇ ಈ ಜ್ವರಗಳು ಅಸಂಭಾವಿತವಾಗಿರುವಾಗ ಕೇವಲ ಸಾಕ್ಷಿಯಾದ ಕೂಟಸ್ಥನಲ್ಲಿ ಅವು ಇಲ್ಲವೆಂದು ಹೇಳಬೇಕಾದ್ದೇನಿದೆ? ಆದರೂ ಈತನು ಅವಿದ್ಯೆಯಿಂದ ಆ ಶರೀರಗಳೇ ತಾನೆಂದು ಭ್ರಮಿಸಿ ಕುಳಿತಿದ್ದಾನೆ ! (೨೨೯-೨೩೦). ಈ ಚಿದಾಭಾಸನು ಸ್ವಸಹಿತವಾದ ಶರೀರತ್ರಯದಲ್ಲಿ ಸಾಕ್ಷಿಯ ಸತ್ಯತ್ವವನ್ನು ಆರೋಪಿಸಿ ಆ ಶರೀರತ್ರಯವೂ ಜ್ವರವೂ ವಾಸ್ತವವಾಗಿ ತನಗೆ ಇದೆಯೆಂದು ತಿಳಿದುಕೊಂಡಿದ್ದಾನೆ (೨೩೧). ಚಿದಾಭಾಸನು ಈ ಬಗೆಯ ಭ್ರಾಂತಿ ಸಮಯದಲ್ಲಿ, ಶರೀರತ್ರಯದಲ್ಲಿ ಯಾವುದಕ್ಕೆ ಪೂರ್ವೋಕ್ತಜ್ವರವು ಬಂದರೂ

ನನಗೇ ಜ್ವರಬಂದಿದೆಯೆಂದು ತಿಳಿದುಕೊಳ್ಳುತ್ತಾನೆ, ಹೆಂಡತಿ ಮಕ್ಕಳಿಗೆ ರೋಗಬಂದರೆ ಕುಟುಂಬಿಯು ತನಗೇ ರೋಗಬಂದಿದೆಯೆಂದು ತಿಳಿದು ಶೋಕಿಸುವ ಹಾಗೆ! (೨೩೨). ಹೆಂಡತಿ ಮಕ್ಕಳಿಗೆ ಈ ಪ್ರಕಾರವಾಗಿ ಕಷ್ಟ ಒದಗಿದರೆ ನನಗೇ ಕಷ್ಟಬಂದಿದೆಯೆಂದು ಮನುಷ್ಯನು ಹೇಗೆ ತಿಳಿದು ಕೊಳ್ಳುವನೋ ಹಾಗೆ ಈ ಚಿದಾಭಾಸನೂ ಶರೀರಗಳ ಯಾತನೆ ತನ್ನದೆಂದು ಭ್ರಮಿಸಿದ್ದಾನೆ(೨೩೩). ಆದರೆ ವಿವೇಚನೆಯಿಂದ ಈ ಭ್ರಾಂತಿಯನ್ನು ತೊಡೆದು ಹಾಕಿದರೆ ಹೀಗೆ ನರಳಲು ಕಾರಣವೇ ಇಲ್ಲ. ಶರೀರವು ನಾನೆಂಬ ಭ್ರಮೆಯನ್ನು ತಳ್ಳಿ ನಿಜವಾಗಿ ತಾನೂ ಸಹ ಆಭಾಸನಾದ್ದರಿಂದ ತನ್ನನ್ನು ಲೆಕ್ಕದಲ್ಲಿರಿಸದೆ, ತಾನು ಸಾಕ್ಷಿಯಾದ ಪ್ರತ್ಯಗಾತ್ಮನೆಂದು ತಿಳಿದುಕೊಳ್ಳಬೇಕು. ಈ ಸ್ಥಿತಿಯಲ್ಲಿ ಶರೀರದ ಕಷ್ಟಗಳಿಗಾಗಿ ತಾನು ನರಳಬೇಕಾಗುವುದಿಲ್ಲ(೨೩೪). ತಪ್ಪಾಗಿ ತಿಳಿಯುವುದು ಭಯಾದಿಗಳಿಗೆ ಕಾರಣವಾಗಿದೆ. ಹಗ್ಗವನ್ನು ಹಾವೆಂದು ಭ್ರಮಿಸುವುದು ಹೆದರಿ ಓಡುವುದಕ್ಕೆ ಕಾರಣ. ಅದು ಹಗ್ಗವೆಂದು ತಿಳಿದು ಸರ್ಪವೆಂಬ ಭ್ರಮೆ ಹೋದಮೇಲೆ ತಾನು ಓಡಿಹೋದುದಕ್ಕಾಗಿ ಸಹ ಪಶ್ಚಾತ್ತಾಪಪಡುತ್ತಾನೆ(೨೩೫). ಲೋಕದಲ್ಲಿ ಒಬ್ಬನು ಇನ್ನೊಬ್ಬನ ಮೇಲೆ ಸುಳ್ಳು ಆಪಾದನೆಯನ್ನು ಮಾಡಿದ್ದು ರುಜುವಾತಾದಾಗ, ಈ ಅಪರಾಧಿಯು ತನ್ನನ್ನು ಕ್ಷಮಿಸಬೇಕೆಂದು ಆ ವ್ಯಕ್ತಿಯನ್ನು ಮತ್ತೆ ಮತ್ತೆ ಬೇಡಿಕೊಳ್ಳುತ್ತ ಶರಣಾಗುತ್ತಾನೆ. ಹಾಗೆಯೇ ಈ ಆಭಾಸನು ಭೋಕ್ತೃತ್ವಾದಿಗಳನ್ನು ಸಾಕ್ಷಿಯಮೇಲೆ ಸುಳ್ಳು ಸುಳ್ಳಾಗಿ ಹೊರಿಸಿದ ಅಪರಾಧಕ್ಕೆ ಪ್ರಾಯಶ್ಚಿತ್ತವನ್ನು ಕೇಳಲು ಸಾಕ್ಷಿಗೆ ಶರಣಾಗುತ್ತಾನೆ. ಎಂದರೆ ಸಾಕ್ಷಿಯಲ್ಲಿ ಯಾವ ದೋಷವೂ ಇಲ್ಲವೆಂದೂ ತಾನು ಭ್ರಮಿಸಿದೆನೆಂದೂ ನಿಶ್ಚಯಿಸುತ್ತಾನೆ (೨೩೬). ಮತ್ತೆ ಮತ್ತೆ ಪಾಪಕಾರ್ಯ ಗಳನ್ನು ಮಾಡಿದವನು ಪುನರಾವೃತ್ತಪಾಪಕಾರ್ಯಕ್ಕೆ ವಿಹಿತವಾದ ಸ್ನಾನಾದಿಪ್ರಾಯಶ್ಚಿತ್ತವನ್ನು ಹೇಗೆ ಮಾಡಿಕೊಳ್ಳುತ್ತಾನೋ ಹಾಗೆ ಈ ಚಿದಾಭಾಸನು ಮತ್ತೆ ಮತ್ತೆ ಸಾಕ್ಷಿಯಾದ ಕೂಟಸ್ಥನಲ್ಲಿ ಸಂಸಾರಿತ್ವವನ್ನು ಆರೋಪಿಸಿದ ದೋಷದ ಪರಿಹಾರಕ್ಕಾಗಿ ಧ್ಯಾನವನ್ನು ಮಾಡುತ್ತಿರುವನೋ ಎಂಬಂತೆ ತನ್ನ ಸಾಕ್ಷಿಸ್ವರೂಪವನ್ನೇ ಧ್ಯಾನಿಸುತ್ತ ಇರುತ್ತಾನೆ! (೨೩೭). ಗುಪ್ತಾಂಗದಲ್ಲಿ ಮೇಹರೋಗವುಳ್ಳ ವೇಶ್ಯೆಯು ರತಿವಿಲಾಸಕ್ಕೆ ನಾಚುವಂತೆ, ಚಿದಾಭಾಸನು ಜ್ಞಾನಿಯ ಎದುರಿಗೆ ತನ್ನ ಗುಣಖ್ಯಾತಿಗಳನ್ನು ಹೇಳಿಕೊಳ್ಳುವುದಕ್ಕೆ ನಾಚಿಕೆ ಪಡುತ್ತಾನೆ (೨೩೮). ಮ್ಲೇಚ್ಛರ ಹಿಡಿತಕ್ಕೆ ಒಳಗಾದ ಬ್ರಾಹ್ಮಣನು ಪ್ರಾಯಶ್ಚಿತ್ತವನ್ನು ಮಾಡಿಕೊಂಡ ಮೇಲೆ ಪುನಃ ಮ್ಲೇಚ್ಛರ ಸಹವಾಸಕ್ಕೆ ಹೇಗೆ

ಹೋಗುವುದಿಲ್ಲವೋ ಹಾಗೆ ಈ ಆಭಾಸನು ಶಾರೀರಕರೋಗಾದಿಗಳಲ್ಲಿ ತಾದಾತ್ಮ್ಯವನ್ನು ಹೊಂದುವುದೇ ಇಲ್ಲ(೨೩೯). ಯುವರಾಜ ಪದವಿಯಲ್ಲಿ ಪಟ್ಟಾಭಿಷಿಕ್ತನಾದ ರಾಜಪುತ್ರನು ಮುಂದೆ ಸಾಮ್ರಾಜ್ಯಾಧಿಪತಿಯಾಗಬೇಕೆಂದು ಹೇಗೆ ಮಹಾರಾಜನನ್ನು ಅನುಕರಿಸಿ ನಡೆದುಕೊಳ್ಳುತ್ತಾನೋ ಹಾಗೆ ಈ ಚಿದಾಭಾಸನು ಆತ್ಮಸಾಮ್ರಾಜ್ಯವನ್ನು ಪಡೆದು ಬ್ರಹ್ಮಸ್ವರೂಪವನ್ನು ಗಳಿಸಬೇಕೆಂದು ಸಾಕ್ಷಿಯ ಚಿಂತನದಲ್ಲಿ ತೊಡಗಿರುತ್ತಾನೆ (೨೪೦). ಯಾವನು ಬ್ರಹ್ಮವನ್ನು ತಿಳಿಯುತ್ತಾನೋ ಅವನು ಬ್ರಹ್ಮವೇ ಆಗಿಬಿಡುತ್ತಾನೆ ಎಂದು "**ಸ ಯೋ ಹ ವೈ ತತ್ಪರಮಂ ಬ್ರಹ್ಮ ವೇದ ಬ್ರಹ್ಮೈವ ಭವತಿ**" (ಮುಂ.ಉ.೩-೨-೯) ಎಂಬ ಶ್ರುತಿಯು ಘೋಷಿಸಿರುವುದರಿಂದ ಬ್ರಹ್ಮವಾಗುವ ಇಚ್ಛೆಯಿಂದ ಅದನ್ನೇ ಈ ಮುಮುಕ್ಷುವು ಧ್ಯಾನಿಸುತ್ತಾನೆ. ಇನ್ನೊಂದರ ಕಡೆಗೂ ಅವನ ಗಮನವಿರುವುದಿಲ್ಲ(೨೪೧). ದೇವತ್ವವನ್ನು ಬಯಸತಕ್ಕವರು ಅಗ್ನಿಪ್ರವೇಶ ಮಾಡಿಯೋ ಗಂಗಾನದಿಯಲ್ಲಿ ಧುಮುಕಿಯೋ ದೇಹತ್ಯಾಗವನ್ನು ಮಾಡುವುದುಂಟು. ಹಾಗೆ ಚಿದಾಭಾಸನೂ ಸಹ ಸಾಕ್ಷಿಯಾಗಿಯೇ ಉಳಿಯಬೇಕೆಂಬ ಅಧಿಕಫಲಾಪೇಕ್ಷೆಯಿಂದ ಬ್ರಹ್ಮಜ್ಞಾನದಲ್ಲಿ ಪ್ರವೃತ್ತನಾಗಿ ತನ್ನ ಆಭಾಸತ್ವವನ್ನು ಕಳೆದುಕೊಳ್ಳಲು ಬಯಸುತ್ತಾನೆ. ತನ್ನ ವಿನಾಶವನ್ನೇ ಅಪೇಕ್ಷಿಸುತ್ತಾನೆ (೨೪೨). ದೇವತ್ವವನ್ನು ಬಯಸಿ ಅಗ್ನಿಪ್ರವೇಶವನ್ನು ಮಾಡತಕ್ಕವನಿಗೆ ದೇಹವು ಸುಟ್ಟುಹೋಗುವವರೆಗೂ ಮನುಷ್ಯತ್ವವಿದ್ದೇ ಇರುತ್ತದೆ. ಹಾಗೆಯೇ ಜ್ಞಾನಿಗೆ ಪ್ರಾರಬ್ಧಕರ್ಮವಶದಿಂದ ಬಂದ ದೇಹವಿರುವವರೆಗೂ ಆಭಾಸನೆಂಬ (ಜೀವನೆಂಬ) ವ್ಯವಹಾರವು ಇದ್ದೇ ಇರುತ್ತದೆ (೨೪೩). ಶಂಕೆ - ಆತನಿಗೆ ತಾನು ಭೋಕ್ತೃವೆಂಬ ಭ್ರಮೆಯು ಹೋಗಿದ್ದರೂ ಹಿಂದೆ ಹೇಳಿದಂತೆ ಸುಖದುಃಖಭೋಗವು ಅನುವೃತ್ತ ವಾಗುವುದು ಹೇಗೆ? ನಾನು ಮನುಷ್ಯನೆಂಬ ವಿಪರೀತ ಪ್ರತೀತಿಯಾದರೂ ಹೇಗೆ ಉಳಿದಿರುತ್ತದೆ? ಉತ್ತರ- ಇದೇನೂ ಅಸಂಭವವಲ್ಲ. ರಜ್ಜುಸರ್ಪವನ್ನು ನೋಡಿದವನು ಹೆದರಿ ನಡುಗುತ್ತಾನೆ. ಅದು ಸರ್ಪವಲ್ಲ, ಬರಿಯ ಹಗ್ಗ ಎಂದು ತಿಳಿದಮೇಲೆ ನಡುಕಭಯಗಳು ಥಟ್ಟನೆ ಹೋಗುವುದಿಲ್ಲ, ಮೆಲ್ಲಗೆ ಹೋಗುತ್ತವೆ. ಮಬ್ಬುಗತ್ತಲೆಯಲ್ಲಿ ಅದೇ ಹಗ್ಗವನ್ನು ಅವನ ಮೇಲೆಸೆದರೆ ಅದು ಸರ್ಪವೆಂದೇ ಸ್ವಲ್ಪಹೊತ್ತು ಭಾವಿಸಬಹುದು! (೨೪೪). ಹಾಗೆಯೇ ಆರಬ್ಧವಾದ ಭೋಗವು ಕ್ರಮೇಣ ಉಪಶಾಂತವಾಗುವುದೇ ಹೊರತು ಥಟ್ಟನೆ ಹೋಗುವುದಿಲ್ಲ. ಸುಖದುಃಖಗಳನ್ನು ಭೋಗಿಸುವಾಗ ಒಂದೊಂದು ಸಲ

ನಾನು ಮನುಷ್ಯನೆಂದೂ ಭಾಸವಾಗಬಹುದು. ಇದನ್ನು ಬಾಧಿತಾನುವೃತ್ತಿಯೆಂದು ಹೇಳುತ್ತಾರೆ (೨೪೫). ಇಂತಹ ಒಂದು ಚಿಕ್ಕ ಲೋಪದಿಂದ ಆತನ ತತ್ತ್ವಜ್ಞಾನವೇನೂ ಅಳಿಸಿಹೋಗುವುದಿಲ್ಲ. ಇನ್ನೊಂದು ಮಾತನ್ನು ಹೇಳಬೇಕಾಗಿದೆ. ''ನಾನು ಮನುಷ್ಯನಲ್ಲ, ನನಗೆ ಯಾವ ಭೋಗವೂ ಬೇಡ'' ಎಂದು ನಿಯಮದಿಂದ ಪಾಲಿಸಬೇಕಾದ ಜೀವನ್ಮುಕ್ತಿ ವ್ರತ ಎಂಬುದೇನೂ ಇಲ್ಲವಷ್ಟೆ. ಇದೆಲ್ಲವೂ ವಸ್ತುಸ್ವಭಾವವೆನ್ನಬಹುದು. ನಾನು ಮನುಷ್ಯನೆಂಬ ಭಾವನೆ ಒಮ್ಮೆ ಬಂದರೂ ಪ್ರಾಪ್ತವಾದ ತತ್ತ್ವಜ್ಞಾನದಿಂದ ಅದು ನಿರ್ಮೂಲವಾಗಿ ಬಿಡುತ್ತದೆ (೨೪೬). ಇನ್ನೊಂದು ಉದಾಹರಣೆ. ಹಿಂದೆ ಹೇಳಿದ 'ದಶಮಸ್ತ್ವಂ' ಎಂಬ ಸ್ಥಳದಲ್ಲಿಯೂ ಮೂಢನು ಮೊದಲು ತಲೆಯನ್ನು ಚಚ್ಚಿಕೊಂಡು ಅಳುತ್ತಿರುತ್ತಾನೆ. ಆಮೇಲೆ 'ನಾನು ದಶಮನೆಂಬುದು' ತಿಳಿದಮೇಲೂ ತಲೆಯಲ್ಲಾದ ಗಾಯ ಗುಣವಾಗಲು ಒಂದು ತಿಂಗಳಾದರೂ ಬೇಕಾಗುತ್ತದೆ (೨೪೭). ಆದರೆ ದಶಮನು ಸತ್ತಿಲ್ಲವೆಂಬುದು ತಿಳಿದಮೇಲೆ ಆತನಿಗಾಗುವ ಸಂತೋಷವು ತಲೆಗಾಯದ ನೋವನ್ನು ಮರೆಸಿಬಿಡುತ್ತದೆ! ಹಾಗೆ ಜೀವನ್ಮುಕ್ತನಿಗೆ ಮುಕ್ತಿಲಾಭವು ಪ್ರಾರಬ್ಧಕರ್ಮದ ದುಃಖವನ್ನು ಮರೆಸಿಬಿಡುತ್ತದೆ! (೨೪೮). ಜೀವನ್ಮುಕ್ತನ ಸ್ಥಿತಿಯು ವ್ರತವಲ್ಲವಾದ್ದರಿಂದ ಅಧ್ಯಾಸವು ಉಳಿದಿದ್ದರೆ ಮತ್ತೆ ಮತ್ತೆ ತತ್ತ್ವವಿಚಾರವನ್ನು ಮಾಡುತ್ತಿರಲಿ. 'ರಸ'ವೆಂಬ ಔಷಧವನ್ನು ಸೇವಿಸತಕ್ಕವನು ಹಸಿವಾದಾಗ ಮತ್ತೆ ಮತ್ತೆ ಆಹಾರವನ್ನು ತೆಗೆದುಕೊಳ್ಳುತ್ತಾನೆ. ಹಾಗೆಯೇ ಇದು (೨೪೯) ಹಿಂದೆ ಹೇಳಿದ ದಶಮನು ತಲೆಗಾಯಕ್ಕೆ ಔಷಧವನ್ನು ಲೇಪಿಸಿ ಗುಣಪಡಿಸಿಕೊಳ್ಳುತ್ತಾನೆ. ಹಾಗೆಯೇ ಜೀವನ್ಮುಕ್ತನು ಭೋಗದಿಂದ ಪ್ರಾರಬ್ಧವನ್ನು ಸವೆಸಿ, ಅನಂತರ ಸಂಪೂರ್ಣವಾಗಿ ಮುಕ್ತನಾಗುವನು (೨೫೦).

**ಅಜ್ಞಾನಮಾವೃತಿಸ್ತದ್ವದ್ವಿಕ್ಷೇಪಶ್ಚ ಪರೋಕ್ಷಧೀಃ ।**
**ಅಪರೋಕ್ಷಮತಿಃ ಶೋಕಮೋಕ್ಷಸ್ತೃಪ್ತಿರ್ನಿರಂಕುಶಾ ॥**

ಎಂಬ ಶ್ಲೋಕದಲ್ಲಿ ಏಳು ಜೀವಾವಸ್ಥೆಗಳನ್ನು ಹೇಳಲಾಗಿದೆ. ಅವನ್ನು ಕ್ರಮವಾಗಿ ವಿವರಿಸುತ್ತ **'ಆತ್ಮಾನಂ ಚೇದ್ವಿಜಾನೀಯಾತ್ ...'** (ಬೃ.ಉ.೪-೪-೧೨) ಎಂಬ ಮಂತ್ರದಲ್ಲಿ ತಿಳಿಸಿದ ಅಪರೋಕ್ಷಜ್ಞಾನ, ಶೋಕನಿವೃತ್ತಿ - ಎಂಬ ಐದನೆಯ ಮತ್ತು ಆರನೆಯ ಜೀವಾವಸ್ಥೆಗಳನ್ನು ಇದುವರೆಗೆ ವರ್ಣಿಸಲಾಯಿತು. ಈ ಮಂತ್ರದಲ್ಲಿ ಶೋಕನಿವೃತ್ತಿಯು

ಆಭಾಸಸ್ವರೂಪನಾದ ಜೀವನ ಆರನೆಯ ಅವಸ್ಥೆ. ಇನ್ನು ಏಳನೆಯದು ನಿರಂಕುಶವಾದ ತೃಪ್ತಿ. ಅದನ್ನೀಗ ವರ್ಣಿಸಬೇಕಾಗಿದೆ (೨೫೧). ವಿಷಯಭೋಗದಿಂದಾಗುವ ತೃಪ್ತಿಯು ಸಾಂಕುಶವಾದದ್ದು. ಆ ತೃಪ್ತಿಯು ಇನ್ನಷ್ಟು ವಿಷಯಾಭಿಲಾಷೆಯನ್ನು ಬೆಳೆಸಿ ತೃಪ್ತಿಯನ್ನು ಕುಂಠಿತಗೊಳಿಸುವುದರಿಂದ ಅದನ್ನು ಅಂಕುಶಸಹಿತವಾದ ತೃಪ್ತಿಯೆಂದು ಕರೆದಿದ್ದೇವೆ. ಅಪರೋಕ್ಷ-ಜ್ಞಾನಜನ್ಯವಾದ ಈ ತೃಪ್ತಿಯು ಅಂತಹುದಲ್ಲ. ಇದು ನಿರಂತರವಾದ ತೃಪ್ತಿ. ವಿಷಯೇಚ್ಛೆಯು ಇಲ್ಲಿ ಕೊನೆಗೊಳ್ಳುತ್ತದೆ. ಆದ್ದರಿಂದ ಈ ಸಪ್ತಮೀ ತೃಪ್ತಿಯು ನಿರಂಕುಶವಾದದ್ದು. ಮಾಡಬೇಕಾದ ಕೃತ್ಯವೆಲ್ಲವನ್ನೂ ಮಾಡಿಮುಗಿಸಿದ್ದಾಯಿತು. ಲಭಿಸಬೇಕಾದ್ದು ಲಭಿಸಿತು - ಎಂದು ಆಗುವ ತೃಪ್ತಿ ಇದು (೨೫೨). ಈ ಆತ್ಮಜ್ಞಾನಿಗೆ ತತ್ತ್ವಜ್ಞಾನವಾಗುವುದಕ್ಕೆ ಮೊದಲು ಬಹಳ ಕರ್ತವ್ಯವಿತ್ತು. ಐಹಿಕವಾದ ಕೃಷಿವಾಣಿಜ್ಯಾದಿಗಳೂ ಸ್ವರ್ಗಾದಿಗಳ ಸಿದ್ಧಿಗಾಗಿ ಯೋಗಾಭ್ಯಾಸ, ದೇವತೋಪಾಸನೆ ಮುಂತಾದವೂ ಕರ್ತವ್ಯಗಳಾಗಿದ್ದವು. ಮೋಕ್ಷಸಿದ್ಧಿಗಾಗಿ ಶ್ರವಣಮನನಾದಿಗಳನ್ನು ಮಾಡಬೇಕಾಗಿತ್ತು. ಆತ್ಮಜ್ಞಾನವಾದ ಮೇಲೆ ಇಹಪರಲೋಕಗಳ ಸುಖದ ಅಪೇಕ್ಷೆಯಿಲ್ಲ. ಬ್ರಹ್ಮಾನಂದ ಸಾಕ್ಷಾತ್ಕಾರವಾಯಿತು. ಇನ್ನು ಬೇಕಾದ್ದೇನಿದೆ? ಮಾಡಬೇಕಾದ್ದೇನಿದೆ? ನಿರಂಕುಶವಾದ ತೃಪ್ತಿಯೊದಗಿತು (೨೫೩). ಕೃತಕೃತ್ಯತೆ ಎಂದರೆ ಇದು. ಇದಕ್ಕೆ ಪ್ರತಿಯೋಗಿಯಾದ ವಿರುದ್ಧಾಂಶಗಳನ್ನು ಅನುಸಂಧಾನಮಾಡಿ ಪ್ರಕೃತದ ಕೃತಕೃತ್ಯತೆಯನ್ನು ಎಣಿಸುತ್ತ ಜ್ಞಾನಿಯು ನಿತ್ಯತೃಪ್ತನಾಗಿರುತ್ತಾನೆ (೨೫೪).

ಹೇಗೆಂದರೆ, ''ಅಜ್ಞಾನಿಗಳು ಪುತ್ರಾದಿ ಕಾಮನೆಗಳನ್ನಿಟ್ಟುಕೊಂಡು ಶೋಕಕ್ಕೆ ಈಡಾಗಿ ತಮಗೆ ತೋರಿದಂತೆ ಸಂಸಾರದಲ್ಲಿ ತೊಡಗಿರಲಿ. ಪರಮಾನಂದ ಪೂರ್ಣನಾದ ನಾನು ಯಾವ ಬಯಕೆಯಿಂದ ಸಂಸಾರಮಾಡಬೇಕು?(೨೫೫). ಸ್ವರ್ಗಾದಿಲೋಕವನ್ನು ಬಯಸತಕ್ಕವರು ಶಾಸ್ತ್ರೋಕ್ತಕರ್ಮಗಳನ್ನು ಯಥೇಷ್ಟವಾಗಿ ಅನುಷ್ಠಾನಮಾಡಲಿ. ಸರ್ವಲೋಕಾತ್ಮಕನಾದ ನಾನು ಏತಕ್ಕಾಗಿ ಯಾವುದನ್ನು ಯಾವ ರೀತಿ ಅನುಷ್ಠಾನಮಾಡಲಿ! ಅಧಿಕಾರಿಗಳಾದವರು ಶಾಸ್ತ್ರಗಳಿಗೆ ವ್ಯಾಖ್ಯಾನಗಳನ್ನು ರಚಿಸಲಿ. ಶಿಷ್ಯರಿಗೆ ಅಧ್ಯಾಪನವನ್ನು ಮಾಡಲಿ. ವೇದಗಳನ್ನಾದರೂ ಕಲಿಸಲಿ. ನಾನು ಕ್ರಿಯಾರಹಿತನಾದ್ದರಿಂದ ನನಗೆ ಕರ್ಮಧಲ್ಲಿ ಅಧಿಕಾರವಿಲ್ಲ (೨೫೬-೨೫೭). ನಾನು ನಿದ್ರಿಸುವುದೂ ಇಲ್ಲ, ಭಿಕ್ಷೆಯನ್ನು ಸ್ವೀಕರಿಸುವುದೂ ಇಲ್ಲ. ಸ್ನಾನವನ್ನೂ ಮಾಡುವುದಿಲ್ಲ. ಶೌಚವನ್ನೂ ಆಚರಿಸುವುದಿಲ್ಲ. ಅವುಗಳ ಇಚ್ಛೆಯೂ ಇಲ್ಲ. ಆಚರಣೆಯೂ ಇಲ್ಲ.

ನೋಡತಕ್ಕ ಜನರು ಇವೆಲ್ಲವನ್ನೂ ಈತನು ಮಾಡುತ್ತಾನೆ - ಎಂದು ಕಲ್ಪಿಸಿಹೇಳಬಹುದು. ಅವರ ಕಲ್ಪನೆಗಳಿಂದ ನನಗಾಗುವುದೇನು ! (೨೫೮) ಗುಲಗುಂಜಿಬೀಜಗಳು ಕೆಂಪಾಗಿರುವುದನ್ನು ನೋಡಿ. ಈ ಗಿಡಕ್ಕೆ ಬೆಂಕಿ ಹತ್ತಿದೆ ಎಂದು ಜನರು ಹೇಳಬಹುದು. ಕಲ್ಪಿತವಾದ ಆ ಬೆಂಕಿಯಿಂದ ಆ ಗಿಡವೇನೂ ಸುಟ್ಟುಹೋಗುವುದಿಲ್ಲ! ಅನ್ಯರಲ್ಲಿರುವ ಸಂಸಾರಧರ್ಮಗಳನ್ನು ನನ್ನಲ್ಲಿ ಆರೋಪಿಸಬಹುದು. ಆದರೆ ಯಾವ ಸಂಸಾರಧರ್ಮವೂ ನನ್ನಲ್ಲಿಲ್ಲ(೨೫೯). ಯಾರಿಗೆ ತತ್ತ್ವಸಾಕ್ಷಾತ್ಕಾರವಾಗಿಲ್ಲವೋ ಅವರು ವೇದಾಂತಶ್ರವಣವನ್ನು ಮಾಡಿಕೊಳ್ಳಲಿ. ತತ್ತ್ವಜ್ಞನಾದ ನಾನು ಶ್ರವಣವನ್ನೇಕೆ ಮಾಡಲಿ? ಆತ್ಮತತ್ತ್ವವನ್ನು ಚೆನ್ನಾಗಿ ತಿಳಿಯದೆ ಸಂಶಯಪಡತಕ್ಕವರು ಮನನ ಮಾಡಲಿ. ಸಂಶಯವೇ ಇಲ್ಲದ ನನಗೆ ಮನನವೇಕೆ? (೨೬೦). ದೇಹಾದಿಗಳು ಆತ್ಮವೆಂಬ ವಿಪರ್ಯಯಬುದ್ಧಿಯು ನನಗಿಲ್ಲ. ಯಾರಿಗೆ ಅಂತಹ ವಿಪರ್ಯಯಬುದ್ಧಿ ಇದೆಯೋ ಆತನು ನಿದಿಧ್ಯಾಸನವನ್ನು ಮಾಡಿಕೊಳ್ಳಲಿ. ನನಗೇಕೆ? ದೇಹವು ಆತ್ಮವೆಂಬ ಮತಿಯು ನನಗೆ ಇಲ್ಲವೇ ಇಲ್ಲ(೨೬೧). ನಾನು ಮನುಷ್ಯ - ಇತ್ಯಾದಿ ವ್ಯವಹಾರವೇನೋ ಇನ್ನೂ ಇದೆ ! ಆದರೆ ಇದು ದೇಹಾತ್ಮಬುದ್ಧಿಯೆಂಬ ವಿಪರ್ಯಯದಿಂದ ಬಂದದ್ದಲ್ಲ. ಬಹಳ ಕಾಲದಿಂದ ಅಭ್ಯಸ್ತವಾದ ಸಂಸ್ಕಾರಬಲದಿಂದ ಹೀಗಾಗುತ್ತದೆ. ಪ್ರಾರಬ್ಧಕರ್ಮವು ಸವೆದು ಹೋದಮೇಲೆ ಈ ವ್ಯವಹಾರವೂ ನಿವೃತ್ತವಾಗುವುದು. ಕರ್ಮವು ಇನ್ನೂ ಸವೆಯದಿದ್ದಾಗ ಸಾವಿರಸಲ ಧ್ಯಾನಮಾಡಿದರೂ ಇದು ಎಂದಿಗೂ ಹೋಗತಕ್ಕದ್ದಲ್ಲ! (೨೬೨-೨೬೩). ಇಂತಹ ವ್ಯವಹಾರವು ವಿರಳ ವಾಗಲೆಂದಾದರೂ ಧ್ಯಾನಮಾಡು - ಎಂದು ನೀವು ಹೇಳಿದರೆ, ಪ್ರಯೋಜನವಾದರೂ ಏನು? ಬರಿಯ ವ್ಯವಹಾರದಿಂದ ಬಾಧೆಯೇನೂ ಇಲ್ಲವೆಂದು ತಿಳಿದಿರುವ ನಾನು ಧ್ಯಾನವನ್ನಾದರೂ ಏಕೆ ಮಾಡಬೇಕು? (೨೬೪) ವಿಕ್ಷೇಪವಾಗಲಿ ಸಮಾಧಿಯಾಗಲಿ ವಿಕಾರಿಯಾದ ಮನಸ್ಸಿಗೇ ಹೊರತು ನನಗಲ್ಲ, ಸಮಾಧಿಫಲವಾದ ನಿತ್ಯಾನುಭವಕ್ಕಾದರೂ ಸಮಾಧಿ ಬೇಡವೆ? ಎಂದರೆ, ಹಾಗಲ್ಲ, ನಾನೇ ನಿತ್ಯಾನುಭವ ಸ್ವರೂಪನಾಗಿರುವಾಗ, ಬೇರೆ ಅನುಭವವಾದರೂ ನನಗೆ ಯಾವುದು? ಕರ್ತವ್ಯವನ್ನು ಮಾಡಿ ಮುಗಿಸಿದ್ದಾಯಿತು. ಪ್ರಾಪ್ಯವಾದದ್ದು ಪ್ರಾಪ್ತವಾಯಿತು - ಎಂಬುದೇ ನನ್ನ ನಿಶ್ಚಯ. ಹಾಗಾದರೆ ನಿಯಮಬಾಹಿರವಾದ ಯಥೇಷ್ಟಾಚರಣೆ ಪ್ರಾಪ್ತವಾಗುವುದಿಲ್ಲವೆ? ಎಂದರೆ ನನ್ನ ಉತ್ತರ ಇದು - ಲೌಕಿಕವೋ ಶಾಸ್ತ್ರೀಯವೋ

ನಿಯಮಬಾಹಿರವೋ ಯಾವ ಆಚರಣೆಯಾಗಲಿ ಪ್ರಾರಬ್ಧಕರ್ಮಕ್ಕೆ ಅನುಗುಣವಾಗಿ ನಡೆಯಲಿ. ಅಕರ್ತೃವೂ ಅಸಂಗನೂ ಆದ ನನಗೆ ಅದರಿಂದ ಏನಾದೀತು? (೨೬೫-೨೬೭) ಅಥವಾ ನಾನು ಕೃತಕೃತ್ಯನಾದರೂ ಲೋಕಾನುಗ್ರಹಾಪೇಕ್ಷೆಯಿಂದ ಶಾಸ್ತ್ರೀಯಮಾರ್ಗದಲ್ಲಿಯೇ ನಡೆಯುತ್ತೇನೆಂದು ಭಾವಿಸಿದರೂ ನನಗೆ ಯಾವ ಹಾನಿಯೂ ಇಲ್ಲ(೨೬೮). ''ದೇವತಾರ್ಚನೆ, ಸ್ನಾನ, ಶೌಚ, ಭಿಕ್ಷೆ- ಮುಂತಾದ ಕಾರ್ಯದಲ್ಲಿ ಈ ದೇಹವು ತೊಡಗುವುದಾದರೆ ತೊಡಗಲಿ. ವಾಣಿಯು ಗಟ್ಟಿಯಾಗಿ ಜಪಮಾಡಲಿ. ಉಪನಿಷತ್ತನ್ನು ಪಠಿಸಲಿ. ಈ ಬುದ್ಧಿಯು ವಿಷ್ಣುವನ್ನು ಧ್ಯಾನಿಸಲಿ ಅಥವಾ ಬ್ರಹ್ಮಾನಂದದಲ್ಲಿ ಮುಳುಗಿಹೋಗಲಿ. ನನಗೇನಾಗಬೇಕು? ನಾನು ಕೇವಲ ಸಾಕ್ಷಿಯಾಗಿರುತ್ತೇನೆ. ಯಾವ ಕಾರ್ಯವನ್ನೂ ಮಾಡುವುದೂ ಇಲ್ಲ, ಮಾಡಿಸುವುದೂ ಇಲ್ಲ'' (೨೬೯-೨೭೦).

ಈ ಪ್ರಕಾರವಾಗಿ ಜ್ಞಾನಿಯೂ ಕರ್ಮಿಯೂ ಪೂರ್ವಸಮುದ್ರ-ಪಶ್ಚಿಮ ಸಮುದ್ರಗಳಂತೆ ದೂರವಾಗಿ ಭಿನ್ನವಿಷಯಗಳಲ್ಲಿರುವಾಗ, ಕರ್ಮಿಗೂ ನನಗೂ ವಿವಾದವಾಗುವುದು ಸಾಧ್ಯವೇ ಇಲ್ಲ (೨೭೧). ಶರೀರ, ವಾಕ್, ಬುದ್ಧಿ- ಈ ಮೂರು ವಿಷಯಗಳಲ್ಲಿ ಕರ್ಮಿಗೆ ನಿರ್ಬಂಧ ಉಂಟು. ಈ ತ್ರಿಕರಣಗಳ ವಿಷಯದಲ್ಲಿ ವಿಧಿನಿಷೇಧಗಳನ್ನು ಕರ್ಮಿಯು ಪಾಲಿಸಬೇಕಾಗುತ್ತದೆ. ಆತನು ವಿಚಾರ ಮಾಡಬೇಕಾದುದೆಲ್ಲವೂ ಈ ಮೂರಕ್ಕೆ ಸಂಬಂಧಿಸಿದವು. ಜ್ಞಾನಿಯಾದರೋ ಸಕಲ ಕರ್ಮಗಳಿಗೂ ಸಾಕ್ಷಿಯಾಗಿರತಕ್ಕವನು. ಆತನಿಗೆ ಯಾವ ಕರ್ಮಲೇಪವೂ ಇಲ್ಲ, ಉಳಿದ ಯಾವುದೂ ಆತನಿಗೆ ವಿಷಯವೇ ಆಗುವುದಿಲ್ಲ. ಹೀಗೆ ಅವರ ಕ್ಷೇತ್ರಗಳೇ ಭಿನ್ನವಾಗಿರುವುದರಿಂದ ಅವರಿಬ್ಬರಿಗೆ ವಿವಾದವಾಗುವ ಸಂಭವ ಇಲ್ಲ (೨೭೨). ಆದರೂ ಅವರಿಗೆ ಎಲ್ಲಾದರೂ ವಿವಾದವು ಪ್ರಾಪ್ತವಾದರೆ ಇಬ್ಬರೂ ಕಿವುಡರಂತೆ ವಾದ ಮಾಡಬಹುದು! ಇವರಿಬ್ಬರ ವಿವಾದವನ್ನು ನೋಡಿ ಬುದ್ಧಿಶಾಲಿಗಳು ನಕ್ಕು ಬಿಡುತ್ತಾರೆ! (೨೭೩). ಕರ್ಮಿಯು ಯಾವ ಸಾಕ್ಷಿಸ್ವರೂಪವನ್ನು ಅರಿಯಲಾರನೋ ಆ ಸಾಕ್ಷಿಯು ಬ್ರಹ್ಮವೆಂದು ಜ್ಞಾನಿಯು ತಿಳಿದಿದ್ದರೆ ಕರ್ಮಿಗೆ ಆಗುವ ನಷ್ಟವೇನು? ಕರ್ಮಿಯು ಮಾಡುವ ಕರ್ಮಾನುಷ್ಠಾನದಿಂದ ಜ್ಞಾನಿಗೆ ಆಗುವ ನಷ್ಟವಾದರೂ ಯಾವುದು? (೨೭೪). ಜ್ಞಾನಿಯು ದೇಹ ವಾಕ್ ಬುದ್ಧಿ (ಅಂತಃಕರಣ)ಗಳು ಅನೃತವೆಂದು ನಿಶ್ಚಯಿಸಿ ಅವನ್ನು ತ್ಯಜಿಸಿಬಿಟ್ಟಿರುತ್ತಾನೆ. ಕರ್ಮಿಯು ಅವನ್ನು ನಂಬಿಕೊಂಡು

ಕಾರ್ಯದಲ್ಲಿ ಪ್ರವೃತ್ತನಾದರೆ ಜ್ಞಾನಿಗಾಗುವ ನಷ್ಟವೇನು?(೨೭೫) ಜ್ಞಾನಿಗೆ ಪ್ರವೃತ್ತಿ ನಿವೃತ್ತಿಗಳೆರಡೂ ಸಮವಾದವು. ಕರ್ಮಾನುಷ್ಠಾನವು ಪ್ರಯೋಜನಶೂನ್ಯವೆಂದು ಜ್ಞಾನಿಯು ತ್ಯಜಿಸುವುದಾದರೆ ನಿವೃತ್ತಿಯಿಂದ ಆತನಿಗಾಗುವ ಪ್ರಯೋಜನ ವೇನು? ನಿವೃತ್ತಿಯು ಜ್ಞಾನಕ್ಕೆ ಕಾರಣವೆನ್ನುವುದಾದರೆ ಪ್ರವೃತ್ತಿಯು ಜ್ಞಾನವನ್ನು ಪಡೆಯಬೇಕೆಂಬ ಇಚ್ಛೆಗೆ ಕಾರಣವಾಗುವುದು (೨೭೬). ಜ್ಞಾನಿಯಾದವನಿಗೆ ತಿಳಿಯುವ ಇಚ್ಛೆ - ಬುಭುತ್ಸೆ- ಇಲ್ಲವಾದ್ದರಿಂದ ಪ್ರವೃತ್ತಿಯು ಅನಾವಶ್ಯಕ. ಜ್ಞಾನವು ಬಂದುಬಿಟ್ಟಿರುವುದರಿಂದ ನಿವೃತ್ತಿಯೂ ಬೇಕಾಗಿಲ್ಲ. ಜ್ಞಾನದ ಸ್ಥಿರತೆಗಾಗಿಯೂ ನಿವೃತ್ತಿ ಬೇಕಾಗಿಲ್ಲ. ಪ್ರತಿಬಂಧಕವಿಲ್ಲದ್ದರಿಂದ ಜ್ಞಾನವು ಅಬಾಧಿತವಾಗಿ ಅನುವೃತ್ತವಾಗುತ್ತದೆ. ಉಪನಿಷದ್ವಾಕ್ಯಜನ್ಯವಾದ ಜ್ಞಾನಕ್ಕೆ ಪ್ರತಿಬಂಧಕವಾದ ಪ್ರಮಾಣಾಂತರವಿಲ್ಲ. ಸ್ಥಿರತೆಗೆ ಸಾಧನವೇನೂ ಬೇಕಾಗಿರುವುದಿಲ್ಲ (೨೭೭). ಅವಿದ್ಯೆಯಾಗಲಿ ಅದರ ಕಾರ್ಯವಾದ ಜಗದ್ವ್ಯವಹಾರವಾಗಲಿ ಪ್ರತಿಬಂಧಕವಾಗಿ ಜ್ಞಾನವನ್ನು ಬಾಧಿಸುವುದಿಲ್ಲ. ಏಕೆಂದರೆ, ತತ್ತ್ವಜ್ಞಾನವು ಉದಯಿಸಿದಾಗಲೇ ಅವೆರಡೂ ಬಾಧಿತವಾಗಿ ನಷ್ಟವಾಗಿರುತ್ತವೆ (೨೭೮). ಆದರೆ ಬಾಧಿತವಾದ ಜಗತ್ತನ್ನು ಇಂದ್ರಿಯಗಳಿಂದ ಕಾಣುತ್ತಿದ್ದರೂ ಅದು ಏನೂ ಮಾಡಲಾರದು. ಇಲಿಯು ಬದುಕಿರುವಾಗಲೇ ಬೆಕ್ಕನ್ನು ಕೊಲ್ಲಲಾರದು. ಇನ್ನು ಸತ್ತು ಹೋದ ಇಲಿ ಬೆಕ್ಕನ್ನು ಕೊಂದೀತೆ! (೨೭೯) ಪಾಶುಪತಾಸ್ತ್ರದಿಂದ ಹೊಡೆದಾಗಲೂ ಯಾವನು ಸಾಯಲಿಲ್ಲವೋ, ಅವನನ್ನು ಉಕ್ಕಿನ ಅಲಗು ಇಲ್ಲದ ಬಾಣ - ಬರಿಯ ಕೋಲು ಕೊಂದೀತೆ! ಕೊಂದೀತೆಂದು ನಂಬಬಹುದೆ! (೨೮೦). ಮೊದಲು ಚಿತ್ರವಿಚಿತ್ರವಾದ ತನ್ನ ಕಾರ್ಯಗಳಿಂದ ಹೂಂಕರಿಸುತ್ತಿದ್ದ ಅವಿದ್ಯೆಯೊಡನೆ ಹೋರಾಡಿ ಅದನ್ನು ಜಯಿಸಿದ ದೃಢವಾದ ಜ್ಞಾನವು ಮತ್ತೆ ಸೋಲುವುದುಂಟೆ? (೨೮೧). ಜ್ಞಾನದಿಂದ ಹತವಾಗಿ ಬಿದ್ದ ಅಜ್ಞಾನ ಮತ್ತು ಅದರ ಕಾರ್ಯಗಳೆಂಬ ಹೆಣಗಳು ಇತ್ತಟ್ಟಿಗಿರಲಿ ಶೂರನಾದ ಜ್ಞಾನಚಕ್ರವರ್ತಿಗೆ ಅವುಗಳಿಂದ ಭಯ ಉಂಟೆ? ಸತ್ತು ಬಿದ್ದಿರುವ ಅವುಗಳನ್ನು ನೋಡಿದಾಗ ಈ ಜ್ಞಾನಚಕ್ರವರ್ತಿಯ ಕೀರ್ತಿಯೇ ಇನ್ನಷ್ಟು ಹೆಚ್ಚುತ್ತದೆ! (೨೮೨). ಈ ಪ್ರಕಾರದಲ್ಲಿ ಅತಿಶೂರನಾದ ಜ್ಞಾನವೀರನು ಜೊತೆಯಲ್ಲಿರುವಾಗ ಈ ದೇಹಕ್ಕೆ ಸಂಬಂಧಿಸಿದ ಪ್ರವೃತ್ತಿಯಿಂದಾಗಲಿ ನಿವೃತ್ತಿಯಿಂದಾಗಲಿ ಜ್ಞಾನಿಗೆ ಏನಾದೀತು? ಬೋಧವಿಲ್ಲದ ಕರ್ಮಿಗೆ ಪ್ರವೃತ್ತಿಯಲ್ಲಿ ಆಗ್ರಹವು ನ್ಯಾಯವಾದದ್ದು. ಏಕೆಂದರೆ ಮಾನವರು ಸ್ವರ್ಗಕ್ಕಾಗಿಯೋ ಮೋಕ್ಷಕ್ಕಾಗಿಯೋ ಪ್ರವೃತ್ತರಾಗಲೇಬೇಕು (೨೮೩-೨೮೪).

ಈ ಕರ್ಮಿಗಳ ನಡುವೆ ಇದ್ದಾಗ ಜ್ಞಾನಿಯು ಅವರನ್ನನುಸರಿಸಿ ಕಾಯಮನೋವಾಕ್ಕುಗಳಿಂದ ಎಲ್ಲ ಕಾರ್ಯಗಳನ್ನೂ ಮಾಡುತ್ತಿರುವನು (೨೮೫). ಒಂದು ವೇಳೆ ಜಿಜ್ಞಾಸುಗಳೊಡನೆ ಯಾವಾಗಲಾದರೂ ಇದ್ದರೆ ಜ್ಞಾನಿಯು ಈ ಎಲ್ಲ ಕ್ರಿಯೆಗಳನ್ನೂ ದೂಷಿಸುತ್ತ ತಾನೂ ಅವನ್ನು ತ್ಯಜಿಸಬಹುದು (೨೮೬). ಅಜ್ಞಾನಿಗಳ ಜೊತೆಯಲ್ಲಿದ್ದಾಗ ಅವರನ್ನನುಸರಿಸಿ ಜ್ಞಾನಿಯೂ ವ್ಯವಹರಿಸುವುದು ಯುಕ್ತವಾದದ್ದು. ಮೊಲೆಯುಣ್ಣುವ ಚಿಕ್ಕ ಮಗುವನ್ನನುಸರಿಸಿ ತಂದೆಯೂ ನಡೆದುಕೊಳ್ಳುವುದು ಲೋಕದಲ್ಲುಂಟು! (೨೮೭) ಮಗುವು ತನ್ನನ್ನು ಬೈದರೂ ಹೊಡೆದರೂ ಆ ಮಗುವಿನ ತಂದೆಯು ಬೇಸರಿಸುವುದೂ ಇಲ್ಲ, ಕೋಪಗೊಳ್ಳುವುದೂ ಇಲ್ಲ. ಅದಕ್ಕೆ ಬದಲಾಗಿ ಮಗುವನ್ನು ಮುದ್ದಿಸುತ್ತಾನೆ (೨೮೮). ಹಾಗೆಯೇ ಜ್ಞಾನಿಯೂ ಸಹ ಅಜ್ಞಾನಿಗಳು ತನ್ನನ್ನು ನಿಂದಿಸಿದರೆ ಪ್ರತಿಯಾಗಿ ನಿಂದಿಸುವುದಿಲ್ಲ. ಹೊಗಳಿದರೆ ಅವರನ್ನು ಹೊಗಳುವುದೂ ಇಲ್ಲ. ಅವರಿಗೆ ಸರಿಯಾದ ತಿಳುವಳಿಕೆ ಬರುವಂತೆ ನಡೆದುಕೊಳ್ಳುತ್ತಾನೆ (೨೮೯). ಯಾವ ಆಚರಣೆಯಿಂದ ಅಜ್ಞಾನಿಗೆ ತಿಳಿವಳಿಕೆ ಹುಟ್ಟುವುದೋ ಅಂತಹ ಆಚರಣೆಯನ್ನು ಜ್ಞಾನಿಯು ನಟಿಸಲೇಬೇಕು ಅಜ್ಞರಿಗೆ ಬೋಧಿಸುವುದಕ್ಕಿಂತಲೂ ಬೇರೆ ಯಾವ ಕಾರ್ಯವೂ ಜ್ಞಾನಿಗೆ ಲೋಕದಲ್ಲಿಲ್ಲ(೨೯೦).

ಈ ಪ್ರಕಾರವಾಗಿ ಜ್ಞಾನಿಯು ತನ್ನ ಕರ್ತವ್ಯವನ್ನು ನೆರವೇರಿಸಿ ಕೃತಕೃತ್ಯನಾದೆನೆಂದೂ ಪ್ರಾಪ್ಯವಾದದ್ದನ್ನು ಪಡೆದೆನೆಂದೂ ಸಂತೃಪ್ತನಾಗಿ ತನ್ನ ಮನಸ್ಸಿನಲ್ಲಿ ನಿರಂತರವೂ ಹೀಗೆಂದುಕೊಳ್ಳುತ್ತಾನೆ (೨೯೧). ''ಧನ್ಯ ನಾನು! ಧನ್ಯ ನಾನು. ನನ್ನ ನಿಜಸ್ವರೂಪನಾದ ಪ್ರತ್ಯಗಾತ್ಮನನ್ನು ಸಾಕ್ಷಾತ್‌ಕರಿಸಿ-ಕೊಂಡಿದ್ದೇನೆ! ಧನ್ಯ ನಾನು, ಧನ್ಯ ನಾನು! ನನಗೆ ಬ್ರಹ್ಮಾನಂದವು ಸ್ಪಷ್ಟವಾಗಿ ಅನುಭವಕ್ಕೆ ಬಂದಿದೆ (೨೯೨). ಧನ್ಯನಾದೆನು, ಧನ್ಯನಾದೆನು! ಸಾಂಸಾರಿಕ ದುಃಖವು ನನಗೆ ಕಾಣುವುದೇ ಇಲ್ಲ, ಧನ್ಯನಾದೆನು, ಧನ್ಯನಾದೆನು! ನನ್ನ ಅಜ್ಞಾನವು ಎಲ್ಲಿಗೋ ಓಡಿಹೋಯಿತು! (೨೯೩) ಧನ್ಯನಯ್ಯಾ ನಾನು, ಧನ್ಯನಯ್ಯಾ! ನಾನು ಮಾಡಬೇಕಾದ ಕೆಲಸ ಒಂದೂ ಉಳಿಯಲಿಲ್ಲ, ಧನ್ಯನಯ್ಯಾ ನಾನು, ಧನ್ಯನಯ್ಯಾ! ಗಳಿಸಬೇಕಾದ್ದೆಲ್ಲವನ್ನೂ ಗಳಿಸಿಬಿಟ್ಟೆ! (೨೯೪). ನಾನು ಧನ್ಯ, ನಾನು ಧನ್ಯ! ನನ್ನ ತೃಪ್ತಿಗೆ ಹೋಲಿಕೆಯೇ ಇಲ್ಲ, ನಾನು ಧನ್ಯ, ನಾನು ಧನ್ಯ! ಧನ್ಯನಯ್ಯಾ ಧನ್ಯನಯ್ಯಾ ಧನ್ಯ ಧನ್ಯ! (೨೯೫). ನನ್ನ ಪುಣ್ಯ, ಆಹಾ ಪುಣ್ಯ! ಫಲಿಸಿತಯ್ಯ, ಆಹಾ ಫಲಿಸಿತಯ್ಯ! ಪುಣ್ಯವಿಂದು

ಫಲಿಸಿಬಿಟ್ಟಿತು ಆಹಾ ನಮ್ಮದು! ಅಹೋ ನಾವು, ಅಹೋ ನಾವು! (೨೯೬). ಆಹಾ ಶಾಸ್ತ್ರವೆ, ಆಹಾ ಶಾಸ್ತ್ರವೇ, ಆಹಾ ಗುರುವೇ, ಆಹಾ ಗುರುವೇ! ಅಹೋ ಜ್ಞಾನವೇ, ಅಹೋ ಸುಖವೇ! ಅಹೋ ಸುಖವೇ!'' ಹೀಗೆ ಜ್ಞಾನಿಯು ತನ್ನಲ್ಲಿ ಹೇಳಿಕೊಂಡು ಆನಂದಿಸುತ್ತಾನೆ (೨೯೭). ಈ ತೃಪ್ತಿದೀಪಪ್ರಕರಣವನ್ನು ಯಾವ ವಿದ್ವಾಂಸರು ನಿತ್ಯವೂ ಅನುಸಂಧಾನ ಮಾಡುತ್ತಾರೋ ಅವರು ಬ್ರಹ್ಮಾನಂದದಲ್ಲಿ ಮುಳುಗಿ ನಿರಂತರವೂ ತೃಪ್ತರಾಗಿರುತ್ತಾರೆ (೨೯೮).

ಇಲ್ಲಿಗೆ ತೃಪ್ತಿದೀಪಪ್ರಕರಣವು ಸಮಾಪ್ತವಾಯಿತು

---

# ೮. ಕೂಟಸ್ಥದೀಪಪ್ರಕರಣ

**'ತತ್ತ್ವಮಸಿ'** ಎಂಬ ವಾಕ್ಯಾರ್ಥಜ್ಞಾನವು ಮೋಕ್ಷಕ್ಕೆ ಸಾಧನವಾದದ್ದು. ತತ್ ಮತ್ತು ತ್ವಂ ಪದಗಳ ಅರ್ಥಗಳಿಗೆ ಏಕತಾಜ್ಞಾನವು ಆವಶ್ಯಕ. ಅದರಲ್ಲಿ 'ತ್ವಂ' ಪದದ ಅರ್ಥವನ್ನು ವಿವೇಚಿಸುವುದು ಈ ಪ್ರಕರಣದ ಉದ್ದೇಶವಾಗಿದೆ. ಜೀವಕೂಟಸ್ಥರಿಗಿರುವ ಭೇದವನ್ನು ಮೊದಲು ತಿಳಿಯಬೇಕಾಗಿದೆ.

ಆಕಾಶದಲ್ಲಿರುವ ಸೂರ್ಯನ ಪ್ರಕಾಶದಿಂದ ದೀಪಿತವಾದ ಗೋಡೆಯಲ್ಲಿ, ಕನ್ನಡಿಯಲ್ಲಿ ಪ್ರತಿಬಿಂಬಿತನಾದ ಸೂರ್ಯನ ಪ್ರಕಾಶವು ಹರಡಿ ಬೆಳಗುವುದು. ಹಾಗೆ ಕೂಟಸ್ಥನಿಂದ ದೀಪಿತವಾದ ದೇಹವು ಅಂತಃಕರಣದಲ್ಲಿ ಇರುವ ಚಿದಾಭಾಸನಾದ ಜೀವನಿಂದ ಪ್ರಕಾಶಿತವಾಗಿದೆ. ಗೋಡೆಯು ಸೂರ್ಯನ ಬೆಳಕಿನಿಂದ ಪ್ರಕಾಶಿತವಾಗಿರುತ್ತದೆ. ಅದಕ್ಕೆ ಎದುರಾಗಿ ಕನ್ನಡಿಯನ್ನು ಹಿಡಿದಾಗ ಸೂರ್ಯಪ್ರಕಾಶವು ಕನ್ನಡಿಗೆ ಹೋಗಿ ಸೇರಿ ಹಿಂದಕ್ಕೆ ಗೋಡೆಯ ಮೇಲೆ ಚಿಮ್ಮುತ್ತದೆ. ಹಾಗೆ ಈ ದೇಹವು ಪ್ರಕಾಶಿತವಾದದ್ದು ಕೂಟಸ್ಥನಾದ ಆತ್ಮನಿಂದ. ಜೀವವೂ ದೇಹವನ್ನು ಬೆಳಗುತ್ತದೆ. ಕಾರಣವೇನೆಂದರೆ ಕೂಟಸ್ಥನ ಪ್ರಕಾಶವೇ (ಪ್ರತಿಬಿಂಬವೇ) ಅಂತಃಕರಣದಲ್ಲಿ ಸೇರಿ ಅದರ ಪ್ರಕಾಶವು ತಿರುಗಿ ದೇಹವನ್ನೇ ಬೆಳಗುತ್ತದೆ - ಎಂದು ಅಭಿಪ್ರಾಯ. ಹೋಲಿಕೆ ಕೆಳಗೆ ಕಂಡಂತೆ.

ಆಕಾಶದ ಸೂರ್ಯ - ಕೂಟಸ್ಥ
ಗೋಡೆ - ದೇಹ
ಕನ್ನಡಿ - ಅಂತಃಕರಣ
ಕನ್ನಡಿಯಲ್ಲಿ ಪ್ರತಿಬಿಂಬಿತ ಸೂರ್ಯ - ಜೀವ

ತ್ವಂ ಪದಕ್ಕೆ ಜೀವನು ವಾಚ್ಯಾರ್ಥ, ಕೂಟಸ್ಥನು ಲಕ್ಷ್ಯಾರ್ಥವೆಂದು ತಿಳಿಯಬೇಕು(೧). ಅನೇಕ ಕನ್ನಡಿಗಳಲ್ಲಿ ಪ್ರತಿಬಿಂಬಿತನಾದ ಸೂರ್ಯನ ಪ್ರಕಾಶವು ಗೋಡೆಯ ಮೇಲೆ ಮಂಡಲಾಕಾರವಾಗಿ ಕಾಣಿಸುತ್ತದೆ. ಮಂಡಲಗಳ ಅಂತರದಲ್ಲಿ ಇನ್ನೊಂದು ಪ್ರಕಾಶವಿರುವುದು ಸ್ಪಷ್ಟವಾಗಿ ತೋರುತ್ತದೆ. ಅದು ಆಕಾಶದಲ್ಲಿದ್ದ ಸೂರ್ಯನ ಪ್ರಕಾಶವಾಗಿದೆ. ಮಂಡಲಾಕಾರದ ಪ್ರಕಾಶಗಳಿಲ್ಲದಿದ್ದರೂ ಆಕಾಶಸೂರ್ಯನ ಪ್ರಕಾಶವಿದ್ದೇ ಇರುತ್ತದೆ. ಅದಿಲ್ಲದಿದ್ದರೆ ಗೋಡೆಯೇ ಕಾಣಿಸುವುದಿಲ್ಲ(೨). ಆಕಾಶಸೂರ್ಯನಂತಿರುವ ಕೂಟಸ್ಥನ ಪ್ರತಿಬಿಂಬಗಳು ಕನ್ನಡಿಗಳಂತಿರುವ ಬುದ್ಧಿಗಳಲ್ಲಿ ಮೂಡಿದಾಗ ಘಟಜ್ಞಾನ ಪಟಜ್ಞಾನ ಮುಂತಾದ ವೃತ್ತಿಜ್ಞಾನಗಳು ಹುಟ್ಟುತ್ತವೆ. ಗೋಡೆಯ ಮೇಲೆ ಬಿದ್ದ

ಮಂಡಲಾಕಾರದ ಪ್ರಕಾಶಗಳಿಗೆ ಸಮವಾದವು ಇವು. ಜಾಗ್ರತ್ಸ್ವಪ್ನಗಳಲ್ಲಿ ಈ ವೃತ್ತಿಜ್ಞಾನಗಳ ಮಧ್ಯದ ಅಂತರಾಳವನ್ನೂ ಸುಷುಪ್ತಿಯಲ್ಲಿ ಇವುಗಳ ಅಭಾವವನ್ನೂ ಬೆಳಗತಕ್ಕವನು ಕೂಟಸ್ಥನೆಂದು ವಿವೇಚಿಸಿ ತಿಳಿದುಕೊಳ್ಳಬೇಕು (೩). ಘಟದ ಜ್ಞಾನವಾದಾಗ ಬುದ್ಧಿಯು ಘಟದ ಆಕಾರವನ್ನೇ ತಳೆದಂತೆ ಇರುತ್ತದೆ. ಆ ಬುದ್ಧಿಯಲ್ಲಿರುವ ಚಿದಾಭಾಸನು ಆಗ ಘಟವನ್ನು ಮಾತ್ರ ಬೆಳಗುತ್ತಾನೆ. ಆಗ ಘಟವನ್ನು ತಿಳಿದೆನು ಎಂಬ ವ್ಯವಹಾರಬರುತ್ತದೆ. ಈ ವ್ಯವಹಾರವು ಬರುವುದಕ್ಕೆ ಕಾರಣವಾದದ್ದು ಘಟದಲ್ಲಿರುವ ಜ್ಞಾತತಾ ಎಂಬ ಧರ್ಮ. ಈ ಧರ್ಮವನ್ನು ಬೆಳಗತಕ್ಕದ್ದು ಯಾವುದು? - ಎಂದರೆ - ಯಾವುದರಿಂದ ಈ ಧರ್ಮವು ತಿಳಿದುಬರುತ್ತದೆ? ಅದು ಘಟದ ಕಲ್ಪನೆಗೆ ಅಧಿಷ್ಠಾನವಾದ ಬ್ರಹ್ಮಚೈತನ್ಯದಿಂದ ತಿಳಿದುಬರುತ್ತದೆ !(೪). 'ಘಟವನ್ನು ತಿಳಿದಿರಲಿಲ್ಲ, ಈಗ ತಿಳಿದೆನು' ಎಂಬ ವ್ಯವಹಾರ ಉಂಟಷ್ಟೆ? ತಿಳಿಯುವುದಕ್ಕೆ ಮೊದಲು ಘಟದಲ್ಲಿ ಅಜ್ಞಾತತಾ ಎಂಬ ಧರ್ಮವಿತ್ತು. ಅಜ್ಞಾತತಾರೂಪದಲ್ಲಿ ಅದನ್ನು ಪ್ರಕಾಶಪಡಿಸಿದ್ದು ಬ್ರಹ್ಮಚೈತನ್ಯ. ಬುದ್ಧಿಯ ಸಂಬಂಧವಾಗುವುದಕ್ಕೆ ಮೊದಲು ಹಾಗಿತ್ತು. ಬುದ್ಧಿಯ ಸಂಬಂಧವು ಘಟಕ್ಕೆ ಆದಮೇಲೆ 'ತಿಳಿದೆನು' ಎಂಬ ವ್ಯವಹಾರ ಬರುತ್ತದೆ. ಆಗ ಘಟದಲ್ಲಿರುವ ಜ್ಞಾತತಾರೂಪಧರ್ಮವನ್ನು ಚೈತನ್ಯವೇ ಪ್ರಕಾಶಪಡಿಸುತ್ತದೆ. ಏವಂಚ ಘಟದಲ್ಲಿ ಅಜ್ಞಾತತಾ - ಜ್ಞಾತತಾಗಳ ಭೇದವನ್ನು ಸಿದ್ಧಿಸುವುದಕ್ಕಾಗಿ ನಡುವೆ ಬುದ್ಧಿಯನ್ನು ಅವಶ್ಯವಾಗಿ ಒಪ್ಪಬೇಕು. ತಾತ್ಪರ್ಯವೇನೆಂದರೆ, ಘಟವು ಇದ್ದೇ ಇರುತ್ತದೆ. ಅದನ್ನು ತಿಳಿಯುತ್ತೇನೆ, ತಿಳಿದೆನು - ಎಂಬ ವ್ಯವಹಾರವು ಮಾತ್ರ ಬುದ್ಧಿಯ ಸಂಬಂಧವಿಲ್ಲದೆ ಆಗುವುದಿಲ್ಲ, ಆದ್ದರಿಂದ ಬುದ್ಧಿ (ಅಂತಃಕರಣ) ಎಂಬ ಒಂದು ವಸ್ತುವನ್ನು ಅಂಗೀಕರಿಸಬೇಕು. ಬ್ರಹ್ಮ ಚೈತನ್ಯವೇ 'ತಿಳಿದೆನು' ಎಂಬುದಕ್ಕೆ ಕಾರಣವಾಗಲಾರದು. ಆಗ ಘಟದಲ್ಲಿ ಅಜ್ಞಾತತಾ - ಜ್ಞಾತತಾ ಎಂಬ ಎರಡು ಭೇದಗಳಾಗುವುದಕ್ಕೆ ನಿಮಿತ್ತವಿಲ್ಲದೆ ಹೋಗುತ್ತದೆ (೫). ಒಂದೇ ಘಟದಲ್ಲಿ ಜ್ಞಾತತಾ - ಅಜ್ಞಾತತಾ ಎಂಬ ಎರಡು ವಿರುದ್ಧಧರ್ಮಗಳಿಗೆ ನಿಮಿತ್ತವಾದದ್ದು ಯಾವುದು - ಎಂಬುದನ್ನೀಗ ತಿಳಿಸಬೇಕಾಗಿದೆ. ಚಿದಾಭಾಸವೆಂದರೆ ಚಿತ್‌ಪ್ರತಿಬಿಂಬ. ತುದಿಯಲ್ಲಿ ಲೋಹದ ಅಲಗುಳ್ಳ ಭಲ್ಲೆಯಂತೆ, ಚಿದಾಭಾಸವನ್ನು ಮುಂದೆ ಮಾಡಿಕೊಂಡ ಧೀವೃತ್ತಿಗೆ ಜ್ಞಾನವೆಂದು ಹೆಸರು. ಧೀವೃತ್ತಿಯೆಂದರೆ ಬುದ್ಧಿಯ ವ್ಯಾಪಾರ. ಇಂತಹ ಸ್ಫೂರ್ತಿಯಿಲ್ಲದೆ ಜಡವಾದದ್ದು ಅಜ್ಞಾನ. ಜ್ಞಾನದಿಂದ ಘಟವು ವ್ಯಾಪ್ತವಾದಾಗ ಜ್ಞಾತವೆನಿಸುತ್ತದೆ.

ಅಜ್ಞಾನದಿಂದ ಆವೃತವಾದಾಗ ಅಜ್ಞಾತವೆನಿಸುತ್ತದೆ (೬). ಶಂಕೆ- ಅಜ್ಞಾತವಾದ ಘಟದ ಅಜ್ಞಾತತೆಯು ಚೈತನ್ಯಭಾಸ್ಯವೆನ್ನುವುದನ್ನು ಒಪ್ಪಬಹುದು. ಇಲ್ಲದಿದ್ದರೆ ಅದು ಭಾಸ್ಯವಾಗುವುದೇ ಇಲ್ಲ. ಆದರೆ ಬುದ್ಧಿಯಿಂದ ಭಾಸಿತವಾದ ಘಟದ ಜ್ಞಾತತೆಯನ್ನು ಬುದ್ಧಿಯೇ ಅರಿಯುವುದರಲ್ಲಿ ಬಾಧೆಯೇನು? ಜ್ಞಾತತೆಯು ಚೈತನ್ಯಭಾಸ್ಯವೆಂದೇಕೆ ಹೇಳಬೇಕು? ಉತ್ತರ - ಹಾಗಲ್ಲ; ಚಿದಾಭಾಸವು (ಬುದ್ಧಿವೃತ್ತಿಯಾದ ಜ್ಞಾನವು) ಘಟದಲ್ಲಿ ಜ್ಞಾತತ್ತ್ವವನ್ನು (ಘಟವಿಷಯಕ ಜ್ಞಾನವನ್ನು) ಹುಟ್ಟಿಸಿದೊಡನೆ ಉಪಕ್ಷೀಣವಾಗಿ ಬಿಡುತ್ತದೆ. ಅಜ್ಞಾನವು ಘಟದಲ್ಲಿ ಅಜ್ಞಾತತೆಯನ್ನು ಉಂಟುಮಾಡಿ ನಿವೃತ್ತವಾಗುತ್ತದೆ. ಅನಂತರ ಅಜ್ಞಾತತೆಯನ್ನು ಚೈತನ್ಯವೇ ತೋರಿಸುತ್ತದೆ. ಅಂತೆಯೇ ಜ್ಞಾನವು ಘಟದಲ್ಲಿ ಜ್ಞಾತತೆಯನ್ನುಂಟುಮಾಡಿ ನಿವೃತ್ತವಾಗುತ್ತದೆ. ಅನಂತರ ಜ್ಞಾತತೆಯನ್ನು ಚೈತನ್ಯವೇ ತೋರಿಸುತ್ತದೆ (೭). ಆಭಾಸರಹಿತವಾದ ಬುದ್ಧಿಯು ಘಟದಲ್ಲಿ ಜ್ಞಾತತೆಯನ್ನು (ಘಟಜ್ಞಾನವನ್ನು) ಉತ್ಪತ್ತಿಮಾಡಲಾರದು. ವಿಕಾರಿಯಾದ ಬುದ್ಧಿಗೂ ಮಣ್ಣಿಗೂ ಇರುವ ವ್ಯತ್ಯಾಸವೇನು? ಚಿದಾಭಾಸವಿಲ್ಲದ ಬುದ್ಧಿಯು ಮಣ್ಣಿನ ಗಡಿಗೆಯಂತೆ ಜಡವಾದದ್ದು, ಪ್ರಕಾಶರಹಿತವಾದದ್ದು (೮). ಮಣ್ಣನ್ನು ಗಡಿಗೆಗೆ ಸುತ್ತಲೂ ಮೆತ್ತಿದರೆ ಗಡಿಗೆಯ ಜ್ಞಾನವಾಯಿತು ಎಂದು ಯಾರೂ ಹೇಳುವುದಿಲ್ಲ. ಹಾಗೆ ಬುದ್ಧಿಯಿಂದ ಗಡಿಗೆಯು ವ್ಯಾಪ್ತವಾದ ಮಾತ್ರಕ್ಕೆ ಗಡಿಗೆಯು ಜ್ಞಾತವಾಯಿತೆನ್ನುವುದನ್ನು ಯಾರೂ ಒಪ್ಪಲಾರರು (೯).

ಕೇವಲ ಬುದ್ಧಿಯು ಘಟವನ್ನು ತಿಳಿಯಲಾರದು. ಆದ್ದರಿಂದ ಘಟದಲ್ಲಿ ಜ್ಞಾತತ್ವವು (ಘಟಜ್ಞಾನವು) ಚಿದಾಭಾಸವೆಂಬ ಫಲದ ಉತ್ಪತ್ತಿಯಾಗಿದೆ. ಬ್ರಹ್ಮಚೈತನ್ಯವು ಫಲವಲ್ಲ. ಪ್ರಮಾಣವು ಪ್ರವೃತ್ತವಾದ ಮೇಲೆ ಕಣ್ಣು ಗಡಿಗೆಯನ್ನು ನೋಡಿದ ಮೇಲೆ ಆಗತಕ್ಕದ್ದು ಫಲ. ಬ್ರಹ್ಮಚೇತನ್ಯವು ಪ್ರಮಾಣ ಪ್ರವೃತ್ತಿಗೂ ಪೂರ್ವದಲ್ಲಿಯೂ ಅನಂತರವೂ ಸದಾ ಇರತಕ್ಕದ್ದು. ಆದ್ದರಿಂದ ಫಲವಲ್ಲ (೧೦). ಶಂಕೆ - ಚಿದಾಭಾಸವು ಫಲವೆಂದೂ ಚೈತನ್ಯವು ಫಲವಲ್ಲವೆಂದೂ ಹೇಳಿದರೆ ವಾರ್ತಿಕಕಾರರಾದ ಶ್ರೀಸುರೇಶ್ವರರ ಈ ವಾರ್ತಿಕಕ್ಕೆ ವಿರುದ್ಧವಾಗುವುದಿಲ್ಲವೆ? **'ಪರಾಗರ್ಥ ಪ್ರಮೇಯೇಷು'** ಎಂಬ ಈ ವಾರ್ತಿಕದ ಅರ್ಥವು ಹೀಗೆ - ''ಬಾಹ್ಯವಾದ ಘಟಪಟಾದಿಗಳು ಪ್ರಮಾಣ ಗೋಚರವಾಗಿ ಪ್ರಮೇಯಗಳಾದಾಗ ಯಾವ ಜ್ಞಾನವು ಪ್ರಮಾಣದ ಫಲವೆಂದು ಸಂಮತವೋ ಅದು ಈ ವೇದಾಂತಶಾಸ್ತ್ರದಲ್ಲಿ ಪ್ರಮೇಯವೆಂದು ತಿಳಿಯಬೇಕು. ವೇದಾಂತವಾಕ್ಯಗಳೆಂಬ ಪ್ರಮಾಣದಿಂದ ತಿಳಿಯಬೇಕಾದದ್ದು.''

ಇಲ್ಲಿ ತಿಳಿಯಬೇಕಾದ ಜ್ಞಾನರೂಪಫಲವು ಯಾವುದು? ಚಿದಾಭಾಸವೋ? ಬ್ರಹ್ಮಚೈತನ್ಯವೋ? (೧೧). ಉತ್ತರ - ವಾರ್ತಿಕಕಾರರು ಇಲ್ಲಿ 'ಸಂವಿತ್' ಎಂಬುದು ಫಲವೆಂದು ಹೇಳಿದ್ದಾರೆ. ಸಂವಿತ್ ಎಂದರೆ ಸಂವಿತ್ ಸದೃಶವಾದ ಚಿದಾಭಾಸವೆಂಬ ಅರ್ಥವೇ ವಾರ್ತಿಕಕಾರರಿಗೆ ಸಂಮತವಾದದ್ದು. ಏಕೆಂದರೆ ಅವರ ಗುರುಗಳಾದ ಶ್ರೀಶಂಕರಾಚಾರ್ಯರು ಉಪದೇಶಸಹಸ್ರಿಯಲ್ಲಿ ಬ್ರಹ್ಮಚೈತನ್ಯವೂ ಫಲವೂ ಬೇರೆ ಬೇರೆಯೆಂದು ತಿಳಿಸಿದ್ದಾರೆ (೧೨). ಬ್ರಹ್ಮಚೈತನ್ಯ ಫಲಗಳಿಗೆ ಭೇದವಿದೆಯಾದ್ದರಿಂದ ಘಟದಲ್ಲುಂಟಾದ ಫಲವು ಚಿದಾಭಾಸವೇ. ಅದು ಘಟದಲ್ಲಿ ಜ್ಞಾತತ್ವವನ್ನು ಹುಟ್ಟಿಸುತ್ತದೆ. ಅಜ್ಞಾತತ್ವವನ್ನು ಪ್ರಕಾಶಿಸಿದಂತೆ ಈ ಜ್ಞಾತತ್ವವನ್ನು ಪ್ರಕಾಶಪಡಿಸತಕ್ಕದ್ದು ಬ್ರಹ್ಮಚೈತನ್ಯವೇ (೧೩). ಏವಂಚ ಈಗ ಏನಾಯಿತೆಂದರೆ - ಬುದ್ಧಿಯ ವೃತ್ತಿ, ಚಿದಾಭಾಸ, ಘಟ - ಇವು ಮೂರನ್ನೂ ಬ್ರಹ್ಮಚೈತನ್ಯವು ಪ್ರಕಾಶಿಸುತ್ತದೆ. ಚಿದಾಭಾಸವು ಕೇವಲ ಘಟ ನಿಷ್ಠಫಲರೂಪವಾದ್ದರಿಂದ, ಅದು ಪ್ರಕಾಶಪಡಿಸತಕ್ಕದ್ದು ಘಟವನ್ನು ಮಾತ್ರ (೧೪). ಒಟ್ಟಿನಲ್ಲಿ ಘಟವನ್ನು ಬ್ರಹ್ಮಚೈತನ್ಯ, ಚಿದಾಭಾಸ - ಇವೆರಡೂ ಪ್ರಕಾಶಿಸುವುದರಿಂದ ಅದರಲ್ಲಿ ಜ್ಞಾತವಾಯಿತೆಂಬುದು ದ್ವಿಗುಣವಾಗಿ ತೋರುತ್ತದೆ. ಈ ಜ್ಞಾತತೆಯನ್ನು ಪ್ರಕಾಶಪಡಿಸುವ ಚೈತನ್ಯವನ್ನೇ ತಾರ್ಕಿಕರು ಅನುವ್ಯವಸಾಯವೆಂಬ ಜ್ಞಾನಾಂತರವೆಂದು ಹೇಳುತ್ತಾರೆ (೧೫). ಚಿದಾಭಾಸದ ಅನುಗ್ರಹದಿಂದ 'ಇದು ಘಟ' ಎಂಬ ವ್ಯವಹಾರವು ಬರುತ್ತದೆ. ಅನಂತರ ಘಟವು ತಿಳಿಯಿತು ಎಂಬ ಜ್ಞಾತತೆಯು ಬ್ರಹ್ಮಚೈತನ್ಯದ ಅನುಗ್ರಹದಿಂದ ಬರುತ್ತದೆ (೧೬). ಈ ಪ್ರಕಾರವಾಗಿ ದೇಹದ ಹೊರಗಡೆ ಬ್ರಹ್ಮ ಮತ್ತು ಚಿದಾಭಾಸಗಳು ಹೇಗೆ ವಿವೇಚಿತವಾದವೋ ಹಾಗೆಯೇ ದೇಹದೊಳಗೂ ಇವೆರಡನ್ನೂ ವಿವೇಚಿಸಿ ತಿಳಿಯಬೇಕು (೧೭). ದೇಹದ ಹೊರಗೆ ಪೂರ್ವೋಕ್ತರೀತಿಯಲ್ಲಿ ಘಟಾಕಾರವೃತ್ತಿಯು ಚಿದಾಭಾಸದಿಂದ ವ್ಯಾಪ್ಯವಾಗಿರುವಂತೆ, ದೇಹದ ಒಳಗೂ ಸಹ ಕಾಮಕ್ರೋಧಾದಿ ಬುದ್ಧಿವೃತ್ತಿಗಳು ಚಿದಾಭಾಸದಿಂದ ವ್ಯಾಪ್ಯವಾಗಿರುತ್ತವೆ. ಕಾಯಿಸಿದ ಕಬ್ಬಿಣದಬೆಂಕಿ ಇದ್ದಂತೆ ಚಿದಾಭಾಸವಿರುತ್ತದೆ (೧೮). ಬಿಸಿಯಾದ ಕಬ್ಬಿಣವು ತನ್ನನ್ನು ಮಾತ್ರ ಪ್ರಕಾಶಿಸುತ್ತದೆಯೇ ಹೊರತು ಇನ್ನೊಂದನ್ನು ಪ್ರಕಾಶಪಡಿಸುವುದಿಲ್ಲ. ಅಂತೆಯೇ ದೇಹದೊಳಗಿನ ಅಹಂ, ಕಾಮ, ಕ್ರೋಧ - ಮುಂತಾದ ವೃತ್ತಿಗಳು ತಮ್ಮನ್ನು ಮಾತ್ರ ತೋರಿಸಿಕೊಳ್ಳುತ್ತವೆ (೧೯). ಹೀಗೆ ಕಾಮಾದಿವೃತ್ತಿಗಳೂ ಒಂದಾದಮೇಲೆ ಇನ್ನೊಂದರಂತೆ ಹುಟ್ಟುತ್ತವೆ. ಇವೆಲ್ಲವೂ ಸುಷುಪ್ತಿ, ಮೂರ್ಛೆ, ಸಮಾಧಿಗಳಲ್ಲಿ ಒಂದೂ ಕಾಣದಂತೆ ವಿಲೀನವಾಗಿ ಬಿಡುತ್ತವೆ (೨೦).

ಕಾಮಕ್ರೋಧಾದಿಸಕಲಧೀವೃತ್ತಿಗಳ ಸಂಧಿಗಳೂ (ನಡುವಿನ ಸ್ಥಿತಿಗಳೂ) ಈ ಧೀವೃತ್ತಿಗಳ ಅಭಾವಗಳೂ ನಿರ್ವಿಕಾರವಾದ ಯಾವ ಸಾಕ್ಷಿಯಿಂದ ಭಾಸಿತವಾಗುತ್ತವೋ ಅದಕ್ಕೆ ಕೂಟಸ್ಥನೆಂದು ಹೆಸರಿದೆ (೨೧). ಹೀಗೆ ಘಟ ಮಾತ್ರವನ್ನು ಪ್ರಕಾಶಗೊಳಿಸುವ ಚಿದಾಭಾಸ, ಘಟದ ಜ್ಞಾತತೆಯನ್ನು ಪ್ರಕಾಶಪಡಿಸುವ ಬ್ರಹ್ಮಚೈತನ್ಯ ಎಂದು ಘಟದಲ್ಲಿ ದ್ವಿಗುಣಚೈತನ್ಯದ ಪ್ರಕಾಶ ಉಂಟು. ಹೀಗೆಯೇ ಧೀವೃತ್ತಿಗಳಲ್ಲಿಯೂ ದ್ವಿಗುಣಚೈತನ್ಯವಿರುವುದರಿಂದ ಅವುಗಳ ಪ್ರಕಾಶವು ಸಂಧಿ ಪ್ರಕಾಶಕ್ಕಿಂತ ಅಧಿಕವಾಗಿದೆ. ಚಿದಾಭಾಸಸಹಿತವಾದ ಬುದ್ಧಿಯಲ್ಲಿ ವೃತ್ತಿಗಳು ಹುಟ್ಟುವುದರಿಂದ ಈ ವೃತ್ತಿಗಳಲ್ಲಿ ಚಿದಾಭಾಸಚೈತನ್ಯ ಒಂದು, ವೃತ್ತಿಗಳು ಪ್ರಕಾಶಗಳಾದ್ದರಿಂದ ಕೂಟಸ್ಥಚೈತನ್ಯ ಒಂದು - ಹೀಗೆ ಚೈತನ್ಯದ್ವಯವು ಧೀವೃತ್ತಿಗಳಲ್ಲಿದೆಯೆಂದು ತಿಳಿಯಬೇಕು (೨೨). ಘಟದಲ್ಲಿ ಜ್ಞಾತತಾ - ಅಜ್ಞಾತತಾಗಳಿರುವಂತೆ ಈ ವೃತ್ತಿಗಳಲ್ಲಿ ಇಲ್ಲವೊ? ಇಲ್ಲ; ಏಕೆಂದರೆ, ಜ್ಞಾತತೆಯು ಜ್ಞಾನದಿಂದಲೂ ಅಜ್ಞಾತತೆಯು ಅಜ್ಞಾನದಿಂದಲೂ ವ್ಯಾಪ್ತವಾಗಿರಬೇಕು. ವೃತ್ತಿಗಳಲ್ಲಿ ಹಾಗಿಲ್ಲ. ವೃತ್ತಿಗಳೆಲ್ಲವೂ ಸ್ವಯಂಪ್ರಕಾಶಗಳಾದ್ದರಿಂದ ಜ್ಞಾನಕ್ಕೆ ವಿಷಯಗಳಾಗುವುದಿಲ್ಲ. ಅವು ಉತ್ಪನ್ನವಾಗುತ್ತಿದ್ದಂತೆಯೇ ಅವುಗಳ ಅಜ್ಞಾನವು ನಷ್ಟವಾಗಿಬಿಡುತ್ತದೆಯಾದ್ದರಿಂದ ಅಜ್ಞಾತತೆಯೂ ಉಳಿಯುವುದಿಲ್ಲ. ಆದ್ದರಿಂದ ವೃತ್ತಿಗಳ ಜ್ಞಾತತಾ- ಅಜ್ಞಾತತಾಗಳೊಡನೆ ಕೂಟಸ್ಥನ ಸಂಬಂಧವಿಲ್ಲ(೨೩). ಈ ಪ್ರಕಾರದಲ್ಲಿರುವ ಎರಡು ಚೈತನ್ಯಗಳಲ್ಲಿ ಯಾವುದು ಹುಟ್ಟು, ಸಾವುಗಳನ್ನು ಅನುಭವಿಸುತ್ತದೆಯೋ ಅದು (ಚಿದಾಭಾಸ) ಕೂಟಸ್ಥವಲ್ಲ. ಅವುಗಳಲ್ಲಿ ಅವಿಕಾರಿಯಾದ ಚೈತನ್ಯವು ಕೂಟಸ್ಥವೆನಿಸುತ್ತದೆ (೨೪). ಪೂರ್ವಾಚಾರ್ಯರಾದ ಶ್ರೀಶಂಕರಭಗವತ್ಪಾದರು ಉಪದೇಶಸಾಹಸ್ರಿಯಲ್ಲಿ ಕೂಟಸ್ಥನ ಲಕ್ಷಣವನ್ನು ಹೀಗೆ ಹೇಳಿದ್ದಾರೆ -

**ಅಂತಃಕರಣತದ್ವೃತ್ತಿಸಾಕ್ಷೀ ಚೈತನ್ಯವಿಗ್ರಹಃ ।**
**ಆನಂದರೂಪಃ ಸತ್ಯಃ ಸನ್ ಕಿಂ ನಾತ್ಮಾನಂ ಪ್ರಪದ್ಯಸೇ ॥**

ಇದು ಕೂಟಸ್ಥನ ನಿಶ್ಚಿತ ಸ್ವರೂಪ. ''ಅಂತಃಕರಣಕ್ಕೂ ಅದರ ನಾನಾ ವೃತ್ತಿಗಳಿಗೂ ಸಾಕ್ಷಿಯಾಗಿ ಕೇವಲ ಚೈತನ್ಯನೂ ಆನಂದ ಸ್ವರೂಪನೂ ಸತ್ಯನೂ ಸತ್‌ಸ್ವರೂಪನೂ ಆಗಿರುವ ನಿನ್ನನ್ನು ನೀನೇಕೆ ಸೇರಿಕೊಳ್ಳಬಾರದು?'' ಎಂದು ಈ ಶ್ಲೋಕದ ಅರ್ಥ (೨೫). ಚಿದಾಭಾಸನು ಪ್ರಮಾಣಸಿದ್ಧನಾಗಿದ್ದಾನೆ. ಕನ್ನಡಿಯಲ್ಲಿ ಮುಖವನ್ನು ನೋಡಿಕೊಂಡಾಗ ಮುಖ, ಮುಖಾಭಾಸ (ಪ್ರತಿಬಿಂಬ),

ಅದಕ್ಕೆ ಆಶ್ರಯವಾದ ಕನ್ನಡಿ - ಇವು ಮೂರು ಪ್ರತ್ಯಕ್ಷವಾಗಿ ಕಂಡುಬರುತ್ತವೆ. ಹಾಗೆಯೇ ಶಾಸ್ತ್ರ ಯುಕ್ತಿಗಳ ಬಲದಿಂದ ಆತ್ಮನಾದ ಕೂಟಸ್ಥ ಚಿದಾಭಾಸ, ಅದಕ್ಕೆ ಆಶ್ರಯವಾದ ಅಂತಃಕರಣ - ಇವು ಮೂರೂ ಇವೆಯೆಂದು ನಿಶ್ಚಿತವಾಗುತ್ತದೆ. ಉಪದೇಶಸಾಹಸ್ರಿಯಲ್ಲಿ ಆಚಾರ್ಯರು ಹೀಗೆ ವರ್ಣಿಸಿದ್ದಾರೆ. **ರೂಪಂ ರೂಪಂ ಪ್ರತಿರೂಪೋ ಬಭೂವ** (ಬೃ.ಉ.೨-೫-೧೯)-ಎಂದು ಉಪನಿಷತ್ತು ಚಿದಾಭಾಸವನ್ನೇ ಪ್ರತಿಪಾದಿಸಿದೆ. ಕೂಟಸ್ಥನು ವಿಕಾರಿಯಲ್ಲ, ಚಿದಾಭಾಸನು ವಿಕಾರಿ - ಎಂಬುದು ಯುಕ್ತಿ (೨೬). ಚಿದಾಭಾಸಕಲ್ಪನೆ ಪ್ರತಿಬಿಂಬವಾದವನ್ನು ಅನುಸರಿಸಿ ಬಂದದ್ದು. ಅವಚ್ಛೇದವಾದಿಯು ಇದನ್ನು ಒಪ್ಪುವುದಿಲ್ಲ. ಆತನು ಹೇಳುವುದೇನೆಂದರೆ, ಪ್ರತಿವಾದಿ - ಅಂತಃಕರಣಾವಚ್ಛಿನ್ನ ಕೂಟಸ್ಥನೇ ಜೀವನೆಂದರೆ ಸಾಕಾಗುತ್ತದೆ. ಕೂಟಸ್ಥನಿಗೆ ಗಮನಾಗಮನಗಳಿಲ್ಲ, ಜೀವನಿಗೆ ಉಂಟು - ಎಂದರೆ, ಘಟಾವಚ್ಛಿನ್ನ ಆಕಾಶಕ್ಕೆ ಗಮನಾಗಮನಗಳನ್ನು ಹೇಗೆ ಒಪ್ಪುತ್ತೇವೋ ಹಾಗೆ ಅಂತಃಕರಣಾವಚ್ಛಿನ್ನನಾದ ಕೂಟಸ್ಥನಿಗೂ ಕಾಲ್ಪನಿಕವಾದ - ಎಂದರೆ - ಔಪಾಧಿಕವಾದ ಗಮನಾಗಮನಗಳನ್ನು ಒಪ್ಪಬಹುದು. ಚಿದಾಭಾಸನ ಕಲ್ಪನೆ ಎಂದರೆ - ಪ್ರತಿಬಿಂಬವಾದವು ಅನಾವಶ್ಯಕ ಎಂದು ಅಭಿಪ್ರಾಯ (೨೭). ವಾದಿ - ಹಾಗಲ್ಲ; ಅಸಂಗನಾದ ಕೂಟಸ್ಥನು ಪರಿಚ್ಛೇದ ಮಾತ್ರದಿಂದ ಜೀವನಾಗಿಬಿಡುವುದಾದರೆ, ಘಟಕುಡ್ಯಾದಿಗಳಿಂದ ಪರಿಚ್ಛಿನ್ನವಾದ್ದರಿಂದ ಆತ್ಮನು ಜೀವನೆನ್ನಬೇಕಾದೀತು (೨೮). ಪ್ರತಿವಾದಿ - ಹಾಗಲ್ಲ; ಬುದ್ಧಿಯು (ಅಂತಃಕರಣವು) ಸ್ವಚ್ಛವಾದದ್ದು. ಘಟಕುಡ್ಯಗಳು ಸ್ವಚ್ಛವಲ್ಲ. ಆದ್ದರಿಂದ ಈ ಆಪಾದನೆ ಸರಿಯಲ್ಲ. ಅವಚ್ಛೇದವಾದವೇ ಸರಿಯಾಗಿದೆ. ವಾದಿ - ನಿಮ್ಮ ಹೇಳಿಕೆ ಸರಿಯಲ್ಲ. ಪರಿಚ್ಛೇದಕವು ಸ್ವಚ್ಛವಾದರೇನು? ಮಲಿನವಾಗಿದ್ದರೇನು? ಘಟಪರಿಚ್ಛಿನ್ನ ಕೂಟಸ್ಥನು ಜೀವನಾಗಲಿ (೨೯). ಅಕ್ಕಿ ಮೊದಲಾದ ಧಾನ್ಯವನ್ನು ಮರದ ಸೇರಿನಿಂದ ಅಳೆದರೇನು? ಕಂಚಿನ ಸೇರಿನಿಂದ ಅಳೆದರೇನು? ಅಕ್ಕಿಯ ಅಳತೆ ಹೆಚ್ಚುಕಡಿಮೆಯಾಗುತ್ತದೆಯೆ? (೩೦). ಇದಕ್ಕೆ ಅವಚ್ಛೇದ ವಾದಿಯ ಉತ್ತರ ''ಅಕ್ಕಿಯ ಅಳತೆಯಲ್ಲಿ ವ್ಯತ್ಯಾಸವಾಗದಿರಬಹುದು. ಕಂಚಿನಲ್ಲಿ ಪ್ರತಿಬಿಂಬ ಬೀಳುತ್ತದೆ. ಮರದಲ್ಲಿ ಪ್ರತಿಬಿಂಬ ಬೀಳುತ್ತದೆಯೆ? ಆದ್ದರಿಂದ ಪರಿಚ್ಛೇದಕದಲ್ಲಿ ವಿಶೇಷವನ್ನೊಪ್ಪ ಬೇಕು. ಬುದ್ಧಿಯಿಂದ ಪರಿಚ್ಛಿನ್ನನಾದ ಕೂಟಸ್ಥನು ಜೀವ. ಇತರ ವಸ್ತುಗಳಿಂದ ಪರಿಚ್ಛಿನ್ನನಾದರೆ ಜೀವವಲ್ಲ''. ಅದಕ್ಕೆ ಪ್ರತಿಬಿಂಬವಾದಿಯ ಉತ್ತರ ಹೀಗೆ- ಪ್ರತಿಬಿಂಬವನ್ನೊಪ್ಪುವುದಾದರೆ.

ಬುದ್ಧಿಯಲ್ಲಿ ಆದ ಪ್ರತಿಬಿಂಬವೇ ಜೀವವೆಂದು ನೀನೇ ಒಪ್ಪಿದಂತಾಯಿತು! (೩೧) ಹೇಗೆಂದರೆ, ಆಭಾಸವೆಂದರೆ ಏನು? ಆ = ಸ್ವಲ್ಪ, ಭಾಸ = ಪ್ರಕಾಶ. ಪ್ರತಿಬಿಂಬವು ಮುಖದ ಸ್ವರೂಪವನ್ನು ಸ್ವಲ್ಪವಾಗಿಯೇ ತಿಳಿಸುತ್ತದೆ. ಬಿಂಬವಾದ ಮುಖದ ಲಕ್ಷಣಗಳೆಲ್ಲವೂ ಇಲ್ಲದಿದ್ದರೂ ಬಿಂಬದಂತೆ ತೋರುತ್ತದೆಯಾದ್ದರಿಂದ ಪ್ರತಿಬಿಂಬ ಎನ್ನಿಸಿದೆ. ಅದು ಬಿಂಬಾಭಾಸ. ಹಾಗೆಯೇ ಜೀವನು ಆತ್ಮಾಭಾಸ. ಅದೇ ಚಿದಾಭಾಸ (೩೨). ಕೂಟಸ್ಥನು ಅಸಂಗ, ಅವಿಕಾರಿ. ಚಿದಾಭಾಸನು ಸಸಂಗ, ವಿಕಾರಿ. ಹೀಗೆ ಬಿಂಬಲಕ್ಷಣವು ಚಿದಾಭಾಸನಲ್ಲಿಲ್ಲವಾದ್ದರಿಂದ ಇವನನ್ನು ಪ್ರತಿಬಿಂಬ ಎನ್ನುತ್ತೇವೆ. ಆದರೆ ಹೋಲಿಕೆ ಏನೆಂದರೆ, ಬಿಂಬದಂತೆ ಸ್ಫುರಿಸುವುದು (೩೩). ಆದ್ದರಿಂದ ಚಿದಾಭಾಸನೇ ಜೀವವೆಂದು ಪ್ರತಿಬಿಂಬವಾದವನ್ನು ಅಂಗೀಕರಿಸುವುದು ಯುಕ್ತವಾಗಿದೆ. ಇದರ ಮೇಲೆ ಇನ್ನೊಂದು ಪ್ರಶ್ನೆ ಹುಟ್ಟುತ್ತದೆ. ಮಣ್ಣು ಇದ್ದರೇ ಗಡಿಗೆ ಹುಟ್ಟುವುದರಿಂದ ಮಣ್ಣಿಗಿಂತ ಗಡಿಗೆ ಬೇರೆಯಲ್ಲ. ಅಂತೆಯೇ ಬುದ್ಧಿ ಇದ್ದರೇ ಚಿದಾಭಾಸವು ಹುಟ್ಟುವುದರಿಂದ ಚಿದಾಭಾಸವು ಬುದ್ಧಿಗಿಂತ ಅತಿರಿಕ್ತವಲ್ಲ, ಚಿದಾಭಾಸವೆಂಬುದನ್ನೇಕೆ ಒಪ್ಪಬೇಕು? ಹೀಗೆ ವಾದಿಸಿದರೆ ನಿನ್ನನ್ನೊಂದು ಪ್ರಶ್ನೆಯಿಂದ ಬಾಯಿ ಕಟ್ಟಿಸಬೇಕಾಗುತ್ತದೆ. ದೇಹವಿದ್ದರೇ ಬುದ್ಧಿ ಹುಟ್ಟುವುದರಿಂದ ದೇಹಾತಿರಿಕ್ತವಾದ ಬುದ್ಧಿಯನ್ನೇಕೆ ಒಪ್ಪಬೇಕು? (೩೪) ಪ್ರತಿವಾದಿ - ದೇಹವು ಸತ್ತು ನಾಶವಾದರೂ ಬುದ್ಧಿ ಉಳಿದಿರುತ್ತದೆ. ಇದು ಶಾಸ್ತ್ರಸಿದ್ಧ. ಆದ್ದರಿಂದ ಬುದ್ಧಿಯು ದೇಹಾತಿರಿಕ್ತ. ಹಾಗಾದರೆ ಬುದ್ಧಿಗಿಂತ ಬೇರೆಯಾದದ್ದು ಚಿದಾಭಾಸವೆನ್ನಲಡ್ಡಿಯಿಲ್ಲ. **'ತತ್ ಸೃಷ್ಟ್ವಾ ತದೇವಾನುಪ್ರಾವಿಶತ್'** (ತೈ..ಉ.೨-೬-೭) ಇತ್ಯಾದಿ ಶ್ರುತಿಸಿದ್ಧವಾದದ್ದು ಚಿದಾಭಾಸ (೩೫).

ಪ್ರವೇಶಿಸಿದ ಆತ್ಮನು ಬುದ್ಧಿಯುಕ್ತನಾಗಿಯೇ ಇದ್ದಿರಬೇಕೆಂಬ ಆಕ್ಷೇಪವೂ ಸಲ್ಲದು. ಐತರೇಯೋಪನಿಷತ್ತಿನಲ್ಲಿ ಬುದ್ಧಿಗೆ ಅತಿರಿಕ್ತನಾದ ಆತ್ಮನು ದೇಹದೊಳಗೆ ಹೋಗಲು ಸಂಕಲ್ಪಿಸಿ ಪ್ರವೇಶಿಸಿದನು - ಎಂದು ಹೇಳಿದೆ (೩೬). 'ಇಂದ್ರಿಯಗಳಿಂದ ಸಹಿತವಾದ ಈ ಜಡದೇಹವು ಚೇತನನಾದ ನಾನಿಲ್ಲದೆ ಹೇಗಿದ್ದೀತು!' ಎಂದು ಆಲೋಚಿಸಿ ಆತ್ಮನು ದೇಹದ ಮಸ್ತಕದ ಗೆರೆಯನ್ನು ಸೀಳಿ ಅದರೊಳಗೆ ಪ್ರವೇಶಿಸಿ ಸಂಸಾರವನ್ನು ಅನುಭವಿಸುತ್ತಿದ್ದಾನೆ (೩೭). ಅಸಂಗನಾದ ಆತ್ಮನು ನಿಷ್ಕ್ರಿಯನಾದ್ದರಿಂದ ದೇಹದೊಳಗೆ ಹೇಗೆ ಪ್ರವೇಶಿಸಿದ? - ಎಂದು ಕೇಳಿದರೆ, ಅಸಂಗನಾದ ಅವನು ಸೃಷ್ಟಿಯನ್ನು ಹೇಗೆ ಮಾಡಿದ?

ಎಂದು ತಿರುಗಿ ನಿನ್ನನ್ನು ಕೇಳುತ್ತೇನೆ. ಉತ್ತರ ಹೇಳು! ಸೃಷ್ಟಿಕರ್ತನು ಮಾಯಾವಿಯೆಂದು ಹೇಳಿದರೆ, ಪ್ರವೇಶಕರ್ತನೂ ಮಾಯಾವಿಯೆಂದೇ ನಾನೂ ಉತ್ತರಿಸುತ್ತೇನೆ ! ಆದ್ದರಿಂದ ಪ್ರವೇಶ, ಸೃಷ್ಟಿ ನಾಶ - ಇವೆಲ್ಲವೂ ಮಾಯಿಕವಾದ್ದರಿಂದ ಸಮಾನವಾದವು (೩೮). **'ಪ್ರಜ್ಞಾನಘನ ಏವೈತೇಭ್ಯೋ ಭೂತೇಭ್ಯಃ ಸಮುತ್ಥಾಯ ತಾನ್ಯೇವಾನುವಿನಶ್ಯತಿ । ನ ಪ್ರೇತ್ಯ ಸಂಜ್ಞಾಸ್ತಿ'** (ಬೃ.ಉ.೪-೫-೧೩) ಎಂಬ ಶ್ರುತಿಯ ಅಭಿಪ್ರಾಯ ಹೀಗೆ - ಮನುಷ್ಯನು ಮೃತನಾದಾಗ ಪ್ರಕೃಷ್ಟಜ್ಞಾನಘನನಾದ ಈ ಆತ್ಮನು ದೇಹೇಂದ್ರಿಯಾದಿ ರೂಪವಾಗಿರುವ ಪಂಚಭೂತಕಾರ್ಯಗಳೆಂಬ ಉಪಾಧಿಗಳಿಂದ ಮೇಲೆದ್ದು- ಎಂದರೆ- ಅವನ್ನು ತ್ಯಜಿಸಿ ದೇಹಾದಿಗಳು ನಷ್ಟವಾದೊಡನೆ ತಾನೂ ನಷ್ಟವಾಗುತ್ತಾನೆ - ಎಂದರೆ ಜೀವತ್ವಾಭಿಮಾನವನ್ನು ತೊರೆಯುತ್ತಾನೆ - ಎಂದು ಯಾಜ್ಞವಲ್ಕ್ಯರು ಮೈತ್ರೇಯಿಗೆ ಹೇಳಿದ್ದಾರೆ (೩೯). ಇದಿಷ್ಟು ಜೀವನ (ಚಿದಾಭಾಸನ) ವಿಷಯವಾಯಿತು. ಅನಂತರ **'ಅವಿನಾಶೀ ವಾ ಅರೇಽಯಮಾತ್ಮಾ ಅನುಚ್ಛಿತ್ತಿಧರ್ಮಾ'** (ಬೃ.ಉ.೪-೫-೧೪) ಎಂಬ ಶ್ರುತಿವಾಕ್ಯವಿದೆ. ''ಈ ಆತ್ಮನು ಶಾಶ್ವತನಾದವನು. ಈತನಿಗೆ ನಾಶವಿಲ್ಲ'' ಎಂಬುದು ಸೋಪಾಧಿಕ ಜೀವನಿಗಿಂತ ಭಿನ್ನನಾದ ಕೂಟಸ್ಥನ ವರ್ಣನೆ. ಆಮೇಲೆ **'ಮಾತ್ರಾ ಅಸಂಸರ್ಗಸ್ತ್ವಸ್ಯ ಭವತಿ'** ಎಂಬ ನುಡಿ ಇದೆ. ಮಾತ್ರಾ = ದೇಹೇಂದ್ರಿಯಾದಿಗಳು. ಇವುಗಳ ಸಂಸರ್ಗವು ಈತನಿಗಿಲ್ಲ - ಎಂದರ್ಥ. ಇದರಿಂದ ಕೂಟಸ್ಥನು ಅಸಂಗನೆಂದು ಸ್ಪಷ್ಟವಾಗುತ್ತದೆ (೪೦). ಆದರೆ **''ಜೀವಾಪೇತಂ ವಾವ ಕಿಲ ಇದಂ ಮ್ರಿಯತೇ ನ ಜೀವೋ ಮ್ರಿಯತೇ''**(ಛಾಂ. ಉ. ೬-೧೧-೩)ಎಂದು ಶ್ರುತಿಯಿದೆಯಲ್ಲವೆ? ಇದರಲ್ಲಿ ಜೀವರಹಿತವಾದ ದೇಹವು ನಾಶವಾಗುತ್ತದೆ. ಜೀವವು ನಾಶವಾಗುವುದಿಲ್ಲ'' ಎಂದು ಹೇಳಿರುವುದರಿಂದ ಸೋಪಾಧಿಕವಾದ ಜೀವವೂ ನಾಶರಹಿತವೆಂದು ಸಿದ್ಧವಾಗುತ್ತದೆ ಎಂದು ಆಕ್ಷೇಪಿಸಬಹುದು. ಹಾಗಲ್ಲ; ದೇಹವು ಸತ್ತರೆ ಜೀವನಿಗೆ ಮೋಕ್ಷವಾಗಿ ಬಿಡುವುದಿಲ್ಲ. ಜೀವನು ಸಾಯುವುದಿಲ್ಲವೆಂದರೆ ದೇಹಾಂತರವನ್ನು ಪಡೆಯುತ್ತಾನೆ- ಎಂಬುದರಲ್ಲಿ ತಾತ್ಪರ್ಯ (೪೧). ಜೀವನು ವಿನಾಶಿಯಾದರೆ 'ಅಹಂ ಬ್ರಹ್ಮಾಸ್ಮಿ' ಎಂಬ ಜ್ಞಾನವು ಹೇಗೆ ಬರುತ್ತದೆ? ವಿನಾಶಿ- ಅವಿನಾಶಿಗಳಿಗೆ ಸಾಮಾನಾಧಿಕರಣ್ಯವು (ಅಭೇದವು) ಬಾಧಿತವಾದದ್ದು- ಎಂಬ ಆಕ್ಷೇಪವು ಸರಿಯಲ್ಲ. ಉಭಯಾರ್ಥಗಳಿಗೆ ಬಾಧೆಯಿದ್ದರೂ ಸಾಮಾನಾಧಿಕರಣ್ಯವು ಬರಬಹುದು. 'ಈಗ ಜೀವನಾಗಿರುವ ನಾನು ವಸ್ತುತಃ ಬ್ರಹ್ಮವೇ' ಎಂಬ

ಜ್ಞಾನವು ಬರಲಡ್ಡಿಯಿಲ್ಲ(೪೨). ಹೇಗೆಂದರೆ, ದೂರದಲ್ಲಿರುವ ಒಂದು ವಸ್ತುವನ್ನು ನೋಡಿ ಒಬ್ಬನು ಮರದ ಬಡ್ಡೆಯೆಂದು ಭ್ರಮಿಸಿರುತ್ತಾನೆ. ಹತ್ತಿರ ಹೋದಾಗ ಆ ವಸ್ತು ಮನುಷ್ಯನೆಂದು ಗೊತ್ತಾಗುತ್ತದೆ. ಆಗ ''ಆ ಮರದ ಬಡ್ಡೆಯು ಮನುಷ್ಯ'' ಎಂಬ ಜ್ಞಾನ ಬರುತ್ತದೆ. ಇಲ್ಲಿ ಬಾಧೆಯಿದ್ದರೂ ಸಾಮಾನಾಧಿಕರಣ್ಯವಿದೆ. ಇದರಿಂದ ಮರದ ಬಡ್ಡೆ ಎಂಬ ಭ್ರಾಂತಜ್ಞಾನವು ನಿವೃತ್ತವಾಗುತ್ತದೆ. ಹೀಗೆಯೇ ''**ಅಹಂ ಬ್ರಹ್ಮಾಸ್ಮಿ**'' ಎಂಬಲ್ಲಿಯೂ ಬಾಧೆ ಯಿದ್ದರೂ ಸಾಮಾನಾಧಿಕರಣ್ಯವು ಬರುತ್ತದೆ. ಬ್ರಹ್ಮಜ್ಞಾನವಾದೊಡನೆ ನಾನು ಜೀವನೆಂಬ ಭ್ರಾಂತಿಯು ನಿವೃತ್ತವಾಗುತ್ತದೆ (೪೩). ನೈಷ್ಕರ್ಮ್ಯಸಿದ್ಧಿಯೆಂಬ ಗ್ರಂಥದಲ್ಲಿಯೂ ವಾರ್ತಿಕಕಾರರಾದ ಸುರೇಶ್ವರಾಚಾರ್ಯರು ಹೀಗ್ಗೆಯೇ ಬಾಧಾರ್ಥದಲ್ಲಿ ಸಾಮಾನಾಧಿಕರಣ್ಯವು ಬರುತ್ತದೆಯೆಂದು ಸ್ಪಷ್ಟವಾಗಿ ಹೇಳಿದ್ದಾರೆ. ಹಾಗೆಯೇ ಪ್ರಕೃತದಲ್ಲಿಯೂ 'ಅಹಂ ಬ್ರಹ್ಮಾಸ್ಮಿ' ಎಂಬಲ್ಲಿ ಅದು ಬರಬಹುದು (೪೪). 'ಸರ್ವಂ ಖಲ್ವಿದಂ ಬ್ರಹ್ಮ' ಎಂದು ಉಪನಿಷತ್ತಿನಲ್ಲಿಯೇ ಇದೆ. ಜಗತ್ತಿಗೂ ಬ್ರಹ್ಮಕ್ಕೂ ಸಾಮಾನಾಧಿಕರಣ್ಯವು ಬಾಧಿತ-ವಾಗಿದೆಯಲ್ಲವೆ? ಆದರೂ ಸಾಮಾನಾಧಿಕಿರಣ್ಯವು ಬಂದಿದೆ. ಹಾಗೆಯೇ 'ಅಹಂ ಬ್ರಹ್ಮ' ಎಂಬಲ್ಲಿಯೂ ಜೀವನಿಗೂ ಬ್ರಹ್ಮಕ್ಕೂ ಸಾಮಾನಾಧಿಕರಣ್ಯವು ಬರುತ್ತದೆ (೪೫). ಹಾಗಾದರೆ ವಿವರಣಕಾರರು ಬಾಧಾಸಹಿತಸಾಮಾನಾಧಿ ಕರಣ್ಯವನ್ನೇಕೆ ನಿರಾಕರಿಸಿದ್ದಾರೆ? ಏಕೆಂದರೆ, **'ಅಹಂ ಬ್ರಹ್ಮಾಸ್ಮಿ'** ಎಂಬ ವಾಕ್ಯದಲ್ಲಿ 'ಅಹಂ' ಶಬ್ದದಿಂದ ಕೂಟಸ್ಥನನ್ನು ಸ್ವೀಕರಿಸುತ್ತಾರೆ. ಆಗ ಬಾಧೆಯಿಲ್ಲದೆಯೇ ಸಾಮಾನಾಧಿಕರಣ್ಯವು ಸಿದ್ದಿಸುತ್ತದೆಯೆಂದು ಅವರ ಆಶಯವಾಗಿದೆ (೪೬). **'ತತ್‌ತ್ವಮಸಿ'** ಎಂಬ ವಾಕ್ಯದಲ್ಲಿ 'ತ್ವಂ' ಪದವು ಬುದ್ಧ್ಯಾದಿಗಳಿಂದ ವಿವೇಚಿತವೂ 'ತ್ವಂ' ಪದ ಲಕ್ಷ್ಯವೂ ಆದ ಕೂಟಸ್ಥನನ್ನೇ ಬೋಧಿಸುತ್ತದೆ. ಸಚ್ಚಿದಾನಂದಸ್ವರೂಪವಾದ ಬ್ರಹ್ಮವೇ ಕೂಟಸ್ಥನೆಂದು ಬೋಧಿಸುವುದಕ್ಕಾಗಿ **'ತತ್‌ತ್ವಮಸಿ'** ಎಂಬ ವಾಕ್ಯವು ಹೊರಟಿದೆ. ಈ ಅರ್ಥದಲ್ಲಿ ಬಾಧೆಯೇನೂ ಇಲ್ಲದೆ ಸಾಮಾನಾಧಿಕರಣ್ಯವು ಸಿದ್ಧಿಸುತ್ತದೆ ಯಾದ್ದರಿಂದ ಬಾಧಾಸಹಿತಸಾಮಾನಾಧಿಕರಣ್ಯವು ಬೇಡವೆಂದು ವಿವರಣಕಾರರ ಅಭಿಪ್ರಾಯ (೪೭). ಈಗ ಕೂಟಸ್ಥನೆಂದರೆ ಯಾರು? ದೇಹೇಂದ್ರಿಯ ಮನಸ್ಸು - ಮುಂತಾದವುಗಳಿಂದ - ಎಂದರೆ - ಸ್ಥೂಲ ಸೂಕ್ಷ್ಮಶರೀರಗಳಿಂದ ಯುಕ್ತನಾದ ಚಿದಾಭಾಸನು ನಾನೆಂಬ ಭ್ರಮೆಗೆ ಅಧಿ-ಷ್ಠಾನ ಭೂತವಾದ ಯಾವ ಚೈತನ್ಯ ಉಂಟೋ ಅದೇ ಕೂಟಸ್ಥನೆಂದು

ತಿಳಿಯತಕ್ಕದ್ದು (೪೮).

'**ಅಹಂ ಬ್ರಹ್ಮಾಸ್ಮಿ**' ಎಂಬ ವಾಕ್ಯದಲ್ಲಿ ಬ್ರಹ್ಮಶಬ್ದದ ಅರ್ಥವೇನೆಂಬುದನ್ನು ನೋಡೋಣ. ಸಮಸ್ತ ಜಗತ್ತಿನ ಎಲ್ಲ ಭ್ರಮೆಗೂ ಯಾವುದು ಅಧಿಷ್ಠಾನವೆಂದು ವೇದಾಂತದಲ್ಲಿ ನಿರೂಪಿತವಾಗಿದೆಯೋ ಆ ಚೈತನ್ಯವು ಬ್ರಹ್ಮಶಬ್ದದಿಂದ ವಿವಕ್ಷಿತವಾಗಿದೆ (೪೯). ಈ ಚೈತನ್ಯದಲ್ಲಿ ಸಮಸ್ತಜಗತ್ತೂ ಆರೋಪಿತವಾಗಿದೆ ಯೆಂದಾಗ ಜಗತ್ತಿನ ಏಕದೇಶವಾದ ಜೀವಾಭಾಸನ ಅಥವಾ ಚಿದಾಭಾಸನ ಕಥೆ ಇನ್ನೇನಾದೀತು ! ಜಗತ್ತಿನ ಅಧಿಷ್ಠಾನಚೈತನ್ಯವು ಒಂದೇ ಆದಮೇಲೆ 'ತತ್ ತ್ವಂ' ಪದಾರ್ಥಗಳಿಗೂ ಭೇದವಿಲ್ಲವೆಂದು ಸಿದ್ಧವಾಯಿತು. ಏಕೆಂದರೆ, ತತ್ ತ್ವಂ ಪದಾರ್ಥಗಳು ಬ್ರಹ್ಮವೆಂದು ಸ್ಪಷ್ಟವಾಗಿದೆ. ಆದ್ದರಿಂದ 'ತತ್ ತ್ವಮಸಿ' ಎಂಬುದು ಪುನರುಕ್ತಿಯಲ್ಲವೆ? ಹೌದು. ಆದರೆ ಜಗತ್ ಮತ್ತು ಅದರ ಏಕದೇಶವಾದ ಚಿದಾಭಾಸ- ಈ ಎರಡು ಆರೋಪಣೀಯ ಪದಾರ್ಥಗಳು ಭಿನ್ನವಾದ್ದರಿಂದ ಪುನಃ ಜೀವಭ್ರಮೆಯನ್ನು ಹೋಗಲಾಡಿ ಸುವುದಕ್ಕಾಗಿ ಆ ವಾಕ್ಯವು ಹೊರಟಿದೆ. ಚಿತ್ ಎಂಬುದು ಸರ್ವತ್ರ ಒಂದೇ ಸರಿ (೫೦-೫೧). ಶುಕ್ತಿ (ಕಪ್ಪೆಚಿಪ್ಪು) ಯಲ್ಲಿ ರಜತತ್ವಭ್ರಮೆ ಬಂದಾಗ ಅಧಿ ಷ್ಠಾನವಾದ ಶುಕ್ತಿಯಲ್ಲಿ ಶುಕ್ತಿತ್ವವೆಂಬ ಧರ್ಮವೂ ಆರೋಪಿತವಾದ ರಜತದಲ್ಲಿ ರಜತತ್ವಧರ್ಮವೂ ಇರುತ್ತವೆ. ಚಿದಾಭಾಸನಲ್ಲಿ ಆ ಪ್ರಕಾರವಾಗಿ ಎರಡು ಧರ್ಮಗಳಿಲ್ಲವಲ್ಲ? ಹಾಗಲ್ಲ. ಬುದ್ಧ್ಯುಪಾಧಿಯ ಮೂಲಕ ಆರೋಪ್ಯ- ಮಾಣವಾದ ಕರ್ತೃತ್ವ ಭೋಕ್ತೃತ್ವ ಪ್ರಮಾತೃತ್ವಗಳೂ ಸ್ವತಃ ಸಿದ್ಧವಾದ ಸ್ಫುರಣವೂ ಇದ್ದೇ ಇವೆ. ಹೀಗೆ ಎರಡು ಪ್ರಕಾರದ ಧರ್ಮಗಳು ಇಲ್ಲಿಯೂ ಇದ್ದೇ ಇವೆ (೫೨). ಇಷ್ಟೆಲ್ಲ ಮಹತ್ತರವಾದ ಭ್ರಮೆಗೆ ಕಾರಣವೇನೆಂದರೆ : ಬುದ್ಧಿ, ಆಭಾಸನಾದ ಜೀವ, ಆತ್ಮ, ಈ ಜಗತ್ತು ಯಾವ ಪ್ರಕಾರವಾದದ್ದು -ಎಂಬುದು ನಿರ್ಣೀತವಾಗಿ ತಿಳಿಯದೇ ಇರುವುದೇ ಕಾರಣ. ಇದರಿಂದಲೇ ಸಂಸಾರವು ನಡೆಯುತ್ತಿದೆ (೫೩).

ಮೇಲ್ಕಂಡ ಬುದ್ಧಿ ಮುಂತಾದವುಗಳ ನಿಜಸ್ವರೂಪವೇನೆಂಬುದನ್ನು ವಿವೇಚಿಸಿ ಯಾವನು ತಿಳಿಯುತ್ತಾನೋ ಅವನೇ ತತ್ತ್ವವಿದನು. ಅವನೇ ಮುಕ್ತನಾದವನು - ಎಂದು ಉಪನಿಷತ್ತುಗಳು ನಿಶ್ಚಯಿಸಿ ಹೇಳಿವೆ (೫೪). ಈ ಪ್ರಕಾರವಾಗಿ ವೇದಾಂತಸಿದ್ಧಾಂತವಿರುವಾಗ, ಕೆಲವು ತಾರ್ಕಿಕರು ''ನಿಮ್ಮ ಅದ್ವೈತವಾದದಲ್ಲಿ ಯಾರಿಗೆ ಬಂಧ? ಯಾರಿಗೆ ಮೋಕ್ಷ?'' - ಎಂದು

ಕುತರ್ಕಗಳನ್ನೊಡ್ಡಿ ಪರಿಹಾಸಮಾಡುತ್ತಾರೆ. ಅವರೆಲ್ಲರಿಗೂ ಶ್ರೀಹರ್ಷನು 'ಖಂಡನ ಖಂಡ ಖಾದ್ಯ'ವೆಂಬ ಗ್ರಂಥದಲ್ಲಿ ಸರಿಯಾದ ಯುಕ್ತಿಗಳನ್ನಿತ್ತು ಅವರ ಹೇಳಿಕೆಯನ್ನು ಖಂಡಿಸಿದ್ದಾನೆ. ಆ ಯುಕ್ತಿಗಳನ್ನಾಶ್ರಯಿಸಿ ಕುತಾರ್ಕಿಕರ ಹೇಳಿಕೆಗಳು ಖಂಡನಾರ್ಹವಾಗಿವೆ (೫೫). ಈ ಕೂಟಸ್ಥನ ವಿಚಾರವು ಪುರಾಣಗಳಲ್ಲಿಯೂ ಬಂದಿದೆ. ಶೈವಪುರಾಣಗಳಲ್ಲಿ ಹೀಗಿದೆ - ''ಕಾಮಾದಿ ಧೀವೃತ್ತಿಗಳಿಗೆ ಸಾಕ್ಷಿಯಾಗಿ, ಅವುಗಳ ಪ್ರಾಗಭಾವಗಳಿಗೂ ಸಾಕ್ಷಿಯಾಗಿ, ಜಿಜ್ಞಾಸೆಗೂ ಸಾಕ್ಷಿಯಾಗಿ, ಜಿಜ್ಞಾಸೆಗೆ ಮೊದಲು ಅಜ್ಞಾನಕ್ಕೂ ಸಾಕ್ಷಿಯಾಗಿ ಶಿವನೇ ಇರುತ್ತಾನೆ (೫೬). ಆತನು ಅಸತ್ಯವಾದ ಜಗತ್ತಿಗೆ ಅಧಿಷ್ಠಾನನಾದ್ದರಿಂದ ಸತ್ಯನೂ, ಸರ್ವಜಡವಸ್ತುಗಳನ್ನೂ ಬೆಳಗುವದರಿಂದ ಚಿದ್ರೂಪನೂ ಸರ್ವದಾ ಪ್ರೇಮಾಸ್ಪದನಾದ್ದರಿಂದ ಆನಂದಸ್ವರೂಪನೂ ಆಗಿದ್ದಾನೆ (೫೭) ಈ ಶಿವನು ಸರ್ವಾರ್ಥಸಾಧಕನಾದ್ದರಿಂದ ಸರ್ವವಸ್ತುಸಂಬಂಧವನ್ನು ಹೊಂದಿದ್ದಾನೆ. ಅದರಿಂದಲೇ ಶಿವನು ಸಂಪೂರ್ಣನಾದವನು'' ಹೀಗೆ ಶೈವ ಪುರಾಣಗಳಲ್ಲಿ ವರ್ಣಿತನಾದ ಶಿವನೇ ಕೂಟಸ್ಥನಾದ ಅದ್ವೈತಾತ್ಮನು. ಈತನು ಜೀವೇಶ್ವರಾದಿ ಕಲ್ಪನಾರಹಿತನೂ ಅದ್ವಿತೀಯನೂ ಸ್ವಯಂಪ್ರಕಾಶನೂ ಆದ ಶಿವನು - ಎಂದು ಕೂಟಸ್ಥನ ವಿವೇಚನೆಯನ್ನು ಮಾಡಿದ್ದಾರೆ (೫೮-೫೯). ''ಮಾಯಾಭಾಸೇನ ಜೀವೇಶೌ ಕರೋತಿ'' ಎಂದು ಶ್ರುತಿವಚನವಿದೆ. ಮಾಯೆಯು ಆಭಾಸದ ಮೂಲಕ 'ಜೀವ' 'ಈಶ'ರನ್ನು ನಿರ್ಮಿಸುತ್ತದೆ - ಎಂದು ಅದರ ಅರ್ಥ. ಆದ್ದರಿಂದ ಜೀವೇಶ್ವರರು ಮಾಯಾನಿರ್ಮಿತರೆಂದು ತಿಳಿಯಬೇಕು. ಆದರೆ ದೇಹಗಳಂತೆ ಮಲಿನರೂಪರಲ್ಲ, ಗಾಜಿನಿಂದ ನಿರ್ಮಿತವಾದ ಕುಂಭದಂತೆ ಸ್ವಚ್ಛರು (೬೦). ಮಣ್ಣಿನಿಂದಾದ ಗಡಿಗೆ ಸ್ವಚ್ಛವಾಗಿರುವುದಿಲ್ಲ. ಗಾಜೂ ಸಹ ಒಂದು ಬಗೆಯ ಮಣ್ಣೇ ಆದರೂ ಅದರಿಂದ ನಿರ್ಮಿತವಾದ ವಸ್ತುಗಳಲ್ಲಿ ಸ್ವರೂಪಭೇದವಿರಲು ಸಾಧ್ಯವಿದೆ. ಹೇಗೆಂದರೆ, ಅನ್ನಜನ್ಯವಾದ ಈ ಸ್ಥೂಲ ದೇಹಕ್ಕಿಂತಲೂ ಅನ್ನಜನ್ಯವೇ ಆದ ಮನಸ್ಸು ದೇಹಕ್ಕಿಂತ ಸ್ವಚ್ಛವಾದದ್ದು. ಹಾಗೆಯೇ ಜೀವೇಶ್ವರರೂ ಮಾಯಿಕಗಳೇ ಆದ ಇತರ ಎಲ್ಲ ವಸ್ತುಗಳಿಗಿಂತ ಸ್ವಚ್ಛವಾಗಿದ್ದಾರೆ (೬೧). ಈ ಜೀವೇಶ್ವರರು ಚಿದ್ರೂಪರೂ ಆಗಿದ್ದಾರೆ. ಚಿದ್ರೂಪದಿಂದಲೇ ಪ್ರಕಾಶಿತರಾಗಿದ್ದಾರೆ. ಸರ್ವಕಲ್ಪನಾಶಕ್ತವಾದ ಮಾಯೆಗೆ ಅಶಕ್ಯವಾದ್ದಾದರೂ ಯಾವುದು? ನಮಗೆ ಬರುವ ನಿದ್ರೆಯೂ ಸಹ ಸ್ವಪ್ನದಲ್ಲಿ ಚೇತನರಾದ ಜೀವೇಶ್ವರರನ್ನು ಸೃಜಿಸುತ್ತಿರುವಾಗ, ಮಹಾಮಾಯೆಯು ಇಂತಹ ಜೀವೇಶ್ವರರನ್ನು ಸೃಷ್ಟಿಸುತ್ತದೆ ಎಂದರೆ ನಿನಗೇಕೆ ಆಶ್ಚರ್ಯವಾಗುತ್ತದೆ? (೬೨-೬೩).

ಅಲ್ಲದೆ ಈಶ್ವರನಲ್ಲಿ ಸರ್ವಜ್ಞತ್ವ ಸರ್ವಶಕ್ತತ್ವಾದಿಗಳನ್ನು ಮಾಯೆಯೇ ಕಲ್ಪಿಸುತ್ತದೆ. ಈಶ್ವರನೆಂಬ ಧರ್ಮಿಯಾದ ವ್ಯಕ್ತಿಯನ್ನೇ ಕಲ್ಪಿಸಬಲ್ಲ ಮಾಯೆಗೆ ಆ ವ್ಯಕ್ತಿಯಲ್ಲಿ ಸರ್ವಜ್ಞತ್ವಾದಿ ಧರ್ಮವನ್ನು ಕಲ್ಪಿಸುವುದೊಂದು ಭಾರವಾದೀತೆ? (೬೪). ಹಾಗಾದರೆ ಪ್ರಾಣಿಶರೀರದಲ್ಲಿರುವ ಕೂಟಸ್ಥನನ್ನೂ ಮಾಯೆಯು ಕಲ್ಪಿಸಿದೆಯೆಂದೇಕೆ ಹೇಳಬಾರದು? ಹೀಗೆ ಅತಿಯಾದ ಕಲ್ಪನೆಯನ್ನೂ ಶಂಕೆಯನ್ನೂ ಮಾಡಬೇಡ! ಕೂಟಸ್ಥನು ಮಾಯಿಕನೆಂದು ಹೇಳಲು ನಮಗೆ ಯಾವ ಆಧಾರವೂ ಇಲ್ಲ. ಸಕಲ ಉಪನಿಷತ್ತುಗಳು ಕೂಟಸ್ಥನು ಪಾರಮಾರ್ಥಿಕಸತ್ಯನೆಂದು ಘೋಷಿಸುತ್ತವೆ. ಕೂಟಸ್ಥನಿಗಿಂತ ಇನ್ನೊಂದು ಪ್ರತಿದ್ವಂದ್ವಿವಸ್ತುವಿದೆಯೆಂಬುದನ್ನು ವೇದಾಂತಗಳು ಸ್ವಲ್ಪವೂ ಸಹಿಸುವುದಿಲ್ಲ (೬೫-೬೬). ನಾವು ಶ್ರುತಿಯ ಅರ್ಥವನ್ನು ವಿವರಿಸುತ್ತೇವೆಯೇ ಹೊರತು ತರ್ಕದಿಂದ ಊಹಿಸಿ ಯಾವುದನ್ನೂ ಹೇಳುವುದಿಲ್ಲ. ಆದ್ದರಿಂದ ತಾರ್ಕಿಕರ ವಿವಿಧಶಂಕೆಗಳಿಗೆ ಇಲ್ಲಿ ಅವಕಾಶವಿಲ್ಲ. ಆದ್ದರಿಂದ ಮುಮುಕ್ಷುವಾದವನು ಕುತರ್ಕಗಳನ್ನು ತ್ಯಜಿಸಿ ಶ್ರುತಿಯು ಏನು ಹೇಳುತ್ತದೆಯೆಂಬುದನ್ನು ಮಾತ್ರ ತಿಳಿದುಕೊಳ್ಳಬೇಕು. ಶ್ರುತಿಯಲ್ಲಾದರೋ ಮಾಯೆಯು ಜೀವೇಶ್ವರರನ್ನು ನಿರ್ಮಿಸುತ್ತದೆಯೆಂದು ಸ್ಪಷ್ಟವಾಗಿ ನುಡಿದಿದೆ (೬೭-೬೮). ಈಕ್ಷಣಾದಿ ಪ್ರವೇಶಾಂತವಾದ ಸೃಷ್ಟಿಯು ಈಶ್ವರಕೃತವಾದದ್ದು. ಜಾಗ್ರತ್ತಿನಿಂದ ಮೋಕ್ಷ ಪರ್ಯಂತವಾದ ಸೃಷ್ಟಿಯು ಜೀವಕೃತವಾದದ್ದು. ಕೂಟಸ್ಥನು ಸರ್ವದಾ ಅಸಂಗನಾಗಿಯೇ ಇರುತ್ತಾನೆ. ಈತನಲ್ಲಿ ಯಾವ ಅತಿಶಯವೂ - ಬದಲಾವಣೆಯೂ ಆಗುವುದೇ ಇಲ್ಲ. ಇದನ್ನು ಮುಮುಕ್ಷುವಾದವನು ಸರ್ವದಾ ಚಿಂತಿಸುತ್ತಿರಬೇಕು (೬೯-೭೦). ಕೂಟಸ್ಥನಾದ ಆತ್ಮನಿಗೆ ಮರಣ (ನಿರೋಧ)ವೂ ಇಲ್ಲ. ಜನನವೂ ಇಲ್ಲ. ಈ ಜಗತ್ತಿನಲ್ಲಿ ಬದ್ಧನೂ ಇಲ್ಲ, ಸಾಧಕನೂ ಇಲ್ಲ, ಮುಮುಕ್ಷುವೂ ಇಲ್ಲ, ಮುಕ್ತನೂ ಇಲ್ಲ - ಇದೇ ಪರಮಾರ್ಥವಾದ ಸತ್ಯವಾಗಿದೆ (೭೧). ಮಾತಿಗೂ ಮನಸ್ಸಿಗೂ ಸಹ ಅಗಮ್ಯವಾದ ಈ ಪರಮಾರ್ಥವನ್ನು ಬೋಧಿಸುವುದಕ್ಕಾಗಿ ಶ್ರುತಿಯು ಜೀವ, ಈಶ್ವರ, ಜಗತ್ತು - ಇತ್ಯಾದಿ ವಿಷಯಗಳನ್ನು ಆಶ್ರಯಿಸಿಕೊಂಡು ತಿಳಿಸುತ್ತದೆ (೭೨). ಯಾವ ಯಾವ ಪ್ರಕ್ರಿಯೆಯಿಂದ ಜನರಿಗೆ ಪ್ರತ್ಯಗಾತ್ಮನಲ್ಲಿ ಸರಿಯಾದ ಜ್ಞಾನ ಉಂಟಾಗುವುದೋ - ತಾನು ಬ್ರಹ್ಮದಿಂದ ಅಭಿನ್ನನೆಂಬ ವಿವೇಕ ಉದಯಿಸುವುದೋ ಅಂತಹ ಪ್ರಕ್ರಿಯೆಯನ್ನು ವೇದಾಂತ ಬೋಧೆಗೆ ಆಶ್ರಯಿಸಬೇಕೆಂದು ಸುರೇಶ್ವರಾಚಾರ್ಯರು ಹೇಳಿದ್ದಾರೆ. ಶ್ರುತಿಯಲ್ಲಿ

ವಿವಾದಾಸ್ಪದವಾದ ವಾಕ್ಯಗಳಿರುತ್ತವೆ. ಅವುಗಳ ಅಭಿಪ್ರಾಯವು ಒಂದೇ ಆಗಿದೆ. ಆತ್ಮತತ್ತ್ವವು ಏಕರೂಪವಾಗಿರುತ್ತದೆ. ಬೋಧಕರು ಬೋಧ್ಯರಾದ ಜನರು - ಇವರಲ್ಲಿ ಭಿನ್ನಾಭಿಪ್ರಾಯಗಳಿರುತ್ತವೆ. ಆದ್ದರಿಂದ ಒಂದೇ ತತ್ತ್ವದ ಬೋಧನೆಯ ಪ್ರಕಾರವು ಭಿನ್ನವಾಗಬಹುದು. ಪರಮಾರ್ಥದಲ್ಲಿ ಭೇದವಿಲ್ಲ (೭೩). ಮೂರ್ಖನು ಶ್ರುತಿತಾತ್ಪರ್ಯವೆಲ್ಲವನ್ನೂ ಸರಿಯಾಗಿ ತಿಳಿದುಕೊಳ್ಳದೆ ಭ್ರಾಂತನಾಗಿ ತೊಳಲಾಡುತ್ತಾನೆ. ವಿವೇಕಿಯು ಎಲ್ಲವನ್ನೂ ಸರಿಯಾಗಿ ಸಮನ್ವಯದಿಂದ ಅರ್ಥಮಾಡಿಕೊಂಡು ಆನಂದಸಾಗರದಲ್ಲಿ ಓಲಾಡುತ್ತಾನೆ (೭೪). ವಿವೇಕಿಯ ನಿಶ್ಚಯವು ಹೀಗಿರುತ್ತದೆ - ಮಾಯಾರೂಪಿಯಾದ ಮೋಡವು ಜಗತ್ತೆಂಬ ಮಳೆಯನ್ನು ಸುರಿಸುತ್ತಲೇ ಇರಲಿ. ಚಿದಾಕಾಶ ಸ್ವರೂಪನಾದ ನನಗೆ ಅದರಿಂದ ಹಾನಿಯೂ ಇಲ್ಲ ಲಾಭವೂ ಇಲ್ಲ! (೭೫). ಈ ಕೂಟಸ್ಥ ದೀಪವನ್ನು ಯಾವಾತನು ನಿರಂತರವೂ ಅನುಸಂಧಾನ ಮಾಡುತ್ತಿರುವನೋ ಆತನು ಸ್ವಯಂ ಕೂಟಸ್ಥರೂಪನಾಗಿ ನಿರಂತರವೂ ಬೆಳಗುತ್ತಿರುವನು (೭೬).

ಇಲ್ಲಿಗೆ ಕೂಟಸ್ಥದೀಪಪ್ರಕರಣವು ಸಮಾಪ್ತವಾಯಿತು

---

# ೯. ಧ್ಯಾನದೀಪಪ್ರಕರಣ

ನಿತ್ಯಾನಿತ್ಯವಸ್ತುವಿವೇಕ, ಶಮದಮಾದಿ ಸಾಧನಸಂಪತ್ತು, ವೈರಾಗ್ಯ, ಮೋಕ್ಷೇಚ್ಛೆಗಳುಳ್ಳ ಅಧಿಕಾರಿಯು ಶ್ರವಣಮನನಾದಿಗಳಿಂದ ಆತ್ಮ ತತ್ತ್ವದ ಯಥಾರ್ಥಾನುಭವವನ್ನು (ಅಪರೋಕ್ಷಜ್ಞಾನವನ್ನು) ಪಡೆದು ಮುಕ್ತ-ನಾಗುತ್ತಾನೆಂದು ವೇದಾಂತಶಾಸ್ತ್ರವು ಪ್ರತಿಪಾದಿಸಿದೆ. ಅಧಿಕಾರಿಯಾದವನು ವೇದಾಂತಶ್ರವಣಾದಿಗಳನ್ನು ಮಾಡಿದರೂ ಆತ್ಮಜ್ಞಾನವಾಗದಿರುವುದುಂಟು. ಅದಕ್ಕೆ ಆತನ ಪ್ರಾರಬ್ಧಕರ್ಮವು ಪ್ರತಿಬಂಧಕವಾಗಿರುತ್ತದೆ. ಈ ಪ್ರತಿಬಂಧಕದ ನಿವಾರಣೆಗಾಗಿ ಆತನು ಕೆಲವು ಉಪಾಸನೆಗಳನ್ನು ಮಾಡಬೇಕಾಗುತ್ತದೆ. ಸಂವಾದಿ ಭ್ರಮೆಯಿಂದ ಇಷ್ಟಸಿದ್ಧಿಯಾಗುವಂತೆ ಬ್ರಹ್ಮತತ್ತ್ವದ ಉಪಾಸನೆಯಿಂದಲೂ ಮನುಷ್ಯನು ಮುಕ್ತನಾಗುವುದುಂಟು. ಆದ್ದರಿಂದ ಉತ್ತರತಾಪನೀಯೋಪ ನಿಷತ್ತಿನಲ್ಲಿ ಅನೇಕಬಗೆಯ ಉಪಾಸನೆಯನ್ನು ವರ್ಣಿಸಿದ್ದಾರೆ. ಒಬ್ಬನು ರತ್ನಪ್ರಭೆಯನ್ನೂ ಇನ್ನೊಬ್ಬನು ದೀಪಪ್ರಭೆಯನ್ನೂ ಕಂಡು ರತ್ನವೆಂದು ಭ್ರಮಿಸಿ ಅದನ್ನು ತೆಗೆದುಕೊಳ್ಳಲು ಓಡಿಹೋಗುತ್ತಾರೆ. ಇಬ್ಬರದೂ ಮಿಥ್ಯಾ ಜ್ಞಾನ, ಭ್ರಮೆ. ಈ ಭ್ರಮಜ್ಞಾನದಲ್ಲಿ ವಿಶೇಷವಿಲ್ಲವಾದರೂ ಅರ್ಥಕ್ರಿಯೆಯಲ್ಲಿ (ಕ್ರಿಯೆಯ ಫಲಿತಾಂಶದಲ್ಲಿ) ಭೇದ ಉಂಟು (೧-೨). ಅಪವರಕವೆಂದರೆ ಮನೆಯ ಹೊಸ್ತಿಲಿನ ಒಳಗಡೆ ಇರುವ ಜಗಲಿ (ವರಾಂಡ). ಒಂದು ಮನೆಯ ಅಪವರಕದಲ್ಲಿ ಒಂದು ದೀಪವಿದ್ದು ಅದರ ಪ್ರಭೆಯು ಹೊಸ್ತಿಲಿನ ಹೊರಗೆ ಚಿಕ್ಕದಾಗಿ ಬಿದ್ದಿರುತ್ತದೆ. ಹಾಗೆಯೇ ಆ ಮನೆಯ ಬಾಗಿಲಲ್ಲಿ ರತ್ನದ ಪ್ರಭೆಯು ಇನ್ನೊಂದೆಡೆಯಲ್ಲಿ ಚಿಕ್ಕದಾಗಿ ಹರಡಿರುತ್ತದೆ. ಆ ಎರಡು ಪ್ರಭೆಗಳೂ ಎರಡು ರತ್ನಗಳೆಂದು ಭ್ರಮಿಸಿ ಇಬ್ಬರೂ ಒಂದೊಂದನ್ನು ತೆಗೆದುಕೊಳ್ಳಲು ಧಾವಿಸುತ್ತಾರೆ. ಇಬ್ಬರೂ ರತ್ನವೆಂದು ಭಾವಿಸಿರುವುದು ಮಿಥ್ಯಾಜ್ಞಾನ, ಭ್ರಮೆ. ಆದರೆ ರತ್ನಪ್ರಭೆಯ ಕಡೆಗೆ ಹೋದವನಿಗೆ ಅವಶ್ಯವಾಗಿ ರತ್ನವು ದೊರಕಿಯೇ ತೀರುತ್ತದೆ. ದೀಪಪ್ರಭೆಯ ಕಡೆಗೆ ಹೋದವನಿಗೆ ಮಾತ್ರ ರತ್ನವು ದೊರಕುವುದಿಲ್ಲ! ಇವುಗಳಲ್ಲಿ ದೀಪಪ್ರಭೆಯನ್ನು ರತ್ನವೆಂದು ತಿಳಿದಿರುವುದು ವಿಸಂವಾದಿ ಭ್ರಮೆ. ರತ್ನಪ್ರಭೆಯನ್ನು ರತ್ನವೆಂದು ತಿಳಿದಿರುವುದು ಸಂವಾದಿಭ್ರಮೆ. ಸಂವಾದಿಭ್ರಮೆಯಿಂದ ಇಷ್ಟಪ್ರಾಪ್ತಿಯಾಗುತ್ತದೆ (೩-೬). ಇದು ಪ್ರತ್ಯಕ್ಷ ವಿಷಯದಲ್ಲಿ ಸಂವಾದಿಭ್ರಮೆಯಾಯಿತು. ಅನುಮಾನದ ವಿಷಯದಲ್ಲಿಯೂ ಈ ಭ್ರಮೆಯುಂಟು. ದೂರದಲ್ಲಿರುವ ನೀರಿನ ಆವಿಯನ್ನು ಹೊಗೆಯೆಂದು

ಭ್ರಮಿಸಿ **'ಯತ್ರ ಧೂಮಸ್ತತ್ರಾಗ್ನಿಃ'** ಎಲ್ಲಿ ಹೊಗೆ ಇದೆಯೋ ಅಲ್ಲಿ ಬೆಂಕಿ ಇರುತ್ತದೆ - ಎಂಬ ಅನುಮಾನಪ್ರಮಾಣದಿಂದ ಬೆಂಕಿಗಾಗಿ ಆವಿಯ ಬಳಿ ಹೋಗುತ್ತಾನೆ. ಅಲ್ಲಿ ಅಕಸ್ಮಾತ್ ಬೆಂಕಿ ಇದ್ದು ಬಿಡುತ್ತದೆ. ಇದು ಅನುಮಾನದ ವಿಷಯದಲ್ಲಿ ಸಂವಾದಿಭ್ರಮೆ (೭). ಶಾಸ್ತ್ರವಿಷಯದಲ್ಲಿಯೂ ಇದು ಉಂಟು. ಒಬ್ಬನು ಗೋದಾವರೀನದಿಯ ನೀರನ್ನು ಗಂಗಾಜಲವೆಂದು ಭ್ರಮಿಸಿ ಪ್ರೋಕ್ಷಣೆ ಮಾಡಿಕೊಳ್ಳುತ್ತಾನೆ. ಗಂಗಾಜಲವೆಂದು ತಿಳಿದದ್ದು ಭ್ರಮೆಯಾದರೂ ಅವನಿಗೆ ಗೋದಾವರೀಜಲದಿಂದಲೇ ಶುದ್ಧಿಯಾಗುತ್ತದೆ! ಇದು ಶಾಸ್ತ್ರವಿಷಯದ ಸಂವಾದಿಭ್ರಮೆ (೮). ಇದಕ್ಕೆ ಇನ್ನೊಂದು ಉದಾಹರಣೆಯನ್ನು ಕೊಡಬಹುದು. ಒಬ್ಬನು ಸಂನಿಪಾತಜ್ವರದಿಂದ ಬುದ್ಧಿಗೆಟ್ಟು ಹಲುಬುತ್ತಾನೆ. ಎತ್ತಲೋ ಜ್ಞಾನದಿಂದ 'ನಾರಾಯಣ, ನಾರಾಯಣ' ಎಂದು ಕೂಗುತ್ತ ಪ್ರಾಣಬಿಡುತ್ತಾನೆ. ಕಡೆಗಾಲದಲ್ಲಿ ಭಗವಂತನ ಸ್ಮರಣೆ ಮಾಡಿದರೆ ಸದ್ಗತಿಯಾಗುತ್ತದೆಯೆಂದು ಶಾಸ್ತ್ರವಚನವಿದೆ. **''ಹರಿರ್ಹರತಿ ಪಾಪಾನಿ ದುಷ್ಟಚಿತ್ತೈರಪಿ ಸ್ಮೃತಃ''** ಎಂದು ಪುರಾಣವಚನ ಉಂಟು. ಅಜಮಿಳನು ತನ್ನ ಮಗನನ್ನು 'ನಾರಾಯಣ' ಎಂದು ವ್ಯಾಮೋಹದಿಂದ ಕರೆಯುತ್ತಾ ಪ್ರಾಣಬಿಟ್ಟನೆಂದೂ ಅಜಮಿಳನು ಪಾಪಿಯಾದರೂ ಸದ್ಗತಿಯನ್ನು ಪಡೆದನೆಂದೂ ಭಾಗವತ ಪುರಾಣ ಹೇಳುತ್ತದೆ. ಹಾಗೆಯೇ ಸಂನಿಪಾತದ ಭ್ರಾಂತಿಯಲ್ಲಿ ನಾರಾಯಣ ಎಂದು ಕೂಗಿದಾಗಲೂ ಆತನಿಗೆ ಸದ್ಗತಿಯಾಗುತ್ತದೆ. ಇದು ಶಾಸ್ತ್ರವಿಷಯದ ಸಂವಾದಿಭ್ರಮೆ (೯). ಹೀಗೆ ಪ್ರತ್ಯಕ್ಷ, ಅನುಮಾನ, ಆಪ್ತವಾಕ್ಯವಾದ ಶಾಸ್ತ್ರ- ಈ ವಿಷಯಗಳಲ್ಲಿ ಹಿಂದೆ ಹೇಳಿದಂತೆ ಕೋಟಿಗಟ್ಟಲೆ ಸಂವಾದಿಭ್ರಮಗಳಿವೆ. ಇವನ್ನೊಪ್ಪದಿದ್ದರೆ ಮಣ್ಣು, ಮರ, ಕಲ್ಲುಗಳು ಹೇಗೆ ದೇವತೆಗಳೆಂದು ಪೂಜ್ಯವಸ್ತುಗಳಾಗುತ್ತವೆ? ಪಂಚಾಗ್ನಿವಿದ್ಯೆಯಲ್ಲಿ **''ಯೋಷಾವಾವ ಗೌತಮಾಗ್ನಿಃ ಪುರುಷೋ ವಾವ ಗೌತಮಾಗ್ನಿಃ''** (ಛಾಂ.ಉ.೫-೮-೧) ಇತ್ಯಾದಿ ವಚನಗಳು ಸ್ತ್ರೀ, ಪುರುಷಾದಿಗಳನ್ನು ಅಗ್ನಿತ್ವೇನ ಉಪಾಸನೆ ಮಾಡಿದರೆ ಬ್ರಹ್ಮಲೋಕವು ಪ್ರಾಪ್ತವಾಗುತ್ತದೆಯೆಂದೂ ಹೇಳಿವೆ. ಸಂವಾದಿಭ್ರಮೆಯು ಫಲವನ್ನು ನೀಡದಿದ್ದರೆ ಈ ಉಪಾಸನೆಗಳು ವ್ಯರ್ಥವೆಂದು ಹೇಳಬೇಕಾದೀತು. ಒಟ್ಟಿನಲ್ಲಿ ಶಾಸ್ತ್ರವಿಹಿತವಾಗಲಿ ಅವಿಹಿತವಾಗಲಿ ಸಂವಾದಿಭ್ರಮೆಯು ಕಾಕತಾಳೀಯ ನ್ಯಾಯದಿಂದ ಫಲವನ್ನು ನೀಡುತ್ತದೆ - ಎಂದು ಸಿದ್ಧವಾಗುತ್ತದೆ (೧೦-೧೨). ಹೀಗೆ ಲೋಕದಲ್ಲಿ ಆಗುವ ಸಂವಾದಿ ಭ್ರಮೆಯೂ ಸರಿಯಾದ ಫಲವನ್ನು ನೀಡುವಂತೆ ಶಾಸ್ತ್ರವಿಹಿತವಾದ ಬ್ರಹ್ಮತತ್ತ್ವದ ಉಪಾಸನೆಯೇ

ಮುಕ್ತಿಫಲವನ್ನು ಕೊಡುತ್ತದೆ. ಉಪಾಸಕರಿಗೆ ಆತ್ಮತತ್ತ್ವದ ಅಪರೋಕ್ಷಜ್ಞಾನವಾಗಿರುವುದಿಲ್ಲ. ಆಗಿದ್ದರೆ ಉಪಾಸನೆ ಬೇಕಾಗುವುದಿಲ್ಲ. ಆದ್ದರಿಂದ ಅವರು ವೇದಾಂತಶಾಸ್ತ್ರಗಳ ಅಭ್ಯಾಸವನ್ನು ಮಾಡಿ ಅಖಂಡೈಕರಸವಾದದ್ದು ಪರಬ್ರಹ್ಮವೆಂದು ಪರೋಕ್ಷಜ್ಞಾನವನ್ನು ಪಡೆದು'**ಅಹಂ ಬ್ರಹ್ಮಾಸ್ಮಿ**' ಎಂದು ಉಪಾಸನೆ ಮಾಡುತ್ತಾರೆ. ಹಾಗಾದರೆ ಪರೋಕ್ಷಜ್ಞಾನವೆಂದರೇನು? ಶಾಸ್ತ್ರಾಧಾರದಿಂದ ವಿಷ್ಣು ಶಿವ - ಮುಂತಾದ ದೇವತೆಗಳಿದ್ದಾರೆಂದು ಜನರು ತಿಳಿದಿರುತ್ತಾರಲ್ಲವೆ? - ಹಾಗೆಯೇ 'ಅಸ್ತಿಬ್ರಹ್ಮ'- ಪರಬ್ರಹ್ಮವಿದೆ ಎಂಬ ಸಾಮಾನ್ಯಜ್ಞಾನಕ್ಕೆ ಪರೋಕ್ಷಜ್ಞಾನವೆಂದು ಹೆಸರು. ಇದರಲ್ಲಿ ಪ್ರತ್ಯಗಾತ್ಮನ ಪ್ರಸ್ತಾವವಿರುವುದಿಲ್ಲ(೧೩-೧೫).

ಉಪಾಸನೆ ಮಾಡತಕ್ಕವನು ವಿಷ್ಣು ಶಿವ - ಮುಂತಾದ ದೇವತೆಗಳನ್ನು ತನ್ನ ಕಣ್ಣುಗಳಿಂದ ಪ್ರತ್ಯಕ್ಷವಾಗಿ ನೋಡಿರುವುದಿಲ್ಲ. ಶಾಸ್ತ್ರಾಧಾರದಿಂದ ವಿಷ್ಣುವು ಚತುರ್ಭುಜನಾಗಿದ್ದಾನೆ. ಶಂಖ, ಚಕ್ರಗಳನ್ನು ಹಿಡಿದಿದ್ದಾನೆ - ಇತ್ಯಾದಿ ವ್ಯಕ್ತಿ ಸ್ವರೂಪವು ಮಾತ್ರ ತಿಳಿದಿರುತ್ತದೆ. ಪ್ರತ್ಯಕ್ಷವಾಗಿ ನೋಡಿಲ್ಲವಾದ್ದರಿಂದ ಆ ಉಪಾಸಕನ ಜ್ಞಾನವು ಪರೋಕ್ಷಜ್ಞಾನವೇ ಆಗಿರುತ್ತದೆ. ಆದರೆ ವ್ಯಕ್ತಿಯನ್ನು ನೋಡದುದರಿಂದ ಪರೋಕ್ಷಜ್ಞಾನವಾದರೂ ಅದು ತಪ್ಪು ತಿಳಿವಳಿಕೆಯಲ್ಲ. ಆದ್ದರಿಂದ ಅದನ್ನು ಭ್ರಾಂತಿಯೆನ್ನಲಾಗದು. ವಿಷ್ಣುವಿಗೆ ಚತುರ್ಭುಜಾದಿಗಳಿವೆ ಯೆಂಬುದು ಶಾಸ್ತ್ರಪ್ರಮಾಣದಿಂದ ತಿಳಿದುಬಂದಿರುತ್ತದೆ. ಸರಿಯಾದ ಪ್ರಮಾಣದಿಂದ ಹುಟ್ಟಿದ ಜ್ಞಾನವು ಭ್ರಮೆಯಲ್ಲ (೧೬-೧೭). ಶಾಸ್ತ್ರಪ್ರಮಾಣದಿಂದಲೇ ಪರಬ್ರಹ್ಮವು ಸಚ್ಚಿದಾನಂದಸ್ವರೂಪವೆಂದು ತಿಳಿದಿದ್ದರೂ ಅದೇ ವಸ್ತು ಪ್ರತ್ಯಗಾತ್ಮನಾಗಿ ಸಾಕ್ಷಿಯಾಗಿ ತನ್ನಲ್ಲಿಯೇ ಇದೆಯೆಂದೂ ತಾನೇ ಪರಬ್ರಹ್ಮವೆಂದೂ ಮನುಷ್ಯನು ತಿಳಿದಿರುವುದಿಲ್ಲ. ಆದ್ದರಿಂದ ಶಾಸ್ತ್ರಜನ್ಯವಾದ ಆ ಜ್ಞಾನವು ಪರೋಕ್ಷಜ್ಞಾನವೇ ಸರಿ. ಶಾಸ್ತ್ರೋಕ್ತವಾದ ಮಾರ್ಗದಿಂದಲೇ ಪರಬ್ರಹ್ಮವು ಸಚ್ಚಿದಾನಂದ ಸ್ವರೂಪವೆಂದು ನಿಶ್ಚಯವಾಗಿರುವುದರಿಂದ ಅದು ಪರೋಕ್ಷವಾದರೂ ತತ್ತ್ವಜ್ಞಾನವೇ ಹೊರತು ಭ್ರಮೆಯಲ್ಲ(೧೮-೧೯). ಯದ್ಯಪಿ ಶಾಸ್ತ್ರದಲ್ಲಿ 'ತತ್ತ್ವಮಸಿ' ಮುಂತಾದ ಮಹಾವಾಕ್ಯಗಳು ಬ್ರಹ್ಮವು ಪ್ರತ್ಯಕ್ ಆಗಿ ಸಾಕ್ಷಿಯಾಗಿದೆಯೆಂದು ವರ್ಣಿಸಿದ್ದರೂ ಪದಾರ್ಥವಿವೇಕವಿಲ್ಲದ ಮನುಷ್ಯನಿಗೆ ದುರ್ಬೋಧವಾಗಿ ಪರೋಕ್ಷವಾಗಿಯೇ ಉಳಿದುಬಿಟ್ಟಿರುತ್ತದೆ. ದೇಹವೇ ನಾನು, ಇಂದ್ರಿಯಗಳೇ ನಾನು ಎಂಬ ಭ್ರಾಂತಿಯು ಮಾನವನಲ್ಲಿ ಗಟ್ಟಿಯಾಗಿ ಉಳಿದುಕೊಂಡಿರುತ್ತದೆ.

ವಿಚಾರಶೂನ್ಯನಾದ ಮಂದಬುದ್ಧಿಗೆ 'ಬ್ರಹ್ಮವೇ ನಾನು' ಎಂಬ ಅಪರೋಕ್ಷಜ್ಞಾನವು ಥಟ್ಟನೆ ಬರುವುದೇ ಇಲ್ಲ. ಶಾಸ್ತ್ರವನ್ನು ನಂಬಿ ವಿಚಾರಮಾಡತಕ್ಕ ಮನುಷ್ಯನಿಗೆ ಬ್ರಹ್ಮವು ಸಚ್ಚಿದಾನಂದ ಸ್ವರೂಪವೆಂಬ ಪರೋಕ್ಷಜ್ಞಾನವು ಬರುತ್ತದೆ. ದ್ವೈತಬುದ್ಧಿಯು ಪ್ರತ್ಯಕ್ಷವಾಗಿ ಅನುಭವದಲ್ಲಿರುತ್ತದೆ. ಆದರೂ ಅದು ಪ್ರತ್ಯಕ್ಷವಾಗದ - ಎಂದರೆ - ಪರೋಕ್ಷವಾದ ಅದ್ವೈತಬುದ್ಧಿಯನ್ನು ಹೋಗಲಾಡಿಸದು. ಆದ್ದರಿಂದ ಬ್ರಹ್ಮಸ್ವರೂಪವೇನೆಂದು ತಿಳಿಯುವುದು ಕಠಿಣವಲ್ಲ (೨೦-೨೨). ಎದುರಿಗಿರುವ ಪ್ರತಿಮೆಯು ಶಿಲೆಯೆಂಬ ಜ್ಞಾನವು ಪರೋಕ್ಷವಾದ ಈಶ್ವರ ಬುದ್ಧಿಯನ್ನು ಹೋಗಲಾಡಿಸುವುದಿಲ್ಲ. ಪ್ರತ್ಯಕ್ಷವು ಪರೋಕ್ಷಕ್ಕಿಂತ ಪ್ರಬಲವಾದರೂ ಪ್ರತ್ಯಕ್ಷವು ಭ್ರಮೆಯಾದಾಗ ಪರೋಕ್ಷವಾದ ಪ್ರಾಮಾಣಿಕಜ್ಞಾನವನ್ನು ಬಾಧಿಸುವುದಿಲ್ಲ. ಪ್ರತಿಮಾದಿಗಳು ವಿಷ್ಣುವೆಂಬ ವಿಷಯದಲ್ಲಿ ಯಾವನು ಸಂದೇಹಪಡುತ್ತಾನೆ? ಶ್ರದ್ಧೆಯಿಲ್ಲದ ನಾಸ್ತಿಕನು ಪ್ರತಿಮೆಯಲ್ಲಿ ವಿಷ್ಣುಬುದ್ಧಿಯನ್ನಿಡುವುದಿಲ್ಲವೆಂಬುದು ಉದಾಹರಣೆಯಲ್ಲ. ಏಕೆಂದರೆ, ವೇದೋಕ್ತವಾದ ಅನುಷ್ಠಾನಗಳಲ್ಲಿ ಶ್ರದ್ಧೆಯಿರುವ ಆಸ್ತಿಕನಿಗೆ ಮಾತ್ರ ಅಧಿಕಾರವಿರುತ್ತದೆ (೨೩-೨೪).

ಈಗ ಏನಾಯಿತೆಂದರೆ, ಶಾಸ್ತ್ರೀಯ ವಿಷಯವನ್ನು ಒಂದು ಸಲ ಹೇಳಿದರೂ ಶ್ರದ್ಧಾಳುವಿಗೆ ಪರೋಕ್ಷಜ್ಞಾನವು ಬಂದುಬಿಡುತ್ತದೆ. ಹೇಗೆಂದರೆ, ಇದು ವಿಷ್ಣು ದೇವಸ್ಥಾನ, ಈ ಪ್ರತಿಮೆ ವಿಷ್ಣು ಎಂದು ಹೇಳಿದರೆ ಸಾಕು ವಿಷ್ಣುಬುದ್ಧಿ ಬರುತ್ತದೆ. ಅಲ್ಲಿ ಚರ್ಚೆ ಏನೂ ಬೇಕಾಗುವುದಿಲ್ಲ. ಶಾಸ್ತ್ರಗಳಲ್ಲಿ ನಡೆಯುವ ವಿಚಾರಗಳೂ ಚರ್ಚೆಗಳೂ ಕರ್ಮ ಮತ್ತು ಉಪಾಸನೆಗಳಿಗೆ ಸಂಬಂಧಿಸಿದವು. ಬೇರೆ ಬೇರೆ ಶಾಖೆಗಳಲ್ಲಿ ವಿಹಿತವಾಗಿರುವ ಕರ್ಮೋಪಾಸನೆಗಳನ್ನು ಸಮನ್ವಯಗೊಳಿಸಿ ತಿಳಿಸುವುದು ಸುಲಭವಾದ್ದಲ್ಲ. ಅದು ನಮ್ಮಂತಹ ಮನುಷ್ಯರಿಂದ ನಿರ್ಣಯಿಸಲು ಅಶಕ್ಯವಾದದ್ದು (೨೫-೨೬). ನಮ್ಮಿಂದ ನಿರ್ಣಯಿಸಲಾಗದಿದ್ದರೂ ಜೈಮಿನಿಯೇ ಮೊದಲಾದ ಪೂರ್ವಾಚಾರ್ಯರು ನಿರ್ಣಯಿಸಿದ್ದಾರೆ. ಅದೆಲ್ಲವನ್ನೂ ಕಲ್ಪಸೂತ್ರಗಳಲ್ಲಿ ಸ್ಪಷ್ಟವಾಗಿ ತಿಳಿಸಿದ್ದಾರೆ. ಆಸ್ತಿಕನಾದವನು ಹೊಸದಾಗಿ ವಿಚಾರವನ್ನೇನೂ ಮಾಡಬೇಕಾದ್ದಿಲ್ಲ. ಅಲ್ಲಿ ಹೇಳಿದ್ದನ್ನು ಸರಿಯಾಗಿ ಅನುಷ್ಠಾನ ಮಾಡಲು ಸಾಧ್ಯವಿಲ್ಲ. ಅಲ್ಲಿ ಹೇಳಿರುವುದು ಕರ್ಮದ ವಿಷಯವಾದರೂ ಉಪಾಸನೆಗಳ ವಿಷಯವನ್ನು ಮಂತ್ರಕಲ್ಪಗಳೆಂಬ ಆರ್ಷಗ್ರಂಥಗಳಲ್ಲಿ ವರ್ಣಿಸಿದ್ದಾರೆ. ವಿಚಾರಿಸಿ ನಿರ್ಣಯಿಸಲು ಅಸಮರ್ಥ-

ರಾದವರು ಮಂತ್ರಕಲ್ಪಗಳಲ್ಲಿರುವ ಉಪಾಸನಾಕ್ರಮಗಳನ್ನು ಗುರು ಮುಖದಿಂದ ತಿಳಿದು ಉಪಾಸನೆ ಮಾಡುತ್ತಿದ್ದಾರೆ (೨೭-೨೮). ಈಗಲೂ ಗ್ರಂಥಕಾರರು ವೇದವಾಕ್ಯಗಳ ಅರ್ಥವನ್ನು ನಿರ್ಣಯಿಸುವುದಕ್ಕಾಗಿ ಚರ್ಚೆಯನ್ನು ನಡೆಸುತ್ತಲೇ ಇದ್ದಾರೆ. ಅದು ಸ್ವಬುದ್ಧಿಪ್ರಚಾರದ ಸಂತೋಷಕ್ಕಾಗಿ! ಆಪ್ತೋಪದೇಶಮಾತ್ರದಿಂದಲೇ ಅನುಷ್ಠಾನವನ್ನು ಮಾಡಲು ಬರುತ್ತದೆಯಲ್ಲವೆ! ಹಾಗೆ ಆಪ್ತೋಪದೇಶಮಾತ್ರದಿಂದ ಬ್ರಹ್ಮಸಾಕ್ಷಾತ್ಕಾರವು ಮಾತ್ರ ಎಂದಿಗೂ ಆಗುವುದಿಲ್ಲ. ಅದಕ್ಕಾಗಿ ವಿಚಾರವನ್ನು ಮಾಡಲೇಬೇಕು. ಆತ್ಮತತ್ತ್ವದ ಪರೋಕ್ಷಜ್ಞಾನಕ್ಕೆ ಅವಿಶ್ವಾಸ ಒಂದೇ ಪ್ರತಿಬಂಧಕ. ವಿಶ್ವಾಸವಿದ್ದರೆ ಆಪ್ತೋಪದೇಶದಿಂದಲೇ ಪರೋಕ್ಷಜ್ಞಾನವು ಹುಟ್ಟಿಬಿಡುತ್ತದೆ. ಅಪರೋಕ್ಷ-ಜ್ಞಾನಕ್ಕೆ ವಿಚಾರಮಾಡದಿರುವುದು ಪ್ರತಿಬಂಧಕ. ಆದ್ದರಿಂದ ವಿಚಾರವನ್ನು ಮಾಡಲೇಬೇಕು (೨೯-೩೧). 'ತತ್ತ್ವಮ್' ಪದಾರ್ಥಗಳನ್ನು ಸಮಗ್ರವಾಗಿ ವಿಮರ್ಶಿಸಿದರೂ ಅಪರೋಕ್ಷಜ್ಞಾನವು ಹುಟ್ಟದೇಹೋದರೆ, ಮತ್ತೆ ಮತ್ತೆ ಆ ವಿಚಾರವನ್ನು ಮಾಡುತ್ತಲೇ ಇರಬೇಕು. ಜೀವಬ್ರಹ್ಮರ ಐಕ್ಯಜ್ಞಾನ ಉಂಟಾಗಲು ಬೇರೆ ಯಾವ ಮಾರ್ಗವೂ ಇಲ್ಲ. ಮರಣಪರ್ಯಂತವಾಗಿ ವಿಚಾರಮಾಡಿದರೂ ಏಕತಾಜ್ಞಾನವು ಉದಿಸಿ ಆತ್ಮಲಾಭವಾಗದಿದ್ದರೆ ಜನ್ಮಾಂತರದಲ್ಲಾದರೂ ಆತ್ಮಜ್ಞಾನವು ಪ್ರಾಪ್ತವಾಗುತ್ತದೆ. ಪ್ರತಿಬಂಧಕವು ಕ್ಷಯಿಸಿದೊಡನೆ ಅದು ಪ್ರಾಪ್ತವಾಗುತ್ತದೆ (೩೨-೩೩).

ಬ್ರಹ್ಮಸೂತ್ರಕಾರರು **'ಐಹಿಕಮಪಿ ಅಪ್ರಸ್ತುತ ಪ್ರತಿಬಂಧೇ ತದ್ದರ್ಶನಾತ್'** ಎಂಬ ಸೂತ್ರದಲ್ಲಿ (೩-೪-೫೧) ವಿದ್ಯೆಯು ಈ ಜನ್ಮದಲ್ಲಿ ಲಭಿಸದಿದ್ದರೂ ಮುಂದಿನ ಜನ್ಮದಲ್ಲಿ ಲಭಿಸುತ್ತದೆ ಎಂದು ಹೇಳಿದ್ದಾರೆ. ವೇದದಲ್ಲಿಯೂ **''ಶೃಣ್ವಂತೋಽಪಿ ಬಹವೋ ಯಂ ನ ವಿದ್ಯುಃ''** (ಕಠ.ಉ.೨-೭) ಎಂಬ ಉಕ್ತಿ ಇದೆ. ಆತ್ಮವಿಷಯದ ಶ್ರವಣವನ್ನು ಮಾಡುತ್ತಿದ್ದರೂ ಪ್ರತಿಬಂಧಕವಿದ್ದರೆ ಬಹಳ ಜನರು ಆತ್ಮನನ್ನು ತಿಳಿಯಲಾರರು - ಎಂದು ಅದರ ಅರ್ಥ (೩೪). ಜನ್ಮಾಂತರದಲ್ಲಾದರೂ ಬ್ರಹ್ಮಜ್ಞಾನವು ಪ್ರಾಪ್ತವಾಗುತ್ತದೆ ಎಂಬುದಕ್ಕೆ ಒಂದು ಉದಾಹರಣೆ ಇದೆ. ವಾಮದೇವಋಷಿಯು ಗರ್ಭವಾಸದಲ್ಲಿದ್ದಾಗಲೇ, ಜನ್ಮಾಂತರದಲ್ಲಿ ಮಾಡಿದ ಆತ್ಮತತ್ತ್ವವಿಚಾರ ಬಲದಿಂದ, ಬ್ರಹ್ಮಜ್ಞಾನವನ್ನು ಪಡೆದನೆಂದು ಶ್ರುತಿಯೇ ಹೇಳಿದೆ. ವೇದಾಧ್ಯಯನ ಮಾಡತಕ್ಕವನಿಗೆ ಆ ದಿನ ಬಹಳ ಸಲ ಹೇಳಿದರೂ

ಒಂದು ಮಂತ್ರವು ಕಂಠಪಾಠವಾಗುವುದಿಲ್ಲ. ಮಾರನೆಯದಿನ ಮತ್ತೆ ಅಧ್ಯಯನ ಮಾಡದಿದ್ದರೂ ಆ ಮಂತ್ರವು ಸ್ಮರಣೆಗೆ ಬಂದು ಬಿಡುವುದುಂಟು! (೩೫-೩೬). ಯಾವುದಕ್ಕೂ ಕಾಲವು ಪರಿಪಕ್ವವಾಗಿ ಫಲವನ್ನು ನೀಡಬೇಕಾಗಿದೆ. ಕೃಷಿಯಲ್ಲಿ ಬಿತ್ತನೆಯಾದ ಮೇಲೆ ಫಲವು ದೊರೆಯಲು ಕಾಲಾವಧಿ ಇದೆ. ಗರ್ಭವು ಬೆಳೆದು ಶಿಶುವಾಗಲೂ ಕಾಲಾವಧಿ ಇದೆ. ಹಾಗೆ ಆತ್ಮಜ್ಞಾನ ಪರಿಪಕ್ವವಾಗಲು ಒಂದು ಕಾಲವನ್ನು ಅಪೇಕ್ಷಿಸುತ್ತದೆ. ಶ್ರೀ ಸುರೇಶ್ವರಾಚಾರ್ಯರು ತಮ್ಮ ವಾರ್ತಿಕದಲ್ಲಿ - ''ಮನುಷ್ಯನಿಗೆ ಆತ್ಮಜ್ಞಾನವಾಗಲು ಮೂರು ವಿಧದ ಪ್ರತಿಬಂಧಕಗಳಿವೆ. ಆದ್ದರಿಂದ ಮತ್ತೆ ಮತ್ತೆ ವಿಚಾರಮಾಡಿದರೂ ಜಿಜ್ಞಾಸುವು ಆತ್ಮತತ್ತ್ವವನ್ನು ತಿಳಿಯಲಾರದೆ ಹೋಗುತ್ತಾನೆ'' ಎಂದು ಸುಂದರವಾಗಿ ಪ್ರತಿಪಾದಿಸಿದ್ದಾರೆ(೩೭-೩೮). ಆತ್ಮತತ್ತ್ವದ ಅಪರೋಕ್ಷಜ್ಞಾನವು ಪ್ರತಿಬಂಧದ ಕ್ಷಯದಿಂದ ಆಗುತ್ತದೆ. ಪ್ರತಿಬಂಧವು ಭೂತ, ಭಾವಿ, ವರ್ತಮಾನವೆಂದು ಮೂರು ವಿಧ. ವೇದವೇದಾರ್ಥಗಳನ್ನು ಕ್ರಮವಾಗಿ ಅಧ್ಯಯನಮಾಡಿ ತಿಳಿದ ವಿದ್ವಾಂಸನಾದರೂ ಈ ಪ್ರತಿಬಂಧಕವಿರುವುದರಿಂದ ಮುಕ್ತನಾಗುವುದಿಲ್ಲ. ಹಿರಣ್ಯನಿಧಿದೃಷ್ಟಾಂತದಿಂದ ಇದನ್ನು ಉಪನಿಷತ್ತು ಈ ವಿಷಯವನ್ನು ಪ್ರತಿಪಾದಿಸಿದೆ. ''ತದ್ಯಥಾ ಹಿರಣ್ಯನಿಧಿನಿಹಿತಮಕ್ಷೇತ್ರಜ್ಞಾ ಉಪರ್ಯುಪರಿ ಸಂಚರಂತೋ ನ ವಿಂದೇಯುರೇವಮೇವೇಮಾಃ ಸರ್ವಾಃ ಪ್ರಜಾ ಅಹರಹರ್ಬ್ರಹ್ಮಲೋಕಂ ಗಚ್ಛಂತ್ಯ ಏತಂ ಬ್ರಹ್ಮಲೋಕಂ ನ ವಿಂದಂತ್ಯನೃತೇನ ಹಿ ಪ್ರತ್ಯೂಢಾಃ'' (ಛಾಂ.ಉ.೮-೩-೨) ಎಂದು ಶ್ರುತಿವಚನವಿದೆ. ಒಂದು ಕ್ಷೇತ್ರದಲ್ಲಿ ನೆಲದೊಳಗೆ ಚಿನ್ನದ ನಿಧಿಯನ್ನು ಯಾರೋ ಹೂತಿರುತ್ತಾರೆ. ಜನರು ಆ ನೆಲದ ಮೇಲೆ ಪ್ರತಿದಿನವೂ ತಿರುಗಾಡುತ್ತಲೇ ಇರುತ್ತಾರೆ. ನೆಲದೊಳಗೆ ಚಿನ್ನವಿರುವುದು ಗೊತ್ತಿಲ್ಲದ್ದರಿಂದ ಅವರಿಗೆ ಅದು ಸಿಗುವುದಿಲ್ಲ. ಹಾಗೆಯೇ ಸಕಲಪ್ರಜೆಗಳೂ ಬ್ರಹ್ಮದ ಬಳಿಗೆ ಪ್ರತಿದಿನವೂ ಹೋಗುತ್ತಿದ್ದರೂ ಅದನ್ನರಿಯದೇ ಇದ್ದಾರೆ. ಏಕೆಂದರೆ, ವಾಸನಾರೂಪವಾದ ಅನೃತದಿಂದ ಅವರು ಆಕ್ರಾಂತರಾಗಿರುತ್ತಾರೆ'' ಎಂದು ಈ ಶ್ರುತಿಯ ಅರ್ಥವಾಗಿದೆ. ಇದು ಪ್ರತಿಬಂಧಕವಾದ ಪೂರ್ವ ವಾಸನೆಯಿಂದ ಆದದ್ದು (೩೯-೪೦). ಭೂತಕಾಲದ ಪ್ರತಿಬಂಧಕ್ಕೆ ಉದಾಹರಣೆ - ಒಬ್ಬ ಮನುಷ್ಯನು ರಾಜಪತ್ನಿಯಲ್ಲಿ ಅನುರಕ್ತನಾಗಿದ್ದನು. ಅನಂತರ ಅವನು ಗೃಹಸ್ಥಾಶ್ರಮವನ್ನು ತೊರೆದು ಸಂನ್ಯಾಸಿಯಾದನು. ಆಗ ಗುರುವಿನ ಬಳಿಯಲ್ಲಿ ಶ್ರವಣಾದಿಗಳನ್ನು ಮಾಡಿದರೂ ಆತ್ಮಜ್ಞಾನವಾಗಲಿಲ್ಲ. ಕಾರಣವೇನೆಂಬು

ದನ್ನರಿತ ಗುರುವು ಆ ರಾಣಿಯನ್ನೇ ಉದಾಹರಣೆಯಾಗಿ ತೆಗೆದುಕೊಂಡು ಅವಳ ದೇಹಸ್ವರೂಪಾದಿಗಳನ್ನು ವರ್ಣಿಸಿ ವೈರಾಗ್ಯವನ್ನುಂಟುಮಾಡಿ ಬ್ರಹ್ಮತತ್ತ್ವವನ್ನು ಬೋಧಿಸಿದನು. ಆಗ ಈ ಸಂನ್ಯಾಸಿಶಿಷ್ಯನಿಗೆ ಜ್ಞಾನೋದಯವಾಯಿತಂತೆ! ಈ ಕಥೆ ಲೋಕದಲ್ಲಿ ಪ್ರಸಿದ್ಧವಾಗಿದೆ. ರಾಣಿಯಲ್ಲಿಟ್ಟಿದ್ದ ಅನುರಾಗವು ಇಲ್ಲಿ ಪ್ರತಿಬಂಧಕವಾಗಿತ್ತು(೪೧-೪೨). ಈಗ ವರ್ತಮಾನಪ್ರತಿಬಂಧಕವನ್ನು ನೋಡೋಣ. ವಿಷಯಸುಖಗಳಲ್ಲಿ ಆಸಕ್ತಿ ಬುದ್ಧಿಮಾಂದ್ಯ(ಗ್ರಹಣಶಕ್ತಿ ಇಲ್ಲದಿರುವುದು), ಕುತರ್ಕ, ಶ್ರುತಿ ವಚನಕ್ಕೆ ತಪ್ಪಾದ ಅರ್ಥವನ್ನು ಹೇಳುವ ದುರಾಗ್ರಹ - ಇವುಗಳಲ್ಲಿ ಒಂದಿದ್ದರೂ ಬ್ರಹ್ಮಜ್ಞಾನವಾಗದು. ಈ ಪ್ರತಿಬಂಧಕಗಳನ್ನು ಶಮದಮಾದಿಗಳಿಂದಲೂ ಶ್ರವಣ ಮನನಾದಿಗಳಿಂದಲೂ ಸಮುಚಿತವಾದ ಇತರ ವಿಷಯಗಳಿಂದಲೂ ಹೋಗಲಾಡಿಸಿಕೊಂಡರೆ, ಆತನು ಬ್ರಹ್ಮತ್ವವನ್ನು ಪಡೆಯುವನು(೪೩-೪೪). ಈಗ ಭವಿಷ್ಯತ್ಕಾಲದ ಪ್ರತಿಬಂಧಕವಾವುದೆಂದು ನೋಡಬಹುದು. ಇದು ಪ್ರಾರಬ್ಧಕರ್ಮವೇ ಆಗಿದೆ. ಮೋಕ್ಷಕ್ಕೆ ಇದು ಪ್ರತಿಬಂಧಕವಾಗಿ ನಿಲ್ಲುತ್ತದೆ. ಇದು ಭೋಗದಿಂದಲೇ ನಿವೃತ್ತವಾಗುತ್ತದೆ. ವಾಮದೇವನು ಒಂದು ಜನ್ಮವನ್ನು ಎತ್ತಬೇಕಾಯಿತೆಂದು ಹಿಂದೆ ಹೇಳಿದೆ. ಜಡಭರತನು ಮೂರು ಜನ್ಮಗಳನ್ನೆತ್ತಿದ ಮೇಲೆ ಶಮನವಾಯಿತು. ಎಷ್ಟು ಜನ್ಮಗಳಾದಮೇಲೆ ಮುಕ್ತಿಯನ್ನು ಪಡೆಯುತ್ತಾನೆಂಬ ನಿಯಮವೇನೂ ಇಲ್ಲ. ಅದು ಆಯಾವ್ಯಕ್ತಿಯ ಕರ್ಮಫಲವನ್ನು ಅನುಸರಿಸಿರುತ್ತದೆ (೪೫).

ಆದ್ದರಿಂದಲೇ ಭಗವದ್ಗೀತೆಯಲ್ಲಿ ಯೋಗಭ್ರಷ್ಟನಿಗೆ ಬಹುಜನ್ಮಗಳು ಕಳೆದ ಮೇಲೆ ಪ್ರತಿಬಂಧಕ್ಷಯವಾಗುತ್ತದೆಯೆಂದು ಹೇಳಿದೆ. ಯೋಗಭ್ರಷ್ಟನೆಂದರೆ ತತ್ತ್ವಸಾಕ್ಷಾತ್ಕಾರಪರ್ಯಂತವಿಚಾರಮಾಡದವನು ಎಂದರ್ಥ. ಅದುವರೆಗೆ ಮಾಡಿದ ವಿಚಾರವೇನೂ ವ್ಯರ್ಥವಾಗುವುದಿಲ್ಲ(೪೬). ಅದು ಮುಂದಿನ ವಿಚಾರಕ್ಕೆ ನೆರವನ್ನು ನೀಡುತ್ತದೆ. ಗೀತೆಯಲ್ಲಿ ಹೇಳಿದ ಮುಂದಿನ ನಾಲ್ಕು ಶ್ಲೋಕಗಳ ಅರ್ಥ ಹೀಗಿದೆ - ಯೋಗಭ್ರಷ್ಟನು ತಾನು ಮಾಡಿದ ವಿಚಾರದ ಫಲವಾಗಿ ಪುಣ್ಯಶಾಲಿಗಳಿಗೆ ಲಭಿಸುವ ಸ್ವರ್ಗಾದಿಲೋಕಗಳನ್ನನುಭವಿಸಿ, ಆ ಸುಖಗಳಲ್ಲಿ ಅಭಿಲಾಷೆಯನ್ನಿಟ್ಟರೆ, ಶುಚಿಗಳಾದ ಶ್ರೀಮಂತರ ವಂಶದಲ್ಲಿ ಹುಟ್ಟುತ್ತಾನೆ. ವಿಷಯ ಸುಖದಲ್ಲಿ ಆಸೆಯಿಲ್ಲದೆ ನಿಃಸ್ಪೃಹನಾಗಿದ್ದರೆ, ಧೀಮಂತರಾದ ಯೋಗಿಗಳ ವಂಶದಲ್ಲಿಯೇ ಹುಟ್ಟುತ್ತಾನೆ. ಪೂರ್ವದೇಹದಲ್ಲಿ

ಮಾಡಿದ ವಿಚಾರದ ಬಲದಿಂದ ಮತ್ತೆ ಆತ್ಮತತ್ತ್ವವಿಚಾರದಲ್ಲಿ ಪ್ರವೃತ್ತನಾಗುತ್ತಾನೆ. ಇಂತಹ ಪುಣ್ಯಜನ್ಮವು ದುರ್ಲಭ. ಪೂರ್ವಜನ್ಮದ ಸಂಸ್ಕಾರವು ಮತ್ತೆ ಆತನನ್ನು ಆತ್ಮತತ್ತ್ವದ ಕಡೆಗೆ ಆಕರ್ಷಿಸುತ್ತದೆ. ಹೀಗೆ ಅನೇಕ ಜನ್ಮಗಳು ಕಳೆದ ಮೇಲೆ ಪ್ರತಿಬಂಧಕ್ಷಯವಾದೊಡನೆ ಪರಮೋತ್ತಮವಾದ ಗತಿಯನ್ನು - ಮುಕ್ತಿಯನ್ನು ಪಡೆಯುವನು (೪೭-೫೦). ಒಂದು ವೇಳೆ ಆ ವ್ಯಕ್ತಿಗೆ ಬ್ರಹ್ಮಲೋಕವನ್ನು ಪಡೆಯಬೇಕೆಂಬ ಇಚ್ಛೆಯು ಪ್ರಬಲವಾಗಿದ್ದರೂ ಅದಕ್ಕಾಗಿ ಯತ್ನಿಸದೆ ಅದನ್ನು ತಡೆದು ಆತ್ಮವಿಚಾರದಲ್ಲಿಯೇ ಪ್ರಸಕ್ತನಾದರೆ, ಆತನಿಗೆ ಮೊದಲು ಬ್ರಹ್ಮಲೋಕವು ಪ್ರಾಪ್ತವಾಗುವುದೇ ಹೊರತು ಮುಕ್ತಿಯಲ್ಲ. ಅವನಿಗೆ ಆತ್ಮಸಾಕ್ಷಾತ್ಕಾರವಾಗದೆಯೇ ಬ್ರಹ್ಮಲೋಕಪ್ರಾಪ್ತಿಯಾಗುತ್ತದೆ. ಕಲ್ಪಾಂತಸಮಯದಲ್ಲಿ ಆತನಿಗೆ ಆತ್ಮಸಾಕ್ಷಾತ್ಕಾರವಾಗಿ ಬ್ರಹ್ಮನೊಡನೆ ಮುಕ್ತನಾಗುತ್ತಾನೆ. ಇದಕ್ಕೆ ಕೆಳಗೆ ಬರೆದ ಪ್ರಮಾಣಗಳುಂಟು -

ವೇದಾಂತವಿಜ್ಞಾನಸುನಿಶ್ಚಿತಾರ್ಥಾಃ
ಸಂನ್ಯಾಸಯೋಗಾದ್ಯತಯಃಶುದ್ಧಸತ್ತ್ವಾಃ ।
ತೇ ಬ್ರಹ್ಮಲೋಕೇ ತು ಪರಾಂತಕಾಲೇ
ಪರಾಮೃತಾಃ ಪರಿಮುಚ್ಯಂತಿ ಸರ್ವೇ ॥

(ಕೈ.ಉ.-೪)

ಬ್ರಹ್ಮಣಾ ಸಹ ತೇ ಸರ್ವೇ ಸಂಪ್ರಾಪ್ತೇ ಪ್ರತಿಸಂಚರೇ ।
ಪರಸ್ಯಾಂತೇ ಕೃತಾತ್ಮಾನಃ ಪ್ರವಿಶಂತಿ ಪರಂ ಪದಮ್ ॥

(೫೧-೫೨)

ಹೀಗೆ ತತ್ತ್ವವಿಚಾರನ್ನು ಮಾಡಿದರೂ ಕೆಲವರಿಗೆ ಪ್ರತಿಬಂಧಕ ವಿರುವುದರಿಂದ ಬ್ರಹ್ಮಸಾಕ್ಷಾತ್ಕಾರವಾಗುವುದಿಲ್ಲ. ಪಾಪಿಷ್ಠರಾದ ಇನ್ನು ಕೆಲವರಿಗೆ ಅವರ ಕರ್ಮವೇ ತತ್ತ್ವವಿಚಾರಕ್ಕೆ ಅವಕಾಶವನ್ನು ಕೊಡುವುದಿಲ್ಲ. 'ಶ್ರವಣಾಯಾಪಿ ಬಹುಭಿರ್ಯೋ ನ ಲಭ್ಯಃ' (ಕಠ. ಉ. ೨-೭) ಎಂದು ಶ್ರುತಿ ಹೇಳುತ್ತದೆ. ಬಹಳ ಜನರಿಗೆ ಆತ್ಮನು ಶ್ರವಣಮಾಡಲೂ ಲಭ್ಯನಲ್ಲ. ಇನ್ನು ಕೆಲವರಿಗೆ ಬುದ್ಧಿಮಾಂದ್ಯದಿಂದ ತತ್ತ್ವವಿಚಾರವನ್ನು ಗ್ರಹಿಸಲು ಸಾಧ್ಯವಾಗದಿರಬಹುದು. ಇನ್ನು ಕೆಲವರಿಗೆ ಸಮರ್ಥನಾದ ಗುರುವು ದೊರೆಯದೆಯೋ ಅಥವಾ ಬೇರೆ ಕಾರಣಗಳಿಂದಲೋ ತತ್ತ್ವವನ್ನರಿಯ

ಲಾರದೆ ಇರಬಹುದು. ಅಂತಹವರು ತತ್ತ್ವಾಪೇಕ್ಷಿಗಳಾಗಿದ್ದರೆ ಸರ್ವದಾ ಬ್ರಹ್ಮವನ್ನು ಉಪಾಸನೆ ಮಾಡತಕ್ಕದ್ದು (೫೩-೫೪). ಬ್ರಹ್ಮವು ನಿರ್ಗುಣವಾದ್ದರಿಂದ ಉಪಾಸನೆ ಮಾಡುವುದು ಸಾಧ್ಯವಾಗದು - ಎನ್ನುವಂತಿಲ್ಲ. ಸಗುಣಬ್ರಹ್ಮವನ್ನು ಹೇಗೆ ಧ್ಯಾನಿಸುತ್ತೀರೋ ಹಾಗೆಯೇ ನಿರ್ಗುಣಬ್ರಹ್ಮವನ್ನು ಧ್ಯಾನಿಸಲು ಸಾಧ್ಯವಿದೆ. ಬ್ರಹ್ಮವು ವಾಙ್ಮನಸ್ಸುಗಳಿಗೆ ಅಗೋಚರವಾದ್ದರಿಂದ ಧ್ಯಾನಿಸಲು ಆಗುವುದಿಲ್ಲವೆನ್ನುವುದಾದರೆ, ಅವಾಙ್ಮನಸಗೋಚರವಾದ ಬ್ರಹ್ಮವನ್ನು ತಿಳಿಯಲೂ ಆಗುವುದಿಲ್ಲವೆಂದು ಹೇಳಬೇಕಾಗುತ್ತದೆ! (೫೫-೫೬). ಬ್ರಹ್ಮವು ವಾಙ್ಮನಸಗಳಿಗೆ ಗೋಚರವಲ್ಲವೆಂದು ತಿಳಿಯಲು ಸಾಧ್ಯವಿದೆಯೆನ್ನುವುದಾದರೆ, ಬ್ರಹ್ಮವು ವಾಙ್ಮನಸಗಳಿಗೆ ಗೋಚರವಲ್ಲವೆಂದೇ ಉಪಾಸನೆಮಾಡಲು ಇರುವ ಅಡ್ಡಿಯೇನು? ಬ್ರಹ್ಮವನ್ನು ಉಪಾಸನೆಮಾಡಲು ಸಾಧ್ಯವೆನ್ನುವುದಾದರೆ ಅದು ಸಗುಣವಾಗಿ ಬಿಡುತ್ತದೆಯೆಂದರೆ, ಬ್ರಹ್ಮವನ್ನು ತಿಳಿಯಲು ಸಾಧ್ಯವಾದರೆ ಅದು ಜ್ಞೇಯವಾಗಿ ಸಗುಣವಾಗಿಬಿಡುತ್ತದೆಯಲ್ಲ - ಎನ್ನುವುದೇ ಉತ್ತರವಾಗುತ್ತದೆ! ಬ್ರಹ್ಮವು ಸಾಕ್ಷಾತ್ತಾಗಿ ಜ್ಞೇಯವಲ್ಲ, ಲಕ್ಷಣಾವೃತ್ತಿಯಿಂದ ಲಕ್ಷ್ಯಾರ್ಥವು ಜ್ಞೇಯವಾಗುತ್ತದೆ ಎನ್ನುವುದಾದರೆ, ಬ್ರಹ್ಮವು ಲಕ್ಷಣಾವೃತ್ತಿಯಿಂದಲೇ ಉಪಾಸ್ಯವೂ ಆಗುತ್ತದೆ ಎನ್ನಲು ಅಡ್ಡಿಯೇನು? ಲಕ್ಷ್ಯಾರ್ಥವನ್ನೇ ಉಪಾಸನೆ ಮಾಡಲಿ! (೫೭-೫೮). ಆದರೆ

**''ಯನ್ಮನಸಾ ನ ಮನುತೇ ಯೇನಾಹುರ್ಮನೋ ಮತಮ್ ।**
**ತದೇವ ಬ್ರಹ್ಮ ತ್ವಂ ವಿದ್ಧಿಂ ನೇದಂ ಯದಿದಮುಪಾಸತೇ ॥ ''**

ಎಂದು ಕೇನೋಪನಿಷತ್ತು (೧-೫). ಬ್ರಹ್ಮವು ಉಪಾಸ್ಯವಾಗುವುದಿಲ್ಲವೆಂದು ಸ್ಪಷ್ಟವಾಗಿ ತಿಳಿಸಿದೆಯಲ್ಲವೆ? ಹಾಗೆ ಹೇಳುವುದಾದರೆ ''**ಅನ್ಯದೇವ ತದ್ವಿದಿತಾತ್ ಅಥೋ ಅವಿದಿತಾದಧಿ**'' ಎಂದೂ ಕೇನೋಪನಿಷತ್ತೇ (೧-೩) ಹೇಳಿರುವುದರಿಂದ ಬ್ರಹ್ಮವು ಜ್ಞೇಯವಲ್ಲವೆಂದೂ ತಿಳಿದುಬರುತ್ತದೆ ಎನ್ನಬೇಕಾಗುವುದು. ಆಗ 'ವಿದಿತ - ಅವಿದಿತಗಳಿಗಿಂತ ಅತಿರಿಕ್ತವಾದದ್ದು ಬ್ರಹ್ಮ' ಎಂದು ಜ್ಞೇಯವಾಗುತ್ತದೆ - ಎನ್ನುವುದಾದರೆ, ಹಾಗೆಯೇ ''ಜನರು ಯಾವುದನ್ನು ಉಪಾಸನೆ ಮಾಡುತ್ತಾರೋ ಅದಕ್ಕೆ ಅತಿರಿಕ್ತವಾದದ್ದು ಬ್ರಹ್ಮ'' ಎಂದು ಉಪಾಸನೆ ಮಾಡಬಹುದಲ್ಲವೆ? (೫೯-೬೦). ಹಾಗೆ ಉಪಾಸನೆ ಮಾಡುವುದು ಬ್ರಹ್ಮಸ್ವರೂಪದ ವಸ್ತುಸ್ಥಿತಿಯಾಗುವುದಿಲ್ಲ - ಎಂದು ಹೇಳಿದರೆ, ವಿದಿತಾವಿದಿತಕ್ಕಿಂತ ಅತಿರಿಕ್ತವಾದದ್ದು ಬ್ರಹ್ಮ ಎಂದು ತಿಳಿಯುವುದು

ಜ್ಞೇಯವಾದ ಬ್ರಹ್ಮದ ವಸ್ತುಸ್ಥಿತಿಯಾಗುತ್ತದೆಯೇ? ಎಂದು ಕೇಳಬೇಕಾಗುತ್ತದೆ! ಅಂತಃಕರಣವೃತ್ತಿಯು ಬ್ರಹ್ಮಾಕಾರವಾಗುವುದೇ ಜ್ಞೇಯವಾದ್ದರಿಂದ ದೋಷವಿಲ್ಲ - ಎನ್ನುವುದಾದರೆ ಉಪಾಸನಾ ಪಕ್ಷದಲ್ಲಿಯೂ ಅಂತಃಕರಣ ವೃತ್ತಿಯು ಬ್ರಹ್ಮಾಕಾರವಾಗುವುದರಿಂದ ಉಭಯಪಕ್ಷಗಳೂ ಸಮವಾಗುತ್ತವೆ (೬೧). ಉಪಾಸನಾಪಕ್ಷದಲ್ಲಿ ನಿಮಗೇಕೆ ಇಷ್ಟು ಆಗ್ರಹ? ಎಂದು ಕೇಳಿದರೆ, ಉಪಾಸನೆಯಲ್ಲಿ ನಿನಗೇಕೆ ಇಷ್ಟು ದ್ವೇಷವಿದೆ ಎಂಬುದನ್ನು ಹೇಳು! - ಎನ್ನುವುದೇ ಉತ್ತರ. ನಿರ್ಗುಣೋಪಾಸನೆಗೆ ಪ್ರಮಾಣವೇನೆಂದು ಆಕ್ಷೇಪಿಸಕೂಡದು. ಏಕೆಂದರೆ ಈ ವಿಷಯವನ್ನು ಅನೇಕ ಶ್ರುತಿಗಳು ವಿಧಿಸಿರುವುದು ಕಂಡುಬರುತ್ತದೆ (೬೨).

ಉತ್ತರತಾಪನೀಯೋಪನಿಷತ್ತು, ಶೈಬ್ಯನ ಪ್ರಶ್ನೆಗೆ ಉತ್ತರವಿರುವ ಪ್ರಶ್ನೋಪನಿಷತ್, ಕಾಠಕ, ಮಾಂಡೂಕ್ಯ ಇವುಗಳಲ್ಲಿ ನಿರ್ಗುಣೋಪಾಸನೆಯನ್ನು ಹೇಳಿದೆ.

**ದೇವಾ ಹ ವೈ ಪ್ರಜಾಪತಿಮಬ್ರುವನ್...।** ( ನೃ.ಉ.ತಾ. ಉ.೧)
**ಯಃ ಪುನರೇತೇನ ತ್ರಿಮಾತ್ರೇಣ .......।** (ಪ್ರ.ಉ.೫-೫)
**ಸರ್ವೇ ವೇದಾ ಯತ್ಪದಮಾಮನಂತಿ....।** (ಕಠ.ಉ.೧-೨-೧೫)
**ಓಮಿತ್ಯೇತದಕ್ಷರಮಿದಂ ಸರ್ವಂ .........।** (ಮಾಂ.ಉ.೧)

ನಿರ್ಗುಣೋಪಾಸನಾಪ್ರಕಾರವನ್ನು 'ಪಂಚೀಕರಣ' ಎಂಬ ಗ್ರಂಥದಲ್ಲಿ ವಿವರಿಸಲಾಗಿದೆ. ಆ ಉಪಾಸನೆಯು ಕೇವಲ ಜ್ಞಾನಕ್ಕೆ ಸಾಧನವಲ್ಲವೆ? ಎಂದರೆ ಅಲ್ಲವೆಂದು ಯಾರು ಹೇಳಿದರು? ಬ್ರಹ್ಮೋಪಾಸನೆಯಿಂದ ಜ್ಞಾನವು ಪ್ರಾಪ್ತವಾಗುತ್ತದೆ. ಜ್ಞಾನದಿಂದ ಮೋಕ್ಷವೆಂದು ನಮ್ಮ ಹೇಳಿಕೆ (೬೩-೬೪). ಎಲ್ಲರೂ ಸಗುಣೋಪಾಸನೆಯನ್ನು ಮಾಡುತ್ತಾರೆ. ನಿರ್ಗುಣೋಪಾಸನೆಯನ್ನು ಯಾರೂ ಮಾಡುವುದಿಲ್ಲವೆಂದರೆ, ಮಾಡದಿದ್ದರೆ ಬೇಡ. ಅವರು ತಪ್ಪು ಮಾಡಿದರೆ ನಿರ್ಗುಣೋಪಾಸನೆಗೆ ಅದು ತಟ್ಟುವುದಿಲ್ಲ! ಪ್ರಮಾಣಸಿದ್ಧವಾದ ನಿರ್ಗುಣೋಪಾಸನೆಯನ್ನು ಬಿಟ್ಟು ಸಗುಣೋಪಾಸನೆಯನ್ನು ಮಾಡತಕ್ಕವರು ಮಾಡಿಕೊಳ್ಳಲಿ. ಅಥವಾ ವಶ್ಯಮಂತ್ರಾದಿಜಪಗಳಿಂದ ಬೇಗನೆ ಇಷ್ಟ ಸಿದ್ಧಿಯಾಗುತ್ತದೆಯೆಂದು ಸಗುಣೋಪಾಸನೆಯನ್ನಾದರೂ ತ್ಯಜಿಸಲಿ. ಅಥವಾ ಅದಕ್ಕಿಂತ ಕೃಷಿವಾಣಿಜ್ಯಗಳೇ ಉಪಯುಕ್ತವೆಂದು ತಿಳಿದು ಕೃಷ್ಯಾದಿಗಳಲ್ಲಾದರೂ ತೊಡಗಲಿ. ಮೂಢರು ಏನಾದರೂ ಮಾಡಿಕೊಳ್ಳಲಿ. ಅದರಿಂದ

ಉಪಾಸನೆಯನ್ನು ಮಾಡತಕ್ಕ ಆಸ್ತಿಕರು ಅದನ್ನು ಬಿಟ್ಟುಬಿಡುವುದಿಲ್ಲ (೬೫-೬೬). ಮೂಢರು ಹೇಗಾದರೂ ಮಾಡಿಕೊಳ್ಳಲಿ. ಪ್ರಕೃತವಾದದ್ದು ನಿರ್ಗುಣೋಪಾಸನೆ. ಅದನ್ನೀಗ ವಿವರಿಸುತ್ತೇನೆ. ಬ್ರಹ್ಮವಿದ್ಯೆಯು ಒಂದೇ ಆಗಿ ಏಕರೂಪವಾಗಿದೆ. ಬೇರೆ ಬೇರೆ ವೇದಶಾಖೆಗಳಲ್ಲಿ ಉಪಾಸನಾ ಪ್ರಕಾರಗಳು ವಿಭಿನ್ನವಾಗಿವೆ. ಸಗುಣೋಪಾಸನೆ, ನಿರ್ಗುಣೋಪಾಸನೆ, ಉಪಾಸನೆಯ ಫಲಭೇದ ಮುಂತಾದವು ಇವೆ. ಅವೆಲ್ಲವೂ ಬ್ರಹ್ಮವಿದ್ಯೆಗಾಗಿಯೇ ಇರುವುದರಿಂದ ಅಂತ್ಯದಲ್ಲಿ ನಿರ್ಗುಣೋಪಾಸನೆಗೆ ಬಂದು ಬ್ರಹ್ಮವಿದ್ಯೆಯಲ್ಲಿ ಸಮಾಪ್ತವಾಗಬೇಕು. ಬೇರೆ ಬೇರೆ ಗುಣಗಳು ಎಂದರೆ ಸಾಧನಗಳು ಉಪಸಂಹೃತವಾಗಿ ಮುಖ್ಯಲಕ್ಷ್ಯವಾದ ಬ್ರಹ್ಮವಿದ್ಯೆಯ ಬಳಿಗೆ ಸಾಗಿಸಬೇಕು ಇದಕ್ಕೆ ಗುಣೋಪಸಂಹಾರನ್ಯಾಯವೆಂದು ಹೆಸರು. ಕಾಶಿಗೆ ಹೋಗಲು ನಾಲ್ಕಾರುಮಾರ್ಗಗಳಿದ್ದಂತೆ ಬೇರೆ ಬೇರೆ ಉಪಾಸನೆಗಳಿವೆ. ಅವುಗಳಿಗೆ ಮುಖ್ಯವಾದ ಗಮ್ಯವು ಒಂದೇ ಎಂದು ಅಭಿಪ್ರಾಯ. "**ಸರ್ವ ವೇದಾಂತಪ್ರತ್ಯಯಂ ಚೋದನಾದ್ಯವಿಶೇಷಾತ್** " ಎಂಬ ಬ್ರಹ್ಮಸೂತ್ರದಲ್ಲಿ (೩-೩-೧) ಇದು ವಿವೃತವಾಗಿದೆ (೬೭). ಉಪಸಂಹರಿಸಬೇಕಾದ ಗುಣಗಳು ವಿಧೇಯಗಳೂ ನಿಷೇಧಗಳೂ ಆಗಿ ಎರಡು ಪ್ರಕಾರಗಳಲ್ಲಿವೆ. "**ಆನಂದಾದಯಃ ಪ್ರಧಾನಸ್ಯ**" ಎಂಬ ಸೂತ್ರದಲ್ಲಿ (೩-೩-೧೧) ವ್ಯಾಸರು ವಿಧೇಯಗುಣಗಳನ್ನು ವರ್ಣಿಸಿದ್ದಾರೆ. ಅಂತೆಯೇ ಅಸ್ಥೂಲ, ಅನಣು - ಇತ್ಯಾದಿ ನಿಷೇಧ್ಯಗುಣಗಳನ್ನು '**ಅಕ್ಷರಧಿಯಾಂತ್ವವಿರೋಧಃ ...**" (೩-೩-೩೩) ಎಂಬ ಸೂತ್ರದಲ್ಲಿ ಅವರು ತಿಳಿಸಿದ್ದಾರೆ. ಉದಾಹರಣೆ - ವಿಧೇಯಗುಣಗಳು - **ಸತ್ಯಂ ಜ್ಞಾನಮನಂತಂ ಬ್ರಹ್ಮ** (ತೈ. ಉ.೨-೧-೧) - ಇತ್ಯಾದಿ. ನಿಷೇಧ್ಯಗುಣಗಳು -**ಅಸ್ಥೂಲಮನಣ್ವಹ್ರಸ್ವಂ ಯತ್ತದದ್ರೇಶ್ಯಮ-ಗ್ರಾಹ್ಯ ಮಸ್ಪರ್ಶಮರೂಪಮವ್ಯಯಂ** - (ಯೋ. ಶಿ. ೩-೧೯) ಇತ್ಯಾದಿ (೬೮-೬೯). ಈಗೊಂದು ಆಕ್ಷೇಪ ಹುಟ್ಟುತ್ತದೆ. ಇಲ್ಲಿ ಬ್ರಹ್ಮವಿದ್ಯೆ ಎಂದರೆ ನಿರ್ಗುಣವೂ ಅಸಂಗವೂ ಆದ ಬ್ರಹ್ಮತತ್ತ್ವದ ವಿದ್ಯೆ. ಈ ಬ್ರಹ್ಮತತ್ತ್ವದಲ್ಲಿ ಯಾವ ಗುಣಗಳೂ ಇಲ್ಲವೆಂಬುದೇ ಸಿದ್ಧಾಂತವಾಗಿದೆ. ಹೀಗಿರುವಾಗ ನೀವು ಗುಣೋಪಸಂಹಾರದಿಂದ ಎಲ್ಲ ಗುಣಗಳನ್ನೂ ಬ್ರಹ್ಮತತ್ತ್ವದಲ್ಲಿ ಸಮನ್ವಯ ಮಾಡುತ್ತಿದ್ದೀರಿ: ಇದು ಅಯುಕ್ತವಲ್ಲವೆ? ಈ ಆಕ್ಷೇಪವು ಗುಣೋಪಸಂಹಾರ-ವನ್ನು ಹೇಳಿದ ವ್ಯಾಸಮುನಿಗಳಿಗೆ ಸಲ್ಲುತ್ತದೆ, ನನಗಲ್ಲ! ( ೭೦). ಆದರೆ ಆ ಉಪಾಸನೆಗಳಲ್ಲಿ ಹಿರಣ್ಯಶ್ಮಶ್ರುವಾದ ಸೂರ್ಯ - ಇತ್ಯಾದಿಯಾಗಿ ಸ್ಫುಟವಾದ

ಮೂರ್ತಿಗಳ ಉಲ್ಲೇಖವಿಲ್ಲವಾದ್ದರಿಂದ ನಿರ್ಗುಣತ್ವಕ್ಕೆ ವಿರೋಧವೇನೂ ಇಲ್ಲ - ಎಂದು ನೀನು ಹೇಳುವುದಾದರೆ, ಆಗಲಿ; ನಿನಗೆ ಸಮಾಧಾನವಾದರಾಯಿತು ಎಂದು ಸುಮ್ಮನಾಗುತ್ತೇವೆ. ವಸ್ತುತಸ್ತು ಆನಂದ, ಸತ್ಯ, ಅನಂತ - ಮುಂತಾದ ಶಬ್ದಗಳೂ ಲಕ್ಷಣಾವೃತ್ತಿಯಿಂದ ಬ್ರಹ್ಮಬೋಧಕಗಳು. ಬ್ರಹ್ಮತತ್ತ್ವದಲ್ಲಿ ಇವುಗಳ ವಾಚ್ಯಾರ್ಥಗಳಿಗೆ ಪ್ರವೇಶವಿಲ್ಲವಾದ್ದರಿಂದ ನಿರ್ಗುಣೋಪಾಸನೆಗೆ ಬಾಧೆ ಇಲ್ಲ ಎನ್ನುವುದಾದರೆ, ಸಂತೋಷ. ಆನಂದಾದಿಗಳು ಮತ್ತು ಅಸ್ಥೂಲಾದಿಗಳಿಂದ ಲಕ್ಷಿತವಾದ ಅಖಂಡೈಕರಸ ಬ್ರಹ್ಮವನ್ನು ಸೋಽಹಮಸ್ಮಿ ಎಂದು ಉಪಾಸಿಸು ಹಾಗೆಯೇ ನಿರ್ಗುಣೋಪಾಸನೆಯು ಸಾಗಲಿ. ಶುಭಮಸ್ತು (೭೧-೭೩).

ನಿರ್ಗುಣವಾದ ಆತ್ಮತತ್ತ್ವದ ಜ್ಞಾನದಂತೆ ಉಪಾಸನೆಯೂ ಸಾಧ್ಯವೆಂದು ಹೇಳಿದ್ದೀರಿ. ಹಾಗಾದರೆ ಜ್ಞಾನಕ್ಕೂ ಉಪಾಸನೆಗೂ ಇರುವ ಭೇದವೇನು? ಭೇದವಿದೆ. ಜ್ಞಾನವು ವಸ್ತುತಂತ್ರ, ಕರ್ತೃತಂತ್ರವಲ್ಲ. ಉಪಾಸನೆಯು ಕರ್ತೃ ತಂತ್ರ. ಇಷ್ಟೇ ಭೇದ. ವಸ್ತುತಂತ್ರವೆಂದರೆ ಘಟಪಟಾದಿವಸ್ತುವು ಹೇಗಿದೆಯೋ ಹಾಗೆ ಜ್ಞಾನ ಬರುತ್ತದೆ. ವಸ್ತುವಿದ್ದಂತೆ ಜ್ಞಾನವಾಗುತ್ತದೆ. ಕರ್ತೃವಿನ ಇಚ್ಛೆಗೆ ಜ್ಞಾನವು ಅಧೀನವಲ್ಲ. ಉಪಾಸನೆಯು ಹಾಗಲ್ಲ. ಕರ್ತೃವಿನ ಇಚ್ಛೆಯಿದ್ದಂತೆ ಆ ವಸ್ತುವನ್ನು ಧ್ಯಾನಿಸಬಹುದು. ವಿಗ್ರಹವನ್ನು ದೇವತೆಯೆಂದು ಉಪಾಸನೆಮಾಡಬಹುದು. ಉಪಾಸನೆಯು ಕ್ರಿಯೆಯಾದ್ದರಿಂದ ಕರ್ತೃವಿನ ಇಚ್ಛೆಗೆ ಒಳಪಡುತ್ತದೆ (೭೪). ವಿಚಾರಮಾಡುವುದರಿಂದ ಜ್ಞಾನವು ಹುಟ್ಟುತ್ತದೆ. ವಸ್ತುವಿದ್ದಂತೆ ಜ್ಞಾನ ಬರುತ್ತದೆ. ಆ ರೀತಿಯಾದ ಜ್ಞಾನವು ಬರದಿರಲಿ - ಎಂದು ಪ್ರಯತ್ನಿಸಿದರೆ, ಅದು ಜ್ಞಾನವನ್ನು ತಡೆಯುವುದಿಲ್ಲ, ತಡೆಯಲಾರದು. ಅಲ್ಲದೆ ವೇದಾಂತಶ್ರವಣದಿಂದ ಹುಟ್ಟಿದ ಜ್ಞಾನವು ಜಗತ್ತಿನಲ್ಲಿರುವ ಎಲ್ಲ ವಸ್ತುಗಳ ಸತ್ಯತೆಯನ್ನೂ ಸುಟ್ಟುಬಿಡುತ್ತದೆ ! (೭೫). ಈ ಪ್ರಕಾರವಾದ ತತ್ತ್ವಜ್ಞಾನದಿಂದ ಜಗತ್ತು ಮಿಥ್ಯೆಯೆಂಬ ಅರಿವಾದರೆ, ಆತನು ಕೃತಕೃತ್ಯನಾಗಿ ನಿತ್ಯತೃಪ್ತಿಯನ್ನು ಗಳಿಸುತ್ತಾನೆ. ಆತನು ಜೀವನ್ಮುಕ್ತನೆಂದು ತಿಳಿಯಬೇಕು. ಅವನು ಪ್ರಾರಬ್ಧಕರ್ಮವು ಕ್ಷಯಿಸಲೆಂದು ಎದುರು ನೋಡುತ್ತಿರುವನು. ಮುಮುಕ್ಷುವಾದವನು ಆಪ್ತನಾದ ಗುರುವಿನ ಉಪದೇಶದಲ್ಲಿ ದೃಢವಾದ ವಿಶ್ವಾಸವನ್ನಿಟ್ಟು, ಮತ್ತೇನನ್ನೂ ವಿಮರ್ಶಿಸಲು ಹೋಗದೆ, ಉಪಾಸ್ಯವಾದ ತತ್ತ್ವವನ್ನು ಏಕಾಗ್ರತೆಯಿಂದ ಧ್ಯಾನಿಸುತ್ತಿರಬೇಕು. ಧ್ಯಾನಮಾಡುವಾಗ ನಡುವೆ ಬೇರೆ ಯಾವ ವೃತ್ತಿಜ್ಞಾನವೂ ಬರಬಾರದು. ಈ ಪ್ರಕಾರವಾದ ಧ್ಯಾನವೇ ಉಪಾಸನೆ (೭೬-೭೭). ಎಲ್ಲಿಯವರೆಗೆ ಈ ಉಪಾಸನೆಯನ್ನು

ಮಾಡಬೇಕೆಂದರೆ, ಯಾವಾಗ ''ಉಪಾಸ್ಯದೇವತಾಸ್ವರೂಪನೇ ನಾನು' ಎಂಬ ನಂಬಿಕೆಯು ತನ್ನಲ್ಲಿ ಬಂದುಬಿಡುವುದೋ ಅಲ್ಲಿಯವರೆಗೆ ಉಪಾಸನೆ ಮಾಡಿ, ಅನಂತರ ಆ ನಂಬಿಕೆಯನ್ನು ಮರಣಪರ್ಯಂತವೂ ತನ್ನಲ್ಲಿ ಕಾಪಾಡಿಕೊಳ್ಳಬೇಕು. ಇದಕ್ಕೊಂದು ಉದಾಹರಣೆ ಛಾಂದೋಗ್ಯೋಪನಿಷತ್ತಿನಲ್ಲಿದೆ (೪-೩). ಸಂವರ್ಗವಿದ್ಯೆಯಲ್ಲಿರುವ ಪ್ರಾಣೋಪಾಸನೆಯನ್ನು ಮಾಡುತ್ತಿದ್ದ ಒಬ್ಬ ಬ್ರಹ್ಮಚಾರಿಯು ಭಿಕ್ಷೆಗಾಗಿ ಅಭಿಪ್ರತಾರಿಯೆಂಬ ರಾಜನ ಬಳಿಗೆ ಹೋದನು. ಪರೀಕ್ಷಾರ್ಥವಾಗಿ ರಾಜನು ಭಿಕ್ಷೆಯನ್ನು ನೀಡಲಿಲ್ಲ. ಆಗ ಬ್ರಹ್ಮಚಾರಿಯು ''ಅಭಿಪ್ರತಾರಿನ್, ಅಗ್ನಿ, ವಾಕ್ - ಇತ್ಯಾದಿ ದೇವತಾ ಸ್ವರೂಪನಾದ ಪ್ರಜಾಪತಿಯನ್ನು ಅವಿವೇಕಿಗಳು ಗುರುತಿಸುವುದಿಲ್ಲ. ಅಂತಹ ಪ್ರಜಾಪತಿಗೆ ನೀನು ಅನ್ನವನ್ನು ನೀಡಲಿಲ್ಲ..'' ಇತ್ಯಾದಿಯಾಗಿ ಹೇಳುತ್ತಾನೆ. ಬ್ರಹ್ಮಚಾರಿಯು ತಾನೇ ಪ್ರಜಾಪತಿಯೆಂದು ತಿಳಿದಿದ್ದಾನೆ. ಉಪಾಸನೆಯು ಕರ್ತೃತಂತ್ರವಾದ್ದರಿಂದ ಪುರುಷನು ಇಚ್ಛಾನುಸಾರವಾಗಿ ಮಾಡಲು, ಮಾಡದಿರಲು ಅಥವಾ ಅನ್ಯಥಾ ಆಚರಿಸಲು ಶಕ್ಯವಾಗಿದೆ. ಆದ್ದರಿಂದ ಮುಮುಕ್ಷುವು ಗುರೂಪದೇಶದಂತೆ ಉಪಾಸನೆಯನ್ನು ಮಾಡಬೇಕು (೭೮-೮೦). ವೇದಾಧ್ಯಯನವನ್ನು ಸದಾ ಮಾಡತಕ್ಕವನು ಕನಸಿನಲ್ಲಿಯೂ ಅಧ್ಯಯನಮಾಡುವುದುಂಟು. ಜಪಶೀಲನೂ ಹಾಗೆಯೇ ಜಪಿಸುತ್ತಾನೆ. ಹೀಗೆಯೇ ಉಪಾಸಕನು ಸಹ ವಾಸನಾಬಲದಿಂದ ಕನಸಿನಲ್ಲಿಯೂ ಧ್ಯಾನಿಸುತ್ತಾನೆ. ಉಪಾಸ್ಯವಸ್ತುವಲ್ಲದೆ ಇನ್ನೊಂದು ವಿಷಯವೂ ಮನಸ್ಸಿನಲ್ಲಿ ಸುಳಿಯದಂತೆ ನಿರಂತರವಾಗಿ ಧ್ಯಾನಿಸತಕ್ಕವನು ಸಂಸ್ಕಾರಪಾಟವದಿಂದ ಸ್ವಪ್ನದಲ್ಲಿಯೂ ತನ್ನ ಪಾಡಿಗೆ ಧ್ಯಾನಿಸತೊಡಗುತ್ತಾನೆ! (೮೧-೮೨). ಆದರೆ ಪ್ರಾರಬ್ಧಕರ್ಮ ಬಲದಿಂದ ವಿಷಯಸುಖಭೋಗದಲ್ಲಿ ಸಕ್ತನಾದವನಿಗೆ ನಿರಂತರವಾಗಿ ಧ್ಯಾನಿಸಲು ಹೇಗೆ ಸಾಧ್ಯವಾಗುತ್ತದೆ? ವಿಷಯಾಸಕ್ತನಿಗೆ ವಿಷಯಭೋಗದ ಚಿಂತೆಯೇ ಸದಾ ಇರುವ ಹಾಗೆ, ಉಪಾಸನೆಮಾಡಬೇಕೆಂಬ ಇಚ್ಛೆಯು ಪ್ರಬಲವಾದಲ್ಲಿ ಧ್ಯಾನವನ್ನೇ ಸದಾ ಮಾಡಲು ಸಾಧ್ಯವಿದೆ. ಇದರಲ್ಲಿ ಸಂದೇಹಬೇಡ (೮೩). ಪರಪುರುಷನಲ್ಲಿ ಆಸಕ್ತಳಾದ ಸ್ತ್ರೀಯು ಮನೆಗೆಲಸವನ್ನು ಮಾಡುತ್ತಿದ್ದರೂ ಮನಸ್ಸಿನಲ್ಲಿ ವಿಟಪುರುಷನ ಸಂಗಸುಖದ ರಸಾಯನವನ್ನು ಸವಿಯುತ್ತಲೇ ಇರುತ್ತಾಳೆ! ಆ ಸಂಗಸುಖವನ್ನು ಆಸ್ವಾದಿಸುತ್ತಿದ್ದರೂ ಅವಳ ಗೃಹಕೃತ್ಯವು ಹೇಗೋ ಸಾಗುತ್ತದೆ. ಮನಸ್ಸು ಮಾತ್ರ ವಿಟಪುರುಷನ ಬಳಿಯೆ ಇರುತ್ತದೆ! ಆದರೆ ಗೃಹಕೃತ್ಯದಲ್ಲಿ ತೊಡಗಿದ ಉತ್ತಮ ಗೃಹಿಣಿಯು ಎಷ್ಟು

ವ್ಯವಸ್ಥಿತವಾಗಿ ಗೃಹಕೃತ್ಯವನ್ನು ನಡೆಸುವಳೋ ಹಾಗೆ ಜಾರಿಣಿಯು ಮಾಡುವುದಿಲ್ಲ (೮೪-೮೬). ಹಾಗೆಯೇ ವಿಷಯಾಸಕ್ತನು ಸದಾ ಧ್ಯಾನಮಾಡಿದರೂ ಲೌಕಿಕಕಾರ್ಯವನ್ನು ಉತ್ತಮ ರೀತಿಯಲ್ಲಿ ಮಾಡಲಾರನು. ತತ್ತ್ವಜ್ಞಾನಿಯು ಮಾತ್ರ ಲೌಕಿಕಕಾರ್ಯವನ್ನು ಚೆನ್ನಾಗಿಯೇ ನಡೆಸುವನು. ಏಕೆಂದರೆ, ಆತನಿಗೆ ಲೌಕಿಕವು ವಿರುದ್ಧವೇನಲ್ಲ. ಈ ಪ್ರಪಂಚವು ಮಾಯಾಮಯವಾದದ್ದು, ಆತ್ಮನು ಕೇವಲ ಚೈತನ್ಯಸ್ವರೂಪನು - ಎಂಬ ತಿಳಿವು ಇದ್ದಾಗ ಲೋಕಕಾರ್ಯಪ್ರಸಕ್ತನಾದರೂ ವಿರೋಧವೇನಿದೆ? (೮೭-೮೮). ಲೋಕವ್ಯವಹಾರಕ್ಕೆ ಪ್ರಪಂಚವು ಸತ್ಯವಾಗಿರಬೇಕೆಂಬುದಾಗಲಿ, ಆತ್ಮನು ಜಡನಾಗಿರಬೇಕೆಂಬುದಾಗಲಿ ಬೇಕಾಗಿಲ್ಲ. ವ್ಯವಹಾರಕ್ಕೆ ಕರಚರಣಧನಾದಿಗಳು ಮಾತ್ರ ಬೇಕಾಗುತ್ತವೆ. ಮನಸ್ಸು, ಮಾತು, ದೇಹ, ಇತರ ಬಾಹ್ಯಪದಾರ್ಥಗಳು ವ್ಯವಹಾರಕ್ಕೆ ಬೇಕಾದ ಸಾಧನಗಳು. ತತ್ತ್ವಜ್ಞಾನಿಯು ಈ ಸಾಧನಗಳಿಲ್ಲವೆಂದೇನೂ ಹೇಳುವುದಿಲ್ಲ. ಹೀಗಿರುವಾಗ ಈತನಿಗೆ ಲೋಕವ್ಯವಹಾರವೇಕೆ ಬರುವುದಿಲ್ಲ? (೮೯-೯೦). ಬಾಹ್ಯಸಾಧನಗಳಿಲ್ಲವೆನ್ನದಿದ್ದರೂ ಧ್ಯಾನಿಸತಕ್ಕವನು ತನ್ನ ಬುದ್ಧಿಯನ್ನು ನಿರೋಧಿಸುತ್ತಾನಲ್ಲವೆ? ಬುದ್ಧಿಯನ್ನು ನಿರೋಧಿಸಿದಾಗ ಸಾಧನಗಳು ಇಲ್ಲವೆಂಬ ಭಾವನೆ ಬರುತ್ತದೆಯಲ್ಲವೆ? ಇಲ್ಲ; ಹಾಗೆ ಭಾವಿಸತಕ್ಕ ಧ್ಯಾತನು ತತ್ತ್ವಜ್ಞಾನಿಯೇ ಅಲ್ಲ. ಗಡಿಗೆಯ ಸ್ವರೂಪವನ್ನು ಚೆನ್ನಾಗಿ ಬಲ್ಲವನು ಬುದ್ಧಿಯನ್ನು ನಿರೋಧಿಸುವುದು ಎಲ್ಲಿಯೂ ಕಂಡುಬಂದಿಲ್ಲ. ಗಡಿಗೆಯು ಬರಿಯ ಮಣ್ಣೆಂದು ತಿಳಿದು ನೀರು ತುಂಬುವುದನ್ನೇನೂ ಅವನು ನಿಲ್ಲಿಸುವುದಿಲ್ಲ!(೯೧). ಗಡಿಗೆಯು ಪರಪ್ರಕಾಶ್ಯವಾದದ್ದು. ಒಂದು ಸಲ ಪ್ರಕಾಶಿತವಾದಮೇಲೆ 'ಅದು ಗಡಿಗೆ'ಯೆಂಬ ಬುದ್ಧಿ ಅನುವರ್ತಿಸುವುದಾದರೆ ಸ್ವಯಂಪ್ರಕಾಶನಾದ ಆತ್ಮನು ಪ್ರಕಾಶನಾಗಿಯೇ ಇರುವುದಿಲ್ಲವೆ? ಗಡಿಗೆಗಿಂತ ಆತ್ಮನೇ ಸ್ಪಷ್ಟತರನಾಗಿರುತ್ತಾನೆ. ಆಗ ಚಿತ್ತನಿರೋಧವು ಬೇಕಾಗಿಲ್ಲ. ಒಂದು ವೇಳೆ ಬ್ರಹ್ಮವು ಸ್ವಪ್ರಕಾಶವಾಗಿದ್ದರೂ ಅದನ್ನು ಗ್ರಹಿಸುವ ಬುದ್ಧಿವೃತ್ತಿಯು ಕ್ಷಣಿಕವಾದ್ದರಿಂದ ಪುನಃಪುನಃ ಆ ಬುದ್ಧಿವೃತ್ತಿಯು ಅಪೇಕ್ಷಿತವೆನ್ನುವುದಾದರೆ, ಘಟಜ್ಞಾನದ ವಿಷಯವೂ ಹಾಗೆಯೇ. ಅಲ್ಲಿಯು ಬುದ್ಧಿವೃತ್ತಿ ಮುಂದುವರಿಯುತ್ತಲೇ ಇರಬೇಕು (೯೨-೯೩). ಇದು ಗಡಿಗೆ ಎಂಬ ನಿಶ್ಚಯಜ್ಞಾನವು ಆದ ಮೇಲೆ ಅದು ಕ್ಷಣಿಕವಾದ್ದರಿಂದ ನಷ್ಟವಾದರೂ ಗಡಿಗೆಯನ್ನು ಉಪಯೋಗಿಸಲು ಸಾಧ್ಯವಾಗುತ್ತದೆ. ಮತ್ತೆ ಮತ್ತೆ ಗಡಿಗೆಯ ಜ್ಞಾನವು ಹುಟ್ಟಬೇಕಾಗಿಲ್ಲ

ಎನ್ನುವುದಾದರೆ, ಈ ಮಾತು ಆತ್ಮನಿಗೂ ಅನ್ವಯಿಸುತ್ತದೆ. ಆತ್ಮಸ್ವರೂಪವು ನಿಶ್ಚಿತವಾದ ಮೇಲೆ ಮತ್ತೆಮತ್ತೆ ಆತ್ಮಜ್ಞಾನವು ಹುಟ್ಟಬೇಕಾಗಿಲ್ಲ. ಒಂದು ಸಲ ಆತ್ಮಜ್ಞಾನವಾದ ಮೇಲೆ ತತ್ತ್ವಜ್ಞಾನಿಯು ತನಗೆ ಬೇಕಾದಾಗ ಆತ್ಮನ ವಿಷಯವಾಗಿ ಮಾತಾಡಲು, ಮನನ ಮಾಡಲು, ಧ್ಯಾನಿಸಲು ಶಕ್ತನಾಗಿಯೇ ಇರುತ್ತಾನೆ (೯೪-೯೫). ತತ್ತ್ವಜ್ಞನೂ ಉಪಾಸಕನಂತೆ ಧ್ಯಾನಾರೂಢನಾದಾಗ ಲೌಕಿಕವಿಷಯವನ್ನು ಮರೆತುಬಿಡಬಹುದಲ್ಲವೆ? ಹೌದು, ಮರೆಯಲಿ. ಅದರಿಂದೇನು? ಆ ಮರೆವು ಧ್ಯಾನದಿಂದ ಬಂದದ್ದೇ ಹೊರತು ಆತ್ಮಜ್ಞಾನದಿಂದಲ್ಲ. ಜ್ಞಾನಿಗೆ ಉಪಾಸನೆಯು ಐಚ್ಛಿಕವಾದದ್ದು. ಉಪಾಸಕನಂತೆ ಅವನು ನಿಯಮದಿಂದ ಧ್ಯಾನಮಾಡಬೇಕಾದ್ದಿಲ್ಲ. ಆತ್ಮಜ್ಞಾನದಿಂದಲೇ ಅವನಿಗೆ ಮುಕ್ತಿಯು ಸಿದ್ಧಿಸುತ್ತವೆ. ''ಜ್ಞಾನಾದೇವ ತು ಕೈವಲ್ಯಂ ಪ್ರಾಪ್ಯತೇ ಯೇನ ಮುಚ್ಯತೇ, ತಮೇವ ವಿದಿತ್ವಾ ಅತಿಮೃತ್ಯುಮೇತಿ, ಜ್ಞಾತ್ವಾ ದೇವಂ ಮುಚ್ಯತೇ ಸರ್ವಪಾಪೈಃ'' (ಶ್ವೇ.ಉ.೩-೮)ಇತ್ಯಾದಿ ವಚನಗಳು ಜ್ಞಾನದಿಂದಲೇ ಮುಕ್ತಿಯೆಂದು ಘೋಷಿಸಿರುತ್ತವೆ (೯೬-೯೭). ತತ್ತ್ವಜ್ಞಾನಿಯು ಧ್ಯಾನಾಸಕ್ತನಾಗದಿದ್ದರೆ ಬಾಹ್ಯಪ್ರಪಂಚಕ್ಕೆ ಇಳಿದುಬಿಡುವ ಸಂಭವವಿದೆಯಲ್ಲವೆ? ಆಗಲಿ; ಬಾಹ್ಯ ಪ್ರಪಂಚದಲ್ಲಿ ತೊಡಗಲಿ. ಅದರಿಂದಾಗುವ ಬಾಧೆಯೇನು? 'ಅತಿಪ್ರಸಂಗವಾಗಬಹುದು, ಅದೇ ಬಾಧೆ' ಪ್ರಸಂಗವನ್ನು ಮೊದಲು ಹೇಳು, ಆಮೇಲೆ ಅತಿಪ್ರಸಂಗದ ವಿಚಾರ'. 'ವಿಧಿನಿಷೇಧಶಾಸ್ತ್ರಗಳ ಪ್ರಸಕ್ತಿಯೇ ಪ್ರಸಂಗ, ತತ್ತ್ವಜ್ಞಾನಿಯು ಬಾಹ್ಯವಿಷಯಗಳಲ್ಲಿ ಪ್ರವೃತ್ತನಾದರೆ ಶಾಸ್ತ್ರದ ಉಲ್ಲಂಘನೆಯಾಗಬಹುದಲ್ಲವೆ?' 'ಇಲ್ಲ; ಯಾವನಿಗೆ ವರ್ಣ, ಆಶ್ರಮ, ವಯಸ್ಸು, ದೇಶಕಾಲ ಪರಿಸ್ಥಿತಿಗಳಲ್ಲಿ ಅಭಿಮಾನವಿದೆಯೋ ಆತನಿಗೆ ಮಾತ್ರ ವಿಧಿನಿಷೇಧಶಾಸ್ತ್ರಗಳು ಅನ್ವಯಿಸುತ್ತವೆ. ಜ್ಞಾನಿಗೆ ಈ ಬಗೆಯ ಯಾವ ಅಭಿಮಾನವೂ ಇರುವುದಿಲ್ಲ. ಆದ್ದರಿಂದ ವಿಧಿನಿಷೇಧಗಳನ್ನು ಪಾಲಿಸುವ ಪ್ರಸಂಗವೇ ಆತನಿಗೆ ಒದಗುವುದಿಲ್ಲ' (೯೮-೧೦೦). ''ವರ್ಣಾಶ್ರಮಾದಿಗಳೆಲ್ಲವೂ ದೇಹಕ್ಕೆ ಮಾಯೆಯಿಂದ ಪರಿಕಲ್ಪಿತವಾಗಿವೆ. ಜ್ಞಾನ ಸ್ವರೂಪನಾದ ನನಗೆ ವರ್ಣಾಶ್ರಮಾದಿಗಳಾವುವೂ ಇಲ್ಲ'' ಎಂದು ಆತ್ಮಜ್ಞಾನಿಯು ನಿಶ್ಚಯಿಸಿಕೊಂಡಿರುತ್ತಾನೆ (೧೦೧).

ಯಾವ ತತ್ತ್ವಜ್ಞನು ಹೃದಯಪೂರ್ವಕವಾಗಿ ಸರ್ವಾಸಕ್ತಿಗಳನ್ನೂ ತೊರೆದು ನಿರ್ಮಲವಾದ ಜ್ಞಾನವನ್ನು ಪಡೆದಿರುವನೋ ಅವನು ಮುಕ್ತನೇ ಸರಿ. ಆತನು ಧ್ಯಾನವನ್ನೂ ಕರ್ಮಗಳನ್ನೂ ಮಾಡಲಿ-ಬಿಡಲಿ ಆತನಿಗೇನೂ ಆಗುವುದಿಲ್ಲ.

ಆತನ ಮನಸ್ಸು ಸಮಸ್ತವಾಸನೆಗಳಿಂದಲೂ ಪರಿತ್ಯಕ್ತವಾಗಿರುತ್ತದೆ. ಕರ್ಮರಾಹಿತ್ಯದಿಂದಾಗಲಿ, ಕರ್ಮಗಳಿಂದಾಗಲಿ, ಧ್ಯಾನಜಪಗಳಿಂದಾಗಲಿ ಅವನಿಗಾಗಬೇಕಾದ ಪ್ರಯೋಜನ ಯಾವುದೂ ಇಲ್ಲ (೧೦೨-೧೦೩). ''ಆತ್ಮನು ಅಸಂಗನು - ಯಾವ ಲೇಪವೂ ಇಲ್ಲದ ಪರಿಶುದ್ಧನು. ಇಂದ್ರಜಾಲರೂಪವಾದ ಈ ಜಗತ್ತು ಕೇವಲ ಮಾಯಾಕಲ್ಪಿತವಾದದ್ದು'' ಎಂದು ಅಚಲವಾದ ನಿರ್ಣಯವುಳ್ಳ ಜ್ಞಾನಿಗೆ ಮನಸ್ಸಿನಲ್ಲಿ ಯಾವ ವಾಸನೆಯ ಲೇಪವೂ ಇರುವುದಿಲ್ಲ. ವಾಸನಾ ಎಂದರೆ ಸಂಸ್ಕಾರದಿಂದಾದ ಅಭಿನಿವೇಶ. ಇದು ಶಾಸ್ತ್ರವಾಸನಾ, ಲೋಕವಾಸನಾ, ದೇಹವಾಸನಾ - ಎಂದು ಮೂರುವಿಧ [1]. ಈ ಪ್ರಕಾರವಾಗಿ ಜ್ಞಾನಿಗೆ ಯಾವ ಪ್ರಸಕ್ತಿಯೂ ಇಲ್ಲದಿರುವಾಗ ಅತಿಪ್ರಸಕ್ತಿ ಎಲ್ಲಿಂದ ಬಂದೀತು? ಯಾರಿಗೆ ವಿಧಿನಿಷೇಧಗಳ ಪ್ರಸಕ್ತಿಯುಂಟೋ ಅವರಿಗೆ ಅತಿಪ್ರಸಕ್ತಿಯಾಗುವ ಶಂಕೆಗೆ ಅವಕಾಶ ಉಂಟು (೧೦೪-೧೦೫). ಉದಾಹರಣೆ - ಚಿಕ್ಕ ಬಾಲಕನಿಗೆ ವಿಧಿನಿಷೇಧಗಳಿಲ್ಲ. ಆದ್ದರಿಂದ ಅತಿಪ್ರಸಕ್ತಿಯೇ ಅವನಿಗೆ ಹುಟ್ಟುವುದಿಲ್ಲ. ವಿಧಿನಿಷೇಧಗಳು ಜ್ಞಾನಿಗೂ ಇಲ್ಲ. ಇಬ್ಬರಿಗೂ ಈ ವಿಷಯವು ಸಮವಾಗಿರುವಾಗ ಜ್ಞಾನಿಗೆ ಅತಿಪ್ರಸಕ್ತಿಯಾಗುವ ಪ್ರಶ್ನೆಯೇ ಇಲ್ಲ. ಬಾಲಕನು ಏನೂ ತಿಳಿಯದ ಅಜ್ಞನಾದ್ದರಿಂದ ವಿಧಿನಿಷೇಧಗಳಿಲ್ಲವಾದರೆ ತತ್ತ್ವಜ್ಞಾನಿಯು ಸರ್ವಜ್ಞ ನಾದ್ದರಿಂದ ಇವನಿಗೂ ಇಲ್ಲ. ವಿಧಿನಿಷೇಧಗಳು ಇವರೀರ್ವರ ನಡುವೆ ಇರತಕ್ಕ ಅಲ್ಪಜ್ಞರಿಗೆ ಮಾತ್ರ ಎಂದು ತಿಳಿಯಬೇಕು. ಜ್ಞಾನಿಗೆ ಶಾಪಾನುಗ್ರಹ ಸಾಮರ್ಥ್ಯವಿರಬೇಕಲ್ಲವೆ? - ಎಂಬ ಶಂಕೆಯೂ ಬೇಡ. ಶಾಪಾನು ಗ್ರಹಸಾಮರ್ಥ್ಯವು ತಪಸ್ಸಿನ ಫಲ. ಆತ್ಮಜ್ಞಾನದ ಫಲವಲ್ಲ. ವಸಿಷ್ಠವ್ಯಾಸಾದಿ ಮಹರ್ಷಿಗಳು ಜ್ಞಾನಿಗಳಾಗಿದ್ದರು. ಅವರಿಗೆ ಶಾಪಾನುಗ್ರಹಸಾಮರ್ಥ್ಯವಿತ್ತು - ಎಂದು ಶಂಕಿಸುವುದೂ ಸರಿಯಲ್ಲ. ಅವರು ಜ್ಞಾನಿಗಳಾಗಿದ್ದರೂ ಮಹಾತಪಸ್ವಿಗಳಾಗಿದ್ದರು. ಅವರ ಶಾಪಾನುಗ್ರಹಸಾಮರ್ಥ್ಯವು ತಪಸ್ಸಿನ ಫಲವೇ ಹೊರತು ಜ್ಞಾನದ ಫಲವಲ್ಲ. ತಪಸ್ಸೂ ಸಹ ಆತ್ಮಜ್ಞಾನಕ್ಕೆ ಉಪಯುಕ್ತವಾಗುತ್ತದೆ. 'ತಪಸಾ ಬ್ರಹ್ಮ ವಿಜಿಜ್ಞಾಸಸ್ವ' (ತೈ. ಉ. ೩-೨) ಎಂಬ ಶ್ರುತಿಯು ಇದಕ್ಕೆ ಪ್ರಮಾಣ (೧೦೬-೧೦೯).

---

[1] ಶ್ರೀವಿದ್ಯಾರಣ್ಯಸ್ವಾಮಿಗಳಿಂದ ಜೀವನ್ಮುಕ್ತಿವಿವೇಕದಲ್ಲಿ ವಾಸನಾವಿಚಾರವು ವಿಸ್ತೃತವಾಗಿ ವರ್ಣಿತವಾಗಿದೆ.

ಯಾವಾತನು ಎರಡೂ ಬಗೆಯ ತಪಸ್ಸುಗಳನ್ನು ಆಚರಿಸಿರುತ್ತಾನೋ ಆತನಿಗೆ ಶಾಪಾನುಗ್ರಹಾದಿಸಾಮರ್ಥ್ಯ, ಆತ್ಮಜ್ಞಾನ - ಇವೆರಡೂ ಲಭಿಸುತ್ತವೆ. ಒಂದೊಂದೇ ಉದ್ದೇಶದಿಂದ ಮಾಡುವ ತಪಸ್ಸಿಗೆ ಅನುಗುಣವಾಗಿ ಒಂದೊಂದೇ ಫಲವು ಲಭಿಸುತ್ತದೆ. ತಪಃಸಾಮರ್ಥ್ಯವಿಲ್ಲದ ಒಬ್ಬಯತಿಯು ವಿಧಿನಿಷೇಧಗಳನ್ನು ಪಾಲಿಸುವುದಿಲ್ಲವೆಂದು ಆತನನ್ನು ಕರ್ಮಠರು ನಿಂದಿಸುವುದಾದರೆ, ವಿಧಿನಿಷೇಧಗಳನ್ನು ಪಾಲಿಸುವ ಯತಿಗಳನ್ನು ಭೋಗಲಂಪಟರಾದ ಜನರೂ ನಿಂದಿಸುತ್ತಾರೆ. ಅವಿವೇಕಿಗಳು ಮಾಡುವ ನಿಂದೆಯನ್ನು ಗಮನಿಸಬಾರದು (೧೧೦-೧೧೧). ಕೆಲವು ಸಂನ್ಯಾಸಿಗಳು ಆಹಾರ ವಸ್ತ್ರಾದಿಗಳನ್ನು ಭೋಗಿಸುವುದಕ್ಕಾಗಿ ಸಂಗ್ರಹಿಸುವುದಾದರೆ, ''ಆಹಾ! ವೈರಾಗ್ಯಭಾರದಿಂದ ಕುಸಿದು ಹೋಗುತ್ತಿರುವ ಓ ಸಂನ್ಯಾಸವೆ !'' - ಎಂದಿಷ್ಟೇ ಹೇಳಬಹುದು ! ವರ್ಣಾಶ್ರಮಧರ್ಮಗಳನ್ನು ಪಾಲಿಸತಕ್ಕವರನ್ನು ಮೂಢರು ನಿಂದಿಸುತ್ತಾರೆ - ಎನ್ನುವುದಾದರೆ, ದೇಹವೇ ಆತ್ಮವೆಂದು ತಿಳಿದ ಕರ್ಮಿಗಳು ಆತ್ಮಜ್ಞಾನಿಯನ್ನು ನಿಂದಿಸುತ್ತಿರಲಿ. ಅದರಿಂದ ಆಗುವುದೇನು? (೧೧೨-೧೧೩). ಈ ಪ್ರಕಾರವಾಗಿ ತತ್ತ್ವಜ್ಞಾನದ ಸ್ವರೂಪವಿದ್ದಾಗ, ಮನಸ್ಸು ದೇಹ ಮುಂತಾದ ಕರ್ಮಸಾಧನಗಳು ಇದ್ದೇ ಇರುತ್ತವೆ. ಅವುಗಳನ್ನೇನೂ ಬುದ್ಧಿಯಿಂದ ನಿರೋಧಿಸಿರುವುದಿಲ್ಲ. ಆದ್ದರಿಂದ ಜ್ಞಾನಿಗೂ ಸಹ ರಾಜ್ಯಪಾಲನಾದಿ ಲೌಕಿಕಕಾರ್ಯಗಳನ್ನು ಉತ್ತಮ ರೀತಿಯಿಂದಲೇ ಮಾಡಲು ಶಕ್ಯವಿರುತ್ತದೆ (೧೧೪). ಜಗತ್ತು ಮಿಥ್ಯೆಯಾದ್ದರಿಂದ ಲೌಕಿಕಕಾರ್ಯವನ್ನು ಮಾಡಲು ಇಚ್ಛೆಯಿಲ್ಲವಾದರೆ, ಬೇಡ. ಆತನು ಪ್ರಾರಬ್ಧಕರ್ಮಕ್ಕೆ ಅನುಗುಣವಾಗಿ ಧ್ಯಾನಾಸಕ್ತನಾಗಲಿ, ಇಚ್ಛೆಯಾದರೆ ಲೌಕಿಕಕಾರ್ಯದಲ್ಲಿ ತೊಡಗಲಿ. ತತ್ತ್ವಜ್ಞಾನಕ್ಕೇನೂ ಬಾಧೆ ಇಲ್ಲ. ಇನ್ನು ಉಪಾಸಕನಾದರೋ ಸತತವೂ ಧ್ಯಾನದಲ್ಲಿಯೇ ತೊಡಗಿರಬೇಕು. ಆತನು ಧ್ಯಾನದಿಂದ ತನ್ನಲ್ಲಿ ಬ್ರಹ್ಮತ್ವವನ್ನು ತಂದುಕೊಂಡಿರುತ್ತಾನೆ, ವಿಷ್ಣುವನ್ನು ಧ್ಯಾನಿಸತಕ್ಕವನು ತಾನು ವಿಷ್ಣುವೆಂದು ಭಾವಿಸುವ ಹಾಗೆ. ತಾನು ಬ್ರಹ್ಮವೇ ಎಂಬ ಜ್ಞಾನವು ಆತನಿಗೆ ಬಂದಿರುವುದಿಲ್ಲ(೧೧೫-೧೧೬). ಉಪಾಸನೆಯನ್ನು ಮಾಡುವಾಗ ಧ್ಯಾನದಿಂದ ಪ್ರಾಪ್ತವಾದ ಬ್ರಹ್ಮತ್ವವು ಪಾರಮಾರ್ಥಿಕವಲ್ಲ. ಧ್ಯಾನವು ಮುಗಿದೊಡನೆ 'ನಾನು ಬ್ರಹ್ಮ' ಎಂಬ ಭಾವನೆ ನಷ್ಟವಾಗಿಬಿಡುತ್ತದೆ. ಆದರೆ ಜ್ಞಾನದಿಂದ ಪ್ರಾಪ್ತವಾದ ಬ್ರಹ್ಮತ್ವವು ಶಾಶ್ವತವಾದದ್ದು. ಜ್ಞಾನಾಂತರಗಳು ಬಂದಾಗಲೂ 'ಅಹಂ ಬ್ರಹ್ಮ' ಎಂಬ ಜ್ಞಾನವು ನಷ್ಟವಾಗುವುದಿಲ್ಲ. ಏಕೆಂದರೆ, ಬ್ರಹ್ಮತ್ವವು ನಿತ್ಯವಾದದ್ದು. ವಾಸ್ತವವಾದದ್ದು. ಜ್ಞಾನವು ಅದನ್ನು

ಜ್ಞಾಪಿಸುತ್ತದೆಯೇ ಹೊರತು ಹೊಸದಾಗಿ ಹುಟ್ಟಿಸುವುದಿಲ್ಲ. ಜ್ಞಾನವು 'ಅಹಂ ಬ್ರಹ್ಮ' ಎಂಬುದರ ಜ್ಞಾಪಕ, ಜನಕವಲ್ಲ. ಜ್ಞಾಪಕವಾದ ಜ್ಞಾನವು ಇಲ್ಲದಿದ್ದರೂ ಸತ್ಯವು ಅಡಗಿ ಹೋಗುವುದಿಲ್ಲ (೧೧೭-೧೧೮). ಹಾಗಾದರೆ ಉಪಾಸಕನಿಗೂ ವಾಸ್ತವವಾಗಿ ಬ್ರಹ್ಮತ್ವವಿದೆಯಲ್ಲವೆ? ಎಂದರೆ, ಹೌದು. ಉಪಾಸಕರಿಗೆ ಮಾತ್ರವಲ್ಲ. ಏನನ್ನೂ ಅರಿಯದ ಪಾಮರರಿಗೂ ಇದೆ, ತಿರ್ಯಗ್ ಜಂತುಗಳಿಗೂ ಇದೆ! ಪಾಮರರಿಗೆ 'ನಾನು ಬ್ರಹ್ಮ' ಎಂಬ ಜ್ಞಾನವು ಮಾತ್ರ ಇಲ್ಲ. ಆದ್ದರಿಂದ ಮೋಕ್ಷವಾಗುವುದಿಲ್ಲ ಎನ್ನುವುದಾದರೆ, ಉಪಾಸಕನಿಗೂ ಹಾಗೆಯೇ ಆಗಿರುತ್ತದೆ. ಅವನಿಗೂ ಬ್ರಹ್ಮಜ್ಞಾನವಾಗಿರುವುದಿಲ್ಲ' ಉಪವಾಸ ಬೀಳುವುದಕ್ಕಿಂತ ಭಿಕ್ಷೆ ಬೇಡುವುದು ಹೇಗೆ ಉತ್ತಮವೋ ಹಾಗೆ ಇತರ ಸಾಧನಗಳಿಗಿಂತ ಧ್ಯಾನವು ಉತ್ತಮ.(೧೧೯-೧೨೦) ಆದರೆ ಪಾಮರರ ಯಥೇಷ್ಟಾಚರಣೆಗಿಂತ ಶಾಸ್ತ್ರೋಕ್ತಕರ್ಮಾಚರಣೆಯು ಉತ್ತಮ. ಅದಕ್ಕಿಂತಲೂ ನಿರ್ಗುಣೋಪಾಸನೆ ಅಧಿಕವಾದದ್ದು. ಮನುಷ್ಯನ ಆಚರಣೆಯು ಬ್ರಹ್ಮಜ್ಞಾನಕ್ಕೆ ಸಮೀಪವಾದಷ್ಟು ಅದರ ಉತ್ಕೃಷ್ಟತೆ ಹೆಚ್ಚುತ್ತ ಹೋಗುವುದು. ನಿರ್ಗುಣೋಪಾಸನೆಯು ಕ್ರಮವಾಗಿ ಬ್ರಹ್ಮಜ್ಞಾನವೇ ಆಗಿಬಿಡುತ್ತದೆ. ಆದ್ದರಿಂದ ನಿರ್ಗುಣೋಪಾಸನೆ ಸರ್ವೋತ್ತಮವಾದದ್ದು (೧೨೧-೧೨೨).

ಈ ಧ್ಯಾನದೀಪ ಪ್ರಕರಣದ ಆರಂಭದಲ್ಲಿ ಹೇಳಿದಂತೆ ಸಂವಾದಿಭ್ರಮೆಯು ಇಷ್ಟಪ್ರಾಪ್ತಿಫಲವನ್ನು ನೀಡುವಾಗ ಪ್ರಮೆಯೇ ಆಗುವುದಷ್ಟೆ ಹಾಗೆ ನಿರ್ಗುಣೋಪಾಸನೆಯೂ ಸಹ ಪರಿಪಕ್ವವಾಗಿ ಮುಕ್ತಿಕಾಲವು ಸಮೀಪಿಸಿದಾಗ ಆತ್ಮವಿದ್ಯೆಯೇ ಆಗಿಬಿಡುತ್ತದೆ (೧೨೩). ಆದರೆ ಸಂವಾದಿಭ್ರಮೆಯಲ್ಲಿ - ಹೊಗೆಯನ್ನು ಆವಿಯೆಂದು ತಿಳಿದಾಗ - ಅದು ಹೊಗೆಯೇ ಆದ್ದರಿಂದ ಅಗ್ನಿಜ್ಞಾನವು ಪ್ರಮೆಯಾಗುತ್ತದೆ. ಅಲ್ಲಿ ಹೊಗೆಯೆಂಬ ಸರಿಯಾದ ಪ್ರಮಾಣವಿರುತ್ತದೆ. ಇಲ್ಲಿ ಪ್ರಮಾಣ ಯಾವುದು? ಯಾವುದೆಂದರೆ, ಉಪಾಸನೆಯು ನಿದಿಧ್ಯಾಸನದಿಂದ ಆತ್ಮಜ್ಞಾನವಾಗುವುದು ಯುಕ್ತವೇ ಸರಿ (೧೨೪). ಹಾಗಾದರೆ ಸಗುಣೋಪಾಸನೆಯಾದ ಮೂರ್ತಿಧ್ಯಾನ, ಮಂತ್ರಜಪ - ಮೊದಲಾದವುಗಳಿಂದಲೂ ಏಕಾಗ್ರತೆ ಬರಬಹುದು. ಅದು ನಿದಿಧ್ಯಾಸನವೇ ಆಗುತ್ತದೆ. ಅವುಗಳಿಂದಲೂ ಮೋಕ್ಷವಾಗಬಹುದಲ್ಲವೆ? ಹೌದು; ಆಗಬಹುದು. ಆದರೆ ನಿರ್ಗುಣೋ-ಪಾಸನೆಯು ಆತ್ಮಜ್ಞಾನಕ್ಕೆ ನಿಕಟವಾದ್ದರಿಂದ ಸಾಮೀಪ್ಯವೆಂಬುದೇ ಇದರಲ್ಲಿ ವಿಶೇಷ (೧೨೫). ಈ ಧ್ಯಾನವು ಪಕ್ವವಾದಾಗ ಧ್ಯಾನವೇ ಉತ್ಕೃಷ್ಟವಾಗಿ

ಸವಿಕಲ್ಪಕಸಮಾಧಿಯಾಗುತ್ತದೆ. ಇದಕ್ಕೆ ಸಂಪ್ರಜ್ಞಾತಸಮಾಧಿಯೆಂದೂ ಹೆಸರಿದೆ. ಧ್ಯಾನದಲ್ಲಿ ಕರ್ತೃಕರಣಗಳ ಅನುಸಂಧಾನವಿರುತ್ತದೆ. ಸಮಾಧಿಯಲ್ಲಿ ಅವುಗಳ ಅನುಸಂಧಾನವಿರುವುದಿಲ್ಲವೆಂಬುದೇ ವಿಶೇಷ. ಈ ಸವಿಕಲ್ಪಕಸಮಾಧಿಯಲ್ಲಿ ಧ್ಯೇಯವಸ್ತುವಿನ ಪ್ರಕಾಶವಿರುತ್ತದೆ. ಅದನ್ನು ನಿರೋಧಿಸಿದಾಗ ನಿರ್ವಿಕಲ್ಪಕ ಸಮಾಧಿಯು ಪ್ರಾಪ್ತವಾಗುತ್ತದೆ. ಇದಕ್ಕೆ ಅಸಂಪ್ರಜ್ಞಾತಸಮಾಧಿಯೆಂದೂ ಹೆಸರಿದೆ. ಧ್ಯೇಯವಸ್ತುವಿನ ಪ್ರಕಾಶವೂ ಇದರಲ್ಲಿರುವುದಿಲ್ಲ. ಇದೇ ನಿರ್ಬೀಜಸಮಾಧಿ (೧೨೬). ಸವಿಕಲ್ಪಕದ ನಿರೋಧವೆಂಬ ನಿರ್ವಿಕಲ್ಪಕ ಸಮಾಧಿಯನ್ನು ಪಡೆದ ಪುರುಷನ ಹೃದಯದಲ್ಲಿ ಅಸಂಗವಾದ ಬ್ರಹ್ಮವಸ್ತು ಉಳಿಯುತ್ತದೆ. ಪುನಃ ಪುನಃ ಆ ವಸ್ತುವನ್ನು ಧ್ಯಾನಿಸುತ್ತಾ ಹೋದಮೇಲೆ **'ಅಹಂ ಬ್ರಹ್ಮಾಸ್ಮಿ'** ಎಂಬ ವಾಕ್ಯಾರ್ಥದ ತತ್ತ್ವಜ್ಞಾನವು ಉದಿಸುತ್ತದೆ. ಒಡನೆಯೇ ಶಾಸ್ತ್ರೋಕ್ತವಾದ ನಿರ್ವಿಕಾರತೆ, ಸಂಗರಾಹಿತ್ಯ, ನಿತ್ಯತೆ, ಸ್ವಪ್ರಕಾಶತೆ ಮತ್ತು ಏಕತೆ - ಎಂಬ ಆತ್ಮಸ್ವರೂಪವು ನಿರ್ವಿವಾದವಾಗಿ ತತ್ತ್ವಜ್ಞನ ಬುದ್ಧಿಯಲ್ಲಿ ಬಂದು ನೆಲಸುತ್ತದೆ (೧೨೭-೧೨೮). ಹೀಗೆ ನಿರ್ವಿಕಲ್ಪಕಸಮಾಧಿ ಯಿಂದಲೂ ಅಪರೋಕ್ಷಜ್ಞಾನವು ಉದಿಸುವುದೆಂದು ಅಮೃತಬಿಂದು ಮುಂತಾದ ಉಪನಿಷತ್ತುಗಳಲ್ಲಿ ಹೇಳಿದೆ. ಏವಂಚ ನಿರ್ಗುಣೋಪಾಸನೆಯು ನಿರ್ವಿಕಲ್ಪಕಸಮಾಧಿದ್ವಾರಾ ಅಪರೋಕ್ಷಜ್ಞಾನಜನಕವೆಂಬುದು ದೃಷ್ಟವಾದ ಮಾರ್ಗ. ಹೀಗಲ್ಲದೆ ಅದೃಷ್ಟರೀತಿಯಲ್ಲಿಯೂ ಅಪರೋಕ್ಷಜ್ಞಾನಕ್ಕೆ ಅದು ಕಾರಣವಾಗಿದೆ. ಆದ್ದರಿಂದ ಸಗುಣೋಪಾಸನೆಗಿಂತ ನಿರ್ಗುಣೋಪಾಸನೆಯು ಉತ್ತಮವಾದದ್ದು(೧೨೯). ಇದನ್ನು ಉಪೇಕ್ಷಿಸಿ ತೀರ್ಥಯಾತ್ರೆ, ಜಪ, ಪೂಜೆ - ಮೊದಲಾದ್ದನ್ನು ಮಾಡತಕ್ಕವರ ಪರಿಸ್ಥಿತಿಯು, '' ಎದುರಿಗಿರುವ ಅನ್ನದ ಗ್ರಾಸವನ್ನು ಬಿಟ್ಟು ಕೈಯನ್ನು ನೆಕ್ಕುತ್ತಾನೆ'' ಎಂಬ ಗಾದೆಗೆ ಸಮವಾಗುತ್ತದೆ! ಆತ್ಮವಿಚಾರವನ್ನು ಬಿಟ್ಟು ಕೇವಲ ಉಪಾಸನೆಯಲ್ಲಿ ತೊಡಗಿದವರಿಗೂ ಇದೇ ಪರಿಸ್ಥಿತಿ ಒದಗುವುದು. ನಾವು ನಿರ್ಗುಣೋಪಾಸನೆಯನ್ನು ಪ್ರತಿಪಾದಿಸಿದ್ದೇಕೆಂದರೆ, ಗುರುಶಾಸ್ತ್ರಾದಿಗಳು ದೊರಕದೆ ವಿಚಾರಕ್ಕೆ ಸೌಕರ್ಯವಿಲ್ಲದವರು ಈ ಉಪಾಸನೆಯನ್ನು ಮಾಡುತ್ತಿರಲಿ ಎಂಬ ಉದ್ದೇಶದಿಂದ. ಚಿತ್ತಸ್ಥೈರ್ಯವಿಲ್ಲದವರು ಕುತರ್ಕಮಾಡುತ್ತ ಆತ್ಮವಿಚಾರಕ್ಕೆ ತೊಡಗುವುದಿಲ್ಲ. ಅವರು ಉಪಾಸನೆಯನ್ನಾದರೂ ಮಾಡುತ್ತಿರಲಿ. ಆದರಿಂದ ಅವರ ಬುದ್ಧಿಯ ಸೊಕ್ಕು ಇಳಿಯುತ್ತದೆ (೧೩೦-೧೩೨). ಆದರೆ ಯಾರಿಗೆ ಚಿತ್ತಸ್ಥೈರ್ಯ- ವಿದೆಯೋ ಕೇವಲ ಮೋಹವು ಚಿತ್ತವನ್ನು ಆವರಿಸಿಕೊಂಡಿದೆಯೋ ಅವರಿಗೆ

ಸಾಂಖ್ಯವೆಂಬ ಆತ್ಮವಿಚಾರವು ಮುಖ್ಯವಾದದ್ದು. ಅದರಿಂದ ಬೇಗನೆ ಜ್ಞಾನಸಿದ್ಧಿಯಾಗುವುದು. ಭಗವದ್ಗೀತೆಯ ಐದನೆಯ ಅಧ್ಯಾಯದಲ್ಲಿ **''ಯತ್ಸಾಂಖ್ಯೈಃ ಪ್ರಾಪ್ಯತೇ ಸ್ಥಾನಂ .....''** (ಭ.ಗೀ.೫-೫) ಎಂಬ ಶ್ಲೋಕವಿದೆ. ಅದರ ಅರ್ಥವೇನೆಂದರೆ - ''ಜ್ಞಾನಮಾರ್ಗದವರು ಯಾವ ಸ್ಥಾನವನ್ನು ಪಡೆಯುತ್ತಾರೋ ಆ ಸ್ಥಾನವನ್ನು ಯೋಗಮಾರ್ಗದವರೂ ಪಡೆಯುತ್ತಾರೆ. ಸಾಂಖ್ಯಪದ್ಧತಿ, ಯೋಗಮಾರ್ಗಗಳೆರಡೂ ಒಂದೇ ಫಲವನ್ನು ಕೊಡತಕ್ಕವೆಂದು ಯಾವನು ತಿಳಿದಿದ್ದನೋ ಆತನು ನಿಜವಾಗಿ ಶಾಸ್ತ್ರಾರ್ಥವನ್ನು ಬಲ್ಲವನು.'' ಇಲ್ಲಿ ಸಾಂಖ್ಯವೆಂದರೆ ಜ್ಞಾನವೆಂದರ್ಥ, ಕಾಪಿಲಸಾಂಖ್ಯವಲ್ಲ. ಯೋಗಮಾರ್ಗವೆಂದರೆ ಚಿತ್ತನಿರೋಧ. ಉಪಾಸನೆ, ಸಮಾಧಿ- ಮುಂತಾದದ್ದು (೧೩೩-೧೩೪). ಆದ್ದರಿಂದಲೇ ಶ್ವೇತಾಶ್ವತರೋಪನಿಷತ್ತಿನಲ್ಲಿ **'ತತ್ಕಾರಣಂ ಸಾಂಖ್ಯಯೋಗಾಧಿಗಮ್ಯಂ '** (ಶ್ವೇ.ಉ. ೬-೧೩) ಎಂದು ಪರಮಾತ್ಮನ ವರ್ಣನೆ ಇದೆ. ಆದರೆ ಕಾಪಿಲಸಾಂಖ್ಯಶಾಸ್ತ್ರದಲ್ಲಿಯೂ ಪಾತಂಜಲಯೋಗಶಾಸ್ತ್ರದಲ್ಲಿಯೂ ಪ್ರತಿಪಾದಿತವಾದ ಪರಮಾರ್ಥವು ಮಾತ್ರ ಗ್ರಾಹ್ಯವಲ್ಲ. ಆ ವಿಷಯವು ಶ್ರುತಿವಿರುದ್ಧವಾದ್ದರಿಂದ ಸಾಂಖ್ಯಾಭಾಸ, ಯೋಗಾಭಾಸವೆಂದು ತಳ್ಳಿಹಾಕಿಬಿಡಬಹುದು (೧೩೫). ಯಾವಾತನ ಉಪಾಸನೆಯು ಪರಿಪಕ್ವವಾಗುವುದಿಲ್ಲವೋ ಆತನು ಮರಣವನ್ನೈದಿದ ಮೇಲೆ ಯಾವುದೋ ಪರಲೋಕದಲ್ಲಿಯೋ ಬ್ರಹ್ಮಲೋಕದಲ್ಲಿಯೋ ತತ್ತ್ವಜ್ಞಾನವನ್ನು ಪಡೆದು ಮುಕ್ತನಾಗುತ್ತಾನೆ. ಈ ವಿಷಯವನ್ನೂ ಭಗವದ್ಗೀತೆಯಲ್ಲಿರುವ **''ಯಂ ಯಂ ವಾಪಿ ಸ್ಮರನ್ ಭಾವಂ ...''** (ಭ.ಗೀ.೮-೬) ಎಂಬ ಶ್ಲೋಕವು ತಿಳಿಸುತ್ತದೆ. ಯೋಗಿಯು ಮರಣ ಸಮಯದಲ್ಲಿ ಯಾವ ವಸ್ತುಸ್ವರೂಪವನ್ನು ಸ್ಮರಿಸಿಕೊಳ್ಳುತ್ತ ದೇಹವನ್ನು ಬಿಡುವನೋ ಆತನು ಆಯಾವಸ್ತುಸ್ವರೂಪವನ್ನು ಪಡೆಯುವನು. ಈ ವಿಷಯವು ಪ್ರಶ್ನೋಪನಿಷತ್ತಿನಲ್ಲಿಯೂ ಬಂದಿದೆ(೩-೧೦) (೧೩೬-೧೩೭). ಜೀವಿತದ ಅಂತ್ಯಸಮಯದಲ್ಲಿ ಯಾವ ಜ್ಞಾನವಿರುತ್ತದೆಯೋ ಅದಕ್ಕೆ ಅನುಗುಣವಾಗಿ ಭಾವಿಜನ್ಮಬರುವುದಾದರೆ, ಜ್ಞಾನದಿಂದ ಮುಕ್ತಿಯಾಗುತ್ತದೆ ಎಂಬುದು ಹೇಗೆ ಕೂಡುತ್ತದೆ? ಹೌದು; ಸಗುಣ ಬ್ರಹ್ಮೋಪಾಸಕನಿಗೆ ಸಂಸ್ಕಾರಬಲದಿಂದ ಸಗುಣಬ್ರಹ್ಮಜ್ಞಾನವಾಗುವಂತೆ, ನಿರ್ಗುಣೋಪಾಸಕನಿಗೆ ಅಂತ್ಯಕಾಲದಲ್ಲಿ ನಿರ್ಗುಣಬ್ರಹ್ಮಜ್ಞಾನವೇ ಇರುತ್ತದೆ. ಅವನು ನಿರ್ಗುಣವೇ ಆಗಿಬಿಡುತ್ತಾನೆ. ಅದೇ ಮುಕ್ತಿ. ನಿತ್ಯನಿರ್ಗುಣಬ್ರಹ್ಮ ಪ್ರಾಪ್ತಿ ಎಂದರೂ ಒಂದೇ, ಮುಕ್ತಿ ಎಂದರೂ ಒಂದೇ. ಹೆಸರು ಮಾತ್ರ

ಬೇರೆ ಎಂಬಂತೆ ತೋರುತ್ತದೆ. ಸಂವಾದಿಭ್ರಮನೇ ಪ್ರಮೆಯೆನಿಸುವಂತೆ ನಾಮಮಾತ್ರದಿಂದ ಭೇದವಿದೆ. ಅರ್ಥ ಒಂದೇ ಆಗಿದೆ (೧೩೮-೧೩೯). ನಿರ್ಗುಣೋಪಾಸನೆಯು ಮಾನಸಿಕಕ್ರಿಯೆಯೇ ಆದರೂ ಅದರಿಂದ ಮೂಲಾವಿದ್ಯೆಯು ನಿವೃತ್ತವಾಗುತ್ತದೆ. ಆಗ ಶುದ್ಧಜ್ಞಾನವು ಮಾತ್ರ ಉಳಿಯುತ್ತದೆ. ಸಗುಣೋಪಾಸನೆಯಿಂದ ತಾರಕಬ್ರಹ್ಮದ (ಸಗುಣ ಬ್ರಹ್ಮದ) ಜ್ಞಾನವು ಹುಟ್ಟುತ್ತದೆಯಲ್ಲವೆ? ಹಾಗೆಯೇ ಇಲ್ಲಿಯೂ ನಿರ್ಗುಣೋಪಾಸನೆಯು ಬ್ರಹ್ಮಜ್ಞಾನದಲ್ಲಿ ಕೊನೆಗೊಳ್ಳುತ್ತದೆ ಎಂದು ತಿಳಿಯಬೇಕು (೧೪೦).

ನಿರ್ಗುಣೋಪಾಸನೆಗೆ ಮೋಕ್ಷವು ಫಲವೆಂದು ಉತ್ತರತಾಪಿನ್ಯು-ಪನಿಷತ್ತಿನಲ್ಲಿ ಸ್ಪಷ್ಟವಾಗಿ ಹೇಳಿದೆ (ಖಂಡ - ೫). **''ಸೋಽಕಾಮೋ ನಿಷ್ಕಾಮಃ ಆತ್ಮಕಾಮೋ ನ ತಸ್ಯ ಪ್ರಾಣಾ ಉತ್ಕ್ರಾಮಂತಿ ಅತ್ರೈವ ಸಮವಲೀಯಂತೇ ಬ್ರಹ್ಮೈವ ಸನ್ ಬ್ರಹ್ಮಾಪ್ಯೇತಿ ....''** (ನೃ.ಉ.೫-೮) ಇತ್ಯಾದಿ ಶ್ರುತಿವಾಕ್ಯವು ಆ ಉಪನಿಷತ್ತಿನಲ್ಲಿದೆ (೧೪೧). **''ತಮೇವ ವಿದಿತ್ವಾ ಅತಿಮೃತ್ಯುಮೇತಿ,** (ಶ್ವೇ.ಉ.೬-೧೫; ೩-೮) **ನಾನ್ಯಃ ಪಂಥಾ ವಿದ್ಯತೇಽಯನಾಯ''** (ಶ್ವೇ.ಉ.೩-೧೮) ಇತ್ಯಾದಿ ಶ್ರುತಿಗಳು ಜ್ಞಾನದಿಂದಲೇ ಮೋಕ್ಷವೆಂದು ಸಾರುತ್ತವೆ. ನಾವೂ ಸಹ ನಿರ್ಗುಣೋಪಾಸನೆಯಿಂದ ಮೂಲಾವಿದ್ಯೆಯು ನಿವೃತ್ತವಾಗಿ ಆತ್ಮಜ್ಞಾನವು ಪ್ರಾಪ್ತವಾಗುತ್ತದೆ. ಈ ಜ್ಞಾನದಿಂದ ಮೋಕ್ಷವೆಂದು ಹೇಳುತ್ತೇವೆ ಇದರಲ್ಲಿ ವಿರೋಧವೇನಿದೆ? (೧೪೨). ನಿಷ್ಕಾಮೋಪಾಸನೆಯಿಂದ ಮುಕ್ತಿಯೆಂದು ತಾಪನೀಯೋಪನಿಷತ್ತಿನಲ್ಲಿ ಹೇಳಿದೆ. ಉಪಾಸಕನು ಸಕಾಮನಾಗಿದ್ದರೆ ಬ್ರಹ್ಮಲೋಕದ ಪ್ರಾಪ್ತಿಯೆಂದು ಶೈಬ್ಯಪ್ರಶ್ನೆಯ ಸಂದರ್ಭದಲ್ಲಿ ಬಂದಿದೆ (೧೪೩). ಅಲ್ಲಿ ಹೇಳಿರುವುದೇನೆಂದರೆ : ''ಯಾವಾತನು ತ್ರಿಮಾತ್ರೆಯುಳ್ಳ ಪ್ರಣವವನ್ನು ಉಪಾಸನೆಮಾಡುತ್ತಾನೋ ಆತನಿಗೆ ಬ್ರಹ್ಮಲೋಕವು ಪ್ರಾಪ್ತವಾಗುತ್ತದೆ. ಅಲ್ಲಿ ಆತನು ಜೀವಘನನಿಗಿಂತ - ಎಂದರೆ ಜೀವಸಮಷ್ಟಿರೂಪನಾದ ಹಿರಣ್ಯಗರ್ಭನಿಗಿಂತ ಉತ್ಕೃಷ್ಟ-ಪುರುಷನಾದ ನಿರುಪಾಧಿಕ ಚೈತನ್ಯವನ್ನು ಸಾಕ್ಷಾತ್ಕರಿಸಿಕೊಳ್ಳುತ್ತಾನೆ. **'ಸ ಏತಸ್ಮಾಜ್ಜೀವಘನಾತ್ ಪರಂ ಪುರಿಶಯಂ ಪುರುಷಮೀಕ್ಷತೇ'** (ಪ್ರ.ಉ.೪-೪)- ಇತ್ಯಾದಿ ಶ್ರುತಿವಾಕ್ಯವಿದೆ (೧೪೪). **'ಅಪ್ರತೀಕಾಲಂಬ-ನಾನ್ನಯತೀತಿ ಬಾದರಾಯಣಃ, ಉಭಯಥಾಽ ದೋಷಾತ್ತತ್ಕ್ರತುಶ್ಚ'** (ಬ್ರ.ಸೂ.೪-೩-೧೫) - ಎಂಬ ಸೂತ್ರದ ಅಪ್ರತೀಕಾಧಿಕರಣದಲ್ಲಿ

ತತ್ಕ್ರತುನ್ಯಾಯವನ್ನು ವರ್ಣಿಸಿ, ಸಕಾಮನಾದ ಉಪಾಸಕನಿಗೆ ಬ್ರಹ್ಮಲೋಕವು ಫಲವೆಂದು ಹೇಳಿದೆ. ತತ್ಕ್ರತುನ್ಯಾಯದ ತಾತ್ಪರ್ಯ ಹೀಗೆ- ಯಾವ ಉಪಾಸಕನು ಯಾವುದನ್ನು ಸಂಕಲ್ಪಿಸಿ ಅದರ ಪ್ರಾಪ್ತಿಗಾಗಿ ಉಪಾಸನೆ ಮಾಡುತ್ತಾನೋ ಅದನ್ನು ಪಡೆಯುತ್ತಾನೆ. ಉಪಾಸಕನು ಸಗುಣಬ್ರಹ್ಮವನ್ನು ಸಂಕಲ್ಪಿಸಿದ್ದರೆ ಸಗುಣಬ್ರಹ್ಮವನ್ನೂ ನಿರ್ಗುಣಬ್ರಹ್ಮವನ್ನು ಸಂಕಲ್ಪಿಸಿ ಉಪಾಸನೆ ಮಾಡಿದರೆ ಅದನ್ನು ಪಡೆಯುತ್ತಾನೆ (೧೪೫). ತನ್ನ ಸಂಕಲ್ಪಾನುಸಾರವಾಗಿ ಬ್ರಹ್ಮಲೋಕವನ್ನು ಪಡೆದರೂ ನಿರ್ಗುಣೋಪಾಸನೆಯ ಸಾಮರ್ಥ್ಯದಿಂದ ಬ್ರಹ್ಮಲೋಕದಲ್ಲಿ ಆತ್ಮತತ್ತ್ವವನ್ನು ತಿಳಿಯುತ್ತಾನೆ. ಆತನಿಗೆ ಪುನರ್ಜನ್ಮವಿಲ್ಲ. ಕಲ್ಪಾಂತದಲ್ಲಿ ಬ್ರಹ್ಮನೊಡನೆ ಈತನೂ ಮುಕ್ತನಾಗುತ್ತಾನೆ (೧೪೬). ವೇದದಲ್ಲಿ ಹೇಳಿದ ಪ್ರಣವೋಪಾಸನೆಗಳೆಲ್ಲವೂ ಪ್ರಾಯೇಣ ನಿರ್ಗುಣೋಪಾಸನೆಗಳೇ ಆಗಿವೆ. ಅವುಗಳಲ್ಲಿ ವಿರಳವಾಗಿ ಸಗುಣೋಪಾಸನೆಯೂ ಕಂಡುಬರುತ್ತದೆ. ಪ್ರಶ್ನೋಪನಿಷತ್ತಿನ ಐದನೆಯ ಪ್ರಶ್ನೆಯಲ್ಲಿ ಪಿಪ್ಪಲಾದನು ಸತ್ಯಕಾಮನ ಪ್ರಶ್ನೆಗೆ ಉತ್ತರಿಸುತ್ತ ಹೇಳುತ್ತಾನೆ. ''ಸತ್ಯಕಾಮ, ಓಂಕಾರವು ಪರಬ್ರಹ್ಮವೂ ಹೌದು. ಅಪರಬ್ರಹ್ಮವೂ ಹೌದು. ಪರ = ನಿರ್ಗುಣ. ಅಪರ = ಸಗುಣ. ಉಪಾಸಕನು ಯಾವ ಸಂಕಲ್ಪದಿಂದ ಉಪಾಸನೆ ಮಾಡುತ್ತಾನೋ ಅದನ್ನು ಪಡೆಯುತ್ತಾನೆ.'' ಓಂಕಾರದ ಉಪಾಸನೆ ನಿರ್ಗುಣವೂ ಆಗುತ್ತದೆ, ಸಗುಣವೂ ಆಗುತ್ತದೆ- ಎಂಬುದಕ್ಕೆ ಇದು ಪ್ರಮಾಣವಾಗಿದೆ (೧೪೭-೧೪೮). ಕಠವಲ್ಲಿಯಲ್ಲಿ ಯಮನೂ ಸಹ ಪ್ರಶ್ನಕರ್ತನಾದ ನಚಿಕೇತನಿಗೆ ಉತ್ತರ ಹೇಳುತ್ತ ''ಪರಾಪರಬ್ರಹ್ಮವೆಂಬ ಓಂಕಾರದ ಆಲಂಬನವು ಶ್ರೇಷ್ಠವಾದದ್ದು. ಇದನ್ನರಿತು ಉಪಾಸನೆ ಮಾಡಿದರೆ ಅವನ ಇಚ್ಛೆಗೆ ತಕ್ಕ ಫಲವು ದೊರೆಯುತ್ತದೆ'' ಎಂದಿದ್ದಾನೆ. ಇದೂ ಸಹ ಓಂಕಾರದ ಉಪಾಸನೆ ದ್ವಿವಿಧವೆಂಬುದಕ್ಕೆ ಪ್ರಮಾಣ (೧೪೯).

ನಿರ್ಗುಣೋಪಾಸನೆಯನ್ನು ಸಮೀಚೀನವಾಗಿ ಮಾಡತಕ್ಕವನಿಗೆ ಈ ಜನ್ಮದಲ್ಲಿಯೇ ಆಗಲಿ, ಮರಣವಾದ ಮೇಲಾಗಲಿ, ಬ್ರಹ್ಮಲೋಕವನ್ನು ಸೇರಿದಮೇಲಾಗಲಿ ಬ್ರಹ್ಮಸಾಕ್ಷಾತ್ಕಾರವಾಗಿ ಮುಕ್ತನಾಗುತ್ತಾನೆಂಬುದು ನಿಶ್ಚಿತವಾದದ್ದು (೧೫೦). ಆತ್ಮಗೀತೆಯಲ್ಲಿಯೂ ಶ್ರವಣಮನನಾದಿಗಳಿಂದ ಆತ್ಮವಿಚಾರವನ್ನು ಮಾಡಲಾರದವನು ಆತ್ಮನ ಉಪಾಸನೆಯಲ್ಲಿ ನಿರತನಾಗಬೇಕೆಂದು ತಿಳಿಸಿದೆ.(೧೫೧). ಆತ್ಮಗೀತೆಯ ವಚನವು ಇಂತಿದೆ - ''ವಿಚಾರದಿಂದ ತತ್ತ್ವಜ್ಞಾನವನ್ನು ಪಡೆಯಲು ಅಶಕ್ತನಾದವನು

ಖಂಡಿತವಾಗಿಯೂ ಸಫಲನಾದೇನು ಎಂದು ಏಕಚಿತ್ತದಿಂದ ನನ್ನ ಉಪಾಸನೆಮಾಡಬೇಕು'' ಆಗ ಕಾಲಕಳೆದಂತೆ ಅನುಭವಾರೂಢನಾಗುತ್ತಾನೆ (೧೫೨) ಆಳವಾದ ನೆಲದಲ್ಲಿ ಹೂತಿರುವ ನಿಧಿಯನ್ನು ಪಡೆಯಲು ನೆಲವನ್ನು ಅಗೆಯುವುದರ ಹೊರತಾಗಿ ಬೇರೆ ಉಪಾಯವು ಹೇಗೆ ಇಲ್ಲವೋ ಹಾಗೆ ಆತ್ಮಲಾಭಕ್ಕೆ ತನ್ನ ಆತ್ಮನ ಚಿಂತನೆಯನ್ನು ಬಿಟ್ಟು ಇನ್ನೊಂದು ಮಾರ್ಗವಿಲ್ಲ (೧೫೩). ದೇಹವೆಂಬ ಬಂಡೆಯನ್ನು ಪಕ್ಕಕ್ಕೆ ಉರುಳಿಸಿ, ಬುದ್ಧಿ ಎಂಬ ಗುದ್ದಲಿಯಿಂದ ಮನಸ್ಸೆಂಬ ಭೂಮಿಯನ್ನು ಅಗೆದು 'ನಾನು' ಎಂಬ ಪ್ರತ್ಯಗಾತ್ಮವಾದ ನಿಧಿಯನ್ನು ಮನುಷ್ಯನು ತೆಗೆದುಕೊಳ್ಳಬೇಕು! ಅನುಭವಕ್ಕೆ ಬಾರದಿದ್ದರೂ '**ಅಹಂ ಬ್ರಹ್ಮಾಸ್ಮಿ**' ಎಂಬ ಚಿಂತನೆಯನ್ನು ಮಾಡುತ್ತಿರಬೇಕು. ಧ್ಯಾನಸಾಮರ್ಥ್ಯದಿಂದ ಇಲ್ಲದ ವಸ್ತುವೇ ದೊರಕುತ್ತಿರುವಾಗ ನಿತ್ಯಪ್ರಾಪ್ತವಾದ ಬ್ರಹ್ಮವು ದೊರೆಯದೇ ಇದ್ದೀತೆ? (೧೫೪-೧೫೫). ಪ್ರತಿದಿನವೂ ಈ ಪ್ರಕಾರವಾಗಿ ಧ್ಯಾನಿಸುತ್ತಿದ್ದರೆ, ನಾನು ಆತ್ಮನಲ್ಲವೆಂಬ ಬುದ್ಧಿಯಾದರೂ ಶಿಥಿಲವಾಗುತ್ತದೆ. ಇದೇ ಒಂದು ಧ್ಯಾನದ ಫಲವಾಗಿ ಬರುತ್ತದೆ. ಇಷ್ಟು ತಿಳಿದರೂ ಧ್ಯಾನವನ್ನು ಮಾಡದೇ ಹೋದರೆ ಆತನು ಪಶುವಲ್ಲದೆ ಇನ್ನಾರು? ಹೇಳು (೧೫೬). ಸತ್ತು ಹೋಗುವ ಈ ದೇಹದಲ್ಲಿ ನಾನು ಎಂಬ ಅಭಿಮಾನವನ್ನು ಕಿತ್ತೆಸೆದು, ಧ್ಯಾನಬಲದಿಂದ ತಾನೇ ಅದ್ವಿತೀಯನಾದ ಆತ್ಮನೆಂದು ತಿಳಿದಾಗ, ಮರ್ತ್ಯನು ಅಮೃತನಾಗಿಬಿಡುತ್ತಾನೆ. ಈ ದೇಹದಲ್ಲಿಯೇ ಬ್ರಹ್ಮಜ್ಞಾನವನ್ನು ಪಡೆದು ಮುಕ್ತನಾಗುತ್ತಾನೆ. ಯಾವ ಮನುಷ್ಯನು ಧ್ಯಾನದೀಪವೆಂಬ ಈ ಪ್ರಕರಣವನ್ನು ಸರಿಯಾಗಿ ಓದಿ ಮನನ ಮಾಡುತ್ತಾನೋ ಆತನು ಸತತವೂ ಬ್ರಹ್ಮಧ್ಯಾನದಲ್ಲಿ ತೊಡಗುತ್ತಾನೆ. ಸಂದೇಹವೇ ಇಲ್ಲ(೧೫೭).

**ಇಲ್ಲಿಗೆ ಧ್ಯಾನದೀಪಪ್ರಕರಣವು ಸಮಾಪ್ತವಾಯಿತು**

---

# ೧೦. ನಾಟಕದೀಪಪ್ರಕರಣ

ಸೃಷ್ಟಿಗೆ ಪೂರ್ವದಲ್ಲಿ ಅದ್ವಿತೀಯನೂ ಆನಂದಸ್ವರೂಪನೂ ಪರಿಪೂರ್ಣನೂ ಆದ ಪರಮಾತ್ಮನು ತಾನೇ ಜಗತ್ತಾಗಿ ಅದರಲ್ಲಿ ಜೀವರೂಪದಿಂದ ಪ್ರವೇಶಿಸಿದನು. **ಸದೇವ ಸೋಮ್ಯೇದಮಗ್ರ ಆಸೀತ್,** (ಛಾಂ. ಉ. ೬-೨-೧) **ಏಕಮೇವಾದ್ವಿತೀಯಂ,** (ಛಾಂ. ಉ. ೬-೨-೧) **ವಿಜ್ಞಾನಮಾನಂದಂ ಬ್ರಹ್ಮ,** (ಬೃ. ಉ. ೩-೯-೨೮) **ಪೂರ್ಣಮದಃ ಪೂರ್ಣಮಿದಂ** (ಈ. ವಾ. ಉ. ಶಾಂತಿಮಂತ್ರ) - ಇತ್ಯಾದಿ ಶ್ರುತಿಗಳನ್ನೂ "**ತತ್ಸೃಷ್ಟ್ವಾ ತದೇವಾನುಪ್ರಾವಿಶತ್**" ಇತ್ಯಾದಿ ಶ್ರುತಿವಚನಗಳನ್ನು (ತೈ. ಉ. ೨-೬-೭) ಇಲ್ಲಿ ಸ್ಮರಿಸಿಕೊಳ್ಳಬೇಕು (೧). ವಿಷ್ಣು ಶಿವ, ಬ್ರಹ್ಮ-ಮುಂತಾದ ಉತ್ತಮದೇಹಗಳಲ್ಲಿ ಪರಮಾತ್ಮನು ಪ್ರವೇಶಿಸಿದಾಗ ದೇವತೆಯೆಂದು ಪೂಜ್ಯನಾಗುತ್ತಾನೆ. ಮನುಷ್ಯ, ಮೃಗ-ಮುಂತಾದ ಅಧಮದೇಹಗಳಲ್ಲಿ ಪ್ರವಿಷ್ಟನಾದಾಗ ಮನುಷ್ಯ, ಮೃಗ ಮುಂತಾದ ಹೆಸರಿನವನಾಗುತ್ತಾನೆ. ಪೂಜ್ಯಪೂಜಕ ಇತ್ಯಾದಿ ಭೇದಗಳೆಲ್ಲವೂ ಆಯಾ ಶರೀರ ಮುಂತಾದ ಉಪಾಧಿಗಳಿಂದ ಆದವುಗಳು (೨). ಅನೇಕ ಜನ್ಮಗಳಲ್ಲಿ ಪರಮಾತ್ಮನನ್ನು ಭಜಿಸಿದ ಪುಣ್ಯಫಲದಿಂದ ತಾನು ಯಾರೆಂದು ತನ್ನ ವಿಚಾರವನ್ನು ಮಾಡಿಕೊಳ್ಳಲು ಇಚ್ಛೆ ಹುಟ್ಟುತ್ತದೆ. ಆಗ ಶ್ರವಣಮನನಾದಿಗಳಿಂದ ಹುಟ್ಟಿದ ಜ್ಞಾನದಿಂದ, ತನ್ನ ಸ್ವರೂಪವನ್ನೇ ಮುಚ್ಚಿಹಾಕಿದ ಮಾಯೆಯು ನಷ್ಟವಾಗಲು, ತಾನು ಅದ್ವಯಾನಂದ ಪೂರ್ಣನಾದ ಆತ್ಮನೆಂಬುದೊಂದೇ ಉಳಿಯುವುದು. ಮಾಯೆಯೇ ಅವಿದ್ಯೆ. ಅದೇ ಅಜ್ಞಾನ(೩). ಅದ್ವಿತೀಯಾನಂದಸ್ವರೂಪನಾದ ತನಗೆ ಇನ್ನೊಂದು ವಸ್ತುವಿದೆಯೆಂದು ತಿಳಿಯುವುದೇ ಭ್ರಮೆ, ಅಜ್ಞಾನ. ಅದರಿಂದ ದುಃಖಕ್ಕೆ ಒಳಗಾಗಿರುವುದೇ ಸಂಸಾರಬಂಧ, ಅದೆಲ್ಲವೂ ನಿವೃತ್ತವಾಗಿ ಸ್ವಸ್ವರೂಪದಲ್ಲಿ ನಿಂತಿರುವುದೇ ಮುಕ್ತಿಯೆನಿಸುತ್ತದೆ (೪). ವಿಚಾರವಿಲ್ಲದ್ದರಿಂದ ಗಂಟುಬಿದ್ದ ಸಂಸಾರಬಂಧವು ವಿಚಾರದಿಂದ ನಿವೃತ್ತವಾಗುವುದು. ಆದ್ದರಿಂದ ಜೀವಾತ್ಮಪರಮಾತ್ಮರ ವಿಚಾರವನ್ನು ತತ್ತ್ವಸಾಕ್ಷಾತ್ಕಾರವಾಗುವವರೆಗೂ ಮಾಡುತ್ತಲೇ ಇರಬೇಕು. ಹಿಂದಿನ ಪ್ರಕರಣಗಳಲ್ಲಿ ತಿಳಿಸಿದಂತೆ ಚಿದಾಭಾಸವಿಶಿಷ್ಟವಾದ ಅಹಂಕಾರವು ವ್ಯವಹಾರದಶೆಯಲ್ಲಿ ದೇಹಾದಿಗಳೇ ನಾನು-ಎಂಬ ಅಭಿಮಾನವನ್ನು ತಳೆದಿರುತ್ತದೆ. ಈ ಅಹಂಕಾರವೇ ಕರ್ತೃತ್ವಭೋಕ್ತೃತ್ವಾದಿ ಧರ್ಮಗಳಿಂದ

ಕೂಡಿದ ಜೀವಾತ್ಮನೆನಿಸುತ್ತದೆ. ಈ ಜೀವಾತ್ಮನು ಮಾಡುವ ಕ್ರಿಯೆಗೆ ಮನಸ್ಸು ಸಾಧನ. ಮನಸ್ಸು ಅಂತಃಕರಣದ ಒಂದು ಭಾಗ. ಇದಕ್ಕೆ ಅಂತರ್ವ್ಯಾಪಾರ, ಬಹಿರ್ವ್ಯಾಪಾರ - ಎಂಬ ಎರಡು ಕ್ರಿಯೆಗಳುಂಟು (೫-೬). ಮನಸ್ಸಿನ ಅಂತರ್ವ್ಯಾಪಾರವು 'ನಾನು, ನಾನು' ಎಂದು ಹೇಳಿಕೊಳ್ಳುತ್ತದೆ. ಬಹಿರ್ವ್ಯಾಪಾರವು ಇದು, ಅದು - ಎಂದು ಬಾಹ್ಯ ವಸ್ತುಗಳನ್ನು ನಿರ್ದೇಶಿಸುತ್ತದೆ. ಗಂಧ, ರೂಪ, ರಸಾದಿಗಳು 'ಇದು ಅದು' ಎಂಬುದರ ವಿಶೇಷರೂಪಗಳು. ಗಂಧ, ರೂಪ, ರಸಾದಿ ವಿಶೇಷಗಳನ್ನು ಘ್ರಾಣ, ನೇತ್ರ, ಜಿಹ್ವೆ - ಮೊದಲಾದ ಪಂಚೇಂದ್ರಿಯಗಳು ಗ್ರಹಿಸಿ ಮನಸ್ಸಿಗೆ ಅರ್ಪಿಸುತ್ತವೆ (೭-೮).

ಜೀವಾತ್ಮನನ್ನೂ ಅವನ ಉಪಕರಣಗಳನ್ನೂ ಹೇಳಿದ್ದಾಯಿತು. ಈಗ ಪರಮಾತ್ಮನ ವಿಚಾರ. ಈ ಕರ್ತೃವನ್ನೂ ಅವನ ಕ್ರಿಯೆಯನ್ನೂ ಪರಸ್ಪರ ವಿಲಕ್ಷಣಗಳಾದ ಇಂದ್ರಿಯಗಳನ್ನೂ ಅವುಗಳಿಗೆ ವಿಷಯಗಳಾದ ಗಂಧಾದಿಗಳನ್ನೂ ಏಕಕಾಲದಲ್ಲಿ ಪ್ರಕಾಶಿಸುವವನಿಗೆ ವೇದಾಂತಶಾಸ್ತ್ರದಲ್ಲಿ ಸಾಕ್ಷಿ ಎಂದು ಹೆಸರು (೯). ನಾನು ರೂಪವನ್ನು ನೋಡುತ್ತೇನೆ. ಶಬ್ದವನ್ನು ಕೇಳುತ್ತೇನೆ, ಗಂಧವನ್ನು ಮೂಸುತ್ತೇನೆ, ಈ ವಸ್ತುವನ್ನು ಮುಟ್ಟುತ್ತೇನೆ - ಎಂಬ ಸರ್ವವನ್ನೂ ಪ್ರಕಾಶಿಸತಕ್ಕವನು ಸಾಕ್ಷಿ. ಎಲ್ಲ ಜ್ಞಾನಗಳಲ್ಲಿಯೂ ಜ್ಞಾತೃ, ಜ್ಞಾನ, ಜ್ಞೇಯ ಎಂದೂ, ಎಲ್ಲ ಕ್ರಿಯೆಗಳಲ್ಲಿಯೂ ಕರ್ತೃ, ಕ್ರಿಯೆ, ಕರ್ತವ್ಯ ಎಂದೂ ತ್ರಿಪುಟಿ ಇರುತ್ತದೆ. ಈ ತ್ರಿಪುಟಿಯು ಏಕಕಾಲದಲ್ಲಿ ಸಾಕ್ಷಿಗೆ ಗೋಚರಿಸುತ್ತದೆ. ಹೀಗೆ ಎಲ್ಲವನ್ನೂ ನೃತ್ಯಶಾಲೆಯಲ್ಲಿರುವ ದೀಪದಂತೆ ಏಕಕಾಲದಲ್ಲಿ ಪ್ರಕಾಶಪಡಿಸತಕ್ಕವನು ಸಾಕ್ಷಿ (೧೦). ನೃತ್ಯಶಾಲೆಯಲ್ಲಿರುವ ದೀಪವು ನೃತ್ಯಶಾಲೆಯ ಒಡೆಯನನ್ನೂ ಪ್ರೇಕ್ಷಕರಾದ ಸಭ್ಯರನ್ನೂ ನರ್ತಕಿಯನ್ನೂ ಸಹ ಯಾವ ವಿಶೇಷವೂ ಇಲ್ಲದೆ ಏಕಕಾಲದಲ್ಲಿ ಪ್ರಕಾಶಪಡಿಸುತ್ತದೆ. ಅವರಾರೂ ಇಲ್ಲದಿದ್ದರೂ ಸ್ವಯಂಪ್ರಕಾಶವಾಗಿ ಬೆಳಗುತ್ತಲೇ ಇರುತ್ತದೆ. ಹಾಗೆಯೇ ಸಾಕ್ಷಿಯಾದ ಪ್ರತ್ಯಗಾತ್ಮನೂ ಸಹ ಅಹಂಕಾರವನ್ನು ಬುದ್ಧಿಯನ್ನೂ ಬುದ್ಧಿಗೆ ವಿಷಯಗಳಾದ ಗಂಧಾದಿಗಳನ್ನೂ ಸಹ ಬೆಳಗುತ್ತಲೇ ಇರುತ್ತಾನೆ. ಅಹಂಕಾರಾದಿಗಳಿಲ್ಲದಿದ್ದರೂ ಸುಷುಪ್ತಿಯಲ್ಲಿ ತಾನೊಬ್ಬನೇ ಸಾಕ್ಷಿಯಾಗಿ ಬೆಳಗುತ್ತಾನೆ. ಅಹಂಕಾರ = ಜ್ಞಾತೃ, ಬುದ್ಧಿ = ಜ್ಞಾನ, ವಿಷಯ = ಜ್ಞೇಯ. ಇವು ಮೂರೂ ಸೇರಿ ತ್ರಿಪುಟಿ ಎನಿಸುತ್ತದೆ (೧೧-೧೨). ಈಗ ಒಂದು ಪ್ರಶ್ನೆ ಹುಟ್ಟುತ್ತದೆ. ಬುದ್ಧಿಯು ಪ್ರಕಾಶರೂಪವಾದ್ದರಿಂದ ಅದೇ ಅಹಂಕಾರಾದಿಗಳನ್ನು

ಬೆಳಗುತ್ತದೆ ಎನ್ನಬಹುದು. ಸಾಕ್ಷಿ ಎಂಬುದು ಇಲ್ಲಿ ಏಕೆ ಬೇಕು? ಇದಕ್ಕೆ ಉತ್ತರವೇನೆಂದರೆ, ಕೂಟಸ್ಥನಾದ - ಎಂದರೆ - ನಿರ್ವಿಕಾರನಾದ ಸಾಕ್ಷಿಯು ಸ್ವಪ್ರಕಾಶಚೈತನ್ಯವಾದ್ದರಿಂದ ನಿರಂತರವೂ ಬೆಳಗುತ್ತಿರುವಾಗ, ಅದರಿಂದ ಪ್ರಕಾಶಿತವಾಗುವ ಬುದ್ಧಿಯು ನಾನಾ ಪ್ರಕಾರವಾಗಿ ನರ್ತಿಸುತ್ತದೆ. ಇದು ಘಟ, ಇದು ಪಟ - ಇತ್ಯಾದಿ ಜ್ಞಾನಾಕಾರವನ್ನು ತಳೆದು ವಿಕಾರವನ್ನು ಹೊಂದುತ್ತದೆ. ಬುದ್ಧಿಯು ಜಡವಾದ್ದರಿಂದ ತಾನೇ ಬೆಳಗುವುದಿಲ್ಲ, ಇನ್ನೊಂದನ್ನು ಹೇಗೂ ಬೆಳಗಲಾರದು. ಆದ್ದರಿಂದ ಬುದ್ಧಿಯನ್ನೂ ಸಹ ಬೆಳಗುವ ಸಾಕ್ಷಿಯು ಆವಶ್ಯಕ. ಬುದ್ಧಿಯು ನರ್ತಕಿ ಇದ್ದಂತೆ. ಸಾಕ್ಷಿಯು ಅವಳನ್ನೂ ಬೆಳಗುವ ದೀಪವಿದ್ದಂತೆ (೧೩). ಇದೊಂದು ನಾಟಕವೇ ಸರಿ. ಅಹಂಕಾರವೆಂಬ ಜೀವನು ನೃತ್ಯಶಾಲೆಯ ಒಡೆಯ. ಗಂಧಾದಿವಿಷಯಗಳು ಪ್ರೇಕ್ಷಕರಾದ ಸಭ್ಯರು. ಬುದ್ಧಿಯು ನರ್ತಕಿ. ಇಂದ್ರಿಯಗಳು ತಾಳಹಾಕತಕ್ಕವರು, ವಾದ್ಯವನ್ನು ನುಡಿಸತಕ್ಕವರು. ಇವರನ್ನೆಲ್ಲ ಬೆಳಗುವ ದೀಪವೇ ಸಾಕ್ಷಿ! (೧೪). ದೀಪವು ಸ್ವಸ್ಥಾನದಲ್ಲಿಯೇ ಇದ್ದು ಚಲನೆಯಿಲ್ಲದೆಯೇ ನಾಲ್ಕುದಿಕ್ಕುಗಳನ್ನೂ ಹೇಗೆ ಬೆಳಗುವುದೋ ಹಾಗೆಯೇ ಸಾಕ್ಷಿಯು ಸ್ಥಿರವಾಗಿ ಕಾಲತ್ರಯದಲ್ಲಿಯೂ ಅಚಲವಾಗಿದ್ದರೂ ಒಳಗೆ - ಹೊರಗೆ ಸಹ ಪ್ರಕಾಶವನ್ನು ಬೀರುತ್ತಲೇ ಇರುತ್ತದೆ (೧೫). ಒಳಗೆ - ಹೊರಗೆ ಎಂಬ ವಿಭಾಗವನ್ನು ದೇಹಾಪೇಕ್ಷೆಯಿಂದ ಹೇಳಿದ್ದಾಗಿದೆ. ಸಾಕ್ಷಿಗೆ ಒಳ - ಹೊರ ಎಂಬ ವಿಭಾಗವೇ ಇಲ್ಲ, ದೇಹದೊಳಗೆ ಅಹಂಕಾರವಿರುತ್ತದೆ, ವಿಷಯಗಳು ದೇಹದ ಹೊರಗೆ ಇರುತ್ತವೆ. ಸಾಕ್ಷಿಯು ಸರ್ವತ್ರ ಇರುತ್ತದೆ. ಇಲ್ಲೊಂದು ಪ್ರಶ್ನೆ ಉಂಟು. ಸಾಕ್ಷಿಗೆ ಚಲನೆ ಇಲ್ಲ, ಅದಕ್ಕೆ ಒಳ - ಹೊರ ಎಂಬ ಭೇದವಿಲ್ಲ ಎಂದು ಹೇಳಿದ್ದೀರಿ. 'ನಾನು ಗಡಿಗೆಯನ್ನು ನೋಡುತ್ತೇನೆ' ಎಂಬ ಜ್ಞಾನದಲ್ಲಿ ಮೊದಲು 'ಅಹಂ' ಎಂಬ ಅಹಂಕಾರವನ್ನು ಪ್ರಕಾಶಿಸಿ, ಅನಂತರ ಹೊರಗಿಂದ 'ಗಡಿಗೆಯನ್ನು ನೋಡುತ್ತೇನೆ' ಎಂಬುದನ್ನು ಸಾಕ್ಷಿಯು ಪ್ರಕಾಶಿಸುತ್ತದೆ. ಆಗ ಒಳಗಿಂದ ಸಾಕ್ಷಿಯು ಹೊರಗೆ ಬಂದು ಪ್ರಕಾಶಿಸಿದಂತೆ ಅನುಭವವಾಗುವುದಿಲ್ಲವೆ? ಇಲ್ಲ; ದೇಹದೊಳಗಿರುವ ಬುದ್ಧಿಯು ರೂಪಾದಿಗಳನ್ನು ತಿಳಿಯುವುದಕ್ಕಾಗಿ ಇಂದ್ರಿಯಗಳೊಡನೆ ಪದೇ ಪದೇ ಹೊರಗೆ ಹೋಗುತ್ತದೆ. ಈ ಗಮನಾಗಮನಗಳು ಬುದ್ಧಿಯಲ್ಲಿವೆ. ಸಾಕ್ಷಿಯಲ್ಲಿವೆ ಎಂಬುದು ಬರಿಯ ಆರೋಪ (೧೬-೧೭). ಹೇಗೆಂದರೆ, ಕಿಟಿಕಿಯ ಚಿಕ್ಕರಂಧ್ರದಿಂದ ಸ್ವಲ್ಪ ಬಿಸಿಲು ಮನೆಯೊಳಗೆ ಬಂದಿರುತ್ತದೆ. ಆ ಬಿಸಿಲಿನಲ್ಲಿ ಯಾವ ಚಲನೆಯೂ ಇರುವುದಿಲ್ಲ, ಆದರೆ ನಮ್ಮ ಕೈಯನ್ನು

ಬಿಸಿಲಿನಿಂದ ಎಡಬಲಗಳಿಗೆ ಆಡಿಸುತ್ತಿದ್ದರೆ, ಬಿಸಿಲೇ ನರ್ತನಮಾಡುತ್ತಿರುವಂತೆ ಕಾಣುತ್ತದೆ. ಹಾಗೆ ಬುದ್ಧಿಯು ಚಲಿಸುತ್ತಿರುವಾಗ ಸಾಕ್ಷಿಯೇ ಚಲಿಸುತ್ತಿರುವಂತೆ ಭಾಸವಾಗುತ್ತದೆ. ಅದು ಭ್ರಾಂತಿಯೇ ಸರಿ (೧೮). ತನ್ನ ಸ್ಥಾನದಲ್ಲಿ ಸ್ಥಿರನಾಗಿರುವ ಸಾಕ್ಷಿಯು ದೇಹದಿಂದ ಒಳಗೆ ಹೊರಗೆ ಚಲಿಸದೆ ಸ್ಥಿರನಾಗಿದ್ದರೂ ಬುದ್ಧಿಯ ಚಲನೆಯಿಂದ ಸಾಕ್ಷಿಯೂ ಚಲಿಸಿದಂತೆ ತೋರುತ್ತದೆ (೧೯). ಸಾಕ್ಷಿಯು ದೇಹದ ಒಳಗಿದ್ದಾನೆ, ಹೊರಗಿದ್ದಾನೆ ಎಂಬ ದೇಶಸಂಬಂಧವು ಸಾಕ್ಷಿಗಿಲ್ಲ. ಒಳ - ಹೊರ ಎಂಬ ದೇಶಸಂಬಂಧವು ಬುದ್ಧಿಗೆ ಮಾತ್ರ ಇದೆ. ಬುದ್ಧಿ, ಇಂದ್ರಿಯ - ಮೊದಲಾದವೆಲ್ಲವೂ ಕ್ರಿಯೆ ಇಲ್ಲದೆ ಶಾಂತವಾಗಿದ್ದಾಗ, ಸಾಕ್ಷಿಯು ಎಲ್ಲಿ ಪ್ರಕಾಶಿಸುತ್ತಾನೋ ಅಲ್ಲಿಯೇ ಯಾವಾಗಲೂ ಇರುತ್ತಾನೆ(೨೦). ಹಾಗಾದರೆ ಆತ್ಮನು ಒಳಗೆ ಇದ್ದಾನೆ ಹೊರಗೆ ಇದ್ದಾನೆ ಅವನು ಸರ್ವದೇಶಸ್ಥ - ಎಂದು ಹೇಳುವುದು ಹೇಗೆ? ದೇಶಸಂಬಂಧವಿದ್ದರಲ್ಲವೆ ಹಾಗೆ ಹೇಳಬೇಕು? ಹೌದು; ಆತನಿಗೆ ಯಾವ ದೇಶ ಸಂಬಂಧವೂ ಇಲ್ಲ. ಆತ್ಮನು ಅಸಂಗನು: ಒಳ, ಹೊರ, ಸರ್ವತ್ರ ಎಂಬಿವು ಕಲ್ಪಿತದೇಶಭೇದಗಳು. ಕಲ್ಪಿತದೇಶಗಳ ಸಂಬಂಧವನ್ನು ಕಲ್ಪಿಸಿ ಲೋಕವ್ಯವಹಾರವಿರುತ್ತದೆ (೨೧). ಆತ್ಮನು ಸರ್ವದೇಶಗತ ಎಂಬಂತೆ ಸರ್ವಸಾಕ್ಷಿ ಎಂದು ಹೇಳುವುದೂ ಕಲ್ಪಿತದೃಶ್ಯಗಳನ್ನು ಇಟ್ಟುಕೊಂಡೇ ಆಗಿರುತ್ತದೆ. ಬುದ್ಧಿಯು ಒಳ ಹೊರ ಎಂದು ಯಾವ ದೇಶವನ್ನು ಕಲ್ಪಿಸುತ್ತದೆಯೋ ಆ ದೇಶದ ಸಂಬಂಧವೂ ಹಾಗೆಯೇ ಯಾವ ಯಾವ ದೃಶ್ಯವನ್ನು ಬುದ್ಧಿಯು ಕಲ್ಪಿಸುತ್ತದೆಯೋ ಅದರ ಸಾಕ್ಷಿತ್ವವೂ ಆತ್ಮನಲ್ಲಿ ಆರೋಪಿತವಾಗಿರುತ್ತದೆ (೨೨). ಯಾವ ಯಾವ ರೂಪರಸಾದಿದ್ವಿತೀಯ ವಸ್ತುವನ್ನು ಬುದ್ಧಿಯು ಕಲ್ಪಿಸುತ್ತದೆಯೋ ಅದನ್ನು ಪ್ರತ್ಯಗಾತ್ಮನು ಪ್ರಕಾಶಿಸುವುದರಿಂದ ಆತನನ್ನು ಸಾಕ್ಷಿಯೆಂದು ನಾವು ಹೇಳುತ್ತೇವೆ. ಆತ್ಮನಾದರೋ ಸ್ವಯಂ ವಾಕ್ಕಿಗಾಗಲಿ ಬುದ್ಧಿಗಾಗಲಿ ಗೋಚರನೇ ಅಲ್ಲ. ಹಾಗಾದರೆ ಆತನನ್ನು ನಾವು ತಿಳಿಯುವುದು ಹೇಗೆ? ದ್ವೈತವನ್ನು ತಿಳಿದಂತೆ ತಿಳಿಯುವುದು ಬೇಡ! ಸ್ವಾತ್ಮಾತಿರಿಕ್ತವಾದ ದ್ವೈತವು ಮಿಥ್ಯೆಯೆಂದು ನಿಶ್ಚಯವಾದಮೇಲೆ ದ್ವೈತಜ್ಞಾನವೆಲ್ಲವೂ ಉಪಶಾಂತವಾದಾಗ ಸತ್ಯನಾದ ಆತ್ಮನೊಬ್ಬನೇ ಉಳಿದುಕೊಳ್ಳುತ್ತಾನೆ (೨೩-೨೪). ಆತ್ಮನೊಬ್ಬನೇ ಅವಶಿಷ್ಟನಾದರೂ ಅಪರೋಕ್ಷಜ್ಞಾನವಾಗಲು ಒಂದು ಪ್ರಮಾಣವು (ಸಾಧನವು) ಬೇಕಲ್ಲವೆ? ಬೇಕಾಗಿಲ್ಲ. ಆತ್ಮನು ಸ್ವಯಂಪ್ರಕಾಶನಾದ್ದರಿಂದ ಹೊರಗಿನ ಯಾವ

ಪ್ರಮಾಣವೂ ಬೇಕಾಗಿಲ್ಲ. ಇದೆಲ್ಲವನ್ನೂ ಸರಿಯಾಗಿ ತಿಳಿದುಕೊಳ್ಳುವ ಬಗೆ ಯಾವುದು? ಗುರುಮುಖದಿಂದ ಶ್ರುತಿವಾಕ್ಯಗಳ ಶ್ರವಣಮನನಾದಿಗಳನ್ನು ಮಾಡು - ಇದೇ ಉತ್ತರ (೨೫). ಇದು ಉತ್ತಮಾಧಿಕಾರಿಗೆ ಹೇಳಿದ ಮಾತು. ಮಂದಾಧಿಕಾರಿಗೆ ಹೇಳಬೇಕಾದ್ದೇನೆಂದರೆ - ಬಾಹ್ಯವಾದ ಸರ್ವವಸ್ತುಗಳ ಜ್ಞಾನವನ್ನು ತ್ಯಜಿಸುವುದು ಶಕ್ಯವಿಲ್ಲವಾದರೆ ನಿನ್ನ ಬುದ್ಧಿಗೇ ಶರಣಾಗು. ಬುದ್ಧಿಗೆ ಅಧೀನವಾಗಿ ಬುದ್ಧಿಯು ದೇಹದೊಳಗೆ ಮತ್ತು ಹೊರಗೆ ಏನೇನನ್ನು ಕಾಣುತ್ತದೆಯೋ ಅದೆಲ್ಲಕ್ಕೂ ಪ್ರತ್ಯಗಾತ್ಮನು ಸಾಕ್ಷಿಯಾಗಿದ್ದಾನೆ ಎಂಬುದನ್ನು ಅನುಭವಕ್ಕೆ ತಂದುಕೊಳ್ಳಬೇಕು (೨೬).

ಇಲ್ಲಿಗೆ ನಾಟಕದೀಪಪ್ರಕರಣವು ಸಮಾಪ್ತವಾಯಿತು

---

# ೧೧. ಯೋಗಾನಂದಪ್ರಕರಣ

ಈಗ ಬ್ರಹ್ಮಾನಂದವನ್ನು ಹೇಳುವೆನು. ಇದನ್ನು ಸರಿಯಾಗಿ ಅರಿತವನು ಐಹಿಕ ಮತ್ತು ಆಮುಷ್ಮಿಕವಾದ ಸಕಲ ಅನರ್ಥಗಳನ್ನೂ ತೊಡೆದು ಹಾಕಿ ಸುಖಸ್ವರೂಪನೇ ಆಗಿಬಿಡುತ್ತಾನೆ.

ಪರಬ್ರಹ್ಮವು ನಿರುಪಾಧಿಕವೂ ನಿರ್ಗುಣವೂ ಆಗಿದೆ. ವಿಷ್ಣು ಶಿವ - ಮೊದಲಾದ ಸಗುಣರೂ ಸೋಪಾಧಿಕರೂ ಆದ ಸಮಸ್ತದೇವತಾಗಣಗಳಿಗೂ ಅಧಿಷ್ಠಾನವಾದದ್ದು ಈ ಪರಬ್ರಹ್ಮ. ಈ ಬ್ರಹ್ಮವನ್ನು ಸ್ಮರಿಸಿದರೆ ಸಮಸ್ತ ದೇವತೆಗಳನ್ನೂ ಸ್ಮರಿಸಿದಂತಾಗುತ್ತದೆ. ಇದರಿಂದ ಮುಂದಿನ ಐದು ಆನಂದ ಪ್ರಕರಣಗಳಿಗೂ ದೇವತಾಸ್ಮರಣರೂಪವಾದಮಂಗಳವನ್ನು ಮಾಡಿದಂತಾಯಿತು.

ಬ್ರಹ್ಮವೆಂಬ ಆನಂದ ಬ್ರಹ್ಮಾನಂದ - ಎಂದು ಕರ್ಮಧಾರಯ ಸಮಾಸವಿದು. ಈ ಆನಂದವನ್ನು ಪ್ರತಿಪಾದಿಸತಕ್ಕ ಗ್ರಂಥವೂ ಬ್ರಹ್ಮಾನಂದ. ಪ್ರತಿಪಾದ್ಯವಾದ ವಿಷಯವೂ ಬ್ರಹ್ಮಾನಂದವೇ. ವಾಚ್ಯವಾಚಕಗಳಿಗೆ ಅಭೇದ-ವಿರುವುದರಿಂದ ಇಲ್ಲಿ ಎರಡು ಅರ್ಥಗಳೂ ವಿವಕ್ಷಿತವಾಗಿವೆ. ಯೋಗಾನಂದವು ಬ್ರಹ್ಮಾನಂದದ ಒಂದು ವಿಭಾಗ. ಇದು ಮುಂದೆ ಗೊತ್ತಾಗುತ್ತದೆ. ಇಲ್ಲಿ ಪ್ರತಿಪಾದ್ಯವಾದ್ದನ್ನು ಅನುಭವಕ್ಕೆ ತಂದುಕೊಂಡಾಗ ಆತನೇ ಆನಂದಸ್ವರೂಪನಾಗಿ ಬಿಡುತ್ತಾನೆ. 'ಸುಖಾಯತೇ' ಎಂಬುದಕ್ಕೆ ಇದೇ ಅರ್ಥ. ಮುಕ್ತನಾಗುತ್ತಾನೆಂದು ತಾತ್ಪರ್ಯ (೧). ತೈತ್ತಿರೀಯೋಪನಿಷತ್ತಿನಲ್ಲಿ ''ಬ್ರಹ್ಮವಿದನು ಪರಮಾನಂದ ರೂಪವಾದ ಬ್ರಹ್ಮವನ್ನು ಪಡೆಯುತ್ತಾನೆ'' ಎಂದು ಹೇಳಿದೆ. ಛಾಂದೋಗ್ಯದಲ್ಲಿ ''ಆತ್ಮವನ್ನರಿತವನು ಅಜ್ಞಾನಮೂಲಕವಾದ ಸಂಸಾರಶೋಕವನ್ನು ದಾಟುತ್ತಾನೆ'' ಎಂದು ಹೇಳಿದೆ. ಮತ್ತೆ ತೈತ್ತಿರೀಯವೇ ''ಈ ಆತ್ಮವೇ ರಸ. ಇದೇ ಜಗತ್ತಿನಲ್ಲಿ ಸಾರವಾದ ರಸ. ಈ ಆತ್ಮತತ್ತ್ವವನ್ನು ತಿಳಿದವನೇ ನಿರತಿಶಯವಾದ ಸುಖವನ್ನು ಪಡೆಯುತ್ತಾನೆ. ಬೇರೆ ಮಾರ್ಗವಿಲ್ಲ'' ಎಂದು ತಿಳಿಸಿದೆ. ನೋಡಿ -

**ಓಂ ಬ್ರಹ್ಮವಿದಾಪ್ನೋತಿ ಪರಂ ।** (ತೈ. ಉ. ೨-೧)

**ತರತಿ ಶೋಕಮಾತ್ಮವಿತ್ ।** (ಛಾಂ.ಉ.೭-೧-೩)

**ರಸೋ ವೈ ಸಃ, ರಸಗ್ಂ ಹ್ಯೇವಾಯಂ ಲಬ್ಧ್ವಾನಂದೀ ಭವತಿ ।**
(ತೈ.ಉ.೨-೭)

ಮುಮುಕ್ಷುವು ಯಾವಾಗ ಈ ಅದ್ವಿತೀಯಬ್ರಹ್ಮದಲ್ಲಿಪ್ರತಿಷ್ಠೆಯನ್ನು - ಎಂದರೆ - 'ಅಹಂ ಬ್ರಹ್ಮಾಸ್ಮಿ' ಎಂಬ ಸ್ಥಿತಿಯನ್ನು ಪಡೆದು ಅದರಲ್ಲಿಯೇ ನಿಂತುಬಿಡುವನೋ ಆಗ ಭಯರಹಿತನಾಗಿ ಬಿಡುತ್ತಾನೆ - ಮೋಕ್ಷವನ್ನು ಪಡೆಯುತ್ತಾನೆ. ತನಗೂ ಬ್ರಹ್ಮಕ್ಕೂ ಎಳ್ಳಷ್ಟಾದರೂ ಭೇದವಿದೆಯೆಂದು ಅವನೇನಾದರೂ ಭಾವಿಸಿದರೆ, ಅವನಿಗೆ ಭಯವು ತಪ್ಪುವುದಿಲ್ಲ!

ಇದು ತೈತ್ತಿರೀಯ ಶ್ರುತಿಯ ಅರ್ಥಾನುವಾದ. ಶ್ರುತಿಯು ಹೀಗಿದೆ -

**"ಯದಾ ಹ್ಯೇವೈಷ ಏತಸ್ಮಿನ್ ಅದೃಶ್ಯೇಽನಾತ್ಮ್ಯೇಽನಿರುಕ್ತೇಽನಿಲಯನೇಽಭಯಂ ಪ್ರತಿಷ್ಠಾಂ ವಿಂದತೇ, ಅಥ ಸೋಽಭಯಂ ಗತೋ ಭವತಿ, ಯದಾ ಹ್ಯೇವೈಷ ಏತಸ್ಮಿನ್ನುದರ- ಮಂತರಂ ಕುರುತೇ, ಅಥ ತಸ್ಯ ಭಯಂ ಭವತಿ, ತತ್ತ್ವೇವ ಭಯಂ ವಿದುಷೋಽಮನ್ವಾನಸ್ಯ ।** (ತೈ. ಉ.೨-೭).

**ಅದೃಶ್ಯೇ** = ಇಂದ್ರಿಯಗಳಿಗೆ ಅಗೋಚರವಾದ. **ಅನಾತ್ಮ್ಯೇ** = ಇದು ತನ್ನದು ಎಂಬ ಯಾವ ಸ್ವಕೀಯತೆಯೂ ಇಲ್ಲದ. **ಅನಿರುಕ್ತೇ** = ಶಬ್ದದಿಂದ ನಿರ್ವಚನ ಮಾಡಲು ಶಕ್ಯವಲ್ಲದ. **ಅನಿಲಯನೇ** = ಆಶ್ರಯರಹಿತವಾದ, ತನ್ನ ಮಹಿಮೆಯಿಂದಲೇ ನಿಂತಿರುವ. **ಪ್ರತಿಷ್ಠಾಂ** = 'ಬ್ರಹ್ಮಾಹಮಸ್ಮಿ' ಎಂಬ ನಿಶ್ಚಿತವಾದ ನಿಲುವನ್ನು. **ಉದರಂ** = ಉತ್ (ಸಹ, ಕೂಡ - ಎಂದರ್ಥ. ಇದೊಂದು ನಿಪಾತ) **ಅರಂ** = ಸ್ವಲ್ಪವೂ ಸಹ, **ಅಂತರಂ** = ಭೇದವನ್ನು.

'**ಬ್ರಹ್ಮವೇದ ಬ್ರಹ್ಮೈವ ಭವತಿ**' (ಮುಂ.ಉ.೩-೨-೯)ಎಂಬ ಶ್ರುತಿ ವಾಕ್ಯವನ್ನಿಲ್ಲಿ ಸ್ಮರಿಸಿಕೊಳ್ಳಬೇಕು (೩). ವಾಯು, ಸೂರ್ಯ, ಅಗ್ನಿ, ಇಂದ್ರ, ಮೃತ್ಯು - ಮುಂತಾದ ದೇವತೆಗಳು ಜನ್ಮಾಂತರದಲ್ಲಿ ಬಹುಮಟ್ಟಿಗೆ ಜ್ಞಾನಿಗಳೇ ಆಗಿದ್ದರೂ, ಪ್ರತ್ಯಗಾತ್ಮನಿಗೂ ತಮಗೂ ಸ್ವಲ್ಪ ಭೇದವಿರಬಹುದೆಂದು ತಿಳಿದಿದ್ದರು. ಅದರ ಫಲವಾಗಿ ಈಗ ಬ್ರಹ್ಮದ ಭೀತಿಯಿಂದ ಈ ಜನ್ಮದಲ್ಲಿ ಸದಾ ಕರ್ತವ್ಯದಲ್ಲಿ ತೊಡಗಿದ್ದಾರೆ! ಅವರು ವೇದೋಕ್ತಕರ್ಮಗಳನ್ನು ಮಾಡಿದವರಾದರೂ ಧರ್ಮಸ್ವರೂಪವನ್ನು ತಿಳಿದವರಾದರೂ ಭೇದಜ್ಞಾನವು ಅವರಿಗೆ ಹೋಗಿರಲಿಲ್ಲ, ಅದರ ಫಲ ಈಗ ಹೆದರುತ್ತ ಓಡುವುದು! **'ಭೀಷಾಸ್ಮಾದ್ವಾತಃ ಪವತೇ, ಭೀಷೋದೇತಿ ಸೂರ್ಯಃ, ಭೀಷಾಸ್ಮಾದಗ್ನಿಶ್ಚೇಂದ್ರಶ್ಚ, ಮೃತ್ಯುರ್ಧಾವತಿ ಪಂಚಮಃ'** (ತೈ .ಉ.೨). (೪). ಬ್ರಹ್ಮದ ಆನಂದಸ್ವರೂಪವನ್ನು ತಿಳಿದವನು ಯಾವುದಕ್ಕೂ

ಹೆದರುವುದಿಲ್ಲ. ಇಹಲೋಕ ಪರಲೋಕಗಳಲ್ಲಿ ಅವನಿಗೆ ಭಯವನ್ನುಂಟು ಮಾಡತಕ್ಕದ್ದು ಯಾವುದೂ ಇಲ್ಲ. "**ಏತಗ್ ಹ ವಾವ ನ ತಪತಿ, ಕಿಮಹಂ ಸಾಧು ನಾಕರವಂ,ಕಿಮಹಂ ಪಾಪಮಕರವಂ**" ಎಂದು ಉಪನಿಷತ್ತು ಹೇಳಿದೆ. "ಈ ಬ್ರಹ್ಮಜ್ಞನನ್ನು ಯಾವ ಚಿಂತೆಯೂ ಕಾಡುವುದಿಲ್ಲ. 'ಯಾವ ಪುಣ್ಯಕರ್ಮವನ್ನು ನಾನು ಮಾಡಲಿಲ್ಲ? ಯಾವ ಪಾಪಕರ್ಮವನ್ನು ಮಾಡಿದೆನು?' ಎಂಬ ಚಿಂತೆ ಅವನಿಗಿಲ್ಲ. ತತ್ತ್ವಜ್ಞನಿಗೆ ಈ ಚಿಂತೆ ಇಲ್ಲ. ತತ್ತ್ವಜ್ಞನಲ್ಲದವನಿಗೆ ಇದು ಇದ್ದೇ ಇರುತ್ತದೆ. 'ಬ್ರಹ್ಮದ ಆನಂದ - ಆನಂದಂ ಬ್ರಹ್ಮಣೋ ವಿದ್ವಾನ್' ಎಂಬಲ್ಲಿ ಬ್ರಹ್ಮಶಬ್ದದ ಮೇಲೆ ಷಷ್ಠೀ ವಿಭಕ್ತಿಯು 'ರಾಹುವಿನ ಶಿರಸ್ಸು, ಕಲ್ಲಿನ ಪ್ರತಿಮೆ' ಎಂಬಂತೆ ಆರೋಪದಿಂದ ಬಂದಿದೆ. ಬ್ರಹ್ಮವೇ ಆನಂದ - ಎಂದು ಅರ್ಥ (೫). ಈ ಪ್ರಕಾರವಾಗಿ ಇನ್ನೂ ಕೆಲವು ಶ್ರುತಿವಾಕ್ಯಗಳನ್ನು ಇಲ್ಲಿ ಉದಾಹರಿಸಲಾಗುವುದು- '**ಸ ಯಶ್ಚಾಯಂ ಪುರುಷೇ, ಯಶ್ಚಾಸಾವಾದಿತ್ಯೇ, ಸ ಏಕಃ**' (ತೈ. ಉ. ೨-೮)= ಯಾವ ಪರಮಾತ್ಮನು ಮನುಷ್ಯನಲ್ಲಿದ್ದಾನೋ, ಯಾವಾತನು ಸೂರ್ಯಮಂಡಲದಲ್ಲಿ ಇದ್ದಾನೋ ಅವನು ಒಬ್ಬನೇ - ಎಂದು ತಿಳಿದ ಆತ್ಮಜ್ಞಾನಿಯು ಸದಾ ಆತ್ಮನನ್ನು ಧ್ಯಾನಿಸುತ್ತಿರುವನು. ಆತನು ಪುಣ್ಯಪಾಪಗಳೆಂಬ ಎರಡು ಕರ್ಮಗಳನ್ನು ತ್ಯಜಿಸಿಬಿಟ್ಟಿರುತ್ತಾನೆ. ತಾನು ಮಾಡಿದ ಆ ಕರ್ಮಗಳನ್ನೂ ಆತ್ಮಸ್ವರೂಪದಿಂದಲೇ ನೋಡುತ್ತಾನೆ. ಜ್ಞಾನಿಯು '**ಇದಂ ಸರ್ವಂ ಯದಯಮಾತ್ಮಾ**' (ಬೃ. ಉ. ೨-೪-೬)= ಸರ್ವವೂ ಆತ್ಮನೇ ಸರಿ - ಎಂದು ನಿಶ್ಚಯಿಸಿ ಪುಣ್ಯಪಾಪಕರ್ಮಗಳೂ ಮಿಥ್ಯೆಯೆಂದು ಭಾವಿಸಿರುತ್ತಾನೆ. ಮಿಥ್ಯೆಯಾದ ದೇಹೇಂದ್ರಿಯಾದಿಗಳಿಂದ ಜನಿತವಾದ ಕರ್ಮವೂ ಮಿಥ್ಯೆ ಎಂದೇ ಅವನ ನಿಶ್ಚಯವಿರುತ್ತದೆ. ಆದ್ದರಿಂದ ಯಾವ ಕರ್ಮವೂ ಅವನಿಗೆ ತಾಪವನ್ನು ಕೊಡುವುದಿಲ್ಲ. ಅದರ ಚಿಂತೆಯೂ ಅವನಿಗಿರುವುದಿಲ್ಲ (೬). ಪರಾವರೇ = ಪರವೆಂದರೆ ಉತ್ಕೃಷ್ಟವೆಂದರ್ಥ. ಪರವಾದ ಹಿರಣ್ಯಗರ್ಭಾದಿಗಳೂ ಸಹ ಯಾವ ಪರಬ್ರಹ್ಮಕ್ಕೆ ಅವರವೋ - ನಿಕೃಷ್ಟವಾದವುಗಳೋ ಆ ಪರಬ್ರಹ್ಮವನ್ನು ಅರಿತಾಗ ಹೃದಯಗ್ರಂಥಿಯು ಅಳಿಯುತ್ತದೆ. ಸರ್ವ ಸಂಶಯಗಳೂ ನಾಶವಾಗುತ್ತವೆ. ಜ್ಞಾನಿಯ ಕರ್ಮಗಳೆಲ್ಲ ಕ್ಷಯಿಸಿ ಹೋಗುತ್ತವೆ. ಹೃದಯಗ್ರಂಥಿ = ಬುದ್ಧಿಗೂ ಆತ್ಮನಿಗೂ ಗಂಟುಹಾಕಿದಂತಿರುವ ಅನ್ಯೋನ್ಯಾಧ್ಯಾಸ. ಇದೇ ಅವಿದ್ಯೆ. ಬುದ್ಧಿಯೇ ನಾನು, ನಾನೇ ಬುದ್ಧಿಯೆಂಬ ಮಿಥ್ಯಾಜ್ಞಾನ. ಸರ್ವಸಂಶಯಗಳು = ದೇಹೇಂದ್ರಿಯಾದಿಗಳಿಗಿಂತ ಆತ್ಮನು ಅತಿರಿಕ್ತನೋ ಅಲ್ಲವೋ, ಆತ್ಮನಲ್ಲಿ

ಕರ್ತೃತ್ವಾದಿಧರ್ಮಗಳು ಇವೆಯೋ ಇಲ್ಲವೊ, ಜೀವನು ಬ್ರಹ್ಮಕ್ಕಿಂತ ಬೇರೆಯೋ ಅಲ್ಲವೋ? ಇತ್ಯಾದಿ ಸಂಶಯಗಳು (೭). ಆ ಪರಮಾತ್ಮನನ್ನು ಸಾಕ್ಷಾತ್ಕರಿಸಿಕೊಂಡವನು ಮಾತ್ರ ಮೃತ್ಯುವನ್ನು ದಾಟಿ ಮುಕ್ತನಾಗುತ್ತಾನೆ. ಮುಕ್ತನಾಗಲು ಬೇರೆ ಮಾರ್ಗವೇ ಇಲ್ಲ. ಸ್ವಪ್ರಕಾಶನೂ ಪ್ರತ್ಯಗಾತ್ಮನೂ ಆದ ಆ ದೇವನನ್ನು ಸಾಕ್ಷಾತ್ಕರಿಸಿಕೊಂಡರೆ ಮಾತ್ರ ಕಾಮಕ್ರೋಧಾದಿಪಾಶಗಳು ತೊಲಗಿಹೋಗುತ್ತವೆ. ಈ ಪಾಶಗಳು ಧ್ವಂಸವಾದಾಗ ಜನ್ಮಕ್ಕೆ ಕಾರಣವಾದ ಕರ್ಮವೇ ಇಲ್ಲದ್ದರಿಂದ ಆತನಿಗೆ ಪುನರ್ಜನ್ಮವಿರುವುದಿಲ್ಲ. **'ತಮೇವ ವಿದಿತ್ವಾ ಅತಿಮೃತ್ಯುಮೇತಿ, ನಾನ್ಯಃ ಪಂಥಾ ವಿದ್ಯತೇಽಯನಾಯ', (ಶ್ವೇ.ಉ.೬-೧೫;೩-೮) ಜ್ಞಾತ್ವಾ ದೇವಂ ಸರ್ವಪಾಶಾಪಹಾನಿಃ, (ಶ್ವೇ.ಉ.೧-೧) (೮).**

ಬ್ರಹ್ಮಚರ್ಯಾದಿ ಸಾಧನಸಂಪನ್ನನಾದ ಧೀರನು ಚಿದಾನಂದಸ್ವರೂಪನಾದ ಆತ್ಮನನ್ನು ಸಾಕ್ಷಾತ್ಕರಿಸಿಕೊಂಡು ಹರ್ಷಶೋಕಗಳೆರಡನ್ನೂ ಈ ಜನ್ಮದಲ್ಲಿಯೇ ತೊರೆದುಬಿಡುತ್ತಾನೆ. ಆತನಿಗೆ ಇಷ್ಟಪ್ರಾಪ್ತಿಯಿಂದ ಹರ್ಷವೂ ಆಗದು. ಅನಿಷ್ಟಪ್ರಾಪ್ತಿಯಿಂದ ಶೋಕವೂ ಆಗುವುದಿಲ್ಲ. ಪಾಪಕಾರ್ಯವನ್ನು ಮಾಡಿದೆನೆಂದಾಗಲಿ ಪುಣ್ಯಕಾರ್ಯವನ್ನು ಮಾಡಲಿಲ್ಲವೆಂದಾಗಲಿ ತತ್ತ್ವಜ್ಞಾನಿಗೆ ತಾಪವಾಗುವುದಿಲ್ಲ.

**ಅಧ್ಯಾತ್ಮಯೋಗಾಧಿಗಮೇನ ದೇವಂ**

**ಮತ್ವಾ ಧೀರೊ ಹರ್ಷಶೋಕೌ ಜಹಾತಿ ॥ (ಕಠ. ಉ. ೨-೧೨)**

**ನ ಕೃತಾಕೃತೇ ತಪತಃ (ಯಾಜ್ಞವಲ್ಕ್ಯ ಬ್ರಾಹ್ಮಣ) (೯).** ಇವೇ ಮೊದಲಾದ ಶ್ರುತಿವಾಕ್ಯಗಳೂ ಪುರಾಣಗಳೂ ಸ್ಮೃತಿಗಳೂ ಸಹ ಬ್ರಹ್ಮಜ್ಞಾನವಾದಾಗ ಸಕಲ ಅನರ್ಥಗಳೂ ನಾಶವಾಗುತ್ತವೆಯೆಂದೂ ಪರಮಾನಂದವು ಲಭಿಸುತ್ತದೆ ಎಂದೂ ಘೋಷಣೆ ಮಾಡಿವೆ -

**ಇಹ ಚೇದವೇದೀತ್ ಅಥ ಸತ್ಯಮಸ್ತಿ ॥**

**ನ ಚೇದಿಹಾವೇದೀತ್ ಮಹತೀ ವಿನಷ್ಟಿಃ ॥ (ಕಠ.ಉ. ೨-೫)**

**ಯ ಏತದ್ವಿದುರಮೃತಾಸ್ತೇ ಭವಂತಿ ॥**

**ಅಥೇತರೇ ದುಃಖಮೇವಾಪಿಯಂತಿ ॥ (ಶ್ವೇ.ಉ.೩-೧೦)**

**ಸರ್ವಭೂತಸ್ಥಮಾತ್ಮಾನಂ ಸರ್ವಭೂತಾನಿ ಚಾತ್ಮನಿ ॥ (ಭ.ಗೀ.೬-೯)**

**ಸಂಪಶ್ಯನ್ ಆತ್ಮಯಾಜೀ ವೈ ಸ್ವಾರಾಜ್ಯಮಧಿಗಚ್ಛತಿ ॥**

**ಕ್ಷೇತ್ರಜ್ಞಸ್ಯಾತ್ಮವಿಜ್ಞಾನಾತ್ ವಿಶುದ್ಧಿಃ ಪರಮಾ ಮತಾ ॥ (೧೦)**

ಬ್ರಹ್ಮಾನಂದ, ವಿದ್ಯಾನಂದ, ವಿಷಯಾನಂದ - ಎಂದು ಆನಂದವು ಮೂರುವಿಧವಾಗಿದೆ. ವಿದ್ಯಾನಂದ ವಿಷಯಾನಂದಗಳಿಗೆ ಬ್ರಹ್ಮಾನಂದವೇ ಮೂಲವಾದ್ದರಿಂದ ಈಗ ಮೂರು ಅಧ್ಯಾಯಗಳಲ್ಲಿ ಬ್ರಹ್ಮಾನಂದವನ್ನು ಮೊದಲು ವಿವೇಚಿಸಲಾಗುವುದು (೧೧). ತೈತ್ತಿರೀಯ ಭೃಗುವಲ್ಲಿಯಲ್ಲಿ ವರುಣನ ಪುತ್ರನಾದ ಭೃಗು ತಂದೆಯ ಬಳಿಗೆ ವಿಧಿವತ್ತಾಗಿ ಬಂದು ಬ್ರಹ್ಮವನ್ನು ತನಗೆ ತಿಳಿಸಿಕೊಡಬೇಕೆಂದು ಕೇಳುತ್ತಾನೆ. ವರುಣನು ಭೃಗುವಿಗೆ ಬ್ರಹ್ಮದ ಮೂರು ಲಕ್ಷಣಗಳನ್ನು ಹೇಳಿ, ಬ್ರಹ್ಮವನ್ನು ತಿಳಿಯಲು ಅನ್ನ, ಪ್ರಾಣ, ಮನಸ್ಸು ಬುದ್ಧಿ - ಇವು ನಾಲ್ಕು ದ್ವಾರಗಳೆಂದು ಹೇಳುತ್ತಾನೆ. ಅನಂತರ ಭೃಗುವು ಆ ನಾಲ್ಕರಲ್ಲಿಯೂ ಬ್ರಹ್ಮದ ಲಕ್ಷಣವು ಕೂಡುವುದಿಲ್ಲವೆಂದು ವಿಚಾರಮಾಡಿ ಕಡೆಗೆ ಆನಂದಮಯ ಕೋಶದಲ್ಲಿರುವ ಆನಂದವೇ ಬ್ರಹ್ಮವೆಂದು ನಿಶ್ಚಯಿಸುತ್ತಾನೆ.

ಬ್ರಹ್ಮದ ಮೂರು ಲಕ್ಷಣಗಳು ಹೀಗಿವೆ.

೧. **ಯತೋ ವಾ ಇಮಾನಿ ಭೂತಾನಿ ಜಾಯಂತೇ**

೨. **ಯೇನ ಜಾತಾನಿ ಜೀವಂತಿ**

೩. **ಯತ್ ಪ್ರಯಂತ್ಯಭಿಸಂವಿಶಂತೀತಿ, ತದ್ವಿಜಿಜ್ಞಾಸಸ್ವ, ತದ್ ಬ್ರಹ್ಮೇತಿ** (ತೈ. ಉ.೩-೧)

ಯಾವುದರಿಂದ ಸಕಲ ಭೂತಗಳೂ ಹುಟ್ಟುತ್ತವೆಯೋ, ಯಾವುದರಿಂದ ಇವು ಪ್ರಾಣವನ್ನು ಧರಿಸಿವೆಯೋ, ಯಾವುದರಲ್ಲಿ ಇವು ಸೇರಿ ಹೋಗುತ್ತವೆಯೋ ಅದನ್ನು ತಿಳಿ. ಅದೇ ಬ್ರಹ್ಮ. ಭೃಗುವು ಕ್ರಮವಾಗಿ ವಿಚಾರಮಾಡಿ ಅನ್ನಾದಿಗಳಾವುದರಲ್ಲಿಯೂ ಈ ಲಕ್ಷಣಗಳಿಲ್ಲವೆಂದು ನಿಶ್ಚಯಿಸಿ, ಆನಂದಮಯಕೋಶದಲ್ಲಿ 'ಬ್ರಹ್ಮ ಪುಚ್ಛಂ ಪ್ರತಿಷ್ಠಾ (ತೈ. ಉ.೨-೪) ಎಂದು ಶ್ರುತವಾದ ಆನಂದವೇ ಬ್ರಹ್ಮವೆಂದು ತಿಳಿದನು (೧೨).

ಹೇಗೆಂದರೆ, ಮೈಥುನಕಾಲದ ಗ್ರಾಮ್ಯಾನಂದದಿಂದಲೇ ಪ್ರಾಣಿಗಳು ಹುಟ್ಟುತ್ತವೆ. ಆಹಾರ ನಿಮಿತ್ತಕವಾದ ವಿಷಯಾನಂದದಿಂದಲೇ ಇವು ಬದುಕಿವೆ. ಸುಷುಪ್ತಿಕಾಲದ ಆನಂದದಲ್ಲಿ ಈ ಪ್ರಾಣಿಗಳು ಲಯ ಹೊಂದುತ್ತವೆ. ಆದ್ದರಿಂದ ಆನಂದವೇ ಬ್ರಹ್ಮವೆಂಬುದರಲ್ಲಿ ಸಂಶಯವಿಲ್ಲ. ಪ್ರಾಣಿಗಳು ಅನುಭವಿಸುವ ವಿಷಯಸುಖವು ಬ್ರಹ್ಮಾನಂದವೆಂಬ ಸಮುದ್ರದ ಒಂದು ಕ್ಷುದ್ರವಾದ

ಹನಿಯೆಂದು ತಿಳಿಯಬೇಕು (೧೩). ಪಂಚಭೂತಾದಿಜಗತ್ತು ಹುಟ್ಟುವುದಕ್ಕೆ ಮೊದಲು ತ್ರಿಪುಟೀರೂಪವಾದ ದ್ವೈತವಿಲ್ಲದ್ದರಿಂದ ಬ್ರಹ್ಮವು ಭೂಮ-ವಾಗಿರುತ್ತದೆ. ಎಂದರೆ ದೇಶಕಾಲವಸ್ತುಗಳಿಂದ ಅಪರಿಚ್ಛಿನ್ನವಾಗಿರುತ್ತದೆ. ಜ್ಞಾತೃಜ್ಞಾನಜ್ಞೇಯರೂಪವಾದ ತ್ರಿಪುಟಿಯು ಪ್ರಳಯದಲ್ಲಿಯೂ ಇರುವುದಿಲ್ಲ. ಪುಟವೆಂದರೆ ಜ್ಞಾನದ ಆಕಾರ. ಜ್ಞಾತೃ, ಜ್ಞಾನ, ಜ್ಞೇಯ - ಇವು ಮೂರು ಜ್ಞಾನದ ಆಕಾರಗಳು. ಹೀಗೆಯೇ ಕರ್ತೃ, ಕ್ರಿಯೆ, ಕರ್ಮ - ಮುಂತಾದವೂ ತ್ರಿಪುಟಿಗಳು. ದ್ವೈತವಿಲ್ಲದೆ ತ್ರಿಪುಟಿ ಇಲ್ಲ. ಸೃಷ್ಟಿಗೆ ಮೊದಲೂ ದ್ವೈತವಿಲ್ಲ. ಸೃಷ್ಟಿಯ ನಾಶವಾದಾಗಲೂ ತ್ರಿಪುಟಿ ಇಲ್ಲ. ಆಗ ಇರುವುದು ಭೂಮ ಒಂದೇ. ಭೂಮ = ಏಕಾಕಾರವಾದ ಬಹುದೊಡ್ಡದು. ಈ ವಿಚಾರವು ಛಾಂದೋಗ್ಯದ ಸಪ್ತಮಾಧ್ಯಾಯದಲ್ಲಿ ಸನತ್ಕುಮಾರ - ನಾರದ ಸಂವಾದಸಮಯದಲ್ಲಿ ಬಂದಿದೆ. **'ಯತ್ರ ನಾನ್ಯತ್ಪಶ್ಯತಿ ನಾನ್ಯಚ್ಛೃಣೋತಿ ನಾನ್ಯದ್ವಿಜಾನಾತಿ ಸ ಭೂಮಾ !'** (ಛಾಂ. ಉ. ೭-೨೪-೧) ಈ ಭೂಮವೇ ಆನಂದವೆಂದು ಪ್ರತಿಪಾದಿಸುವುದು ಇಲ್ಲಿ ಉದ್ದಿಷ್ಟವಾಗಿದೆ (೧೪). ಸೃಷ್ಟಿಯಾದೊಡನೆ ಜ್ಞಾತೃ, ಜ್ಞಾನ, ಜ್ಞೇಯಗಳೆಂಬ ತ್ರಿಪುಟಿಯಾಗಿ ಬಿಡುತ್ತದೆ. ಬುದ್ಧಿಯೇ ಉಪಾಧಿಯಾಗಿರುವ ಆತ್ಮನೇ ಜೀವ. ಆತನೇ ವಿಜ್ಞಾನಮಯ. ಈ ವಿಜ್ಞಾನಮಯನು ಜ್ಞಾತೃ. ಮನಸ್ಸಿನಲ್ಲಿ ಪ್ರತಿಬಿಂಬಿತವಾದ ಚೈತನ್ಯವೇ ಮನೋಮಯ. ಇದೇ ಜ್ಞಾನ. ಶಬ್ದಸ್ಪರ್ಶಾದಿಗಳು ಜ್ಞೇಯಗಳು. ಜಗತ್ತಿನ ಉತ್ಪತ್ತಿಗೆ ಮೊದಲು ಇವು ಇರಲಿಲ್ಲ (೧೫). ಇವು ಮೂರೂ ಇಲ್ಲದಾಗ ದ್ವೈತರಹಿತನಾದ ಪೂರ್ಣಾತ್ಮನ ಅನುಭವವಾಗುತ್ತದೆ. ಸಮಾಧಿ, ಸುಷುಪ್ತಿ. ಮೂರ್ಛಾವಸ್ಥೆಗಳಲ್ಲಿ ಈ ಅದ್ವೈತಾನುಭವವಾಗುತ್ತದೆ. ಹಾಗೆಯೇ ಸೃಷ್ಟಿಗೆ ಪೂರ್ವದಲ್ಲಿಯೂ ಪೂರ್ಣಾತ್ಮನೊಬ್ಬನೇ ಅದ್ವೈತನಾಗಿದ್ದನೆಂದು ತಿಳಿಯಬೇಕು. ಯೋಗಿಗಳಿಗೆ ನಿರ್ವಿಕಲ್ಪಕಸಮಾಧಿಯಲ್ಲಿ ಅದ್ವೈತಾತ್ಮನ ಅನುಭವವಾಗುತ್ತದೆ. ಎಲ್ಲರಿಗೂ ಸುಷುಪ್ತಿಯಲ್ಲಿ (ತನಿನಿದ್ರೆಯಲ್ಲಿ) ಅನುಭವಕ್ಕೆ ಬರುತ್ತದೆ. ಮೂರ್ಛೆಯಲ್ಲಿಯೂ ಹಾಗೆಯೇ (೧೬). ಹೀಗೆ ಪೂರ್ಣನಾದ ಭೂಮಾತ್ಮನು ಆನಂದಸ್ವರೂಪನೇ, ಭಯಹೇತುವಾದ ಎರಡನೆಯ ವಸ್ತುವೇ ಇಲ್ಲವಾದ್ದರಿಂದ. **'ಯೋ ವೈ ಭೂಮಾ ತತ್ ಸುಖಂ ನಾಲ್ಪೇ ಸುಖಮಸ್ತಿ'** (ಛಾಂ. ಉ. ೭-೨೩-೧) ಎಂದು ಸನತ್ಕುಮಾರರು ಶೋಕಾಕ್ರಾಂತರಾಗಿದ್ದ ನಾರದರಿಗೆ ಹೇಳಿದ್ದಾರೆ. ಅಲ್ಪವೆಂದರೆ ತ್ರಿಪುಟಿಯನ್ನು ತಳೆದಿರುವ ದ್ವೈತ (೧೭). ನಾರದರು ಏಕೆ ಶೋಕಾಕ್ರಾಂತರಾಗಿದ್ದರೆಂದರೆ, ಅವರು ಅಷ್ಟಾದಶ

ಪುರಾಣಗಳನ್ನು ನಾಲ್ಕು ವೇದಗಳನ್ನು (ಒಟ್ಟು ಐದು ಬಗೆಯ ಗ್ರಂಥಗಳನ್ನು) ಸಾಂಖ್ಯಾದಿ ವಿವಿಧ ಶಾಸ್ತ್ರಗಳನ್ನೂ ಪಠಿಸಿ ವಿದ್ವಾಂಸರಾಗಿದ್ದರೂ ಆತ್ಮವಿದರಾಗಿರಲಿಲ್ಲ. ಆದ್ದರಿಂದ ಅವರನ್ನು ಶೋಕವು ಆವರಿಸಿತ್ತು(೧೮). ವೇದಶಾಸ್ತ್ರಾಭ್ಯಾಸವು ಶೋಕ- ನಿವರ್ತಕವೆಂದು ಪ್ರಸಿದ್ಧವಾಗಿದೆ. ನಾರದರು ಅಷ್ಟು ಅಭ್ಯಾಸಮಾಡಿದರೂ ಅವರಿಗೆ ಅತ್ಯಂತ ಶೋಕವಾಗಿತ್ತು- ಎನ್ನುವುದು ವಿಚಿತ್ರವಲ್ಲವೆ? ಹಾಗಲ್ಲ. ವೇದಶಾಸ್ತ್ರಗಳನ್ನುಅಭ್ಯಾಸ ಮಾಡುವುದಕ್ಕೆ ಮೊದಲು ಆಧ್ಯಾತ್ಮಿಕ, ಆಧಿಭೌತಿಕ, ಆಧಿದೈವಿಕಗಳೆಂಬ ತಾಪತ್ರಯದಿಂದ ಶೋಕವಿರುತ್ತದೆ. ಅಭ್ಯಾಸಮಾಡಿದ ಮೇಲೆ ಅಭ್ಯಾಸ, ವಿಸ್ಮೃತಿ, ಭಂಗ, ಗರ್ವ - ಇವುಗಳಿಂದ ಶೋಕ ಉಂಟಾಗುತ್ತದೆ!

**ಆಧ್ಯಾತ್ಮಿಕತಾಪ** = ಆತ್ಮವೆಂದರೆ ಇಲ್ಲಿ ಶರೀರ. ಶರೀರ ಸಂಬಂಧಿಯಾದ ರೋಗ.

**ಆಧಿಭೌತಿಕ** = ಕಳ್ಳಕಾಕರು, ಹುಲಿ ಇಲಿ, ಸೊಳ್ಳೆ ಮೊದಲಾದವುಗಳ ಕಾಟ.

**ಆಧಿದೈವಿಕ** = ಅತಿವೃಷ್ಟಿ , ಅನಾವೃಷ್ಟಿ , ಭೂಕಂಪ ಇತ್ಯಾದಿಗಳ ಪೀಡೆ.

**ಅಭ್ಯಾಸ** = ಕಲಿತ ವೇದಾದಿಗಳನ್ನು ಮತ್ತೆ ಮತ್ತೆ ಆವರ್ತನ ಮಾಡುವುದು.

**ವಿಸ್ಮೃತಿ** = ಮರೆವು

**ಭಂಗ** = ಪಂಡಿತರೊಡನೆ ವಾದಮಾಡುವಾಗ ಪರಾಜಯ, ಸೋಲು, ಅವಮಾನ.

**ಗರ್ವ** = ತಾನೇ ವಿದ್ವಾಂಸನೆಂಬ ಒಣ ಹೆಮ್ಮೆ. ಇದು ಮನಃಶಾಂತಿಯನ್ನು ಕೆಡಿಸುತ್ತದೆ (೧೯).

ನಾರದರು ಸನತ್ಕುಮಾರರನ್ನು ಕುರಿತು ''ಹೇ ಭಗವನ್, ಇಷ್ಟು ಶಾಸ್ತ್ರಗಳಲ್ಲಿ ಪಂಡಿತನಾದ ನಾನು ದುಃಖಿತನಾಗಿದ್ದೇನೆ. ಈ ದುಃಖದಿಂದ ನನ್ನನ್ನು ಪಾರುಮಾಡಿರಿ'' ಎಂದು ಪ್ರಾರ್ಥಿಸಿದರು. ಆಗ ಸನತ್ಕುಮಾರ ಋಷಿಗಳು ''ಭೂಮವಾದ ಸುಖವನ್ನು ತಿಳಿದರೆ ಎಲ್ಲ ದುಃಖವೂ ನಿವೃತ್ತವಾಗುವುದು'' ಎಂದು ಹೇಳಿದರು. **''ಯೋ ವೈ ಭೂಮಾ ತತ್ಸುಖಂ। ನಾಲ್ಪೇ ಸುಖಮಸ್ತಿ।ಭೂಮೈವ ಸುಖಂ''** (ಛಾಂ.ಉ.೭-೨೩-೧). ವಿಷಯ ಜನ್ಯವಾದ ಲೌಕಿಕ ಸುಖವು ಸಾವಿರಾರು ದುಃಖಕಾರಣಗಳಿಂದ ಆವೃತವಾಗಿರುವುದರಿಂದ ಅದು ಪರಿಣಾಮದಲ್ಲಿ ದುಃಖವೇ ಸರಿ. ಆದ್ದರಿಂದ **'ನಾಲ್ಪೇ ಸುಖಮಸ್ತಿ'** ಎಂದು ಸನತ್ಕುಮಾರರು ಹೇಳಿದ್ದಾರೆ (೨೦-೨೧).

ಪೂರ್ವಪಕ್ಷಿ- ಆಗಲಿ; ದ್ವೈತವಿದ್ದಲ್ಲಿ ಸುಖವಿಲ್ಲವೆಂಬುದನ್ನು ಒಪ್ಪೋಣ. ಆದರೆ ಅದ್ವೈತದಲ್ಲಿಯೂ ಸುಖವಿಲ್ಲ ಎಂದು ಹೇಳುತ್ತೇನೆ ! ಇದ್ದಿದ್ದರೆ ವಿಷಯಸುಖದಂತೆ ಅನುಭವಕ್ಕೆ ಬರಬೇಕಾಗಿತ್ತು. ಅನುಭವಕ್ಕೆ ಬರುತ್ತದೆ ಎಂದಾದರೆ ಮತ್ತೆ ತ್ರಿಪುಟಿಯಾಗಿ ಬಿಡುತ್ತದೆ. ಅನುಭವಿಸುವವನು, ಅನುಭವ, ಅನುಭವಿಸಲ್ಪಡುವ ಸುಖ - ಇವು ಮೂರು ಇರಬೇಕಾಗುತ್ತದೆ. ಆಗ ದ್ವೈತವೇ ಆಗುತ್ತದೆಯಲ್ಲವೆ?

ಇಲ್ಲ. ಅದ್ವೈತದಲ್ಲಿ ಸುಖವಿದೆಯೆಂದು ನಾವು ಹೇಳುವುದಿಲ್ಲ. ಅದ್ವೈತವೇ ಸುಖವೆಂದು ನಾವು ಹೇಳುತ್ತೇವೆ. ಅದ್ವೈತವೇ ಸುಖವೆನ್ನುವುದಕ್ಕೆ ಪ್ರಮಾಣವು ಬೇಕಾಗಿಲ್ಲ. ಅದು ಸ್ವಯಂಪ್ರಕಾಶವಾದದ್ದು. ಸುಖ ರೂಪವಾಗಿಯೇ ಇರುತ್ತದೆ. ಅದಕ್ಕೆ ಇನ್ನೊಂದರ ಅಪೇಕ್ಷೆ ಇಲ್ಲ. ಸೂರ್ಯನನ್ನು ತೋರಿಸುವುದಕ್ಕೆ ಇನ್ನೊಂದು ದೀಪ ಬೇಕೇನು? (೨೨-೨೩). ಅದ್ವೈತವು ಸ್ವಯಂಪ್ರಕಾಶವೆನ್ನುವುದಕ್ಕೆ ನಿನ್ನ ಮಾತೇ ಪ್ರಮಾಣ. ಪ್ರಮಾಣವಿಲ್ಲದಿದ್ದರೂ ಅದ್ವೈತವನ್ನೊಪ್ಪಿಕೊಂಡೇ ಅಲ್ಲವೆ ನೀನು ಅದ್ವೈತದಲ್ಲಿ ಸುಖವಿಲ್ಲ ಎಂದು ಹೇಳಿದ್ದು ! (೨೪). ಪೂರ್ವಪಕ್ಷಿ - ಹಾಗಲ್ಲ; ನೀನು ಅದ್ವೈತ, ಅದ್ವೈತ - ಎಂದು ಹೇಳುತ್ತೀಯಲ್ಲ! ಆ ನಿನ್ನ ಮಾತನ್ನು ನಾನು ಅನುವಾದ ಮಾಡಿ ಅದ್ವೈತದಲ್ಲಿ ಸುಖವಿಲ್ಲ'' ಎಂದು ಹೇಳಿದ್ದೇನೆ. ನಾನು ಅದ್ವೈತವನ್ನು ಒಪ್ಪಿಕೊಂಡಿಲ್ಲ! ಸಿದ್ಧಾಂತಿ - ಹಾಗಾದರೆ ಈ ಪ್ರಶ್ನೆಗೆ ಉತ್ತರ ಹೇಳು. ಈಗ ದ್ವೈತವು ಕಾಣಿಸುತ್ತಿದೆಯಷ್ಟೆ ಇದಕ್ಕೆ ಮೊದಲು ಏನಿತ್ತು? ಅದ್ವೈತವೆ? ದ್ವೈತವೆ? ಅಥವಾ ಇದೆರಡೂ ಅಲ್ಲದ ಇನ್ನೊಂದೆ? ಕಡೆಯದಾದ ದ್ವೈತಾದ್ವೈತಗಳೆರಡೂ ಅಲ್ಲದ ಇನ್ನೊಂದು - ಎನ್ನುವುದು ಅಪ್ರಸಿದ್ಧವಾದ್ದರಿಂದ ಅಯುಕ್ತ. ಇನ್ನು ದ್ವೈತವಿತ್ತು ಎನ್ನುವುದು ಸಮಂಜಸವಲ್ಲ. ಮೊದಲೇ ದ್ವೈತವಿದ್ದರೆ ಅದು ಹುಟ್ಟುವುದೆಲ್ಲಿಂದ ಬರುತ್ತದೆ? ಆದ್ದರಿಂದ ಮೊದಲನೆಯದಾದ ಅದ್ವೈತವಿತ್ತು ಎನ್ನುವುದೇ ಸಮಂಜಸವಾದ ಉತ್ತರವಾಗುತ್ತದೆ (೨೫-೨೬). ಪೂರ್ವಪಕ್ಷಿ - ಅದ್ವೈತವು ಯುಕ್ತಿಯಿಂದ (ಅನುಮಾನಪ್ರಮಾಣದಿಂದ) ಸಿದ್ಧಿಸುತ್ತದೆಯೇ ಹೊರತು ಅನುಭವದಿಂದಲ್ಲ. ಸಿದ್ಧಾಂತಿ - ಆ ಯುಕ್ತಿಗೆ ದೃಷ್ಟಾಂತವಿರುತ್ತದೆಯೋ ಅಥವಾ ಇರುವುದಿಲ್ಲವೋ ಹೇಳು. ಮೂರನೆಯ ಕೋಟಿ ಇನ್ನಾವುದೂ ಇಲ್ಲ. ಅನುಭವವೂ ಇಲ್ಲ, ಯುಕ್ತಿಗೆ ದೃಷ್ಟಾಂತವೂ ಇಲ್ಲ ಎನ್ನುವುದು ಬಹಳ ಚೆನ್ನಾಗಿರುತ್ತದೆಯಲ್ಲವೆ !

ಹಾಗೇನೂ ಇಲ್ಲ. ದೃಷ್ಟಾಂತವಿದೆಯೆನ್ನುವುದಾದರೆ ಸಮಂಜಸವಾದ ದೃಷ್ಟಾಂತವನ್ನು ತಿಳಿಸು (೨೭-೨೮).

ಪೂರ್ವಪಕ್ಷಿ - ಪ್ರಳಯವು ಅದ್ವೈತವೆಂಬುದು ನನ್ನ ಪಕ್ಷ. ಅದನ್ನು ಅನುಮಾನದಿಂದ ಹೀಗೆ ಸಾಧಿಸುತ್ತೇನೆ.

೧. ಪ್ರಳಯವು ದ್ವೈತರಹಿತವಾಗಿರುತ್ತದೆ. ೨. ದ್ವೈತವು ಉಪಲಬ್ಧವಾಗುವುದಿಲ್ಲ-ವಾದ್ದರಿಂದ. ೩. ಯಾವ ಯಾವದರಲ್ಲಿ ದ್ವೈತವು ಉಪಲಬ್ಧವಾಗುವುದಿಲ್ಲವೋ ಅದು ದ್ವೈತರಹಿತವಾಗಿ ಅದ್ವೈತವಾಗಿರುತ್ತದೆ. ೪. (ದೃಷ್ಟಾಂತ) ಗಾಢನಿದ್ರೆ - ಸುಷುಪ್ತಿ.

ಸಿದ್ಧಾಂತಿ - ಸುಷುಪ್ತಿಯು ಅದ್ವೈತವೆನ್ನುತ್ತೀಯಲ್ಲವೆ? ಯಾರ ಸುಷುಪ್ತಿ? ನಿನ್ನ ಸುಷುಪ್ತಿಯೊ? ಅಥವಾ ಇನ್ನೊಬ್ಬನ ಸುಷುಪ್ತಿಯೊ? ನಿನ್ನ ಗಾಢನಿದ್ರೆಯೇ ಆದರೆ ಅದು ಅದ್ವೈತವೆನ್ನುವುದು ಇನ್ನೊಬ್ಬನಿಗೆ ಹೇಗೆ ಗೊತ್ತಾಗುತ್ತದೆ? ಅವನಿಗೆ ಅಸಿದ್ಧವಾದ್ದರಿಂದ ಇದು ದೃಷ್ಟಾಂತವಾಗದು (೨೯).

ಪೂರ್ವಪಕ್ಷಿ - ಹಾಗಾದರೆ ಅನ್ಯರ ಸುಷುಪ್ತಿಯೇ ದೃಷ್ಟಾಂತವಾಗಲಿ. ಅವರಿಗೆ ಸುಷುಪ್ತಿಯಲ್ಲಿ ಅದ್ವೈತಾನುಭವವಾಗಿರುತ್ತದೆಯಲ್ಲವೆ?

ಸಿದ್ಧಾಂತಿ - ಆಹಾ ! ನೀನು ಬಹಳ ಜಾಣ ! ಅನ್ಯರ ಸುಷುಪ್ತಿಯನ್ನು ದೃಷ್ಟಾಂತವಾಗಿ ಕೊಡಬೇಕಾದರೆ ನಿನ್ನ ಸುಷುಪ್ತಿಯ ಅನುಭವ ಇರಬೇಕಲ್ಲವೆ? ನಿನಗೇ ಅನುಭವ ಇಲ್ಲದ್ದನ್ನು ದೃಷ್ಟಾಂತವಾಗಿ ಕೊಡುತ್ತೀಯೊ? (೩೦).

ಪೂರ್ವಪಕ್ಷಿ - ಅನ್ಯರ ಸುಷುಪ್ತಿಯಲ್ಲಿ ಅದ್ವೈತವಿರುತ್ತದೆಯೆಂಬುದನ್ನು ಅನುಮಾನದಿಂದಲೇ (ತರ್ಕದಿಂದಲೇ) ನಿಶ್ಚಯಿಸುತ್ತೇನೆ. ಹೇಗೆಂದರೆ, ೧. ಈತನು ಸುಷುಪ್ತಿಯಲ್ಲಿ ಅದ್ವೈತಭಾವವನ್ನು ಹೊಂದಿದ್ದಾನೆ. ೨. ಪ್ರಾಣವಿದ್ದರೂ ನಿಶ್ಚೇಷ್ಟನಾದ್ದರಿಂದ. ೩. ನಾನು ಸುಷುಪ್ತನಾದ ಹಾಗೆ. ಆದ್ದರಿಂದ ತರ್ಕದಿಂದ ಸುಷುಪ್ತಿಯನ್ನೂ ಅದ್ವೈತಭಾವವನ್ನೂ ಸಾಧಿಸಬಹುದು.

ಸಿದ್ಧಾಂತಿ - ಸೊಗಸಾಗಿದೆ ನಿನ್ನ ಅನುಮಾನ ಪ್ರಕಾರ! ನಿನಗೆ ಸುಷುಪ್ತಿಯಲ್ಲಿ ಅದ್ವೈತಭಾವವಿದೆಯೆಂದು ನಿನಗೆ ಹೇಗೆ ಗೊತ್ತಾಯಿತು? ಅದು ಸ್ವಯಂಪ್ರಕಾಶವೆಂಬುದು ನೀನು ಒಪ್ಪದಿದ್ದರೂ ತನ್ನಷ್ಟಕ್ಕೇ ಸಿದ್ಧವಾಯಿತಲ್ಲಯ್ಯ (೩೧). ಗಾಢನಿದ್ರೆಯಲ್ಲಿ ನಿನ್ನ ಎಲ್ಲ ಇಂದ್ರಿಯಗಳೂ ವಿಲೀನವಾಗಿರುತ್ತವೆ.

ಯಾವುವೂ ಕೆಲಸಮಾಡುವುದಿಲ್ಲ. ಆದರೂ ಅದ್ವೈತವು ತೋರುತ್ತದೆ ಎಂದಾಗ ಅದು ಸ್ವಪ್ರಕಾಶವೆಂದು ಒಪ್ಪಲೇಬೇಕು. ಸ್ವಪ್ರಕಾಶ ಎಂದರೇನು? ಇತರ ಸಾಧನಗಳಿಲ್ಲದೇ ಸ್ವಯಂ ತೋರುವುದೇ ಸ್ವಪ್ರಕಾಶ. ಅದು ಸ್ವಪ್ರಕಾಶವೆಂಬುದನ್ನು ಅನುಮಾನದಿಂದ ಸಾಧಿಸಬಹುದು. ಹೇಗೆಂದರೆ,

೧. ಸುಷುಪ್ತಿಯ ಅದ್ವೈತಭಾವವು ಸ್ವಯಂಪ್ರಕಾಶವಾದದ್ದು. ೨. ಬೇರೆ ಜ್ಞಾನಸಾಧನಗಳಿಲ್ಲದಿದ್ದರೂ ಗೋಚರಿಸುವುದರಿಂದ. ೩. ಸಾಂಖ್ಯರು ಹೇಳುವ ಆತ್ಮನಂತೆ, ಪ್ರಭಾಕರರ ಸಂವೇದನ (ವೃತ್ತಿಜ್ಞಾನ) ದಂತೆ, ಬೌದ್ಧರ ಸ್ವಾತ್ಮನಂತೆ. ಹಾಗೆಯೇ ವೇದಾಂತಿಗಳಾದ ನಮ್ಮ ಮತದಲ್ಲಿಯೂ ಸುಷುಪ್ತಿಯಿಂದ ಉಪಲಕ್ಷಿತನಾದ ಆತ್ಮನು ಸ್ವಯಂಪ್ರಕಾಶನಾಗಿರುತ್ತಾನೆ (೩೨).

ಪೂರ್ವಪಕ್ಷಿ - ಒಳ್ಳೆಯದು. ಈ ಅದ್ವೈತ, ಸ್ವಯಂ ಪ್ರಕಾಶತ್ವಗಳಿರಲಿ. ಗಾಢನಿದ್ರೆಯಲ್ಲಿ ಸುಖವಿದೆಯೆನ್ನುತ್ತೀಯಲ್ಲ, ಅದು ಹೇಗೆ? ಸುಖವೆಲ್ಲಿ ಅನುಭವಕ್ಕೆ ಬರುತ್ತದೆ?

ಸಿದ್ಧಾಂತಿ - ಕೇಳು; ಗಾಢನಿದ್ರೆಯಲ್ಲಿ ದುಃಖವಿರುವುದಿಲ್ಲವಷ್ಟೆ? ದುಃಖವಿಲ್ಲದಮೇಲೆ ಸುಖವಿರುತ್ತದೆಯೆಂದು ಸಿದ್ಧವಾಯಿತು. ಸುಖದುಃಖಗಳು ಬೆಳಕು ಕತ್ತಲೆಗಳಿದ್ದಂತೆ ಅನ್ಯೋನ್ಯವಿರೋಧಿಗಳು. ಕತ್ತಲೆ ಇಲ್ಲ ಎಂದರೆ ಬೆಳಕಿದೆ ಎಂದರ್ಥ. ದುಃಖವಿಲ್ಲ ಎಂದರೆ ಸುಖವಿದೆ ಎಂದೇ ಆಗುತ್ತದೆ.

ಪೂರ್ವಪಕ್ಷಿ - ನಿದ್ರೆಯಲ್ಲಿ ದುಃಖವಿಲ್ಲ ಎನ್ನುವುದು ಹೇಗೆ?

ಸಿದ್ಧಾಂತಿ - ಅದು ಸುಲಭ. ಗಾಢನಿದ್ರೆಯಲ್ಲಿ ಕುರುಡನೂ ಕುರುಡನಲ್ಲ, ಶೂಲವು ಚುಚ್ಚಿ ನೋವಾಗಿದ್ದರೂ ಏನೂ ಆಗಿರುವುದಿಲ್ಲ, ರೋಗಿಯಾದರೂ ರೋಗಿಯಾಗಿರುವುದಿಲ್ಲ. ಇದು ಅನುಭವಗಮ್ಯವಾದದ್ದು. ಶ್ರುತಿಯೂ ಸಹ **''ಅಂಧಃ ಸನ್ ಅನಂಧೋ ಭವತಿ ವಿದ್ಧಃ ಸನ್ ಅವಿದ್ಧೋ ಭವತಿ ಉಪತಾಪೀ ಸನ್ ಅನುಪತಾಪೀ ಭವತಿ''** (ಛಾಂ.ಉ. ೮-೪-೨) ಎಂದು ಹೇಳಿದೆ. (೩೩-೩೪).

ಪೂರ್ವಪಕ್ಷಿ - ದುಃಖವಿಲ್ಲದ ಮಾತ್ರದಿಂದ ಸುಖವಿರುತ್ತದೆ ಎಂದು ಸಿದ್ಧವಾಗುವುದಿಲ್ಲ, ಮಣ್ಣುಮುದ್ದೆ ಕಲ್ಲು ಮೊದಲಾದವುಗಳಿಗೆ ದುಃಖವೂ ಇಲ್ಲ, ಸುಖವೂ ಇಲ್ಲ.

ಸಿದ್ಧಾಂತಿ - ಇದು ವಿಷಮದೃಷ್ಟಾಂತ. ಒಬ್ಬನ ಸುಖದುಃಖಗಳನ್ನು ಅವನ ಮುಖವನ್ನು ನೋಡಿ ಹೇಳಬಹುದು. ಮುಖವು ವಿಷಣ್ಣವಾಗಿದ್ದರೆ ಅವನು

ದುಃಖಿಯೆಂದೂ ಮುಖವು ಪ್ರಸನ್ನವಾಗಿ ನಗುಮುಖವಾಗಿದ್ದರೆ ಅವನು ಸುಖಿಯೆಂದೂ ನಿಶ್ಚಯಿಸಬಹುದು. ಮಣ್ಣುಮುದ್ದೆ ಕಲ್ಲು ಮುಂತಾದವುಗಳಲ್ಲಿ ವಿಷಾದವೂ ತೋರುವುದಿಲ್ಲ, ಪ್ರಸನ್ನತೆಯೂ ತೋರುವುದಿಲ್ಲ. ಆದ್ದರಿಂದ ಅವುಗಳಿಗೆ ಸುಖದುಃಖಗಳೆರಡೂ ಇಲ್ಲ. ಆದ್ದರಿಂದ ಕಲ್ಲುಮೊದಲಾದವು ದುಃಖಿಸುತ್ತಿಲ್ಲ ಎನ್ನುವುದೆ ಅಯುಕ್ತ. ಎಲ್ಲಿ ದುಃಖದ ಸಂಭವವಿದೆಯೋ ಅಲ್ಲಿ ಮಾತ್ರ ಸುಖದ ಸಂಭವವಿರುತ್ತದೆ. ಎರಡೂ ಇಲ್ಲದ ಜಡವಸ್ತುವನ್ನು ಸುಖದುಃಖಗಳಿಗೆ ದೃಷ್ಟಾಂತವಾಗಿ ಕೊಡಬಹುದೆ? (೩೫-೩೬). ಮನುಷ್ಯನು ತನಗಾಗುವ ಸುಖದುಃಖಗಳನ್ನು ಸ್ವತಃ ಅನುಭವದಿಂದ ತಿಳಿದುಕೊಳ್ಳುತ್ತಾನೆ, ಯುಕ್ತಿಯಿಂದ - ಅನುಮಾನದಿಂದ ತಿಳಿಯುವುದಿಲ್ಲ. ಆದ್ದರಿಂದ ಸುಖದುಃಖಗಳು ಅನುಮೇಯಗಳಲ್ಲ. ಹಾಗೆಯೇ ತನಗೆ ಸುಖವಾಗಿಲ್ಲ, ದುಃಖವಾಗಿಲ್ಲ - ಎಂಬ ಸುಖದುಃಖಗಳ ಅಭಾವವನ್ನೂ ಅನುಭವದಿಂದ ತಿಳಿಯುವುದಿಲ್ಲ. ಏವಂಚ ಸುಖದುಃಖಗಳು ಅವುಗಳ ಅಭಾವವೂ ಮಾನಸಪ್ರತ್ಯಕ್ಷದಿಂದ ಗೊತ್ತಾಗುತ್ತದೆ. ಈಗ ಏನಾಯಿತೆಂದರೆ, ನಿನ್ನ ಗಾಢನಿದ್ರೆಯಲ್ಲಿ ದುಃಖಾಭಾವವು ಅನುಭವದಿಂದ ತಿಳಿಯುವಂತೆ ಸುಖ ವಿರೋಧಿಯಾದ ದುಃಖವಿಲ್ಲದ್ದರಿಂದ ಸುಖವಿದೆಯೆಂಬುದನ್ನು ನೀನು ಒಪ್ಪಲೇ ಬೇಕಾಗುತ್ತದೆ (೩೭-೩೮). ಜನರು ಕಷ್ಟಪಟ್ಟು ಖರ್ಚು ಮಾಡಿ ಮೃದುವಾದ ಹಾಸಿಗೆ ತಲೆದಿಂಬು ಮೊದಲಾದವನ್ನು ಮಲಗಲು ಸಿದ್ಧಪಡಿಸಿಕೊಳ್ಳುತ್ತಾರೆ. ನಿದ್ರೆಯಲ್ಲಿ ಸುಖವಿಲ್ಲದಿದ್ದರೆ ಹಾಸಿಗೆಗಾಗಿ ಅಷ್ಟು ಶ್ರಮವಹಿಸಲು ಕಾರಣವೇನು? (೩೯)

ಪೂರ್ವಪಕ್ಷಿ - ಯಾವುದೋ ರೋಗ, ನೋವು - ಮುಂತಾದ್ದರಿಂದ ದುಃಖವಾಗಿರುತ್ತದೆ. ಆ ದುಃಖವನ್ನು ಹೋಗಲಾಡಿಸಿಕೊಳ್ಳುವುದಕ್ಕಾಗಿ ಹಾಸಿಗೆಯನ್ನು ಶ್ರಮಪಟ್ಟು ಸಂಪಾದಿಸಿಕೊಳ್ಳುತ್ತಾರೆ. ದುಃಖಾಭಾವಕ್ಕಾಗಿ ಹಾಸಿಗೆ ಬೇಕು, ಸುಖಕ್ಕಾಗಿ ಅಲ್ಲ!

ಸಿದ್ಧಾಂತಿ - ಯಾವ ರೋಗವೂ ನೋವೂ ಇಲ್ಲದವರು ಏಕೆ ಮೃದುವಾದ ಹಾಸಿಗೆಯನ್ನು ಬಯಸುತ್ತಾರೆ? ಅವರಿಗೆ ಯಾವ ದುಃಖವೂ ಇರುವುದಿಲ್ಲವಷ್ಟೆ?

ಪೂರ್ವಪಕ್ಷಿ - ಒಳ್ಳೆಯದು; ನಿದ್ರಾಸುಖವು ಮೃದುವಾದ ಹಾಸಿಗೆ ಮುಂತಾದ್ದರಿಂದ ಬರುತ್ತದೆ - ಎಂದಾಯಿತು. ಹಾಸಿಗೆ ಮೊದಲಾದವು

ಸುಖಸಾಧನಗಳಾದ ವಿಷಯಗಳು. ಆಗ ನಿದ್ರಾಸುಖವು ವೈಷಯಿಕವಾಯಿತು. ಸ್ವತಃಸಿದ್ಧವಾದ ಬ್ರಹ್ಮಾನಂದವಾಗಲಿಲ್ಲ!

ಸಿದ್ಧಾಂತಿ - ಹಾಸಿಗೆ ಮೊದಲಾದ ಸಾಧನಗಳು ನಿದ್ರೆ ಬರುವುದಕ್ಕಾಗಿ ಮಾತ್ರ. ನಿದ್ರೆ ಬಂದಮೇಲೆ ಸುಖವಾಗುತ್ತದಲ್ಲ, ಅದು ಯಾವ ಸಾಧನದಿಂದ ಬಂದಿತು? ಆ ಸುಖವು ಸ್ವತಃಸಿದ್ಧವಾದದ್ದು, ಸಾಧನದಿಂದ ಬಂದದ್ದಲ್ಲ. ಮನುಷ್ಯನಿಗೆ ಸುಖವನ್ನು ಅನುಭವಿಸಬೇಕೆಂಬ ಬುದ್ಧಿಯುಂಟಾದಾಗ ಹಾಸಿಗೆ ಮುಂತಾದ ಸಾಧನವನ್ನು ಬಯಸುತ್ತಾನೆ. ಅದು ವಿಷಯಸುಖದ ಅಪೇಕ್ಷೆಯಂತಿರುತ್ತದೆ. ಆದರೆ ಗಾಢನಿದ್ರೆ ಬಂದೊಡನೆ ತನ್ನ ಸ್ವರೂಪಸುಖದಲ್ಲಿ ಮುಳುಗಿಹೋಗುತ್ತಾನೆ (೪೦-೪೨).

ಇವೆಲ್ಲದರ ತಾತ್ಪರ್ಯವೇನೆಂದರೆ, ಜೀವನು ಜಾಗ್ರತ್ತಿನಲ್ಲಿ ವಿವಿಧ ಕಾರ್ಯಗಳನ್ನು ಮಾಡಿ ಬಳಲಿ ಹಾಸಿಗೆ ಮುಂತಾದ್ದರಲ್ಲಿ ವಿಶ್ರಮಿಸುತ್ತಾನೆ. ಸುಖವಿರೋಧಿಯಾದ ಬಳಲಿಕೆಯ ದುಃಖವು ಹೋದಾಗ ಸ್ವಸ್ಥಚಿತ್ತನಾಗುತ್ತಾನೆ. ಆಗ ಶಯನಾದಿಗಳಿಂದ ಲಭಿಸುವ ಸುಖವನ್ನು ಅನುಭವಿಸುತ್ತಾನೆ. ಇದು ವಿಷಯಸುಖವೇ ಹೌದು. ಆ ಸಮಯದಲ್ಲಿ ಆತನ ಬುದ್ಧಿವ್ಯಾಪಾರವು ಅಂತರ್ಮುಖವಾಗಲು ಅದರಲ್ಲಿ ಸ್ವಸ್ವರೂಪಾನಂದವು ಪ್ರತಿಬಿಂಬಿಸುತ್ತದೆ. ಇದೇ ಆ ವಿಷಯ ಸುಖ. ಇಲ್ಲಿ ಅನುಭವಿತೃ, ಅನುಭವ, ಅನುಭವಕ್ಕೆ ಬರುವ ಸುಖ-ವೆಂಬ ತ್ರಿಪುಟಿ ಇರುತ್ತದೆ. ತ್ರಿಪುಟಿಯಿದ್ದಾಗ ಜೀವನಿಗೆ ಶ್ರಮವಿದ್ದೇ ಇರುತ್ತದೆ (೪೩-೪೪). ಈ ಶ್ರಮವನ್ನೂ ಹೋಗಲಾಡಿಸಿ ಕೊಳ್ಳುವುದಕ್ಕಾಗಿ ಜೀವಾತ್ಮನು ಆನಂದರೂಪನಾದ ಪರಮಾತ್ಮನ ಬಳಿಗೆ ಧಾವಿಸುತ್ತಾನೆ! 'ಸತಾ ಸೋಮ್ಯ ತದಾ ಸಂಪನ್ನೋ ಭವತಿ' (ಛಾಂ.ಉ. ೬-೮-೧) ಎಂಬ ಶ್ರುತಿವಚನದಂತೆ ಜೀವನು ಪರಮಾತ್ಮನೊಡನೆ ತಾದಾತ್ಮ್ಯವನ್ನು ಹೊಂದಿ ಸುಷುಪ್ತಿಯಲ್ಲಿ ಬ್ರಹ್ಮಾನಂದವಾಗಿ ಬಿಡುತ್ತಾನೆ! (೪೫). ಈ ಸುಷುಪ್ತಿಯಲ್ಲಾಗುವ ಸ್ವರೂಪಾನಂದಕ್ಕೆ ಪಕ್ಷಿ, ಗಿಡಗ, ಮಗು, ಮಹಾರಾಜ ಮತ್ತು ಮಹಾಬ್ರಾಹ್ಮಣ - ಇವರನ್ನು ದೃಷ್ಟಾಂತಗಳನ್ನಾಗಿ ಶ್ರುತಿಯು ಉದಾಹರಿಸಿದೆ (೪೬). ಹೇಗೆಂದರೆ, ಒಬ್ಬ ಹಕ್ಕಿ ಹಿಡಿಯುವವನು ಹಕ್ಕಿಯನ್ನು ಉದ್ದವಾದ ದಾರದಲ್ಲಿ ಕಟ್ಟಿ ಒಂದು ಕಂಭಕ್ಕೆ ದಾರವನ್ನು ಕಟ್ಟಿರುತ್ತಾನೆ. ಆ ಹಕ್ಕಿಯು ತನ್ನನ್ನು ಬಿಡಿಸಿಕೊಳ್ಳುವುದಕ್ಕಾಗಿ ದಿಕ್ಕುದಿಕ್ಕುಗಳಿಗೂ ಹಾರಿ ಬಿಡಿಸಿಕೊಳ್ಳಲಾರದೆ ಹಿಂದಕ್ಕೆ ಬಂದು ಕಟ್ಟಿದ ಕಂಬವೇ ಅಥವಾ ಹಸ್ತವೇ ಆಶ್ರಯಸ್ಥಾನವೆಂದು ಅದರಲ್ಲಿ ಕುಳಿತುಬಿಡುತ್ತದೆ. ಶ್ರುತಿ ಹೀಗಿದೆ -

**"ಯಥಾ ಶಕುನಿಃ ಸೂತ್ರೇಣ ಪ್ರಬದ್ಧೋ ದಿಶಂ ದಿಶಂ ಪತಿತ್ವಾ ಅನ್ಯತ್ರಾಽಯತನಮಲಬ್ಧ್ವಾ ಬಂಧನಮೇವೋಪಾಶ್ರಯತೇ, ಏವಮೇವ ಖಲು ಸೋಮ್ಯ ತನ್ಮನೋ ದಿಶಂ ದಿಶಂ ಪತಿತ್ವಾಽನ್ಯತ್ರಾಯತನಮಲಬ್ಧ್ವಾ ಪ್ರಾಣಮೇವೋಪಾಶ್ರಯತೇ ! ಪ್ರಾಣಬಂಧನಂ ಹಿ ಸೋಮ್ಯ ಮನಃ"** (ಛಾಂ.ಉ.೬-೮-೨). ಅಂತೆಯೇ ಜೀವಾತ್ಮನ ಉಪಾಧಿಯಾದ ಮನಸ್ಸು ತಾನು ಮಾಡಿದ ಧರ್ಮದ ಫಲವಾದ ಸುಖವನ್ನೋ ಅಧರ್ಮದ ಫಲವಾದ ದುಃಖವನ್ನೋ ಪಡೆಯುವುದಕ್ಕಾಗಿ ಜಗತ್ತಿನಲ್ಲಿ ಅಲೆದು ಅಲೆದು, ಕರ್ಮವು ಕ್ಷಯವಾದೊಡನೆ ತನಗೆ ಕಾರಣವಾದ ಅವಿದ್ಯೆಯಲ್ಲಿ ಲೀನವಾಗುತ್ತದೆ. ಮನಸ್ಸಿಗೆ ವಿಶ್ರಾಂತಿಸ್ಥಾನವಾವುದೂ ದೊರೆಯದಿರುವುದರಿಂದ 'ಪ್ರಾಣ'ದಲ್ಲಿ ಬಂದು ಸೇರುತ್ತದೆಯೆಂದು ಮೇಲ್ಕಂಡ ಉಪನಿಷತ್ತಿನಲ್ಲಿದೆ. ಪ್ರಾಣವೆಂದರೆ ಇಲ್ಲಿ ಪರಮಾತ್ಮನೆಂದರ್ಥ. **'ಪ್ರಾಣಸ್ಯ ಪ್ರಾಣಂ'** ಎಂಬುದೂ ಶ್ರುತಿಯೇ (೪೭-೪೮). ಆಕಾಶದಲ್ಲಿ ಹಾರಾಡುವ ಗಿಡಗವು ಹಾರಿ ಹಾರಿ ಸೋತು ತನ್ನ ಗೂಡನ್ನು ಸೇರಬೇಕೆಂದು ವೇಗದಿಂದ ಹಾರುತ್ತ ವಿಶ್ರಮಿಸುವುದಕ್ಕಾಗಿ ಗೂಡಿಗೆ ಬರುತ್ತದೆಯೋ ಹಾಗೆ ಅಂತಃಕರಣೋಪಾಧಿಯುಳ್ಳ ಜೀವನು ಬ್ರಹ್ಮಾನಂದವನ್ನು ಪಡೆಯುವುದಕ್ಕಾಗಿ ಗಾಢನಿದ್ರೆಯ ಕಡೆಗೆ ಧಾವಿಸುತ್ತಾನೆ! (ಬೃ.ಉ.೪-೩-೨೨). ಎಳೆಯ ಮಗು ಸ್ತನ್ಯಪಾನ ಮಾಡಿ ಮೃದುವಾದ ಹಾಸಿಗೆಯಲ್ಲಿ ಮಲಗಿದಾಗ ತನ್ನಷ್ಟಕ್ಕೇ ನಗುತ್ತ ಆನಂದಿಸುತ್ತದೆ. ರಾಗದ್ವೇಷಾದಿಗಳೊಂದೂ ಇಲ್ಲದೆ ಸ್ವಸ್ವರೂಪದಲ್ಲಿರುವುದೇ ಮಗುವಿನ ಆನಂದಕ್ಕೆ ಕಾರಣವಾಗಿದೆ. ಸ್ವಸ್ವರೂಪವೇ ಆನಂದ. ಸಾರ್ವಭೌಮನಾದ ಮಹಾರಾಜನು ಸಕಲಭೋಗಗಳಿಂದಲೂ ತೃಪ್ತನಾಗಿ ಮಾನುಷಾನಂದದ ತುದಿಯನ್ನು ಮುಟ್ಟಿ ಆನಂದಮೂರ್ತಿಯಾಗಿರುತ್ತಾನೆ. ಬ್ರಹ್ಮವಿದನಾದ ಬ್ರಾಹ್ಮಣೋತ್ತಮನು ಕೃತಕೃತ್ಯನಾಗಿ ವಿದ್ಯಾನಂದದ ಪರಾಕಾಷ್ಠೆಯನ್ನೇರಿ ಜೀವನ್ಮುಕ್ತನಾಗಿರುತ್ತಾನೆ. ಈ ಪ್ರಕಾರದಲ್ಲಿ ಮಗು, ಮಹಾರಾಜ, ಜೀವನ್ಮುಕ್ತನಾದ ಬ್ರಹ್ಮವಿತ್ - ಇವರಂತೆ ಸುಷುಪ್ತಿಯಲ್ಲಿರತಕ್ಕವನು ಆನಂದವನ್ನನುಭವಿಸುತ್ತಾನೆ ಎಂದು ಅಭಿಪ್ರಾಯ. ಈ ಕಡೆಯ ಮೂರು ದೃಷ್ಟಾಂತಗಳು ಬೃಹದಾರಣ್ಯಕದಲ್ಲಿವೆ (ಬೃ.ಉ. ೨-೧-೧೯)(೪೯-೫೨). ಏನನ್ನೂ ಅರಿಯದ ಮುಗ್ಧ, ವಿವೇಕಿ, ಜೀವನ್ಮುಕ್ತ - ಈ ಮೂವರನ್ನು ಮೇಲ್ಕಂಡಂತೆ ಸುಖಿಗಳಿಗೆ ದೃಷ್ಟಾಂತವಾಗಿ ಹೇಳಿದ್ದಾರೆ. ಇನ್ನು ಉಳಿದ ಮಧ್ಯಸ್ಥರೆಲ್ಲರೂ ದುಃಖಿಗಳೇ ಆಗಿರುತ್ತಾರೆ. ಸಾರ್ವಭೌಮನ ಸುಖವು

ಸೀಮಿತವಾದದ್ದು. ಮಾನುಷಾನಂದವು ಸಾರ್ವಭೌಮನಿಗಿರಲು ಸಾಧ್ಯ ಎಂದಿಷ್ಟೇ ಅಭಿಪ್ರಾಯ (೫೩). ಎಳೆಯ ಮಗುವೇ ಮೊದಲಾದವರು ಹೇಗೆ ಆನಂದಮಯ- ರಾಗಿರುತ್ತಾರೋ ಹಾಗೆಯೇ ಮಾನವನು ಗಾಢನಿದ್ರೆಯಲ್ಲಿ ಆನಂದಮಯ- ನಾಗಿರುತ್ತಾನೆ. ಲೋಕದಲ್ಲಿ ಪ್ರಿಯಳಾದ ಸ್ತ್ರೀಯಿಂದ ಆಲಿಂಗಿತನಾದ ಕಾಮಿಯು ಬಾಹ್ಯಾಭ್ಯಂತರ ವಿಷಯಗಳನ್ನು ಮರೆತು ಹೇಗೆ ಸುಖಮೂರ್ತಿಯಾಗಿ ಬಿಡುವನೋ ಹಾಗೆ ಸುಷುಪ್ತಿಯಲ್ಲಿ ಮಾನವನು ಬಾಹ್ಯಾಭ್ಯಂತರಗಳನ್ನು ಮರೆತು ಸುಖದ ಮೂರ್ತಿಯಾಗಿ ಬಿಡುತ್ತಾನೆ. **''ತದ್ಯಥಾ ಪ್ರಿಯಯಾ ಸ್ತ್ರಿಯಾ ಸಂಪರಿಷ್ವಕ್ತೋ ನ ಬಾಹ್ಯಂ ಕಿಂಚನ ವೇದ ನಾಂತರಂ''** (ಬೃ.ಉ. ೪-೨-೨೧) ಎಂಬ ಶ್ರುತಿಯು ಈ ಉಪಮಾನವನ್ನು ಹೇಳಿದೆ (೫೪). ದೃಷ್ಟಾಂತದಲ್ಲಿ ಬಾಹ್ಯವೆಂದರೆ ಹೊರಗಡೆ ಬೀದಿಯಲ್ಲಿ ನಡೆಯುವ ವೃತ್ತಾಂತ. ಆಂತರವೆಂದರೆ ಗೃಹಕೃತ್ಯ. ಪ್ರಕೃತವಾದ ನಿದ್ರೆಯಲ್ಲಿ ಜಾಗ್ರದವಸ್ಥೆಯ ವೃತ್ತಾಂತವು ಬಾಹ್ಯ. ಬಾಹ್ಯಸಂಸ್ಕಾರದಿಂದ ನಾಡಿಯಲ್ಲಿ ನಡೆಯುವ ಸ್ವಪ್ನವೃತ್ತಾಂತವು ಆಂತರ (೫೫). **'ಅತ್ರ ಪಿತಾ ಅಪಿತಾ ಭವತಿ'** (ಬೃ.ಉ. ೪-೩-೨೨) ಇತ್ಯಾದಿ ಶ್ರುತಿಯು ಸುಷುಪ್ತಿ ಕಾಲದಲ್ಲಿ 'ತಂದೆಯು ತಂದೆಯಾಗಿರುವುದಿಲ್ಲ' ಇತ್ಯಾದಿ ನುಡಿಗಳನ್ನು ಹೇಳಿದೆ. ಇದರಿಂದ ಅಧ್ಯಾಸಜನ್ಯವಾದ ಜೀವಧರ್ಮಗಳೆಲ್ಲವನ್ನೂ ಗಾಢನಿದ್ರೆಯಲ್ಲಿ ನಿವಾರಿಸಿದಂತಾಯಿತು. ಆಗ ಸಂಸಾರಧರ್ಮವಾವುದೂ ಇಲ್ಲದ್ದರಿಂದ ನಿದ್ರೆಯಲ್ಲಿರುವ ಜೀವನು ಬ್ರಹ್ಮವೇ ಆಗಿರುತ್ತಾನೆ. ' ಇವನು ತಂದೆ' ಇತ್ಯಾದಿ ಅಭಿಮಾನವೇನುಂಟು, ಅದು ಸುಖದುಃಖಗಳಿಂದ ತುಂಬಿದ ಗಣಿಯಾಗಿರುತ್ತದೆ. ಈ ಅಭಿಮಾನವನ್ನು ತೊಡೆದು ಹಾಕಿದವನು ಸಮಸ್ತದುಃಖಗಳನ್ನೂ ದಾಟಿಬಿಡುತ್ತಾನೆ.

**''ಅತ್ರ ಪಿತಾ ಅಪಿತಾ ಭವತಿ ಮಾತಾ ಅಮಾತಾ ಲೋಕಾ ಅಲೋಕಾ ದೇವಾ ಅದೇವಾ ವೇದಾ ಅವೇದಾಃ - ತೀರ್ಣೋಹಿ ತದಾ ಸರ್ವಾನ್ ಶೋಕಾನ್ ಹೃದಯಸ್ಯ ಭವತಿ ''** (ಬೃ.ಉ.೪-೩-೨೨). (೫೬-೫೭).

ಏವಂಚ ಸುಷುಪ್ತಿ ಸಮಯದಲ್ಲಿ ಜಾಗ್ರದಾದಿ ಸಮಸ್ತ ಪ್ರಪಂಚವೂ ತನಗೆ ಕಾರಣವಾದ ತಮಃಪ್ರಧಾನ ಪ್ರಕೃತಿಯಲ್ಲಿ ಅಡಗಿಹೋಗುವುದರಿಂದ ತಾಮಸಪ್ರಕೃತಿಯಿಂದ ಆವೃತನಾದ ಜೀವನು ಸುಖರೂಪವಾದ ಬ್ರಹ್ಮವನ್ನು ಸೇರಿರುತ್ತಾನೆಂದು ಈ ಆಥರ್ವಣ ಶ್ರುತಿಯು ತಿಳಿಸುತ್ತದೆ. ನಮ್ಮ ಅನುಭವವೂ

ಹಾಗೆಯೇ ಇದೆ. ಗಾಢನಿದ್ರೆಯಿಂದ ಎಚ್ಚೆತ್ತವನು ''ನಾನು ಸುಖವಾಗಿ ನಿದ್ರಿಸಿದೆನು. ಆಗ ಏನೂ ನನಗೆ ಗೊತ್ತಾಗಲಿಲ್ಲ'' ಎಂದು ಹೇಳುತ್ತಾನೆ. ಅವನು ತನ್ನ ಸುಖವನ್ನೂ ಹಾಗೆಯೆ 'ಗೊತ್ತಾಗಲಿಲ್ಲ' ವೆಂದು ಅಜ್ಞಾನವನ್ನೂ ಸ್ಮರಿಸಿಕೊಳ್ಳುತ್ತಾನೆ. ಸುಷುಪ್ತಿಯಲ್ಲಿ ಸುಖ, ಅಜ್ಞಾನ- ಇವೆರಡೂ ಇದ್ದವೆಂದು ಇದರಿಂದ ತಿಳಿಯುತ್ತದೆ(೫೮-೫೯). ಯಾವುದರ ಅನುಭವವಾಗಿರುತ್ತದೆಯೋ ಅದು ಮಾತ್ರ ಸ್ಮರಣೆಗೆ ಬರುತ್ತದೆ. 'ಸುಖವಾಗಿ ನಿದ್ರಿಸಿದೆನು' ಎಂಬ ಸ್ಮರಣೆ ಬಂದಿರುವುದರಿಂದ ಸುಖದ ಅನುಭವವಾಗಿದೆ - ಎಂದು ಒಪ್ಪಬೇಕು. ಸುಖಾನುಭವಕ್ಕೆ ಸಾಧನವಾದ ಮನಸ್ಸು ಪ್ರಕೃತಿಯಲ್ಲಿ ಲೀನವಾಗಿರುವುದರಿಂದ ಮನಸ್ಸಿಲ್ಲದೆ ಸುಖದ ಅನುಭವ ಹೇಗಾಯಿತು? ಎಂಬ ಪ್ರಶ್ನೆ ಹುಟ್ಟಬಹುದು. ಅದಕ್ಕೆ ಉತ್ತರವೇನೆಂದರೆ, ನಿದ್ರೆಯ ಸುಖ ವಿಷಯಸುಖವಲ್ಲವಾದ್ದರಿಂದ ಮನಸ್ಸು ಬೇಕಿಲ್ಲ. ನಿದ್ರೆಯ ಸುಖವು ಬ್ರಹ್ಮಾನಂದವಾದ್ದರಿಂದ ಅದು ಸ್ವಯಂಪ್ರಕಾಶವಾಗಿದೆ. ಸ್ವಪ್ರಕಾಶವಾದ ಆನಂದವು ತೋರಿದ್ದರಿಂದಲೇ ಅದುವರೆಗೆ ಆವರಣವಾದ ಜ್ಞಾನವಿತ್ತೆಂದೂ ಗೊತ್ತಾಗುತ್ತದೆ ! (೬೦). **'ವಿಜ್ಞಾನಮಾನಂದಂ ಬ್ರಹ್ಮ'** (ಬೃ.ಉ.೩-೯-೨೮) ಎಂದು ಬೃಹದಾರಣ್ಯಕ ಶ್ರುತಿಯು ಹೇಳುತ್ತದೆ. ವಿಜ್ಞಾನಂ - ಎಂಬುದರಿಂದ ಅದು ಸ್ವಯಂಪ್ರಕಾಶವೆಂದೂ ಆನಂದವೇ ಬ್ರಹ್ಮವೆಂದು ಗೊತ್ತಾಗುತ್ತದೆ. ಇಲ್ಲೊಂದು ಪ್ರಶ್ನೆ ಹುಟ್ಟುತ್ತದೆ. ಅನುಭವಸ್ಮರಣೆಗಳು ಒಂದೇ ಅಧಿಕರಣದಲ್ಲಿರಬೇಕೆಂಬುದು ಸರ್ವಸಂಮತವಾದ ನಿಯಮ. ಯಾರಿಗೆ ಅನುಭವವಾಗಿದೆಯೋ ಅವರಿಗೆ ಸ್ಮರಣೆ ಬರುತ್ತದೆ. **'ಸುಖಮಹಮಸ್ವಾಪ್ಸಮ್, ನ ಕಿಂಚಿದವೇದಿಷಮ್'** ಎಂದು ನಿದ್ರೆಯಿಂದ ಎಚ್ಚರಗೊಂಡ ಜೀವಾತ್ಮನು ಸ್ಮರಿಸಿಕೊಳ್ಳುತ್ತಾನೆ. ಈತನೇ ವಿಜ್ಞಾನಮಯನೆಂಬ ಜೀವಾತ್ಮ. ಆದ್ದರಿಂದ ಸುಷುಪ್ತಿಯ ಸುಖವೂ 'ಏನೂ ಗೊತ್ತಾಗಲಿಲ್ಲ' ಎಂಬ ಅಜ್ಞಾನವೂ ಈ ವಿಜ್ಞಾನಮಯನಾದ ಜೀವನು ಅನುಭವಿಸಿದ್ದು ಎಂದೇ ಹೇಳಬೇಕಾಗುತ್ತದೆ. ಆಗ ಆ ಸುಖವು ವಿಷಯಾನಂದ ವಾಗುತ್ತದೆಯೇ ಹೊರತು ಬ್ರಹ್ಮಾನಂದವಾಗುವುದು ಹೇಗೆ? ಆ ಆನಂದವನ್ನೇಕೆ ಸ್ವಪ್ರಕಾಶವೆಂದು ಸಾಧಿಸಬೇಕು?

ಹಾಗಲ್ಲ: ವಿಜ್ಞಾನಮಯಮಾದ ಜೀವನಿಗೆ ವಿಜ್ಞಾನವು (ಅಂತಃಕರಣವು) ಉಪಾಧಿಯಾಗಿರುತ್ತದೆ. ಅದು ಗಾಢನಿದ್ರೆಯಲ್ಲಿ ತನಗೆ ಕಾರಣವಾದ ಅಜ್ಞಾನವೆಂಬ ಅವಿದ್ಯೆಯಲ್ಲಿ ಲೀನವಾಗಿ ಬಿಟ್ಟಿರುತ್ತದೆ. ಆದ್ದರಿಂದ ಮನೋಬುದ್ಧಿಗಳೆರಡೂ ಸುಪ್ತವಾಗಿಬಿಡುತ್ತವೆ. ಎಂದರೆ ವಿಜ್ಞಾನಮಯ

ಮನೋಮಯಗಳೆರಡೂ ವಿಲಯಾವಸ್ಥೆಯಲ್ಲಿರುತ್ತವೆ. ಈ ಅವಸ್ಥೆಯೇ ನಿದ್ರೆ. ನಿದ್ರೆಯೇ ಅಜ್ಞಾನವೆಂದು ವಿದ್ವಾಂಸರ ವ್ಯವಹಾರವಿದೆ (೬೧-೬೨). ಹಾಗಾದರೆ ಸುಷುಪ್ತಿಕಾಲದಲ್ಲಿಲ್ಲದ ವಿಜ್ಞಾನಮಯನಿಗೆ ಸುಖದ ಅನುಭವ ವಾಗದಿರುವುದರಿಂದ ಎಚ್ಚರವಾದ ಮೇಲೆ ಸ್ಮರಣೆಗೆ ಬರುವುದು ಹೇಗೆ? ಹೇಗೆಂದರೆ, ಗಟ್ಟಿಯಾದ ತುಪ್ಪವು ಉಷ್ಣವಾದಾಗ ಕರಗಿ ದ್ರವವಾಗುವುದಷ್ಟೆ ಅದೇ ಸ್ವಲ್ಪಹೊತ್ತಿನಲ್ಲಿ ಗಟ್ಟಿಯಾಗುತ್ತದೆ. ಹಾಗೆ ಸುಷುಪ್ತಿಯಲ್ಲಿ ಅಂತಃಕರಣವು ಕರಗುತ್ತದೆ ಎಂದರೆ ವಿಲೀನಾವಸ್ಥೆಯನ್ನು ಪಡೆದಿರುತ್ತದೆ. ಅನಂತರ ಎಚ್ಚರವಾದಾಗ ಅಂತಃಕರಣವು ತುಪ್ಪದಂತೆ ಗಟ್ಟಿಯಾಗುತ್ತದೆ. ಆಗ ಜೀವನಿಗೆ ವಿಜ್ಞಾನಮಯನೆಂದೂ ಅಂತಃಕರಣವು ವಿಲೀನಾವಸ್ಥೆಯಲ್ಲಿದ್ದಾಗ ಆನಂದಮಯನೆಂದೂ ಹೆಸರು. ಇಲ್ಲಿ ಅಂತಃಕರಣ, ವಿಜ್ಞಾನ, ಮನೋಬುದ್ಧಿಗಳು, ಜೀವಾತ್ಮನ ಉಪಾಧಿ ಇವೆಲ್ಲವೂ ಒಂದೇ ಅರ್ಥದಲ್ಲಿವೆಯೆಂದು ತಿಳಿಯಬೇಕು. ಅಂತಃಕರಣವೇನೂ ತುಪ್ಪದಂತೆ ಕರಗುವುದಿಲ್ಲ. ಪ್ರಬಲ, ದುರ್ಬಲ ಎಂಬ ಎರಡು ಅವಸ್ಥೆಗಳಿವೆ ಎಂಬುದಕ್ಕೆ ತುಪ್ಪದ ದೃಷ್ಟಾಂತವನ್ನು ಕೊಡಲಾಗಿದೆ (೬೩). ನಿದ್ರೆ ಬರುವ ಪೂರ್ವಕ್ಷಣದಲ್ಲಿ ಅಂತರ್ಮುಖವಾದ ಬುದ್ಧಿಯೆಂಬ ಅಂತಃಕರಣ ವೃತ್ತಿಯಲ್ಲಿ ಸ್ವರೂಪಸುಖವು ಪ್ರತಿಬಿಂಬಿಸಿರುತ್ತದೆ. ಅನಂತರ ನಿದ್ರೆ ಬಂದಾಗ ಸುಖಪ್ರತಿಬಿಂಬಸಹಿತವಾದ ಬುದ್ಧಿವೃತ್ತಿಯೇ ನಿದ್ರಾರೂಪದಿಂದ ವಿಲೀನವಾಗಿ ಆನಂದಮಯವೆನಿಸುತ್ತದೆ. ಈ ಆನಂದಮಯವಾದ ಬುದ್ಧಿವೃತ್ತಿಯಿಂದ ಕೂಡಿದ ಜೀವಾತ್ಮನನ್ನೂ ಆನಂದಮಯನೆಂದೇ ವ್ಯವಹರಿಸುತ್ತಾರೆ. ಈ ಆನಂದಮಯನು ಸ್ವಸ್ವರೂಪವಾದ ಬ್ರಹ್ಮಾನಂದವನ್ನು ಅನುಭವಿಸುತ್ತಾನೆ. ಸುಖಪ್ರತಿಬಿಂಬ ಸಹಿತವಾದ ಅಂತರ್ಮುಖಬುದ್ಧಿವೃತ್ತಿಯಿಂದಾದ ಸಂಸ್ಕಾರದಿಂದ ಅಜ್ಞಾನದಲ್ಲಿ ಸೂಕ್ಷ್ಮವಾದ ಸಾತ್ತ್ವಿಕವೃತ್ತಿಗಳುಂಟಾಗುತ್ತವೆ. ಆನಂದಮಯನು ಈ ಸಾತ್ತ್ವಿಕವೃತ್ತಿಗಳಿಂದ ಸ್ವಸ್ವರೂಪಸುಖವನ್ನು ಅನುಭವಿಸುತ್ತಾನೆ (೬೪-೬೫). ಈ ಅಜ್ಞಾನ ವೃತ್ತಿಗಳು ಬುದ್ಧಿವೃತ್ತಿಗಳಿಗಿಂತ ಬಹಳ ಸೂಕ್ಷ್ಮವಾದವು. ಬುದ್ಧಿವೃತ್ತಿಗಳು ಸ್ಫುಟವಾಗಿ ಇರುತ್ತವೆ. ಆನಂದಮಯನಾದ ಜೀವನು ಈ ಅಜ್ಞಾನವೃತ್ತಿಗಳಿಂದ ಸ್ವರೂಪಸುಖವನ್ನು ಸುಷುಪ್ತಿಯಲ್ಲಿ ಅನುಭವಿಸುವುದರಿಂದ 'ಸುಖವನ್ನು ಅನುಭವಿಸುತ್ತಿದ್ದೇನೆ' ಎಂಬ ಜ್ಞಾನವು ಆಗ ಇರುವುದಿಲ್ಲ - ಎಂದು ವೇದಾಂತಪಾರಂಗತರೆಲ್ಲರೂ ಹೇಳುತ್ತಾರೆ. ಆದ್ದರಿಂದ ಎಚ್ಚರವಾದಾಗ ಜೀವಾತ್ಮನಿಗೆ ನಿದ್ರೆಯ ಸುಖದ ಸ್ಮರಣೆಬರಲಡ್ಡಿಯಿಲ್ಲ (೬೬).

ಆನಂದಮಯನು ಬ್ರಹ್ಮಾನಂದವನ್ನು ಅವಿದ್ಯಾ (ಅಜ್ಞಾನ) ವೃತ್ತಿಗಳಿಂದ ಅನುಭವಿಸುತ್ತಾನೆಂಬುದನ್ನು ಮಾಂಡೂಕ್ಯ, ತಾಪನೀಯಾದ್ಯುಪನಿಷತ್ತುಗಳಲ್ಲಿ ಸ್ಪಷ್ಟವಾಗಿ ನಿರೂಪಿಸಲಾಗಿದೆ. ಆನಂದಮಯನು ಭೋಕ್ತಾ, ಬ್ರಹ್ಮಾನಂದವು ಭೋಗ್ಯವಾಗಿರುತ್ತದೆ. ಮಾಂಡೂಕ್ಯೋಪನಿಷತ್ತಿನಲ್ಲಿ **''ಸುಷುಪ್ತಸ್ಥಾನ ಏಕೀಭೂತಃ ಪ್ರಜ್ಞಾನಘನ ಏವಾನಂದಮಯೋ ಹ್ಯಾನಂದಭುಕ್ ಚೇತೋಮುಖಃ''** (ಮಾಂ.ಉ.೫) ಎಂದಿದೆ. ಇದರ ಅರ್ಥವೇನೆಂದರೆ - ಸುಷುಪ್ತ್ಯಭಿಮಾನಿಯೂ ಆನಂದಪ್ರಚುರನೂ ಆದ ಆತ್ಮನು ಚೈತನ್ಯ-ಮಯವಾದ - ಎಂದರೆ - ಚಿತ್‌ಪ್ರತಿಬಿಂಬ ಸಹಿತವಾದ ವೃತ್ತಿಗಳಿಂದ ಸ್ವರೂಪಾನಂದವನ್ನು ಅನುಭವಿಸುತ್ತಾನೆ. ಚೇತೋಮುಖ ಎಂದರೆ ಚೈತನ್ಯಪ್ರಚುರವಾದ ಎಂದರ್ಥ. ಚಿತ್‌ಪ್ರತಿಬಿಂಬ ವಿಶಿಷ್ಟ ಚಿದಾಭಾಸಸಹಿತ - ಎಂದು ತಾತ್ಪರ್ಯ (೬೭-೬೮) ಮಾಂಡೂಕ್ಯದಲ್ಲಿ 'ಏಕೀಭೂತಃ' ಎಂಬ ಶಬ್ದವಿದೆಯಷ್ಟೆ- ಅದರ ಅರ್ಥವೇನೆಂದರೆ - ಜಾಗ್ರದವಸ್ಥೆಯಲ್ಲಿ ಹಿಂದೆ ವಿಜ್ಞಾನಮಯಾದಿರೂಪಗಳಿಂದ ವಿಶಿಷ್ಟನಾದ ಜೀವನು ಸುಷುಪ್ತಿಯಲ್ಲಿ ವಿಜ್ಞಾನಾದ್ಯುಪಾಧಿಗಳ ವಿಲಯದಿಂದ ಏಕಾಕಾರವನ್ನು ಪಡೆದಿರುತ್ತಾನೆ. ಅನೇಕ ಬಗೆಯ ಅಕ್ಕಿಕಾಳುಗಳ ಹಿಟ್ಟಿನಂತೆ ಒಂದಾಗಿರುತ್ತಾನೆ - ಎಂದರ್ಥ. **''ಸ ಏವಾಯಮಾತ್ಮಾ ಬ್ರಹ್ಮ ವಿಜ್ಞಾನಮಯೋ ಮನೋಮಯಃ ಪ್ರಾಣಮಯಶ್ಚಕ್ಷುರ್ಮಯಃ ಶ್ರೋತ್ರಮಯಃ ಪೃಥಿವೀಮಯಃ ....''** ಇತ್ಯಾದಿ ವಿಶೇಷಗಳೇನೂ ನಿದ್ರೆಯಲ್ಲಿರುವುದಿಲ್ಲ (೬೯). ಜಾಗ್ರತ್, ಸ್ವಪ್ನಗಳಲ್ಲಿ ಘಟಪಟಾದಿಗಳನ್ನು ವಿಷಯೀಕರಿಸುವ ಬುದ್ಧಿವೃತ್ತಿಗಳಿರುತ್ತವೆಯಷ್ಟೆ ಅವೆಲ್ಲವೂ ಸುಷುಪ್ತಿ ಕಾಲದಲ್ಲಿ ಘಟಪಟಾದಿವಿಷಯಗಳಿಲ್ಲದ್ದರಿಂದ ಚಿದ್ರೂಪದಲ್ಲಿ ಒಂದಾಗಿ ಬಿಡುತ್ತವೆ. ಹಿಮಬಿಂದುಗಳು ಭಾರತದ ಉತ್ತರದಿಕ್ಕಿನಲ್ಲಿ ಒಂದಾಗಿ ಹಿಮದ ಗಡ್ಡೆಯಾಗುವ ಹಾಗೆ. ಈ ಬಗೆಯಲ್ಲಿ ಘನಸ್ವರೂಪವನ್ನು ತಳೆದ ಬುದ್ಧಿವೃತ್ತಿಗಳೇ ಪ್ರಜ್ಞಾನಘನ ಎನಿಸುತ್ತವೆ (೭೦). ಹೀಗೆ ಸುಷುಪ್ತಿಯಲ್ಲಿ ಪ್ರಜ್ಞಾನಘನನಾದ ಜ್ಞಾನಸ್ವರೂಪನಾದ ಪ್ರತ್ಯಗಾತ್ಮನು ಕೇವಲ ಸಾಕ್ಷಿಭಾವದಲ್ಲಿರುತ್ತಾನೆ. ತಾರ್ಕಿಕರೂ ಲೌಕಿಕರಾದ ಸಾಮಾನ್ಯಜನರೂ ಈ ಸ್ಥಿತಿಯನ್ನು ದುಃಖಾಭಾವ ಎನ್ನುತ್ತಾರೆ. ಸುಷುಪ್ತಿಯಲ್ಲಿ ದುಃಖಾಭಾವ ಮಾತ್ರ ಇರುತ್ತದೆ ಎಂದು ಅವರ ಅಭಿಪ್ರಾಯ. ದುಃಖಾಭಾವ ಮಾತ್ರವಲ್ಲ, ಸ್ವಪ್ರಕಾಶವಾದ ಸುಖಾನುಭವ ಎಂದು ವೇದಾಂತಿಗಳ ಸಿದ್ಧಾಂತವಿದೆ (೭೧). ಪೂರ್ವೋಕ್ತಶ್ರುತಿವಾಕ್ಯದಲ್ಲಿರುವ **'ಚೇತೋಮುಖ'** ಎಂಬ ಶಬ್ದಕ್ಕೆ ಅಜ್ಞಾನ ಪ್ರತಿಬಿಂಬಿತವಾದ **ಚಿತ್** -

ಎಂದರ್ಥ. ಆನಂದದ ಭೋಗಕ್ಕೆ ಅದು ಮುಖವಾಗಿ (ಸಾಧನವಾಗಿ) ರುತ್ತದೆ. ಸುಷುಪ್ತಿಕಾಲದ ಬ್ರಹ್ಮಾನಂದವನ್ನು ಅಜ್ಞಾನವೃತ್ತಿಯಲ್ಲಿ ಪ್ರತಿಬಿಂಬಿತವಾದ ಚೈತನ್ಯವು ಅನುಭವಿಸುತ್ತದೆ. ಅದು ಪುಣ್ಯಾಪುಣ್ಯಕರ್ಮಪಾಶದಿಂದ ಬದ್ಧವಾದ್ದರಿಂದ ಅದರ ಫಲವನ್ನನುಭವಿಸುವುದಕ್ಕಾಗಿ ಸುಷುಪ್ತಿಯಿಂದ ಮತ್ತೆ ಸ್ವಪ್ನಜಾಗ್ರದವಸ್ಥೆಗಳ ಕಡೆಗೆ ಬರುತ್ತದೆ (೭೨) * "**ಪುನಶ್ಚ ಜನ್ಮಾಂತರಕರ್ಮಯೋಗಾತ್ ಸ ಏವ ಜೀವಃ ಸ್ವಪಿತಿ ಪ್ರಬುದ್ಧಃ**" ಎಂದು ಕೈವಲ್ಯೋಪನಿಷತ್ತು (೧೨) ಹೇಳುತ್ತದೆ. ಜನ್ಮಾಂತರದಲ್ಲಿ ಜೀವನು ಯಾವ ಕರ್ಮವನ್ನು ಮಾಡಿರುತ್ತಾನೋ ಅದರ ಫಲವನ್ನನುಭವಿಸುವುದಕ್ಕಾಗಿ ಜಾಗೃತನಾಗಿದ್ದ ಜೀವನು, ಅದನ್ನನುಭವಿಸಿದೊಡನೆ ವಿಶ್ರಾಂತಿಗಾಗಿ ಮತ್ತೆ ನಿದ್ರೆಮಾಡುತ್ತಾನೆ - ಎಂದು ಆ ಶ್ರುತಿವಾಕ್ಯದ ಅಭಿಪ್ರಾಯ (೭೩). ಗಾಢನಿದ್ರೆಯಿಂದ ಎಚ್ಚರವಾದ ಮೇಲೆ ಮನುಷ್ಯನು ಸ್ವಲ್ಪಹೊತ್ತು ಏನನ್ನೂ ಚಿಂತಿಸದೆ ಶಾಂತನಾಗಿ ಕುಳಿತಿರುತ್ತಾನೆ. ಏಕೆಂದರೆ, ಅವನು ನಿದ್ರೆಯಲ್ಲಿ ಅನುಭವಿಸಿದ ಬ್ರಹ್ಮಾನಂದದ ಸಂಸ್ಕಾರವು ಸ್ವಲ್ಪಕಾಲ ಮುಂದುವರಿಯುತ್ತದೆ. ಅನಂತರ ಪ್ರಾರಬ್ಧಕರ್ಮಗಳಿಂದ ಪ್ರೇರಿತರಾಗಿ ನಾನಾವಿಧವಾದ ಕಷ್ಟಗಳನ್ನು ಚಿಂತಿಸುತ್ತ ಸರ್ವರೂ ನಿದ್ರೆಯ ಸುಖವನ್ನು ಮರೆತುಬಿಡುತ್ತಾರೆ ! (೭೪-೭೫). ಈ ರೀತಿಯಲ್ಲಿ ಪ್ರತಿದಿನವೂ ಜನರಿಗೆ ನಿದ್ರೆಗೆ ಮೊದಲು ಮತ್ತು ಅನಂತರ ಈ ಆನಂದದಲ್ಲಿ ಆಸಕ್ತಿಯಿರುವುದು ಸ್ಪಷ್ಟವಾಗಿ ಗೋಚರಿಸುತ್ತದೆ. ಆದ್ದರಿಂದಲೇ ನಿದ್ರೆಗೆ ಮೊದಲು ಮೃದುವಾದ ಹಾಸಿಗೆಯನ್ನೇರ್ಪಡಿಸಿಕೊಳ್ಳಲು ತೊಡಗುತ್ತಾರೆ. ನಿದ್ರೆಯಾದ ಮೇಲೆ ಸ್ವಲ್ಪ ಹೊತ್ತು ನಿದ್ರಾಸುಖವನ್ನು ಅನುಭವಿಸುತ್ತ ಅಲಸರಾಗಿ ಕುಳಿತಿರುತ್ತಾರೆ ! ಈ ವಿಷಯದಲ್ಲಿ ಯಾವನು ವಾದಕ್ಕೆ ಬಂದಾನು? (೭೬). ಶಂಕೆ - ಓಹೊ !

---

* ಇದಕ್ಕೊಂದು ದೃಷ್ಟಾಂತವನ್ನು ಕೊಡಬಹುದು. ಒಬ್ಬ ಬಾಲಕನು ಮನೆಯಲ್ಲಿ ತನ್ನ ತಾಯಿಯ ತೊಡೆಯಮೇಲೆ ಸುಖವಾಗಿ ಕುಳಿತಿರುತ್ತಾನೆ. ಹೊರಗಡೆಯ ಬಾಲಕರು ಆಟವಾಡಲು ಕರೆದೊಡನೆ ಎದ್ದು ಹೋಗಿ ಅವರೊಡನೆ ಆಡುತ್ತಾನೆ. ಆಟದಲ್ಲಿ ಆಯಾಸವಾದೊಡನೆ ಹಿಂದಿರುಗಿ ಬಂದು ತಾಯಿಯ ತೊಡೆಯನ್ನೇರುತ್ತಾನೆ. ಹಾಗೆಯೇ ಸುಷುಪ್ತಿಯೆಂಬ ಮನೆಯಲ್ಲಿ ಜೀವನು ಅಜ್ಞಾನ (ಕಾರಣ ಶರೀರ, ಅವಿದ್ಯೆ) ವೆಂಬ ತಾಯಿಯ ವಿಕ್ಷೇಪಶಕ್ತಿಯೆಂಬ ತೊಡೆಯ ಮೇಲೆ ಕುಳಿತಿದ್ದಾನೆ. ಚಿದಾಭಾಸ (ಚೈತನ್ಯ ಪ್ರತಿಬಿಂಬ) ಯುಕ್ತವಾದ ಅಂತಃಕರಣವೇ ಈ ಬಾಲಕ (ಜೀವ). ಪ್ರಾರಬ್ಧಕರ್ಮಗಳೇ ಜೊತೆಗಾರರಾದ ಬಾಲಕರು. ಸ್ವಪ್ನ ಜಾಗ್ರದವಸ್ಥೆಗಳು ಆಟದ ಮೈದಾನ.

ಸುಮ್ಮನೆ ಅಲಸರಾಗಿ ಕುಳಿತಾಗ ಬ್ರಹ್ಮಾನಂದವೇ ಅನುಭವಕ್ಕೆ ಬರುವುದಾದರೆ, ಸೋಮಾರಿಗಳಾದ ಲೌಕಿಕರೆಲ್ಲರೂ ಕೃತಾರ್ಥರಾಗಿಬಿಡುತ್ತಾರೆ! ಇನ್ನು ಶಾಸ್ತ್ರವೇಕೆ? ಉಪದೇಶಮಾಡುವ ಗುರುವೇಕೆ? (೭೭). ಉತ್ತರ - ಹೌದು, ನಿಜವೇ. 'ಅಹಂ ಬ್ರಹ್ಮಾಸ್ಮಿ' ಎಂದು ಅವರಿಗೆ ನಿಶ್ಚಯವಾಗಿದ್ದರೆ, ಅಷ್ಟರಿಂದಲೇ ಅವರು ಕೃತಾರ್ಥರಾದರೆಂದೇ ತಿಳಿಯಬಹುದು. ಆದರೆ ಅತ್ಯಂತ ದುರವಗಾಹವೂ ಅವಾಙ್ಮನಸಗೋಚರವೂ ಸರ್ವಜ್ಞವೂ ಸರ್ವಾಂತರವೂ ಅತಿಗಂಭೀರವೂ ಆದ ಪರಬ್ರಹ್ಮವನ್ನು ಗುರುವೂ ಇಲ್ಲದೆ ಶಾಸ್ತ್ರವೂ ಇಲ್ಲದೆ, ತಾನಾಗಿ ಯಾವನು ತಿಳಿದಾನು? (೭೮).

ಪೂರ್ವಪಕ್ಷಿ- ನಾನು ತಿಳಿದಿದ್ದೇನೆ. ಈಗ ನಿನ್ನ ಮಾತಿನಿಂದಲೇ ಬ್ರಹ್ಮವು ಸರ್ವಜ್ಞವೆಂದೂ ಸರ್ವಾಂತರವೆಂದೂ ಅತ್ಯಂತ ಗಂಭೀರವಾದದ್ದೆಂದೂ ಗೊತ್ತಾಯಿತು! ನಾನೀಗ ಕೃತಾರ್ಥನಾದೆನಲ್ಲವೆ?

ಸಿದ್ಧಾಂತಿ - ಆಹಾ! ನಿನ್ನ ಹಾಗೆಯೇ ಬುದ್ಧಿಶಾಲಿಯೆಂದು ತಿಳಿದುಕೊಂಡಿದ್ದ ಇನ್ನೊಬ್ಬನ ಸಂಗತಿಯನ್ನು ಕೇಳು! ಒಬ್ಬ ಶ್ರೀಮಂತನು ''ಈ ದೊಡ್ಡ ಮೊತ್ತದ ಹಣವನ್ನು ಚತುರ್ವೇದವಿದನಾದ ವಿದ್ವಾಂಸನಿಗೆ ಕೊಡಬೇಕಾಗಿದೆ' ಎಂದನಂತೆ. ಆ ಮಾತನ್ನು ಕೇಳಿದವನು ''ನಾಲ್ಕು ವೇದಗಳಿವೆ ಎಂಬುದನ್ನು ನಾನು ಬಲ್ಲೆ. ನನಗೆ ಕೊಡು!'' ಎಂದು ಹೇಳಿದ! (೭೯-೮೦). ಅವನಿಗೆ ಗೊತ್ತಿರುವುದು 'ವೇದಗಳು ನಾಲ್ಕು' ಎಂಬ ಸಂಖ್ಯೆ ಮಾತ್ರ. ಪೂರ್ತಿಯಾಗಿ ವೇದಗಳನ್ನು ಕಲಿತಿಲ್ಲ. ಅರ್ಥವಂತೂ ಏನೂ ತಿಳಿಯದು! ಹಾಗೆ ನೀನು 'ಬ್ರಹ್ಮವು ಅತಿ ಗಂಭೀರ' ಎಂದು ಹೇಳುವಷ್ಟನ್ನು ಮಾತ್ರ ಬಲ್ಲೆ. ಸಂಪೂರ್ಣವಾಗಿ ಅದರ ಸ್ವರೂಪವನ್ನು ಬಲ್ಲೆಯಾ?(೮೧).

ಪೂರ್ವಪಕ್ಷಿ - ನಾಲ್ಕು ವೇದಗಳನ್ನು ತಿಳಿಯುವುದಕ್ಕೂ ಸಂಪೂರ್ಣವಾಗಿ ಬ್ರಹ್ಮವನ್ನು ತಿಳಿಯುವುದಕ್ಕೂ ವ್ಯತ್ಯಾಸವಿದೆ. 'ನಾಲ್ಕು' ಎಂಬ ಸಂಖ್ಯೆಗಿಂತ ಅತಿರಿಕ್ತವಾಗಿ ವಿಪುಲವಾದ ವೇದಪಂಕ್ತಿಗಳಿವೆ. ಅವುಗಳಿಗೆ ಅರ್ಥಗಳೂ ಇವೆ. ಆದ್ದರಿಂದ ಆತನು ಚತುರ್ವೇದವಿದನಲ್ಲ- ಎನ್ನಬಹುದು. ಬ್ರಹ್ಮದ ವಿಷಯ ಹಾಗಲ್ಲ. ಬ್ರಹ್ಮವು ಒಂದು 'ಅಖಂಡವಾದ ವಸ್ತು. ಆನಂದ ಸ್ವರೂಪವಾದದ್ದು. ಅದು ಮಾಯೆಯಿಂದಲೂ ಮಾಯಾಕಾರ್ಯವಾದ ವಸ್ತುವಿನಿಂದಲೂ ದೂರವಾದದ್ದು ಎಂದು ತಿಳಿದಾಗ 'ಅಸಂಪೂರ್ಣ -ಸಂಪೂರ್ಣ'ಎಂಬ ಭೇದವೆಲ್ಲಿದೆ? ಬ್ರಹ್ಮವನ್ನು ಸಂಪೂರ್ಣವಾಗಿ ತಿಳಿದಂತೆಯೇ ಆಯಿತು! (೮೨)

ಸಿದ್ಧಾಂತಿ - ಅಖಂಡ, ಏಕರಸ, ಸಚ್ಚಿದಾನಂದ - ಇತ್ಯಾದಿ ಶಬ್ದಗಳನ್ನು ಮಾತ್ರ ಹೇಳಬಲ್ಲೆಯೊ? ಅಥವಾ ಅವುಗಳ ಅರ್ಥವನ್ನೂ ಬಲ್ಲೆಯೊ? ಬರಿಯ ಶಬ್ದಗಳನ್ನು ಹೇಳಬಲ್ಲೆಯಾದರೆ ಅರ್ಥವನ್ನು ತಿಳಿಯಬೇಕಾದ್ದರಿಂದ ನೀನು ಬ್ರಹ್ಮವನ್ನು ತಿಳಿದಿದ್ದು ಅಪೂರ್ಣವಾಯಿತು. ಸಂಪೂರ್ಣವಾಗಲಿಲ್ಲ. ಅರ್ಥವನ್ನು ವ್ಯಾಕರಣಾದಿಶಾಸ್ತ್ರಗಳಿಂದ ತಿಳಿಯಬೇಕು. ಆಗಲೂ ಬ್ರಹ್ಮದ ಪರೋಕ್ಷ ಜ್ಞಾನವಾಗುತ್ತದೆಯೇ ಹೊರತು ಅಪರೋಕ್ಷವಾದ ಸಾಕ್ಷಾತ್ಕಾರ ವಾಗುವುದಿಲ್ಲ. ಆದ್ದರಿಂದ ಶಾಸ್ತ್ರಾಭ್ಯಾಸಮಾಡಿದ ಮೇಲೂ ಬ್ರಹ್ಮದ ಅಪರೋಕ್ಷಸಾಕ್ಷಾತ್ಕಾರವಾಗಿ 'ನಾನು ಕೃತಾರ್ಥನಾದೆನು' ಎಂಬ ಬುದ್ಧಿ ಬರುವವರೆಗೂ ಗುರುವನ್ನು ಉಪಾಸನೆ ಮಾಡಬೇಕಯ್ಯಾ! (೮೩-೮೪). ಅದಿರಲಿ; ಶಬ್ದಸ್ಪರ್ಶಾದಿ ವಿಷಯಗಳೇನೂ ಗೋಚರಿಸದಿದ್ದರೂ 'ಸುಖವಾಗಿದ್ದೇನೆ' ಎಂಬ ಭಾವನೆ ಯಾರಿಗಾದರೂ ಬಂದರೆ, ಅದು ಸುಷುಪ್ತಿಯಲ್ಲನುಭವಿಸಿದ ಬ್ರಹ್ಮಾನಂದದ ವಾಸನೆಯಿಂದ ಬಂದದ್ದೆಂದು ತಿಳಿ. ಸಂಸ್ಕಾರವೇ ವಾಸನೆ. ಅದನ್ನು **'ವಾಸನಾನಂದ'** ಎನ್ನಬಹುದು (೮೫). ಆದರೆ ಭೋಜ್ಯಪದಾರ್ಥಗಳೇ ಮೊದಲಾದ ವಿಷಯಗಳು ದೊರಕಿದಾಗ ಅವುಗಳನ್ನು ಭೋಗಿಸಿದ ಮೇಲೆ ವಿಷಯೇಚ್ಛೆಯು ಶಾಂತವಾಗುತ್ತದೆ. ಆಗ ಮನಸ್ಸು ಅಂತರ್ಮುಖವಾದಾಗ ಅದರಲ್ಲಿ ಆನಂದವು ಸ್ಫುರಿಸುವುದುಂಟು. ಅದು ವಿಷಯಾನಂದವೇ ಸರಿ (೮೫-೮೬). ಏವಂಚ ಸುಷುಪ್ತಿಯಲ್ಲಿ ತೋರುವುದು ಸ್ವಪ್ರಕಾಶರೂಪವಾದ ಬ್ರಹ್ಮಾನಂದ. ಯಾವ ವಿಷಯಚಿಂತೆಯೂ ಇಲ್ಲದೆ ಸುಮ್ಮನೆ ಇದ್ದಾಗ ಪ್ರತೀತವಾಗುವ ವಾಸನಾನಂದ, ವಿಷಯ ಭೋಗದ ಸಮಯದಲ್ಲಿ ಅಂತರ್ಮುಖವಾದ ಮನಸ್ಸಿನಲ್ಲಿ ಪ್ರತಿಬಿಂಬಿತವಾಗುವ ವಿಷಯಾನಂದ - ಹೀಗೆ ಮೂರೇ ಆನಂದಗಳಿರುವುವು. ಈ ಜಗತ್ತಿನಲ್ಲಿ ಈ ಮೂರನ್ನು ಬಿಟ್ಟು ಇನ್ನಾವ ಆನಂದವೂ ಇಲ್ಲ.

ಈ ಪ್ರಕರಣದ ೧೧ನೆಯ ಶ್ಲೋಕದಲ್ಲಿ ಬ್ರಹ್ಮಾನಂದ, ವಿದ್ಯಾನಂದ, ವಿಷಯಾನಂದ - ಎಂದು ಮೂರು ಆನಂದಪ್ರಕಾರಗಳನ್ನು ಹೇಳಲಾಗಿದೆ. ಈಗ ಬ್ರಹ್ಮಾನಂದ, ವಾಸನಾನಂದ, ವಿಷಯಾನಂದವೆಂದು - ಮೂರು ಪ್ರಕಾರಗಳನ್ನು ಹೇಳಲಾಗಿದೆ. ಇದು ಪೂರ್ವಾಪರ ವಿರುದ್ಧವಲ್ಲವೆ? ಮತ್ತು ಈ ಪಂಚದಶೀ ಗ್ರಂಥದ ಬೇರೆ ಬೇರೆ ಸ್ಥಳಗಳಲ್ಲಿ ನಿಜಾನಂದ, ಮುಖ್ಯಾನಂದ, ಆತ್ಮಾನಂದ, ಯೋಗಾನಂದ, ಅದ್ವೈತಾನಂದ - ಎಂಬ ಆನಂದಭೇದಗಳನ್ನೂ ಹೇಳಿದ್ದೀರಿ. ಇವುಗಳಿಗೆ ಸಾಮಂಜಸ್ಯ ಹೇಗೆ ಎಂಬ ಶಂಕೆ ಬರುತ್ತದೆ. ಸಮಾಧಾನವೇನೆಂದರೆ, ಇವೆಲ್ಲವೂ ವಿವರಣೆಗಾಗಿ ಮಾಡಿದ ಅಂತರ್ಭೇದಗಳು. ವಿದ್ಯಾನಂದವು

ವಿಷಯಾನಂದದಲ್ಲಿ ಸೇರುತ್ತದೆ. ಶಾಸ್ತ್ರವಿದ್ಯೆಯು ಮನೋಗೋಚರವಾದ್ದರಿಂದ ವಿಷಯವೇ ಸರಿ. ಉಳಿದ ನಿಜಾನಂದ ಮೊದಲಾದವು ಬ್ರಹ್ಮಾನಂದದ ಪ್ರಪಂಚ. ಬ್ರಹ್ಮಾನಂದವು ಒಂದೇ ಆದರೂ ಸಾಧನವನ್ನೂ ಹೋಲಿಕೆಯನ್ನೂ ಆಧರಿಸಿ ಪ್ರಕರಣಕ್ಕೆ ಅನುಗುಣವಾಗಿ ಬೇರೆ ಬೇರೆ ಹೆಸರಿನಿಂದ ವ್ಯವಹರಿಸಲಾಗಿದೆ. ಆದ್ದರಿಂದ ವಿರೋಧವೇನೂ ಇಲ್ಲ. ಬ್ರಹ್ಮಾನಂದ, ವಾಸನಾನಂದ, ವಿಷಯಾನಂದ ಎಂದು ಮೂರು ಬಗೆಯ ಆನಂದಗಳು ಮಾತ್ರ ಇರುತ್ತವೆ (೮೭). ಈಗ ಏನಾಯಿತೆಂದರೆ, ಇರುವ ಮೂರು ಬಗೆಯ ಆನಂದಗಳಲ್ಲಿ ಪ್ರಧಾನವಾದದ್ದು ಸ್ವಪ್ರಕಾಶವಾದ ಬ್ರಹ್ಮಾನಂದ. ವಾಸನಾನಂದ, ವಿಷಯಾನಂದಗಳಿಗೆ ಜನಕವಾದದ್ದು ಬ್ರಹ್ಮಾನಂದವೇ. ಸಮಸ್ತ ಆನಂದಭೇದಗಳಿಗೂ ಮೂಲಕಾರಣವಾದದ್ದು ಬ್ರಹ್ಮಾನಂದ. ಸಕಲ ಪ್ರಾಣಿಗಳ ಆನಂದಕ್ಕೆ ಅದೇ ಮೂಲಕಾರಣ (೮೮). ಸುಷುಪ್ತಿಕಾಲದಲ್ಲಿ ಸ್ವಪ್ರಕಾಶವೂ ಚಿದಾತ್ಮಕವೂ ಆದ ಬ್ರಹ್ಮಾನಂದವಿರುತ್ತದೆಯೆಂದು ಶ್ರುತಿ, ಯುಕ್ತಿ, ಅನುಭವಗಳಿಂದ ಸಾಧಿಸಿದ್ದಾಯಿತು. ಶ್ರುತಿ - **'ಸುಷುಪ್ತಿಕಾಲೇ ಸಕಲೇ ವಿಲೀನೇ ತಮೋಽಭಿಭೂತಃ ಸುಖರೂಪಮೇತಿ'** (ಕೈ.ಉ.೧೩)ಇತ್ಯಾದಿ ಪೂರ್ವೋಕ್ತ ಶ್ರುತಿಗಳು. ಯುಕ್ತಿ - ಸುಷುಪ್ತಿಯಲ್ಲಿ ಆನಂದಾನುಭವ ವಿರುವುದರಿಂದಲೇ ಎಚ್ಚರವಾದ ಮೇಲೆ **'ಸುಖಮಹಮಸ್ವಾಪ್ಸಮ್'** ಎಂಬ ಸ್ಮರಣೆ ಬರುತ್ತದೆ. ಹಾಗಿಲ್ಲದಿದ್ದರೆ ಈ ರೀತಿಯಾದ ಸ್ಮರಣೆ ಬರುತ್ತಿರಲಿಲ್ಲ- ಎಂಬ ಅರ್ಥಾಪತ್ತಿ ರೂಪವಾದ ಯುಕ್ತಿ. ಅನುಭವ - ಈ ಆನಂದವು ಎಲ್ಲರ ಅನುಭವಕ್ಕೂ ಬಂದಿರುತ್ತದೆ (೮೯). ಇನ್ನು ಜಾಗರಣ ಕಾಲದಲ್ಲಿ ಬ್ರಹ್ಮಾನಂದವನ್ನು ಪಡೆಯುವ ಮಾರ್ಗವನ್ನು ಹೇಳುತ್ತೇವೆ, ಕೇಳು. ಅರವತ್ತನಾಲ್ಕನೆಯ ಶ್ಲೋಕದಲ್ಲಿ ಹೇಳಿದಂತೆ, ಸುಷುಪ್ತಿಯಲ್ಲಿ ವಿಲೀನಾವಸ್ಥೆಯಲ್ಲಿದ್ದ ಆನಂದಮಯನು ವಿಜ್ಞಾನವೆಂಬ ಬುದ್ಧಿಯನ್ನು ಉಪಾಧಿ ಯನ್ನಾಗಿ ಪಡೆದು ವಿಜ್ಞಾನಮಯನೆನಿಸಿ ಸ್ವಪ್ನಾವಸ್ಥೆಯನ್ನೋ ಜಾಗರಣಾವಸ್ಥೆಯನ್ನೋ ಪಡೆಯುತ್ತಾನೆ. ಮುಂದೆ ಹೇಳಲ್ಪಡುವ ಸ್ಥಾನಭೇದದಿಂದ ಈ ಎರಡು ಅವಸ್ಥೆಗಳನ್ನು ಪಡೆಯುತ್ತಾನೆ. ವಿಜ್ಞಾನಮಯನೇ ಆನಂದಮಯನಾಗಿರುತ್ತಾನೆ. ಮತ್ತೆ ಆತನೇ ವಿಜ್ಞಾನಮಯನೂ ಆಗುವನು. ಹೀಗೆ ಆತ್ಮನ ಎರಡು ಅವಸ್ಥೆಗಳು ಮುಖ್ಯವಾದವು. ಒಟ್ಟು ಅವಸ್ಥೆಗಳು ಮೂರಿದ್ದರೂ ಸ್ವಪ್ನ, ಜಾಗರಣಗಳೆರಡರಲ್ಲಿಯೂ ಅವನು ವಿಜ್ಞಾನಮಯನೇ (೯೦). ಮೂರು ಅವಸ್ಥೆಗಳ ಸ್ಥಾನಗಳು ಯಾವುವೆಂದರೆ, ನೇತ್ರಗಳಲ್ಲಿ

ಜಾಗರಣ, ಕಂಠದಲ್ಲಿ ಸ್ವಪ್ನ, ಹೃದಯ ಕಮಲದಲ್ಲಿ ಸುಷುಪ್ತಿ. ನೇತ್ರಗಳು ಸಮಸ್ತದೇಹಕ್ಕೂ ಉಪಲಕ್ಷಣ. ಜೀವನು ಜಾಗ್ರದವಸ್ಥೆಯಲ್ಲಿ ಸಮಸ್ತದೇಹವನ್ನು-ಕಾಲಿನಿಂದ ತಲೆಯವರೆಗೆ ವ್ಯಾಪಿಸಿಕೊಂಡು ಜಾಗೃತನಾಗಿರುತ್ತಾನೆ(೯೧). ಕಾದ ಕಬ್ಬಿಣದ ಗೋಳಕದಲ್ಲಿ ಎಲ್ಲೆಡೆಯೂ ಬೆಂಕಿ ವ್ಯಾಪಿಸಿರುವಂತೆ ಜೀವನು ದೇಹದೊಡನೆ ತಾದಾತ್ಮ್ಯವನ್ನು ಹೊಂದುವುದರಿಂದ 'ನಾನು ಮನುಷ್ಯ' ಇತ್ಯಾದಿಯಾಗಿ ನಿಶ್ಚಯಿಸಿಕೊಂಡಿರುತ್ತಾನೆ. ಆಗ ನಾನು ಉದಾಸೀನ, ನಾನು ದುಃಖಿ, ನಾನು ಸುಖಿ - ಎಂಬ ಮೂರು ಸ್ಥಿತಿಗಳನ್ನು ಅವನು ಪಡೆಯುತ್ತಾನೆ. ಅವುಗಳಲ್ಲಿ ಸುಖಿತ್ವ ದುಃಖಿತ್ವಗಳು ಆತನ ಕರ್ಮಾನುಗುಣವಾಗಿ ಬಂದಿರುತ್ತವೆ. ಉದಾಸೀನತೆಯು ಸ್ವಭಾವಜನ್ಯವಾದದ್ದು (೯೨-೯೩). ಈ ಸುಖ ದುಃಖಗಳೆರಡೂ ಬಾಹ್ಯಭೋಗಗಳಿಂದಲೂ ಬರುತ್ತವೆ. ಮಾನಸಿಕ ಕಲ್ಪನೆಗಳಿಂದಲೂ ಬರುತ್ತವೆ. ಹೀಗೆ ಸುಖದುಃಖಗಳು ಎರಡು ವಿಧವಾಗುತ್ತವೆ. ಈ ಲೌಕಿಕ ಸುಖದುಃಖಗಳೆರಡೂ ಇಲ್ಲದ ಮಧ್ಯಮಸ್ಥಿತಿಯಲ್ಲಿರುವುದೇ ಉದಾಸೀನತೆ (೯೪). ಉದಾಸೀನಸ್ಥಿತಿಯಲ್ಲಿ ಮನುಷ್ಯನು ''ನನಗೆ ಯಾವ ಚಿಂತೆಯೂ ಇಲ್ಲ, ಸುಖವಾಗಿದ್ದೇನೆ'' ಎಂದು ಹೇಳುತ್ತಾನೆ. ಈ ಅವಸ್ಥೆಯಲ್ಲಿ ಸರ್ವರು ಸ್ವರೂಪಸುಖದ ಛಾಯೆಯಾದ ನಿಜಾನಂದವನ್ನು ಹೇಳುತ್ತಾರೆಂದು ತಿಳಿಯಬೇಕು. ಲೌಕಿಕ ಸುಖದುಃಖಗಳಿಲ್ಲದ್ದರಿಂದ ಮಾತ್ರ ಇದು ಉದಾಸೀನಸ್ಥಿತಿ ಎಂದು ತಿಳಿಯಬೇಕು (೯೫). ಈ ನಿಜಾನಂದವು 'ನಾನಿದ್ದೇನೆ, ನಾನು' ಎಂಬ ಅಹಂಕಾರ ಸಾಮಾನ್ಯದಿಂದ ಆವೃತವಾಗಿರುತ್ತದೆ. ಆದ್ದರಿಂದ ಅದು ಮುಖ್ಯವಾದ ಬ್ರಹ್ಮಾನಂದವಲ್ಲ. ಸಂಸ್ಕಾರದಿಂದ ವಾಸಿತವಾದ್ದರಿಂದ ವಾಸನಾನಂದವೆನ್ನಬಹುದು. ಇದಕ್ಕೊಂದು ದೃಷ್ಟಾಂತವನ್ನು ಕೊಡಬಹುದು. ಒಂದು ಗಡಿಗೆಯಲ್ಲಿ ತಣ್ಣೀರನ್ನು ತುಂಬಿದ್ದರೆ, ಹೊರಗಡೆ ಮುಟ್ಟಿದಾಗ ಆ ಗಡಿಗೆ ತಣ್ಣಗಿರುತ್ತದೆ. ಆದರೆ ಅದು ನೀರಲ್ಲ, ನೀರಿನ ಗುಣವಾದ ತಂಪು ಅದು. ಅದರಿಂದ ಗಡಿಗೆಯೊಳಗೆ ನೀರು ಇದೆಯೆಂದು ಊಹಿಸಬಹುದು (೯೬-೯೭). ಹಾಗೆಯೇ ವಾಸನಾನಂದದಿಂದ ಅದಕ್ಕೆ ಮೂಲವಾದ ಮುಖ್ಯಾನಂದವನ್ನು-ನಿಜಾನಂದವನ್ನು ಊಹಿಸಬಹುದು. ಅಭ್ಯಾಸಯೋಗದಿಂದ 'ನಾನು-ನಾನು' ಎಂದುಕೊಳ್ಳುವ ಅಹಂಕಾರವೃತ್ತಿಯು ವಿಲಯವಾದಂತೆ ಚಿತ್ತದ ಸೂಕ್ಷ್ಮತೆ ಅಧಿಕವಾಗುತ್ತದೆ. ಚಿತ್ತದ ಸೂಕ್ಷ್ಮತೆ ಅಧಿಕವಾದಂತೆ ನಿಜಾನಂದವೂ ಅಧಿಕವಾಗಿ ಅಭಿವ್ಯಕ್ತವಾಗುತ್ತ ಹೋಗುವುದು - ಎಂದು ಅನುಮಾನದಿಂದ ನಿಶ್ಚಯಿಸಬಹುದು. ಅಹಂಕಾರವು ಕಡಿಮೆಯಾದಂತೆ ಆಚ್ಛಾದನೆಯೂ

ಕಡಿಮೆಯಾಗುವುದು. ಆಗ ಆನಂದವು ಹೆಚ್ಚಬೇಕಾದರೆ ಅದು ಆಚ್ಛಾದಿತವಾದ ನಿಜಾನಂದವೇ ಆಗಿರಬೇಕು - ಎಂದು ಅನುಮಾನಿಸಬಹುದು (೯೮). ಹೀಗೆ ಬುದ್ಧಿಯು ಸೂಕ್ಷ್ಮವಾಗುತ್ತ ಹೋಗಬೇಕೆಂದರೆ, ಎಲ್ಲಿಯವರೆಗೆ? ಅದಕ್ಕೆ ಅವಧಿ ಯಾವುದು? ಎಂದರೆ ಆತ್ಮಸಾಕ್ಷಾತ್ಕಾರವೇ ಅವಧಿ ಎಂದು ಉತ್ತರ. ಈ ಅಹಂಕಾರ ವೃತ್ತಿಯು ಸರ್ವಾತ್ಮನಾ ವಿಸ್ಮೃತವಾಗಿ ಪರಮಸೂಕ್ಷ್ಮತೆಯನ್ನು ಪಡೆಯಬೇಕು. ಆ ಸ್ಥಿತಿಯು ನಿದ್ರೆಯೇ (ಸುಷುಪ್ತಿಯೇ) ಆಗಿಬಿಡುತ್ತದೆಯಲ್ಲವೆ? ಎಂದರೆ ಅಲ್ಲ. ಆ ಸ್ಥಿತಿಯು ನಿದ್ರೆಯಲ್ಲ. ಏಕೆಂದರೆ ಅಂತಃಕರಣ ಸ್ವರೂಪವು ಆಗ ಅತಿಸೂಕ್ಷ್ಮವಾಗಿರುತ್ತದೆಯೇ ಹೊರತು ಅದು ವಿಲಯವಾಗಿರುವುದಿಲ್ಲ. **"ಬುದ್ಧೇಃ ಕಾರಣಾತ್ಮನಾ ಅವಸ್ಥಾನಂ ಸುಷುಪ್ತಿಃ"** ಎಂದು ಆಚಾರ್ಯರು ಹೇಳಿದ್ದಾರೆ. ಬುದ್ಧಿಯು (ಅಂತಃಕರಣವು) ಕಾರಣಸ್ವರೂಪವಾಗಿ (ಅವಿದ್ಯಾಸ್ವರೂಪವಾಗಿ) ಉಳಿಯುವುದು ಸುಷುಪ್ತಿ (ನಿದ್ರೆ) ಎಂದು ಆಚಾರ್ಯರ ಉಕ್ತಿ ಇದೆ. ಈ ಸಮಾಧಿ ಸ್ಥಿತಿಯಲ್ಲಿ ಅಂತಃಕರಣವು ಪರಮಸೂಕ್ಷ್ಮವಾಗಿರುತ್ತದೆಯೇ ಹೊರತು ಕಾರಣಸ್ವರೂಪವಾದ ಅವಿದ್ಯೆಯಲ್ಲಿ ಲಯವಾಗಿರುವುದಿಲ್ಲ. ಆದ್ದರಿಂದಲೇ ಸಮಾಧಿಯಲ್ಲಿರುವ ಯೋಗಿಯ ದೇಹವು ಬೀಳುವುದಿಲ್ಲ. ಸುಷುಪ್ತಿಯಲ್ಲಿ ದೇಹವು ನೆಟ್ಟಗೆ ನಿಲ್ಲಲಾರದೆ ಒಲೆದು ಬೀಳುತ್ತದೆ. ಆದ್ದರಿಂದ ಇದು ನಿದ್ರೆಯಲ್ಲ(೯೯). ಯಾವ ಸ್ಥಿತಿಯಲ್ಲಿ ದ್ವೈತದ ಪ್ರತೀತಿಯೇ ಇರುವುದಿಲ್ಲವೋ ನಿದ್ರೆಯೂ ಬಂದಿರುವುದಿಲ್ಲವೋ, ಆಗ ಉಪಲಬ್ಧವಾಗುವ ಆನಂದವು ಬ್ರಹ್ಮಾನಂದವೆಂದು ತಿಳಿಯಬೇಕು. ಇದನ್ನು ಭಗವಂತನು ಗೀತೆಯಲ್ಲಿ ಅರ್ಜುನನಿಗೆ ಹೇಳಿದ್ದಾನೆ (೧೦೦). ಏನೆಂದರೆ,

**ಶನೈಃ ಶನೈರುಪರಮೇತ್ ಬುದ್ಧ್ಯಾ ಧೃತಿಗೃಹೀತಯಾ।**
**ಆತ್ಮಸಂಸ್ಥಂ ಮನಃ ಕೃತ್ವಾ ನ ಕಿಂಚಿದಪಿ ಚಿಂತಯೇತ್ ॥**

(ಭ.ಗೀ. ೬ -೨೫)

ಧೈರ್ಯಯುಕ್ತವಾದ ಬುದ್ಧಿಯಿಂದ ಮನಸ್ಸನ್ನು ಮೆಲ್ಲಮೆಲ್ಲಗೆ ಶಾಂತಗೊಳಿಸಬೇಕು. ಒಂದೇ ಸಲಕ್ಕೆ ಹಿಡಿದು ನಿಲ್ಲಿಸಲು ಯತ್ನಿಸಬಾರದು. ಹೀಗೆ ವಶಪಡಿಸಿಕೊಂಡ ಮನಸ್ಸನ್ನು ಆತ್ಮನಲ್ಲಿಯೇ ನೆಲೆಸುವಂತೆ ಮಾಡಿ ಶಾಂತನಾಗಬೇಕು. ಆಮೇಲೆ ಯಾವುದನ್ನೂ ಚಿಂತಿಸಲೇಬಾರದು (೧೦೧).

**ಯತೋ ಯತೋ ನಿಶ್ಚರತಿ ಮನಶ್ಚಂಚಲಮಸ್ಥಿರಮ್ ।**
**ತತೋ ತತೋ ನಿಯಮ್ಯೈತದಾತ್ಮನ್ಯೇವ ವಶಂ ನಯೇತ್ ॥**

(ಭ.ಗೀ. ೬ -೨೬)

ಈ ಮನಸ್ಸು ಚಂಚಲಸ್ವಭಾವವುಳ್ಳದ್ದು. ಒಂದು ಕಡೆ ನಿಲ್ಲತಕ್ಕದ್ದಲ್ಲ. ಇದು ಆತ್ಮಚಿಂತನೆಯನ್ನು ಬಿಟ್ಟು ಯಾವ ಯಾವ ವಿಷಯದಿಂದ ಹೊರಗೆ ಧಾವಿಸುತ್ತದೆಯೋ ಆಯಾ ವಿಷಯದಿಂದ ಜಗ್ಗಿ ಎಳೆದು ಆತ್ಮನಲ್ಲಿಯೇ ನಿಲ್ಲುವಂತೆ ವಶಪಡಿಸಿಕೊಳ್ಳಬೇಕು.

ಶಬ್ದಾದಿ ವಿಷಯಗಳು ಮಿಥ್ಯೆಯೆಂದು ತೋರಿಸಿ ಅವುಗಳಲ್ಲಿ ಹುರುಳಿಲ್ಲವೆಂಬ ವೈರಾಗ್ಯದಿಂದ ಮನಸ್ಸನ್ನು ಆತ್ಮನ ಕಡೆಗೆ ಸೆಳೆಯಬೇಕು (೧೦೨).

**ಪ್ರಶಾಂತಮನಸಂ ಹ್ಯೇನಂ ಯೋಗಿನಂ ಸುಖಮುತ್ತಮಮ್ ।**
**ಉಪೈತಿ ಶಾಂತರಜಸಂ ಬ್ರಹ್ಮಭೂತಮಕಲ್ಮಷಮ್ ॥**

(ಭ.ಗೀ. ೬ -೨೭ )

ಮೋಹಾದಿ ಕ್ಲೇಶಗಳೆಂಬ ಕೊಳೆಯಿಲ್ಲದೆ ಶಾಂತಚಿತ್ತನಾದ ಮತ್ತು 'ಬ್ರಹ್ಮೈವೇದಂ ಸರ್ವಂ ' (ಮು.ಉ.೨-೨-೧೧) ಎಂಬ ನಿಶ್ಚಯದಿಂದ ಜೀವನ್ಮುಕ್ತನಾಗಿ ಬ್ರಹ್ಮಸ್ವರೂಪನೇ ಆದ ಯೋಗಿಗೆ ಯಾವ ಅಧರ್ಮದ ಕಲ್ಮಷವೂ ಇರುವುದಿಲ್ಲ. ಆತನಿಗೆ ಶಾಶ್ವತವಾದ ಆನಂದವು ಪ್ರಾಪ್ತವಾಗುತ್ತದೆ (೧೦೩).

**ಯತ್ರೋಪರಮತೇ ಚಿತ್ತಂ ನಿರುದ್ಧಂ ಯೋಗಸೇವಯಾ ।**
**ಯತ್ರ ಚೈವಾತ್ಮನಾತ್ಮಾನಂ ಪಶ್ಯನ್ನಾತ್ಮನಿ ತುಷ್ಯತಿ ॥**

(ಭ.ಗೀ. ೬ -೨೦)

ಯಾವ ಸಮಯದಲ್ಲಿ ಯೋಗಾನುಷ್ಠಾನದಿಂದ ಚಿತ್ತವು ವಿಷಯಗಳ ಕಡೆ ಹೋಗದೇ ಉಪರತಿಯನ್ನೈದುವುದೋ, ಯಾವಾಗ ಸಮಾಧಿ ಪರಿಶುದ್ಧವಾದ ಅಂತಃಕರಣದಿಂದ ಜ್ಯೋತಿಃಸ್ವರೂಪನಾದ ಆತ್ಮನನ್ನು ಸಾಕ್ಷಾತ್ಕರಿಸಿಕೊಂಡು ತನ್ನಲ್ಲಿಯೇ ಆನಂದಿಸುತ್ತಾನೋ ಆ ಸ್ಥಿತಿಗೆ ಯೋಗವೆಂದು ಹೆಸರು (೧೦೪).

**ಸುಖಮಾತ್ಯಂತಿಕಂ ಯತ್ತದ್ಬುದ್ಧಿಗ್ರಾಹ್ಯಮತೀಂದ್ರಿಯಮ್ ।**
**ವೇತ್ತಿ ಯತ್ರ ನಚೈವಾಯಂ ಸ್ಥಿತಶ್ಚಲತಿ ತತ್ತ್ವತಃ ॥**

(ಭ.ಗೀ. ೬ -೨೧)

ಮತ್ತು ಯಾವ ಕಾಲದಲ್ಲಿ ಆತ್ಮಸ್ಥಿತನಾದ ಯೋಗಿಯು ಆತ್ಯಂತಿಕವಾದ ಸುಖವನ್ನು ಅನುಭವಿಸುತ್ತಾನೋ ಆ ಸ್ಥಿತಿಗೆ ಯೋಗವೆಂದು ಹೆಸರು. ಆತ್ಯಂತಿಕ

ಸುಖವೆಂದರೆ ವಿಷಯೇಂದ್ರಿಯಗಳ ಅಪೇಕ್ಷೆಯಿಲ್ಲದೆ ಕೇವಲ ಬುದ್ಧಿಗೋಚರವಾದದ್ದು. ಆ ಯೋಗಿಯು ಆತ್ಮನಲ್ಲಿಯೇ ಮನಸ್ಸನ್ನು ನಿಲ್ಲಿಸಿ ಅಂತಹ ಸುಖವನ್ನು ಅನುಭವಿಸುವಂತಾಗಿರಬೇಕು. ಆ ಸ್ಥಿತಿಯೇ ಯೋಗವೆನಿಸುತ್ತದೆ. ಆತ್ಮಸ್ವರೂಪದಿಂದ ಆತನು ಚಲಿಸದಿರಬೇಕು (೧೦೫).

**ಯಂ ಲಬ್ಧ್ವಾ ಚಾಪರಂ ಲಾಭಂ ಮನ್ಯತೇ ನಾಧಿಕಂ ತತಃ ।**
**ಯಸ್ಮಿನ್ ಸ್ಥಿತೋ ನ ದುಃಖೇನ ಗುರುಣಾಪಿ ವಿಚಾಲ್ಯತೇ ॥**
(ಭ.ಗೀ. ೬ -೨೦)

ಯೋಗಿಯು ಯಾವ ಆತ್ಮನನ್ನು ಪಡೆದ ಮೇಲೆ ಅದಕ್ಕಿಂತ ಉತ್ತಮವಾದ ಲಾಭವು ಇಲ್ಲವೇ ಇಲ್ಲವೆಂದು ನಿಶ್ಚಯಿಸಿಕೊಂಡಿರುತ್ತಾನೋ, ಯಾವ ಸ್ಥಿತಿಯಲ್ಲಿದ್ದಾಗ ಎಂತಹ ಮಹತ್ತರವಾದ ಆಪತ್ತು ಬಂದರೂ ಅಲ್ಲಾಡುವುದಿಲ್ಲವೋ ಅದಕ್ಕೆ ಯೋಗವೆಂದು ಹೆಸರು (೧೦೬).

**ತಂ ವಿದ್ಯಾದ್ದುಃಖಸಂಯೋಗವಿಯೋಗಂ ಯೋಗಸಂಜ್ಞಿತಂ ।**
**ಸ ನಿಶ್ಚಯೇನ ಯೋಕ್ತವ್ಯೋ ಯೋಗೋಽನಿರ್ವಿಣ್ಣಚೇತಸಾ ॥**
(ಭ.ಗೀ. ೬ -೨೩)

ದುಃಖ ಸಂಯೋಗಲೇಶವೂ ಇಲ್ಲದ ಈ ವಿಯೋಗವನ್ನೇ ಯೋಗವೆನ್ನುತ್ತಾರೆ! ಈ ಪರಿಯ ಯೋಗವನ್ನೇ ಸಾಧಿಸಬೇಕೆಂದು ಮನುಷ್ಯನು ನಿಶ್ಚಯಿಸಿಕೊಳ್ಳಬೇಕು. ಸ್ವಲ್ಪವೂ ನಿರಾಶನಾಗಬಾರದು. ನಿರ್ವಿಣ್ಣನಾಗಬಾರದು (೧೦೭).

**ಯುಂಜನ್ನೇವಂ ಸದಾತ್ಮಾನಂ ಯೋಗೀ ವಿಗತಕಲ್ಮಷಃ ।**
**ಸುಖೇನ ಬ್ರಹ್ಮಸಂಸ್ಪರ್ಶಮತ್ಯಂತಂ ಸುಖಮಶ್ನುತೇ ॥**
(ಭ.ಗೀ. ೬ -೨೮)

ಈ ಪ್ರಕಾರವಾಗಿ ಸದಾ ಆತ್ಮನನ್ನು ಧ್ಯಾನಿಸುತ್ತಿರುವ ಯೋಗಿಯು ತನ್ನ ಪೂರ್ವಾರ್ಜಿತಕರ್ಮದೋಷಗಳೆಲ್ಲವನ್ನೂ ಕಳೆದುಕೊಂಡು ಅನಾಯಾಸವಾಗಿ ಬ್ರಹ್ಮಸ್ವರೂಪವಾದ ಆತ್ಯಂತಿಕಸುಖವನ್ನು ಪಡೆಯುತ್ತಾನೆ. ಈ ಸುಖವು ನಿರತಿಶಯವೂ ಶಾಶ್ವತವೂ ಆದದ್ದು (೧೦೮).

**ಉತ್ಸೇಕ ಉದಧೇರ್ಯದ್ವತ್ ಕುಶಾಗ್ರೇಣೈಕಬಿಂದುನಾ ।**
**ಮನಸೋ ನಿಗ್ರಹಸ್ತದ್ವತ್ ಭವೇದಪರಿಖೇದತಃ ॥**

ದರ್ಭೆಯ ತುದಿಯಿಂದ ಸಮುದ್ರದ ನೀರನ್ನು ಒಂದೊಂದು ಬಿಂದುವನ್ನಾಗಿ ಎತ್ತಿ ಆಚೆಗೆ ಹಾಕುತ್ತ ಸಮುದ್ರವನ್ನು ಖಾಲಿಮಾಡಿದಂತೆ, ಮನಸ್ಸನ್ನು ಈ ಪ್ರಕಾರದಲ್ಲಿ ಶ್ರಮವಿಲ್ಲದೆ ವಶಪಡಿಸಿಕೊಳ್ಳಬಹುದು. ಈ ಶ್ಲೋಕದ ತಾತ್ಪರ್ಯವು ಕೆಳಗೆಕಂಡಂತೆ ಎರಡು ವಿಧವಾಗಿರಬಹುದು.

೧. ಪ್ರತಿದಿನವೂ ದೀರ್ಘಕಾಲದವರೆಗೆ ಯೋಗಸಾಧನೆಯನ್ನು ಮಾಡಿ ಮನಸ್ಸನ್ನು ನಿಗ್ರಹಿಸಬೇಕು. ಕಷ್ಟಪಡದೆ ಸುಲಭವಾಗಿ ಮನಸ್ಸನ್ನು ವಶಪಡಿಸಿಕೊಂಡು ಯೋಗಿಯಾಗಲು ಸಾಧ್ಯವಿಲ್ಲ. ಒಂದೊಂದು ನೀರಿನ ಹನಿಯನ್ನು ಎತ್ತಿಹಾಕಿ ಸಮುದ್ರವನ್ನು ಬರಿದು ಮಾಡಲು ಹೊರಟಂತೆ ಆದೀತು.

೨. 'ಅಭ್ಯಾಸೇನ ತು ಕೌಂತೇಯ ವೈರಾಗ್ಯೇಣ ಚ ಗೃಹ್ಯತೇ' ಎಂಬ ಗೀತಾವಚನದಂತೆ (೬-೩೫) ವೈರಾಗ್ಯವನ್ನು ಪಡೆದುಕೊಂಡು ಅಭ್ಯಾಸ-ಮಾಡುತ್ತಿದ್ದರೆ ಹೆಚ್ಚು ಶ್ರಮವಿಲ್ಲದೆ ಮನೋನಿಗ್ರಹವು ಸಾಧ್ಯವಾಗುತ್ತದೆ. ಮುಖ್ಯವಾಗಿ ವಿಷಯಾಭಿಲಾಷೆಯನ್ನು ತೊರೆದು ವಿರಕ್ತನಾಗಿದ್ದರೆ ಮನೋನಿಗ್ರಹವು ಕಠಿಣವಾಗುವುದಿಲ್ಲ(೧೦೯).

ಮೈತ್ರಾಯಣೀಯವೆಂಬ ಯಜುಃಶಾಖೆಯಲ್ಲಿ ಹೀಗಿದೆ. ಶಾಕಾಯನ್ಯನೆಂಬ ಋಷಿಯು ತನ್ನ ಬಳಿಗೆ ಶಿಷ್ಯನಾಗಿ ಬಂದ ಬೃಹದ್ರಥನೆಂಬ ರಾಜರ್ಷಿಗೆ ಸಮಾಧಿಪೂರ್ವಕವಾಗಿ ಲಭಿಸುವ ಬ್ರಹ್ಮಾನಂದದ ವಿಚಾರವನ್ನು ಹೀಗೆ ತಿಳಿಸಿದ್ದಾನೆ. ''ಉರಿಯುತ್ತಿರುವ ಬೆಂಕಿಗೆ ಸೌದೆಯನ್ನು ಹಾಕದಿದ್ದರೆ ಆ ಬೆಂಕಿಯು ಕ್ರಮವಾಗಿ ತನ್ನ ಕಾರಣವಾದ ತೇಜೋಮಾತ್ರೆಯಲ್ಲಿ ಅಡಗಿಹೋಗುತ್ತದೆ. ಹಾಗೆಯೇ ನಿರೋಧ ಸಮಾಧಿಯನ್ನು ಮಾಡುವಾಗ ವಿಷಯಗಳು ದೂರವಾಗಿ ಅಂತಃಕರಣದ ವ್ಯಾಪಾರವು ಕ್ಷಯಿಸುತ್ತದೆ. ಆಗ ಅಂತಃಕರಣವು ವ್ಯಾಪಾರರಹಿತವಾಗಿ ತನ್ನ ಕಾರಣವಾದ ಸತ್ತ್ವಗುಣದಲ್ಲಿ ಅಡಗುತ್ತದೆ (೧೧೦-೧೧೧). ಯೋಗಿಯ ಅಂತಃಕರಣವು (ಮನಸ್ಸು) ಸತ್ಯವನ್ನು ಮಾತ್ರ ಬಯಸತಕ್ಕದ್ದು. ಆತ್ಮನು ಮಾತ್ರ ಸತ್ಯನಾದವನು. ಇಂದ್ರಿಯಗಳ ವ್ಯಾಪಾರವೆಂದರೆ ಶಬ್ದಾದಿ ವಿಷಯಗಳ ಜ್ಞಾನ ಮತ್ತು ಇಚ್ಛೆ. ಯೋಗಿಯ ಅಂತಃಕರಣವು ತನ್ನ ಕಾರಣವಾದ ಸತ್ತ್ವದಲ್ಲಿ ಲೀನವಾದಾಗ ಇಂದ್ರಿಯಾರ್ಥಗಳಾದ ಶಬ್ದಾದಿವಿಷಯಗಳು ತೋರುವುದಿಲ್ಲ. ಮನಸ್ಸಿಗೆ ಅವೆಲ್ಲವೂ ಕರ್ಮವಶದಿಂದ ಪ್ರಾಪ್ತವಾದವು, ಸತ್ಯ ವಸ್ತುಗಳಲ್ಲ, ಅವೆಲ್ಲವೂ ಮಾಯಾ ಕಲ್ಪಿತಗಳಾಗಿಬಿಡುತ್ತವೆ (೧೧೨). ಚಿತ್ತವು (ಅಂತಃಕರಣವು)

ಉಪಶಾಂತವಾದ ಮಾತ್ರದಿಂದ ಜಗತ್ತು ಮಿಥ್ಯೆಯೆಂದು ಹೇಗೆ ಸಿದ್ಧವಾಗುತ್ತದೆ? ಜಗತ್ತಿಗೂ ಚಿತ್ತಕ್ಕೂ ಸಂಬಂಧವೇನು? ಎಂದರೆ ಹಾಗಲ್ಲ, ಚಿತ್ತವೇ ಜಗತ್ತಿಗೆ ಕಾರಣವಲ್ಲದಿದ್ದರೂ ಜಗತ್ತು ಭೋಗ್ಯವಾಗುವುದು ಚಿತ್ತದಿಂದಲೇ. ಆದ್ದರಿಂದ ಚಿತ್ತವೇ ಸಂಸಾರ. ಗಾಢನಿದ್ರೆಯಲ್ಲಿ ಚಿತ್ತವ್ಯಾಪಾರವಿಲ್ಲದ್ದರಿಂದ ಯಾವ ಭೋಗವೂ ಇರುವುದಿಲ್ಲ. ಆದ್ದರಿಂದ ಚಿತ್ತವನ್ನು ಅಭ್ಯಾಸವೈರಾಗ್ಯಾದಿಗಳಿಂದ ಶುದ್ಧಿಗೊಳಿಸಬೇಕು - ಎಂದರೆ- ರಜಸ್ತಮೋಗುಣಗಳನ್ನು ದೂರ ಮಾಡಬೇಕು. ಅದಕ್ಕಾಗಿ ಪ್ರಯತ್ನವು ಅವಶ್ಯಕ. ಯಾವಾತನು ಪುತ್ರಾದಿವಿಷಯದಲ್ಲಿ ಆಸಕ್ತಿಯಿಂದ ಚಿತ್ತವನ್ನು ತೊಡಗಿಸುತ್ತಾನೋ ಅವನು ಪುತ್ರಾದಿಮಯನೇ ಆಗಿಬಿಡುತ್ತಾನೆ. ಪುತ್ರಾದಿಗಳಿಗೆ ಏನಾದರೂ ತನಗೇ ಆಯಿತೆಂದು ಭಾವಿಸುತ್ತಾನೆ. ಇದು ಅನಾದಿಸಿದ್ಧವಾದ ರಹಸ್ಯವೆನ್ನಬಹುದು. ಆದ್ದರಿಂದ ಚಿತ್ತವೇ ಸಂಸಾರಿಯಾಗಲು ಕಾರಣವಾಗಿರುತ್ತದೆ (೧೧೩). ಚಿತ್ತವು ತನ್ನ ಕಶ್ಮಲವನ್ನು ತೊಳೆದುಕೊಂಡು ಪ್ರಸನ್ನವಾದೊಡನೆ ಪ್ರಸನ್ನಚಿತ್ತನು ಬ್ರಹ್ಮಾನುಸಂಧಾನದಲ್ಲಿ ತೊಡಗುವುದರಿಂದ ಅವನ ಎಲ್ಲ ಬಗೆಯ ಕರ್ಮಗಳೂ ನಾಶಹೊಂದುತ್ತವೆ. ಯಾವನ ಚಿತ್ತವು ಪ್ರಸನ್ನವಾಗಿದೆಯೋ ಆತನು 'ಅಹಂ ಬ್ರಹ್ಮಾಸ್ಮಿ' ಎಂದು ಬ್ರಹ್ಮಧ್ಯಾನದಲ್ಲಿ ತೊಡಗಿ ಶಾಶ್ವತವಾದ ಆನಂದವನ್ನು ಪಡೆಯುತ್ತಾನೆ (೧೧೪). ಮನುಷ್ಯನ ಮನಸ್ಸು ವಿಷಯಭೋಗಗಳಲ್ಲಿ ಸಹಜವಾಗಿ ಆಸಕ್ತವಾಗಿರುವಂತೆ ಒಂದು ವೇಳೆ ಬ್ರಹ್ಮದಲ್ಲಿ ಆಸಕ್ತಿಯಿಂದ ನೆಟ್ಟುಹೋಗುವುದಾದರೆ, ಯಾವಾತನು ಸಂಸಾರಬಂಧನದಿಂದ ಮುಕ್ತಿಯನ್ನು ಪಡೆಯದೆ ಇದ್ದಾನು? (೧೧೫)

ಮನಸ್ಸು ಶುದ್ಧ, ಅಶುದ್ಧ - ಎಂದು ಎರಡು ವಿಧವಾಗಿದೆ. ಕಾಮಕ್ರೋಧಾದಿಗಳ ಸಂಪರ್ಕದಿಂದ ಅದು ಅಶುದ್ಧವಾಗುತ್ತದೆ. ಅವುಗಳ ಸಂಪರ್ಕವಿಲ್ಲದಿದ್ದರೆ ಅದು ಶುದ್ಧಚಿತ್ತವೆನಿಸುತ್ತದೆ (೧೧೬). ಮನುಷ್ಯರ ಸಂಸಾರ ಬಂಧನ, ಮೋಕ್ಷ- ಇವೆರಡಕ್ಕೂ ಮನಸ್ಸೇ ಕಾರಣವಾಗಿದೆ. ವಿಷಯಸುಖಗಳಲ್ಲಿ ಆಸಕ್ತವಾದ ಮನಸ್ಸು ಸಂಸಾರಬಂಧಕ್ಕೆ ಕಾರಣ. ವಿಷಯಭೋಗವನ್ನು ಸಂಪೂರ್ಣವಾಗಿ ತೊಡೆದುಹಾಕಿದರೆ ಆಗ ಆ ಮನಸ್ಸೇ ಮೋಕ್ಷಕ್ಕೆ ಕಾರಣವಾಗುತ್ತದೆ (೧೧೭). ಯಾರ ಚಿತ್ತವು ಸಮಾಧಿಯಿಂದ ರಜಸ್ತಮೋ ಗುಣಗಳೆಂಬ ಕೊಳೆಯನ್ನು ನಿರ್ಮೂಲವಾಗಿ ತೊಡೆದುಹಾಕಿ, ಪ್ರತ್ಯಗಾತ್ಮನಲ್ಲಿ ನೆಟ್ಟುಹೋಗುವುದೋ ಆತನಿಗೆ ಆಗುವ ಆನಂದವನ್ನು ಶಬ್ದದಿಂದ ವರ್ಣಿಸಲು ಸಾಧ್ಯವಾಗುವುದಿಲ್ಲ, ಆ ಸ್ವರೂಪಸುಖವು ಆತನ ಮನಸ್ಸಿಗೆ ಮಾತ್ರ

ಗೋಚರಿಸತಕ್ಕದ್ದು (೧೧೮). ಸಾಮಾನ್ಯವಾಗಿ ಜನರಿಗೆ ದೀರ್ಘಕಾಲದ ಸಮಾಧಿಯೇ ದುರ್ಲಭ. ಸ್ವಲ್ಪಕಾಲದ ಕ್ಷಣಿಕಸಮಾಧಿಯಾದರೂ ಬ್ರಹ್ಮಾನಂದವು ಹೇಗಿರುತ್ತದೆ, ಅದರ ಸ್ವರೂಪವೇನೆಂಬುದು ಈತನಿಗೆ ನಿಶ್ಚಿತವಾಗಿ ತಿಳಿಯುತ್ತದೆ. ಸಮಾಧಿಯು ಹೇಗಿರುತ್ತದೆಯೆಂದು ತಿಳಿಯುವ ಹಠ ಉಳ್ಳವನೂ ಶ್ರದ್ಧಾಳುವೂ ಆದ ಪುರುಷನು ಸರ್ವಥಾ ಪ್ರಯತ್ನಮಾಡಿ ಬ್ರಹ್ಮಾನಂದದ ಸ್ವರೂಪವನ್ನು ಅನುಭವದಿಂದ ನಿಶ್ಚಯಿಸಿಬಿಡುತ್ತಾನೆ. ಒಮ್ಮೆ ಅವನು ನಿಶ್ಚಯದಿಂದ ತಿಳಿದನಾದರೆ ಬೇರೊಂದು ಸಮಯದಲ್ಲಿಯೂ ಸಮಾಧಿಸುಖವು ಹೇಗಿರುತ್ತದೆಯೆಂಬುದನ್ನು ನಂಬುತ್ತಾನೆ (೧೧೯-೧೨೦). ಹಾಗೆ ಸಮಾಧಿಸುಖವನ್ನನುಭವಿಸಿದ ಶ್ರದ್ಧಾಳುವಾದ ಪುರುಷನು ಉದಾಸೀನಕಾಲದಲ್ಲಿಯೂ ಸಹ ಲಭ್ಯವಾಗುವ ವಿಷಯಸುಖವಾಸನೆಯನ್ನು ಉಪೇಕ್ಷಿಸಿ ಮುಖ್ಯವಾದ ಬ್ರಹ್ಮಾನಂದದಲ್ಲಿ ತತ್ಪರನಾಗಿ ಅದನ್ನೇ ಭಾವಿಸಿಕೊಳ್ಳುತ್ತ ಇರುವನು (೧೨೧). ಪರಪುರುಷನಲ್ಲಿ ಆಸಕ್ತಳಾದ ಸ್ತ್ರೀಯು ಮನೆಗೆಲಸದಲ್ಲಿ ತತ್ಪರಳಾಗಿದ್ದರೂ ಮನಸ್ಸಿನಲ್ಲಿಯೇ ಆ ಪರಪುರುಷ-ಸಂಗದಲ್ಲಾದ ರಸಾಯನ ಸುಖವನ್ನು ಆಸ್ವಾದಿಸುತ್ತ ಇರುವಳಲ್ಲವೆ! (೧೨೨).

ಈ ಪ್ರಕಾರವಾಗಿ ಶುದ್ಧವಾದ ಪರಬ್ರಹ್ಮತತ್ತ್ವದಲ್ಲಿ ವಿಶ್ರಮಿಸಿ ಬಂದ ಧೀರನು ಬಾಹ್ಯವಾದ ಲೌಕಿಕಕಾರ್ಯದಲ್ಲಿ ಸಕ್ತನಾಗಿದ್ದರೂ ಆ ಮುಖ್ಯಾನಂದವನ್ನೇ ಮನಸ್ಸಿನೊಳಗೆ ಗುಣಿಸುತ್ತಿರುವನು. ಆತನಲ್ಲಿರುವ ಧೀರತ್ವವಾವುದೆಂದರೆ, ಇಂದ್ರಿಯಗಳು ಪ್ರಬಲವಾಗಿದ್ದು ವಿಷಯ ಸುಖಗಳ ಕಡೆಗೆ ಎಳೆಯುವ ಸಾಮರ್ಥ್ಯವಿದ್ದರೂ ಮುಖ್ಯಾನಂದವನ್ನು ಅನುಭವಿಸಬೇಕೆಂಬ ಬಯಕೆಯಿಂದ ಎಲ್ಲ ಇಂದ್ರಿಯವ್ಯಾಪಾರಗಳನ್ನೂ ತಿರಸ್ಕರಿಸಿ ಮುಖ್ಯಾನಂದದ ಅನುಸಂಧಾನದಲ್ಲಿ ತೊಡುಗುವುದೇ ಆಗಿದೆ (೧೨೩-೧೨೪). ಹೊರೆ ಹೊತ್ತವನು ತಲೆಯ ಮೇಲಿನ ಭಾರವನ್ನು ಕೆಳಗಿಳಿಸಿದಮೇಲೆ ವಿಶ್ರಾಂತಿ ದೊರಕಿತು - ಎಂದುಕೊಳ್ಳುತ್ತಾನೆ. ಹಾಗೆಯೇ ಧೀರನಾದವನಿಗೆ ಸಂಸಾರವ್ಯಾಪಾರಗಳನ್ನು ತ್ಯಜಿಸಿದಾಗ 'ಈಗ ವಿಶ್ರಾಂತನಾದೆನು' ಎಂದು ಹುಟ್ಟುವ ಬುದ್ಧಿಯೇ ಪ್ರಕೃತದಲ್ಲಿ ವಿಶ್ರಾಂತಿ ಎನಿಸುತ್ತದೆ. ಸಂಸಾರವೇ ಒಂದು ಹೊರಲಾರದ ಹೊರೆ. ಈ ಹೊರೆಯನ್ನು ಪೂರ್ತಿಯಾಗಿ ಇಳಿಸಿಕೊಳ್ಳಬೇಕು - ಎಂಬ ಪ್ರವೃತ್ತಿಯು ಧೀರನಿಗೆ ಬರುತ್ತದೆ (೧೨೫). ಈ ಪ್ರಕಾರವಾಗಿರುವ ನಿರತಿಶಯವಿಶ್ರಾಂತಿಯನ್ನು ಪಡೆದ

ಮನುಷ್ಯನು ಉದಾಸೀನಸ್ಥಿತಿಯಲ್ಲಿ ಹೇಗೋ ಹಾಗೆ ಸುಖದುಃಖಗಳು ಪ್ರಾಪ್ತವಾದಾಗಲೂ ಅದರ ಚಿಂತೆಯನ್ನು ತ್ಯಜಿಸಿ ನಿಜಾನಂದದ (ಮುಖ್ಯಾನಂದದ) ಆಸ್ವಾದನೆಯಲ್ಲಿಯೇ ತಾತ್ಪರ್ಯಉಳ್ಳವನಾಗಿರುತ್ತಾನೆ. ಆತನಿಗೆ ಲೌಕಿಕ ಸುಖದಲ್ಲಿಯೂ ಇಚ್ಛೆ ಇರುವುದಿಲ್ಲ. ಯಾವನಿಗೆ ಬೆಂಕಿಯಲ್ಲಿ ಬಿದ್ದಾದರೂ ಸಾಯಬೇಕೆಂಬ ಆತ್ಮಹತ್ಯಾಬುದ್ಧಿಯುಂಟಾಗಿದೆಯೋ ಆತನಿಗೆ ಅಲಂಕಾರಮಾಡಿಕೊಳ್ಳಲು ಅಪೇಕ್ಷೆ ಹುಟ್ಟುವುದೆ? ಹಾಗೆಯೇ ಮುಖ್ಯಾನಂದದಲ್ಲಿ ತಾತ್ಪರ್ಯವಿರತಕ್ಕವನಿಗೆ ಅದಕ್ಕೆ ವಿರುದ್ಧವಾದ ಲೌಕಿಕಾನಂದದ ವಿಷಯದಲ್ಲಿ ಇಚ್ಛೆ ಹುಟ್ಟುವುದಿಲ್ಲ(೧೨೬-೧೨೭). ಈ ಧೀರನ ಬುದ್ಧಿಯು ನಿಜಾನಂದಕ್ಕೆ ವಿರುದ್ಧವಾಗದ ಲೌಕಿಕಸುಖದಲ್ಲಿಯೂ ಪ್ರವೃತ್ತವಾಗುತ್ತದೆ. ಆತನ ಬುದ್ಧಿಯು ಒಮ್ಮೆ ಅವಿರೋಧಿಯಾದ ಲೌಕಿಕಾನಂದದ ಕಡೆಗೂ ಇನ್ನೊಮ್ಮೆ ನಿಜಾನಂದದ ಕಡೆಗೂ ಹೊರಳುತ್ತದೆ. ಹೇಗೆಂದರೆ, ಕಾಗೆಗೆ ದರ್ಶನಸಾಧನವಾದ ಚಕ್ಷುರಿಂದ್ರಿಯವು ಒಂದೇ ಇದ್ದರೂ, ಒಮ್ಮೆ ಎಡಗಣ್ಣಿನ ಗೋಳಕಕ್ಕೂ ಮತ್ತೊಮ್ಮೆ ಬಲಗಣ್ಣಿನ ಗೋಳಕಕ್ಕೂ ಸರಿದು ವಸ್ತುಗಳನ್ನು ನೋಡುತ್ತದೆ. ಕಾಗೆಯ ಎರಡು ಕಣ್ಣುಗಳೂ ಏಕಕಾಲದಲ್ಲಿ ವಸ್ತುವನ್ನು ನೋಡಲಾರವು. ಒಂದೇ ದೃಷ್ಟಿಶಕ್ತಿಯು ಎಡದಿಂದ ಬಲಕ್ಕೂ ಬಲದಿಂದ ಎಡಕ್ಕೂ ಸರಿದಾಡುವುದೆಂದು ಪ್ರತೀತಿ ಇದೆ. (ಈ ಲೌಕಿಕಪ್ರಸಿದ್ಧಿಯು ಸತ್ಯವೋ ಮಿಥ್ಯೆಯೋ ಪರೀಕ್ಷಿಸಬೇಕಾದದ್ದು).

ಸಜ್ಜನಸಮಾಗಮದಿಂದ ಆಗುವ ಆನಂದ, ಕಾವ್ಯಾನಂದ, ಶಾಸ್ತ್ರಾನಂದ - ಮುಂತಾದ ಕೆಲವು ಆನಂದಗಳು ನಿಜಾನಂದಕ್ಕೆ ವಿರೋಧಿಗಳಲ್ಲ (೧೨೮-೧೨೯). ಉದಾಹರಣೆಗೆ, ಊಟಮಾಡುವಾಗ ರುಚಿಕರವಾದ ಆಹಾರದಿಂದಾಗುವ ಆನಂದವು ವಿಷಯಾನಂದವಾಗಿದೆ. ಅದು ಮುಖ್ಯಾನಂದಕ್ಕೆ ವಿರೋಧಿಯಲ್ಲ. ತತ್ತ್ವಜ್ಞನು ಲೌಕಿಕವಾದ ಭೋಜನಾನಂದವನ್ನೂ 'ತತ್ತ್ವಮಸಿ' ಮುಂತಾದ ವೇದವಾಕ್ಯದಿಂದ ಜನ್ಯವಾದ ವೈದಿಕಬ್ರಹ್ಮಾನಂದವನ್ನೂ ಅನುಭವಿಸುತ್ತಾನೆ. ಎರಡು ಭಾಷೆಗಳನ್ನು ಬಲ್ಲವನು ವಿರೋಧವಿಲ್ಲದೆ ಭಾಷಾದ್ವಯವನ್ನೂ ಅರ್ಥಮಾಡಿಕೊಳ್ಳಬಲ್ಲನು. ಹಾಗೆಯೇ ಇದು (೧೩೦). ತತ್ತ್ವಜ್ಞನು ಲೌಕಿಕ ವೈದಿಕ ವಿಷಯಗಳೆರಡನ್ನೂ ಬಲ್ಲ ವಿವೇಕಿಯಾದ್ದರಿಂದ ಲೌಕಿಕದುಃಖವು ಬಂದೆರಗಿದರೂ ಅವನಿಗೆ ವಿವೇಕವಿಲ್ಲದ್ದರಿಂದ ಉದ್ವೇಗವಾಗುತ್ತದೆ. ಪ್ರಕೃತವಾದ ತತ್ತ್ವಜ್ಞಾನ ಸ್ಥಿತಿಯಲ್ಲಿ

ದುಃಖವಾಗದಿರುವುದರಿಂದ ನಿಜಾನಂದಕ್ಕೆ ಲೌಕಿಕ ದುಃಖಪ್ರಾಪ್ತಿಯು ವಿರೋಧಿಯಲ್ಲ(೧೩೧). ಈ ಪ್ರಕಾರವಾಗಿ ಜಾಗ್ರದವಸ್ಥೆಯಲ್ಲಿ ತತ್ತ್ವವಿದನಿಗೆ ಸದಾಬ್ರಹ್ಮಾನಂದವಿರುತ್ತದೆ. ಈ ಜಾಗ್ರದ್ವಾಸನೆಯ ಸಂಸ್ಕಾರದಿಂದ ಸ್ವಪ್ನದಲ್ಲಿಯೂ ಬ್ರಹ್ಮಾನಂದವು ಪ್ರಕಾಶಗೊಳ್ಳುತ್ತದೆ (೧೩೨). ಆದರೆ ಅವಿದ್ಯೆಯು ಆತನಿಗೆ ಸಂಪೂರ್ಣವಾಗಿ ನಷ್ಟವಾಗಿರುವುದಿಲ್ಲವಾದ್ದರಿಂದ ಮೂರ್ಖನಿಗೆ ಆಗುವಂತೆ ಸುಖದುಃಖಗಳೆರಡೂ ಸ್ವಪ್ನದಲ್ಲಿ ಅನುಭವಕ್ಕೆ ಬರಬಹುದು. ಇಲ್ಲಿ ತತ್ತ್ವವಿದನೆಂದರೆ ವಿವೇಕಶಾಲಿ ಎಂದಿಷ್ಟೇ ಅರ್ಥ. ಜ್ಞಾನಿಯಾದ ಜೀವನ್ಮುಕ್ತನೆಂದು ಅರ್ಥವಲ್ಲ. ಜೀವನ್ಮುಕ್ತನಿಗೂ ಅವಿದ್ಯಾಲೇಶವಿರುತ್ತದೆ ಎಂಬ ಒಂದು ಪಕ್ಷವೂ ಉಂಟು (೧೩೩).

ಇಲ್ಲಿಗೆ ಯೋಗಾನಂದಪ್ರಕರಣವು ಸಮಾಪ್ತವಾಯಿತು

---

## ೧೨. ಆತ್ಮಾನಂದಪ್ರಕರಣ

ಇದುವರೆಗೆ ಯೋಗಾನಂದದ ವಿಷಯವನ್ನು ಹೇಳಿದ್ದಾಯಿತು. ಇದನ್ನೇ ನಿಜಾನಂದವೆಂದೂ ಮುಖ್ಯಾನಂದವೆಂದೂ ಹೇಳುವುದುಂಟು. ಇವೆಲ್ಲವೂ ಬ್ರಹ್ಮಾನಂದದ ಅಂತರ್ಭೇದಗಳು. ಯೋಗಿಯ ಅನುಭವಕ್ಕೆ ಬರುವ ಬ್ರಹ್ಮಾನಂದದ ಪ್ರಕಾರವೇ ಯೋಗಾನಂದ. ಅದೇ ನಿಜಾನಂದ. ಇದು ವಾಸನಾನಂದಕ್ಕಿಂತಲೂ ಬ್ರಹ್ಮಾನಂದಕ್ಕಿಂತಲೂ ಭಿನ್ನಸ್ವರೂಪವಾಗಿದೆಯೆಂದೂ ಯೋಗಿಗೆ ಇದು ಗಮ್ಯವೆಂದೂ ಹೇಳಿದ್ದಾಯಿತು. ಒಳ್ಳೆಯದು. ಯೋಗಿಯು ಇದನ್ನು ತಿಳಿದು ಅನುಭವಿಸಲಿ. ವಿವೇಕಹೀನನಾದ ಮೂಢನ ಗತಿ ಏನು? - ಎಂಬುದನ್ನಿಲ್ಲಿ ತಿಳಿಸುವುದರ ಮೂಲಕ ಮಹಾವಾಕ್ಯದಲ್ಲಿರುವ **'ತ್ವಂ'** ಪದಾರ್ಥವನ್ನೀಗ ವಿವೇಚಿಸಲಾಗುವುದು. ಯೋಗಿಯ ನಿಜಾನಂದವನ್ನು ತಿಳಿಸಿದ್ದಾಯಿತು. ಮೂಢನ ಗತಿ ಏನು? ಎಂದು ಪ್ರಶ್ನೆ (೧). ಇದಕ್ಕೆ ಉತ್ತರವೇನೆಂದರೆ, ಮೂಢನಾದವನು ಧರ್ಮಾಧರ್ಮಕಾರ್ಯಗಳಿಂದ ಪಾಪಪುಣ್ಯಗಳನ್ನು ಗಳಿಸಿ ಅವುಗಳ ಫಲವಾಗಿ ಲಕ್ಷಾಂತರದೇಹಗಳನ್ನು ಪಡೆದು ಹುಟ್ಟುತ್ತಿರಲಿ, ಸಾಯುತ್ತಿರಲಿ, ನಾವು ಮರುಕಪಡುವುದರಿಂದ ಏನಾಗುತ್ತದೆ, ಹೇಳು (೨). ಹಾಗಲ್ಲ, ಸ್ವಾಮಿ, ನೀವು ಗುರುಗಳು. ನಿಮಗೆ ಮೂಢರ ವಿಷಯದಲ್ಲಿ ಅನುಗ್ರಹಿಸುವ ಇಚ್ಛೆ ಇರುತ್ತದೆ. ಆದ್ದರಿಂದ ಮರುಕವನ್ನಿಟ್ಟು ಮೂಢರ ಉದ್ಧಾರವನ್ನು ಮಾಡಬೇಕಾಗಿದೆ. ಅವರ ಉದ್ಧಾರವೇ ಪ್ರಯೋಜನ. ಹಾಗಾದರೆ ಹೇಳು; ಆ ಮೂಢನು ಪರತತ್ತ್ವವನ್ನು ತಿಳಿಯಲು ಇಚ್ಛೆಯುಳ್ಳ ವಿರಕ್ತನೋ? ಅಥವಾ ವಿಷಯಭೋಗದಲ್ಲಿ ಅನುರಕ್ತನಾಗಿ ಪರತತ್ತ್ವದಲ್ಲಿ ವಿಮುಖನಾದವನೋ? (೩). ಜ್ಞಾನವಿಮುಖನಾಗಿ ಬ್ರಹ್ಮಲೋಕವನ್ನು ಬಯಸತಕ್ಕವನಾದರೆ ಯಾವುದಾದರೂ ದೇವತೋಪಾಸನೆಯನ್ನು ಮಾಡುತ್ತಿರೆಂದು ತಿಳಿಸಬೇಕು. ಸ್ವರ್ಗಸುಖವನ್ನು ಅಪೇಕ್ಷಿಸಿದರೆ ಯಾಗಾದಿ ಕರ್ಮವನ್ನು ಯಥೋಚಿತವಾಗಿ ಬೋಧಿಸಬೇಕಾಗುತ್ತದೆ. ಇನ್ನು ತತ್ತ್ವಜಿಜ್ಞಾಸುವಾಗಿ ಮಂದಬುದ್ಧಿಯವನಾಗಿದ್ದರೆ ಆತ್ಮಾನಂದದ ಸ್ವರೂಪವನ್ನು ವಿವೇಚಿಸಿ ಬೋಧಿಸಬೇಕಾಗುತ್ತದೆ (೪). ಅಂತೆಯೇ ಯಾಜ್ಞವಲ್ಕ್ಯಮಹರ್ಷಿಯು ತನ್ನ ಪ್ರಿಯಳಾದ ಮೈತ್ರೇಯಿಗೆ **''ನ ವಾ ಅರೇ ಪತ್ಯುಃ ಕಾಮಾಯ ಪತಿಃ ಪ್ರಿಯೋ ಭವತಿ''** (ಬೃ.ಉ.೪-೫-೬) ಇತ್ಯಾದಿ ವಚನಗಳಿಂದ ಆತ್ಮಬೋಧೆಯನ್ನು ಮಾಡಿದ್ದಾನೆ.

'ಪತಿಗೋಸ್ಕರ ಪತಿಯು ಪತ್ನಿಗೆ ಪ್ರಿಯನಾಗುವುದಿಲ್ಲ. ತನಗೋಸ್ಕರ (ಆತ್ಮನಿಗೋಸ್ಕರ) ಪ್ರಿಯನಾಗುತ್ತಾನೆ' ಈ ಪ್ರಕಾರವಾಗಿ ಸಕಲವಸ್ತುಗಳೂ ಆತ್ಮನಿಗಾಗಿ ಪ್ರಿಯವಾಗುತ್ತವೆಯೆಂದು ಆತ್ಮಬೋಧೆಯನ್ನು ಯಾಜ್ಞವಲ್ಕ್ಯ-ಮಹರ್ಷಿಯು ಮಾಡಿರುತ್ತಾನೆ (೫). ಪತಿ, ಭಾರ್ಯೆ, ಪುತ್ರ, ಧನ, ಪಶು, ಬ್ರಾಹ್ಮಣ, ಕ್ಷತ್ರಿಯ, ಲೋಕ, ದೇವ, ವೇದ, ಪೃಥ್ವೀ ಮುಂತಾದ ಪಂಚಭೂತಗಳು - ಇವೆಲ್ಲವೂ ಭೋಕ್ತೃವಾದ ಆತ್ಮನಿಗೋಸ್ಕರ ಪ್ರಿಯವಾಗುತ್ತವೆಯೇ ಹೊರತು ಅವುಗಳ ಸ್ವರೂಪಕ್ಕಾಗಿ ಅಲ್ಲ. ಪತ್ನಿಗೆ ಪತಿಯಲ್ಲಿ ಕಾಮನೆಯುಂಟಾದಾಗ ಅವಳು ಪತಿಯನ್ನು ಪ್ರೀತಿಸುತ್ತಾಳೆ. ಆತನು ಹಸಿವು, ಸಂಧ್ಯಾವಂದನಾದ್ಯನುಷ್ಠಾನ, ರೋಗ -ಮುಂತಾದವುಗಳಿಂದ ಯುಕ್ತನಾದಾಗ ಅವಳು ಪತಿಯಲ್ಲಿ ಅನುರಕ್ತಳಾಗುವುದಿಲ್ಲ! (೬-೭). ಅವಳ ಪ್ರೀತಿಯು ಪತಿಗಾಗಿ ಅಲ್ಲ, ಸ್ವಾರ್ಥಕ್ಕಾಗಿಯೇ ಪ್ರೀತಿಸುತ್ತಾಳೆ. ಅಂತೆಯೇ ಪತಿಯೂ ಸಹ ತನ್ನ ಸ್ವಾರ್ಥಕ್ಕಾಗಿ ಮಡದಿಯನ್ನು ಪ್ರೀತಿಸುತ್ತಾನೆಯೇ ಹೊರತು ಎಂದಿಗೂ ಅವಳಿಗಾಗಿ ಪ್ರೀತಿಸುವುದಿಲ್ಲ. ಉಭಯರೂ ಪರಸ್ಪರ ಪ್ರೀತಿಸುವುದು ಸಹ ತಮ್ಮ ತಮ್ಮ ಸುಖಕ್ಕಾಗಿಯೇ ಸರಿ (೮-೯). ಇದಕ್ಕೊಂದು ಉದಾಹರಣೆ ಕೊಡಬಹುದು. ತಂದೆಯು ತನ್ನ ಗಡ್ಡ ಮೀಸೆಗಳು ಬೆಳೆದಾಗಲೂ ಬಾಲಕನನ್ನು ಮುದ್ದಿಸಿ ಚುಂಬಿಸುತ್ತಾನೆ. ಇವನ ಗಡ್ಡಮೀಸೆಗಳು ಚುಚ್ಚಿದಾಗ ಬಾಲಕನು ಅಳುತ್ತಿದ್ದರೂ ಬಿಡದೆ ಚುಂಬಿಸುತ್ತಾನೆ! ಈ ಪ್ರೀತಿಯು ತನಗಾಗಿಯೇ ಸರಿ ಎಂಬುದು ಇಲ್ಲಿ ಸ್ಪಷ್ಟವಾಗಿದೆ (೧೦). ಶ್ರೀಮಂತನು ವಜ್ರವೈಡೂರ್ಯಾದಿ ರತ್ನಗಳನ್ನು ಕಷ್ಟಪಟ್ಟು ಭದ್ರವಾಗಿ ರಕ್ಷಿಸುತ್ತಾನೆ. ರತ್ನಾದಿಸಂಪತ್ತಿಗೆ ಶ್ರೀಮಂತನಲ್ಲಿ ಪ್ರೀತಿ ಇರುತ್ತದೆಯೆ? ಆದ್ದರಿಂದ ಶ್ರೀಮಂತನ ಪ್ರೀತಿಯು ಸ್ವಾರ್ಥಕ್ಕಾಗಿಯೇ ಹೊರತು ರತ್ನಾದಿಸಂಪತ್ತಿಗಾಗಿ ಅಲ್ಲ (೧೧).

ಭಾರವನ್ನು ಹೊರಲು ಎತ್ತು ಇಚ್ಛಿಸದಿದ್ದರೂ ವ್ಯಾಪಾರಿಯು ಒತ್ತಾಯದಿಂದ ಅದರ ಮೇಲೆ ಭಾರವನ್ನು ಹೇರಿ ಎಳೆಸಲು ಇಚ್ಛಿಸುತ್ತಾನೆ. ಈ ಭಾರವನ್ನು ಹೇರುವುದು ವ್ಯಾಪಾರಮಾಡತಕ್ಕವನ ಸ್ವಾರ್ಥಕ್ಕಾಗಿಯೇ, ಎತ್ತಿನ ಪ್ರಯೋಜನಕ್ಕಾಗಿ ಅಲ್ಲ (೧೨). ''ನನ್ನಲ್ಲಿ ಬ್ರಾಹ್ಮಣ್ಯವಿದೆ, ನಾನು ಗೌರವಾರ್ಹನು'' ಎಂದು ಬ್ರಾಹ್ಮಣನು ತನಗೆ ತೋರಿಸಿದ ಗೌರವದಿಂದ ಸಂತೋಷಿಸುತ್ತಾನೆ. ಅಚೇತನವಾದ ಬ್ರಾಹ್ಮಣಜಾತಿಗೆ ಸಂತೋಷವಾಗುತ್ತದೆಯೆ? ಸಂತೋಷವಾಗುವುದು ಈ ಬ್ರಾಹ್ಮಣ ವ್ಯಕ್ತಿಗೇ ಸರಿ (೧೩). 'ನಾನು ಕ್ಷತ್ರಿಯ.

ಆದ್ದರಿಂದ ರಾಜ್ಯವನ್ನಾಳುತ್ತೇನೆ. ರಾಜಭೋಗವನ್ನು ಅನುಭವಿಸುತ್ತೇನೆ' ಎಂಬ ಸಂತೋಷವು ರಾಜತ್ವಜಾತಿಗಾಗಿ ಅಲ್ಲ. ಅದು ರಾಜನಿಗಾಗಿರುತ್ತದೆ. ಹೀಗೆಯೇ ವೈಶ್ಯಜಾತಿ ಮೊದಲಾದ್ದರಲ್ಲಿ ಯೋಜಿಸಿಕೊಳ್ಳಬೇಕು. ಇದು ಉದಾಹರಣೆಗಾಗಿ ಹೇಳಿದ್ದು (೧೪). ನನಗೆ ಸ್ವರ್ಗಲೋಕ ಬರಲಿ, ನನಗೆ ಬ್ರಹ್ಮಲೋಕವು ದೊರಕಲಿ'' ಎಂಬ ಬಯಕೆಯು ಆ ಲೋಕಗಳ ಉಪಕಾರಕ್ಕಾಗಿ ಅಲ್ಲ. ಕೇವಲ ತನ್ನ ಭೋಗಕ್ಕಾಗಿ ಈ ಬಯಕೆಯಾಗುತ್ತದೆ. ತಾನು ಮಾಡಿದ ಪಾಪಕರ್ಮದ ನಾಶವಾಗಲೆಂದು ಈಶ್ವರ, ವಿಷ್ಣು ಮುಂತಾದ ದೇವತೆಗಳನ್ನು ಮನುಷ್ಯನು ಪೂಜಿಸುತ್ತಾನೆ. ಆ ಪೂಜೆಯು ಪಾಪರಹಿತರಾದ ದೇವತೆಗಳಿಗೋಸ್ಕರವಲ್ಲ, ಕಿಂತು ತನ್ನ ಸ್ವಾರ್ಥಕ್ಕಾಗಿ, ತನ್ನ ಪಾಪವು ನಾಶವಾಗಲೆಂದು ಪೂಜೆ ನಡೆಯುವುದು (೧೫-೧೬). ಋಗ್ವೇದಾದಿ ವೇದಗಳನ್ನು ಅಧ್ಯಯನ ಮಾಡುತ್ತಾರಷ್ಟೆ ಅದು ತಮ್ಮಲ್ಲಿ ಕೀಳು ಬ್ರಾಹ್ಮಣ್ಯವು - ವ್ರಾತ್ಯತ್ವವು - ಬಾರದಿರಲೆಂದು ಆಗಿರುತ್ತದೆ. ವ್ರಾತ್ಯತ್ವಬರುವುದು ಮನುಷ್ಯರಲ್ಲಿ, ವೇದಗಳಲ್ಲಲ್ಲ. ವೇದಗಳಿಗೆ ವ್ರಾತ್ಯತ್ವವು ಬರುವುದೇ ಇಲ್ಲ. ಜನರು ಭೂಮಿ, ಜಲ, ಅಗ್ನಿ, ವಾಯು, ಆಕಾಶಗಳೆಂಬ ಪಂಚಭೂತಗಳನ್ನು ಅಪೇಕ್ಷಿಸುತ್ತಾರೆ. ಅಪೇಕ್ಷೆ ಯಾರಿಗಾಗಿ? ತಮಗೆ ಇರಲು ಸ್ಥಳ, ಕುಡಿಯಲು ನೀರು, ಬೇಯಿಸುವುದಕ್ಕೆ - ಅಗ್ನಿ, ಒದ್ದೆ ಬಟ್ಟೆ ಮೊದಲಾದ್ದನ್ನು ಒಣಗಿಸುವುದಕ್ಕಾಗಿ ಗಾಳಿ, ತಿರುಗಾಡಲು ಮತ್ತು ಪಾತ್ರೆ ಮೊದಲಾದವನ್ನಿಡಲು ಅವಕಾಶ - ಇವು ಬೇಕಾಗಿರುವುದರಿಂದ ಕ್ರಮವಾಗಿ ಭೂಮ್ಯಾದಿಗಳನ್ನು ಬಯಸುತ್ತಾರೆ. ಪೃಥಿವೀ ಮೊದಲಾದ ಪಂಚಭೂತಗಳಿಗಾಗಿ ಸ್ಥಳ ಮೊದಲಾದ್ದನ್ನು ಬಯಸುವುದಿಲ್ಲ (೧೭-೧೮). ಹಾಗೆಯೇ ಒಡೆಯ, ಆಳು - ಮೊದಲಾದವರನ್ನು ಬೇರೆ ಬೇರೆ ಪ್ರಯೋಜನಕ್ಕಾಗಿ ಜನರು ಬಯಸುತ್ತಾರೆ. ಒಡೆಯ ಮೊದಲಾದವರಿಂದ ಆಗುವ ಉಪಕಾರವು ತಮಗಾಗಿ, ಅವರಿಗಾಗಿ ಅಲ್ಲ. ಹೀಗೆ ಸರ್ವವ್ಯವಹಾರಗಳಲ್ಲಿಯೂ ಊಹಿಸಿಕೊಳ್ಳಬೇಕು. ಪ್ರತಿಯೊಬ್ಬ ಮನುಷ್ಯನಾಗಲಿ ಪ್ರಾಣಿಯಾಗಲಿ ಆತ್ಮಾರ್ಥವಾಗಿ ಕೆಲಸಮಾಡುತ್ತಾರೆಯೇ ಹೊರತು ಪರಾರ್ಥವಾಗಿ ಮಾಡುವುದಿಲ್ಲ. ಇದನ್ನು ಸ್ಪಷ್ಟಪಡಿಸುವುದಕ್ಕಾಗಿ ಮೇಲ್ಕಂಡಂತೆ ಬಹಳ ಉದಾಹರಣೆಗಳನ್ನು ಕೊಡಲಾಗಿದೆ. ಒಬ್ಬರಿಗೆ ಉಪಕಾರ ಮಾಡುವುದು ಸಹ ತನಗೆ ಪುಣ್ಯ ಬರಲೆಂದೋ ಕೀರ್ತಿಬರಲೆಂದೋ ಆಗಿರುತ್ತದೆ. ಅಥವಾ ಅನ್ಯರ ಕಷ್ಟವನ್ನು ನೋಡಿ

ತನಗಾದ ದುಃಖವನ್ನು ಕಳೆದುಕೊಳ್ಳುವುದಕ್ಕಾಗಿ ಉಪಕಾರ ಮಾಡುತ್ತಾನೆ. ಹೀಗೆ ವಿಚಾರಮಾಡಿದಾಗ ತಾನೇ (ಆತ್ಮನೇ) ಪರಮ ಪ್ರಿಯನೆಂದು ಸಿದ್ಧವಾಗುವುದು (೧೯). ಆತ್ಮಶೇಷನಾಗಿ ಸರ್ವವೂ ಪ್ರಿಯವಾಗುತ್ತದೆಯೆಂದು ತಿಳಿಸಿದ್ದಾಯಿತು. ಪ್ರಿಯವೆಂದರೆ ಪ್ರೀತಿ ಪಾತ್ರವಾದದ್ದು. ಇಲ್ಲೊಂದು ಪ್ರಶ್ನೆ ಹುಟ್ಟುತ್ತದೆ. ಸರ್ವರಿಗೂ ತನ್ನಲ್ಲಿ (ಆತ್ಮನಲ್ಲಿ) ಪ್ರೀತಿಯಿರುತ್ತದೆ ಎಂದಾಗ ಪ್ರೀತಿ ಎಂದರೇನು ಎಂಬುದು ಪ್ರಶ್ನೆ. ಅದು ಅನುರಾಗವಾದರೆ ಪತ್ನೀ ಪುತ್ರಾದಿಗಳಲ್ಲಿ ಮಾತ್ರ ಅನ್ವಯಿಸುತ್ತದೆ. ಅದು ಶ್ರದ್ಧೆಯಾದರೆ ಯಾಗಾದಿಕರ್ಮಗಳಲ್ಲಿ ಮಾತ್ರ, ಭಕ್ತಿಯಾದರೆ ಗುರುದೇವತಾದಿ ವಿಷಯಗಳಲ್ಲಿ ಮಾತ್ರ, ಇಚ್ಛೆಯಾದರೆ ಅಪ್ರಾಪ್ತವಸ್ತುವಿಗೆ ಮಾತ್ರ ಅನ್ವಯಿಸುತ್ತದೆ. ಆದ್ದರಿಂದ ನೀವು ಹೇಳಿದ ಎಲ್ಲ ವಸ್ತುಗಳಿಗೂ ಅನ್ವಯಿಸುವ ಪ್ರೀತಿ ಎಂದರೆ ಯಾವುದು? (೨೦-೨೧). ಹಾಗಾದರೆ ಸುಖವನ್ನು ಮಾತ್ರಕೊಡುವ ಸತ್ತ್ವಗುಣ ಪರಿಣಾಮವಾದ ಅಂತಃಕರಣವೃತ್ತಿಯೇ ಪ್ರೀತಿಯೆನ್ನೋಣ. ಇದು ಇಚ್ಛೆಯಲ್ಲ. ಅಪ್ರಾಪ್ತವಸ್ತುವಿನಲ್ಲಿ ಮಾತ್ರ ಅದು ಬೇಕು ಎಂಬ ಇಚ್ಛೆ ಇರುತ್ತದೆ. ಈ ಸಾತ್ತ್ವಿಕವೃತ್ತಿಯಾದರೋ ಪ್ರಾಪ್ತವಸ್ತುವಿನಲ್ಲೂ ಆಗುತ್ತದೆ. ಅಪ್ರಾಪ್ತ ವಸ್ತುವಿನಲ್ಲೂ ಆಗುತ್ತದೆ. ಆದ್ದರಿಂದ ಇದು ಇಚ್ಛೆಯಲ್ಲ. ಆದ್ದರಿಂದ ಸತ್ತ್ವಗುಣಜನ್ಯವಾದ ಸಾತ್ತ್ವಿಕ ಅಂತಃಕರಣವೃತ್ತಿವಿಶೇಷವು ಪ್ರೀತಿ ಎಂದು ತಾತ್ಪರ್ಯ (೨೨).

ಶಂಕೆ - ಅನ್ನಪಾನಾದಿಗಳು ಸುಖಕ್ಕೆ ಸಾಧನವಾದ್ದರಿಂದ ಪ್ರಿಯವಾಗುತ್ತವೆ. ಅವುಗಳಲ್ಲಿ ಸುಖಸಾಧನತಾರೂಪವಾದ ಉಪಾಧಿ (ಧರ್ಮ) ಇದೆ. ಹಾಗೆ ಆತ್ಮನು ಸುಖಕ್ಕೆ ಸಾಧನವಾದ ಹೇತುವೋ? (ಆತ್ಮನೇ ಸುಖಸ್ವರೂಪನು. ಸುಖಕ್ಕೆ ಸಾಧನವಲ್ಲ. ಆದ್ದರಿಂದ ಈ ಶಂಕೆ).

ಸಮಾಧಾನ - ಇದಕ್ಕೆ ಉತ್ತರ ಹೇಳು. ಆತ್ಮನು ಸುಖಕ್ಕೆ ಸಾಧನವಾದರೆ ಅನ್ನಪಾನಾದಿಗಳಂತೆ ಆತನೇ ಭೋಗ್ಯನಾಗಿಬಿಡುತ್ತಾನೆ. ಆಗ ಭೋಕ್ತನು ಯಾರು? ಆತ್ಮನಿಗೆ ಅತಿರಿಕ್ತನಾದ ಭೋಕ್ತನು ಈ ಜಗತ್ತಿನಲ್ಲಿ ಇನ್ನು ಯಾರೂ ಇಲ್ಲ. ಆದ್ದರಿಂದ ಅವನು ಸುಖಕ್ಕೆ ಸಾಧನವಲ್ಲ.

ಶಂಕೆ - ಆತ್ಮನು ತಾನೇ ಅನುಕೂಲಯಿತವ್ಯನು (ಭೋಗ್ಯನು) ಆಗಲಿ.

ಸಮಾಧಾನ - ಅದು ಅಶಕ್ಯ. ಒಬ್ಬನೇ ಕರ್ಮವೂ (ಭೋಗ್ಯವೂ) ಕರ್ತೃವೂ (ಭೋಕ್ತಾ) ಆಗಲು ಶಕ್ಯವಿಲ್ಲ. ಒಂದೇ ಕ್ರಿಯೆಯಲ್ಲಿ ಒಬ್ಬನಿಗೇ

ಕರ್ತೃತ್ವಕರ್ಮತ್ವಗಳು ಬರುವುದಿಲ್ಲ. ಅವು ವಿರುದ್ಧಧರ್ಮಗಳು. ಆದ್ದರಿಂದ ಆತ್ಮನು ಸುಖಸಾಧನವಲ್ಲ(೨೩-೨೪). ಆತ್ಮಪ್ರೀತಿಯು ವಿಷಯಸುಖದಲ್ಲಿರುವ ಪ್ರೀತಿಗಿಂತ ಅತಿಶಯವಾದದ್ದು. ಆತ್ಮನು ಸರ್ವಕ್ಕಿಂತಲೂ ಅತಿಪ್ರಿಯನಾದವನು. ವಿಷಯ ಸುಖದ ಪ್ರೀತಿಯು ವ್ಯಭಿಚರಿತವಾಗುತ್ತದೆ. ಆತ್ಮಪ್ರೀತಿಯು ಮಾತ್ರ ವ್ಯಭಿಚರಿತವಾಗುವುದಿಲ್ಲ. ಹೇಗೆಂದರೆ, ವಿಷಯಾಭಿಲಾಷಿಯಾದ ಮನುಷ್ಯನು ಒಂದರಲ್ಲಿ ಬೇಸರಗೊಂಡು ಇನ್ನೊಂದನ್ನು ಪ್ರೀತಿಸುತ್ತಾನೆ. ಪ್ರೀತಿಯು ಒಂದು ವಿಷಯದಲ್ಲಿ ನಿಯತವಾಗಿ ನಿಲ್ಲದೆ ಇನ್ನೊಂದನ್ನು ಆಶ್ರಯಿಸುವುದರಿಂದ ಅದು ವ್ಯಭಿಚರಿತವಾಯಿತು. ಆತ್ಮಪ್ರೀತಿಯು ಹಾಗಲ್ಲ. ಅದು ಆತ್ಮನನ್ನು ಸದಾ ಆಶ್ರಯಿಸಿಕೊಂಡಿರುತ್ತದೆ. ಇನ್ನೊಂದೆಡೆಗೆ ಧಾವಿಸುವ ಪ್ರಶ್ನೆಯೇ ಇಲ್ಲ. ಏಕೆಂದರೆ, ಆತ್ಮನು ತಾನೇ ಆಗಿರುವುದರಿಂದ ಆತ್ಮನು ತ್ಯಾಜ್ಯನೂ ಅಲ್ಲ, ಹೊಸದಾಗಿ ಸ್ವೀಕರಿಸಲ್ಪಡುವವನೂ ಅಲ್ಲ. ಆದ್ದರಿಂದ ಆತ್ಮಪ್ರೀತಿಯು ವ್ಯಭಿಚರಿತವಾಗುವುದೇ ಇಲ್ಲ(೨೫-೨೬). ಆತ್ಮನು ತಾನೇ ಆದ್ದರಿಂದ ಆತನ ತ್ಯಾಗವಾಗಲಿ ಸ್ವೀಕಾರವಾಗಲಿ ಆಗತಕ್ಕದ್ದಲ್ಲ. ಹುಲ್ಲುಕಡ್ಡಿಯನ್ನು ಹೇಗೋ ಹಾಗೆ ಉಪೇಕ್ಷಿಸಬಹುದೋ, ಎಂದರೆ ಅದೂ ಶಕ್ಯವಲ್ಲ! ತನ್ನನ್ನು ತಾನೇ ಉಪೇಕ್ಷಿಸುವುದು ಹೇಗೆ? ಒಬ್ಬನೇ ಏಕಕಾಲದಲ್ಲಿ ಕರ್ತೃ ಕರ್ಮ - ಎರಡೂ ಆಗುವುದಿಲ್ಲ(೨೭). ತೀವ್ರವಾದ ರೋಗಕ್ರೋಧಗಳುಂಟಾದಾಗ ಕೆಲವರಿಗೆ ಸಾಯುವ ಇಚ್ಛೆ ಬರುವುದುಂಟು. ಆತ್ಮಹತ್ಯೆಮಾಡಿಕೊಳ್ಳಬೇಕೆಂದೂ ಜೀವಿಸುವುದು ಬೇಡವೆಂದೂ ಅವರು ಭಾವಿಸುತ್ತಾರೆ. ಆದ್ದರಿಂದ ಆತ್ಮವು ದ್ವೇಷ್ಯವೂ ತ್ಯಾಜ್ಯವೂ ಆಗುವುದುಂಟಲ್ಲವೆ? ಅದು ಸರಿಯಲ್ಲ. ಅಲ್ಲಿ ತ್ಯಾಜ್ಯವಾದದ್ದು ದೇಹ, ಆತ್ಮವಲ್ಲ. ತ್ಯಜಿಸಬೇಕೆನ್ನುವವನು ಜೀವ, ಆತನೇ ಆತ್ಮ. ತ್ಯಾಗಮಾಡತಕ್ಕ ಜೀವನಿಗೆ ತನ್ನ ಮೇಲೆ ದ್ವೇಷ ಬಂದಿರುವುದಿಲ್ಲ, ದೇಹದ ಮೇಲೆ ದ್ವೇಷ ಬಂದಿರುತ್ತದೆ. ತ್ಯಾಜ್ಯವಾದ ದೇಹದ ವಿಷಯದಲ್ಲಿ ಜೀವನಿಗೆ ಕ್ರೋಧದ್ವೇಷಗಳುಂಟಾದರೆ ಪ್ರಕೃತ ನಾವು ಹೇಳಿದುದಕ್ಕೆ ಬಾಧೆ ಏನು?(೨೮-೨೯). "**ನ ವಾ ಅರೇ ಪತ್ಯುಃ ಕಾಮಾಯ ಪತಿಃ ಪ್ರಿಯೋ ಭವತಿ**"(ಬೃ.ಉ.೪-೫-೬)- ಇತ್ಯಾದಿ ಉಪನಿಷತ್ತಿನ ಪ್ರಕಾರ ಆತ್ಮನು ಅತ್ಯಂತ ಪ್ರೀತಿ ಪಾತ್ರನೆಂಬುದನ್ನು ಸಾಧಿಸಿದ್ದಾಯಿತು. ಪತಿ, ಪತ್ನೀ, ಪುತ್ರ - ಮುಂತಾದವರೆಲ್ಲರೂ ಆತ್ಮನಿಗೆ ಉಪಕಾರಕರಾದ್ದರಿಂದ ಆತ್ಮನು ಅತಿಪ್ರಿಯ. ಮಗನ ಸ್ನೇಹಿತನಿಗಿಂತಲೂ ಮಗನು ಪ್ರಿಯತರನಾಗುತ್ತಾನೆ. ಏಕೆಂದರೆ, ಆ ಸ್ನೇಹಿತನಿಗಿಂತ ಮಗನು ತನಗೆ ಹೆಚ್ಚು ಉಪಕಾರಿಯೂ ಹತ್ತಿರದವನೂ

ಆಗಿರುತ್ತಾನೆ (೩೦). ಅಲ್ಲದೆ ಲೋಕದಲ್ಲಿ ಸಕಲ ಪ್ರಾಣಿಯೂ ''ನಾನು ಇಲ್ಲವಾಗುವುದು ಬೇಡ! ನಾನು ಸದಾ ಇರಬೇಕು'' - ಎಂದು ಆಶಿಸುವುದೇ ಕಂಡುಬರುತ್ತದೆ. ಈ ಪ್ರಕಾರವಾಗಿ ಸಕಲರಿಗೂ ಆತ್ಮನಲ್ಲಿರುವ ಪ್ರೀತಿ ಪ್ರತ್ಯಕ್ಷವಾದದ್ದು. ಹೀಗೆ ಅನುಭವ, ಯುಕ್ತಿ ಶ್ರುತಿ - ಈ ಮೂರರಿಂದ ಆತ್ಮನಲ್ಲಿ ಅಧಿಕಪ್ರೀತಿ ಇದೆ - ಎಂದು ಸಿದ್ಧವಾಗುತ್ತದೆ. ಆದರೂ ಕೆಲವರು ಈ ಮೂರು ಕಾರಣಗಳನ್ನೂ ಲಕ್ಷಿಸದೆ ಆತ್ಮನು ಪುತ್ರಭಾರ್ಯಾದಿಗಳಿಗೇ ಶೇಷ (ಉಪಕಾರಕ)ನಾಗಿದ್ದಾನೆಂದು ಹೇಳಿದ್ದಾರೆ. ತನಗಿಂತ ಪುತ್ರಭಾರ್ಯಾದಿಗಳು ಪ್ರಿಯತರರೆಂದು ಅವರ ಅಭಿಪ್ರಾಯ (೩೧-೩೨). ಅವರ ಹೇಳಿಕೆ ಏನೆಂದರೆ - '**ಆತ್ಮಾ ವೈ ಪುತ್ರನಾಮಾಸಿ**' (ಕೈ.ಉ.೨-೬) ಎಂದು ವೇದವೇ ಹೇಳಿದೆ. ಪುತ್ರನೇ ಮುಖ್ಯ ಆತ್ಮನೆಂದು ಈ ಶ್ರುತಿಯ ತಾತ್ಪರ್ಯ. ''ಪುತ್ರನೆಂಬ ಹೆಸರಿನ ನನ್ನ ಆತ್ಮನೇ ನೀನು'' ಎಂದು ಈ ವೇದವಾಕ್ಯದ ಅರ್ಥ. ಐತರೇಯೋಪನಿಷತ್ತಿನಲ್ಲಿ ಈ ವಿಷಯವು ಇನ್ನೂ ಸ್ಫುಟವಾಗಿದೆ. ''**ಸ ಪುರುಷೇ ಹವಾ ಅಯಮಾದಿತೋ ಗರ್ಭೋ ಭವತಿ**'' (ಐ.ಉ.೧-೧) ಇತ್ಯಾದಿ ಶ್ರುತಿಯು ಪುತ್ರನು ಅತಿಪ್ರಿಯನೆಂದು ಹೇಳಿದೆ. ''ತಂದೆಯ ದೇಹವೇ ಮೊದಲನೆಯ ಗರ್ಭ. ಇದನ್ನು ವಿಶೇಷವಾಗಿ ಪಾಲಿಸಬೇಕು. ಮುಂದೆ ಹುಟ್ಟುವ ಕುಮಾರನು ಪುಣ್ಯಕರ್ಮಗಳ ಪ್ರತಿನಿಧಿ. ತಾನು ಮಾಡಬೇಕಾದ ಪುಣ್ಯಕರ್ಮಗಳಿಗೆ ಪ್ರತಿನಿಧಿಯಾಗಿ ಆ ಪುಣ್ಯಕರ್ಮಗಳನ್ನು ಆಚರಿಸಲೆಂದು ತಂದೆಯು ಪುತ್ರನನ್ನು ತನ್ನ ಬದಲಿಗೆ ಸ್ಥಾಪಿಸುತ್ತಾನೆ. ಅನಂತರ ಪ್ರತ್ಯಕ್ಷಗೋಚರನಾಗಿರುವ ತಂದೆಯೆಂಬ ಆತ್ಮನು ಮುಪ್ಪಿನಿಂದ ಗ್ರಸ್ತನಾಗಿ ಮೃತನಾಗುತ್ತಾನೆ. ಪುತ್ರನನ್ನು ಸ್ಥಾಪಿಸಿ ತಾನು ಕೃತಕೃತ್ಯನಾಗುತ್ತಾನೆ - ಎಂದು ಶ್ರುತಿಯು ಹೇಳುತ್ತದೆ. ಇದರಿಂದ ತನಗಿಂತ ಪ್ರಿಯನಾದವನು ಪುತ್ರನೆಂದು ಸ್ಪಷ್ಟವಾಗುವುದು (೩೩-೩೪). ಪುರಾಣಾದಿಗಳಲ್ಲಿ ''**ನಾಪುತ್ರಸ್ಯ ಲೋಕೋऽಸ್ತಿ ಅಪುತ್ರಸ್ಯ ಗತಿರ್ನಾಸ್ತಿ**'' ಮುಂತಾದ ವಾಕ್ಯಗಳು ದೊರೆಯುತ್ತವೆ. 'ಪುತ್ರಹೀನನಿಗೆ ಸದ್ಗತಿ ಇಲ್ಲ' ಎಂದು ಇವು ಸಾರುತ್ತವೆ. ಪುತ್ರನೇ ಮುಖ್ಯಾತ್ಮನೆಂದು ಇದರಿಂದ ಗೊತ್ತಾಗುತ್ತದೆ. ಶಾಸ್ತ್ರಾರ್ಥವನ್ನು ಬಲ್ಲ ವಿದ್ವಾಂಸರು '**ತ್ವಂ ಬ್ರಹ್ಮ**' ಇತ್ಯಾದಿ ಮಂತ್ರಗಳಿಂದ ಅನುಶಿಷ್ಟನಾದ ಪುತ್ರನನ್ನೇ ಪರಲೋಕಕ್ಕೆ ಕಾರಣನೆಂದು ಹೇಳಿದ್ದಾರೆ. ''**ಸೋऽಯಂ ಮನುಷ್ಯಲೋಕಃ ಪುತ್ರೇಣೈವ ಜಯ್ಯೋ ನಾನ್ಯೇನ ಕರ್ಮಣಾ**'' ಎಂದು ಬೃಹದಾರಣ್ಯಕದಲ್ಲಿದೆ (ಬೃ.ಉ. ೭-೫-೧೬). ಈ ಮರ್ತ್ಯಲೋಕದಲ್ಲಿ ಸುಖವು

ಪುತ್ರನಿಂದಲೇ ಪ್ರಾಪ್ತವಾಗುತ್ತದೆ. ಬೇರೆ ಯಾವ ಕ್ರಿಯೆಯಿಂದಲೂ ಅಲ್ಲ- ಎಂದು ಇದರ ತಾತ್ಪರ್ಯ. ತನಗೆ ಮರಣಕಾಲವು ಪ್ರಾಪ್ತವಾದಾಗ **"ತ್ವಂ ಬ್ರಹ್ಮ ತ್ವಂ ಯಜ್ಞಃ ತ್ವಂ ಲೋಕಃ"** (ಬೃ.ಉ.೧-೫-೧೭) ಇತ್ಯಾದಿ ಮಂತ್ರತ್ರಯದಿಂದ ಪುತ್ರನಿಗೆ ಕರ್ತವ್ಯವನ್ನು ಉಪದೇಶಿಸಬೇಕೆಂದು ಶಾಸ್ತ್ರವಿಧಿ ಇದೆ(೩೫-೩೬). ಇತ್ಯಾದಿ ಶ್ರುತಿಗಳು ಆತ್ಮನು(ತಾನು) ಪುತ್ರಭಾರ್ಯಾದಿಗಳಿಗೆ ಶೇಷ (ಉಪಕಾರಿ)ನೆಂದೂ ತಾನು ಮುಖ್ಯನಲ್ಲವೆಂದೂ ಹೇಳಿವೆ. ಲೌಕಿಕ ಜನರೂ ಸಹ ಪುತ್ರನು ಮುಖ್ಯನೆಂಬುದನ್ನು ಒಪ್ಪಿಕೊಳ್ಳುತ್ತಾರೆ. ತಾನು ಸತ್ತಮೇಲೂ ಸಹ ಹೆಂಡತಿಮಕ್ಕಳು ಸುಖವಾಗಿ ಬಾಳಲೆಂದು ಜನರು ಪ್ರಯತ್ನಿಸಿ ಆಸ್ತಿ, ಹಣ- ಮುಂತಾದ್ದನ್ನು ಸಂಗ್ರಹಿಸಿ ಇಡುತ್ತಾರೆ. ಆದ್ದರಿಂದ ಪುತ್ರಾದಿಗಳೇ ಮುಖ್ಯ ಆತ್ಮರೆಂದು ಸಿದ್ಧವಾಗುತ್ತದೆ." ಇಷ್ಟು ಆ ಪೂರ್ವಪಕ್ಷಿಗಳ ಹೇಳಿಕೆ (೩೭-೩೮).

ಈಗ ಸಿದ್ಧಾಂತಿಯು ಹೇಳುವುದೇನೆಂದರೆ: ಹೌದು; ನೀವು ಹೇಳುವುದು ಒಂದಂಶದಲ್ಲಿ ಸರಿಯಾಗಿದೆ. ಆದರೆ ಆತ್ಮನು ಮಾತ್ರ ಇನ್ನೊಬ್ಬರಿಗೆ ಶೇಷನಾಗುವುದಿಲ್ಲ, ಇನ್ನೊಬ್ಬರಿಗೆ ಉಪಕಾರಮಾಡಿ ತಾನು ಅಮುಖ್ಯನಾಗಿಬಿಡುವುದಿಲ್ಲ. ಗೌಣಾತ್ಮ, ಮಿಥ್ಯಾತ್ಮ, ಮುಖ್ಯಾತ್ಮ- ಎಂದು ಆತ್ಮನಲ್ಲಿ ಮೂರು ಪ್ರಕಾರಗಳಿವೆ. 'ದೇವದತ್ತನು ಸಿಂಹ' ಎಂದು ಹೇಳುವುದುಂಟು. ದೇವದತ್ತನು ಮನುಷ್ಯ, ಸಿಂಹವು ಮೃಗ. ಇವರಿಗೆ ಏಕತೆ ಹೇಗೆ ಸಾಧ್ಯ? ದೇವದತ್ತನು ಸಿಂಹ- ಎಂಬ ಮಾತಿನಲ್ಲಿ ತೋರುವ ಅಭೇದವು ಗೌಣವಾದದ್ದು. ಸಿಂಹದ ಧೈರ್ಯವೀರ್ಯಗುಣಗಳು ದೇವದತ್ತನಲ್ಲಿವೆಯೆಂದು ತಿಳಿಸುವುದಕ್ಕಾಗಿ ಅವರಿಗೆ ಅಭೇದದಿಂದ ವ್ಯವಹಾರ ಬರುತ್ತದೆ. ಈ ವ್ಯವಹಾರವು ಗುಣನಿಮಿತ್ತಕವಾದ್ದರಿಂದ ಅಭೇದವು ಗೌಣ, ಮುಖ್ಯವಲ್ಲ. ದೇವದತ್ತ ಸಿಂಹಗಳಲ್ಲಿರುವ ಭೇದವು ಸರ್ವರಿಗೂ ಸ್ಪಷ್ಟವಾಗಿ ತೋರುತ್ತದೆ. ಹಾಗೆಯೇ ಪುತ್ರ, ಭಾರ್ಯಾದಿಗಳಿಗೆ ಆತ್ಮತೆಯೂ ಗೌಣವಾದದ್ದು. ತಂದೆಗೂ ಮಗನಿಗೂ ಇರುವ ಭೇದವು ಸ್ಫುಟವಾಗಿದೆ. ಪುತ್ರನು ತಂದೆಯ ಆತ್ಮನಾಗುವುದು ಹೇಗೆ? (೩೯-೪೦). ಹೀಗೆಯೇ ಮಿಥ್ಯಾತ್ಮನೂ ಉಂಟು. ಸಾಕ್ಷಿಯಾದ ಆತ್ಮನಿಗೂ ಅನ್ನಮಯಾದಿ ಪಂಚಕೋಶಗಳಿಗೂ ಭೇದವಿದೆ. ಆದರೂ ಅನ್ನಮಯ ಆತ್ಮಾ, ಪ್ರಾಣಮಯ ಆತ್ಮಾ- ಎಂದು ಹೇಳುವುದುಂಟು. ಆದರೆ ಆತ್ಮನು ಇಂದ್ರಿಯಗೋಚರನಲ್ಲವಾದ್ದರಿಂದ ಅನ್ನಮಯ ದೇಹಾದಿ

ಕೋಶಗಳಿಗೂ ಆತ್ಮನಿಗೂ ಇರುವ ಭೇದವು ಗೋಚರಿಸುವುದಿಲ್ಲ. ಮಬ್ಬುಕತ್ತಲೆಯಲ್ಲಿ ಕಂಭವನ್ನು ನೋಡಿ ಕಳ್ಳನೆಂದು ತಿಳಿಯುವುದು ಹೇಗೋ ಹಾಗೆ ಇದು. ಕಂಭವು ಕಳ್ಳನೆಂದು ತಿಳಿಯುವುದು ಮಿಥ್ಯೆ. ಕಂಭವು ಮಿಥ್ಯಾಚೋರ. ಹಾಗೆಯೇ ಅನ್ನಮಯಾದಿಕೋಶಗಳು ಮಿಥ್ಯಾತ್ಮರು. ಹಗ್ಗವನ್ನು ಹಾವೆಂದು ಭ್ರಮಿಸುವುದೂ ಹೀಗೆಯೇ. ಹಗ್ಗವು ಮಿಥ್ಯಾಸರ್ಪ(೪೧). ಹೀಗೆ ಗೌಣಾತ್ಮನೂ ಮಿಥ್ಯಾತ್ಮನೂ ಅಲ್ಲದ ಆತ್ಮನೇ ಮುಖ್ಯಾತ್ಮ. ಸಾಕ್ಷಿಯೂ ಪ್ರತ್ಯಗಾತ್ಮನೂ ಆದವನೇ ನಮ್ಮ ಮುಖ್ಯಾತ್ಮನಾಗಿದ್ದಾನೆ. ಗೌಣಾತ್ಮಮಿಥ್ಯಾತ್ಮರಿಗೆ ಪ್ರತಿಯೋಗಿಯಾಗಿ ಇನ್ನೊಂದು ಪದಾರ್ಥವಿದೆ. ಮುಖ್ಯಾತ್ಮನಿಗೆ ಪ್ರತಿಯೋಗಿಯೇ ಇಲ್ಲ. ಆತನಿಗಿಂತ ಭಿನ್ನವಾದ ಇನ್ನೊಂದು ವಸ್ತುವೇ ಇಲ್ಲ. ಪುತ್ರನಿಗೂ ತಂದೆಗೂ ಅನ್ನಮಯಕೋಶಕ್ಕೂ ಆತ್ಮನಿಗೂ ಭೇದವಿರುವಂತೆ ಆತ್ಮನಿಗೂ ಇನ್ನೊಂದು ವಸ್ತುವಿಗೂ ವಾಸ್ತವವಾದ ಭೇದವು ತೋರುವುದೂ ಇಲ್ಲ, ವಾಸ್ತವವಾಗಿ ಇಲ್ಲವೂ ಇಲ್ಲ. ಆತ್ಮಾತಿರಿಕ್ತವಾದ್ದೆಲ್ಲವೂ ಮಾಯಾಕಲ್ಪಿತವೂ ಆರೋಪಿತವೂ ಆಗಿದೆ. ಸರ್ವದೇಹಪುತ್ರಾದಿಗಳಿಗೂ ಆಂತರವೂ ಸರ್ವಸಾಕ್ಷಿಯೂ ಆದ ಆತ್ಮನೇ ಮುಖ್ಯಾತ್ಮನೆನಿಸುತ್ತಾನೆ. ಇವನ ಆತ್ಮತ್ವವು ಔಪಚಾರಿಕವಲ್ಲ(೪೨). ವಸ್ತುಸ್ಥಿತಿಯು ಹೀಗಿರುವಾಗ ಲೌಕಿಕ ವೈದಿಕ ವ್ಯವಹಾರಗಳಲ್ಲಿ ಪುತ್ರಾದಿಗಳಿಗೂ ದೇಹಾದಿಗಳಿಗೂ ಆತ್ಮತ್ವವು ಉಚಿತವಾಗಿ ತೋರಿದಲ್ಲಿ ಹಾಗೆಯೇ ಆಗಲಿ. ಅಲ್ಲಿ ಆತ್ಮನೆಂದರೆ ಶೇಷಿ, ಉಪಕಾರ್ಯ, ಪ್ರಧಾನ ಎಂದರ್ಥ. ಉಳಿದೆಲ್ಲವೂ ಶೇಷ(ಉಪಕಾರಕ)ಗಳು ಅಪ್ರಧಾನಗಳು ಆಗಲಿ. ಅದರಿಂದ ಮುಖ್ಯಾತ್ಮನಿಗೆ ಬಾಧೆ ಏನೂ ಇಲ್ಲ(೪೩). ವ್ಯವಹಾರದ ವಿಷಯವೇ ಬೇರೆ. ಪರಮಾರ್ಥವೇ ಬೇರೆ. ಹೇಗೆಂದರೆ, ಮರಣಾವಸ್ಥೆಯಲ್ಲಿದ್ದವನಿಗೆ ಗೃಹರಕ್ಷಣೆ ಮುಂತಾದ ಲೌಕಿಕಕೃತ್ಯದಲ್ಲಿ ಗೌಣಾತ್ಮನೇ ಪ್ರಯೋಜನಕಾರಿಯಾಗುತ್ತಾನೆ. ಮುಖ್ಯಾತ್ಮನಿಂದ ಅಥವಾ ಮಿಥ್ಯಾತ್ಮನಿಂದ ಪ್ರಯೋಜನವಾಗದು. ಆದ್ದರಿಂದ ಪುತ್ರನು ಶೇಷಿ (ಆತ್ಮ) ಎನಿಸುತ್ತಾನೆ. ಸ್ವತಃ ತಾನೇ ಇದ್ದರೂ ಪುತ್ರನನ್ನೇಕೆ ಆತ್ಮನೆಂದು ಗ್ರಹಿಸಬೇಕೆಂದರೆ, ಒಂದು ದೃಷ್ಟಾಂತವನ್ನು ಕೊಡಬಹುದು. ಅಧ್ಯೇತಾ ವಹ್ನಿಃ = ಅಧ್ಯಯನ ಮಾಡತಕ್ಕವನು ಅಗ್ನಿ- ಎಂದು ಹೇಳುವುದುಂಟು. ಇಲ್ಲಿ ಅಗ್ನಿ ಎಂದರೆ ಅಗ್ನಿಯಂತೆ ತೇಜಸ್ವಿಯಾದ ವಟು ಎಂದರ್ಥ. ಇಲ್ಲಿ ಸ್ವತಃ ಅಗ್ನಿಯೇ ಇದ್ದರೂ ಅಧ್ಯಯನ ಮಾಡುವ ಯೋಗ್ಯತೆ ಅಗ್ನಿಗೆ ಇಲ್ಲವಾದ್ದರಿಂದ ಅಧ್ಯಯನ ಮಾಡುವ ವಟುವನ್ನು ಗ್ರಹಿಸಬೇಕಾಗುತ್ತದೆ. ಹಾಗೆಯೇ ತಾನು ಮೃತನಾದ

ಮೇಲೆ ಗೃಹರಕ್ಷಣಾದಿ ಕಾರ್ಯವನ್ನು ತಾನು ಮಾಡಲು ಸಾಧ್ಯವಿಲ್ಲವಾದ್ದರಿಂದ ತನ್ನ ಪುತ್ರನನ್ನು ತನ್ನ ಸ್ಥಾನದಲ್ಲಿ ಆತ್ಮನೆಂದು ತಿಳಿಯಲಾಗುವುದು (೪೪-೪೫). ಕೆಲವು ಸಂದರ್ಭಗಳಲ್ಲಿ ಮಿಥ್ಯಾತ್ಮನನ್ನೇ ಆತ್ಮನೆಂದು ತಿಳಿಯಬೇಕಾಗುವುದು. ''ನಾನು ಕೃಶನಾಗಿದ್ದೇನೆ. ಉತ್ತಮಆಹಾರವನ್ನು ಸೇವಿಸಿ ಪುಷ್ಟನಾಗುವೆನು'' ಎಂಬಲ್ಲಿ ದೇಹವನ್ನೇ ಆತ್ಮನೆಂದು ತಿಳಿಯುವುದು ಯುಕ್ತವಾದದ್ದು. ಪುಷ್ಟಿಕಾರಣವಾದ ಆಹಾರಾದಿಗಳನ್ನು ಸೇವಿಸಲು ತನ್ನ ಪುತ್ರನನ್ನು ಇಲ್ಲಿ ನೇಮಿಸುವುದಿಲ್ಲ! ತನ್ನ ದೇಹವು ಮಿಥ್ಯಾತ್ಮವಾದರೂ ಅದನ್ನೇ ಇಲ್ಲಿ ಗ್ರಹಿಸಬೇಕು (೪೬). ''ತಪಸ್ಸು ಮಾಡಿ ಸ್ವರ್ಗಲೋಕವನ್ನು ಪಡೆಯುವೆನು'' ಎಂಬಲ್ಲಿ ಹೇಗೆ? ಇಲ್ಲಿ ಕರ್ತೃವೂ ಭೋಕ್ತೃವೂ ಆದ ವಿಜ್ಞಾನಮಯಕೋಶವನ್ನು ಆತ್ಮನೆಂದು ತಿಳಿಯಬೇಕು. ಇಲ್ಲಿ ಕೃಚ್ಛ್ರಚಾಂದ್ರಾಯಣಾದಿ ಕಷ್ಟಕರವಾದ ತಪಸ್ಸಿಗೆ ಈಡಾಗತಕ್ಕದ್ದು ದೇಹ, ಸ್ವರ್ಗಸುಖದ ಭೋಗ ಅದಕ್ಕಿಲ್ಲ. ಪುತ್ರನಿಗೂ ಇಲ್ಲ. ಮುಖ್ಯಾತ್ಮನಂತೂ ಕರ್ತೃವೂ ಅಲ್ಲ, ಭೋಕ್ತೃವೂ ಅಲ್ಲ. ಆದ್ದರಿಂದ ಮಿಥ್ಯಾತ್ಮವಾದ ವಿಜ್ಞಾನಮಯಕೋಶವೇ ಇಲ್ಲಿ ಆತ್ಮ (೪೭). ಯಾವಾಗ ಮನುಷ್ಯನು ಶಮದಮಾದಿಗಳನ್ನು ಸಂಪಾದಿಸಿ ''ನಾನು ಮೋಕ್ಷವನ್ನು ಪಡೆಯುವೆನು'' ಎಂದು ನಿಶ್ಚಯಿಸುತ್ತಾನೋ ಗುರು ಮತ್ತು ಶಾಸ್ತ್ರಗಳ ದ್ವಾರಾ ಚಿದಾನಂದಸ್ವರೂಪನಾದ ಆತ್ಮನನ್ನು ತಿಳಿಯುತ್ತಾನೋ ಮತ್ತು ಯಾವ ಕರ್ಮವನ್ನು ಮಾಡಲೂ ಬಯಸುವುದಿಲ್ಲವೋ ಆಗ ಶುದ್ಧಚೇತನನೇ ಆತ್ಮನೆಂದು ಭಾವಿಸುವುದು ಯುಕ್ತವಾಗುತ್ತದೆ (೪೮).

ಹೀಗೆ ಗೌಣ - ಮಿಥ್ಯಾ - ಮುಖ್ಯಾತ್ಮರೆಂದು ಮೂರು ಪ್ರಕಾರಗಳಿರುವಾಗ ಯಥೋಚಿತವಾಗಿ ಅವರಲ್ಲೊಬ್ಬನನ್ನು ಆತ್ಮನೆಂದು ಗ್ರಹಿಸುವುದು ಯುಕ್ತವಾಗಿದೆ. ಹೇಗೆಂದರೆ, ''**ಬ್ರಾಹ್ಮಣೋ ಬೃಹಸ್ಪತಿಸವೇನ ಯಜೇತ**'' ಎಂಬಲ್ಲಿ ಬ್ರಾಹ್ಮಣನಿಗೆ ಮಾತ್ರ ಬೃಹಸ್ಪತಿ ಯಾಗದಲ್ಲಿ ಅಧಿಕಾರ, ಕ್ಷತ್ರಿಯ ವೈಶ್ಯರಿಗೆ ಇಲ್ಲ ಎಂದು - ನಿರ್ಣಯ. ''**ರಾಜಾ ರಾಜಸೂಯೇನ ಯಜೇತ** '' ಇಲ್ಲಿ ರಾಜನಿಗೆ ಮಾತ್ರ ಅಧಿಕಾರ. ''**ವೈಶ್ಯೋ ವೈಶ್ಯಸ್ತೋಮೇನ ಯಜೇತ**'' ಇಲ್ಲಿ ವೈಶ್ಯನಿಗೆ ಮಾತ್ರ ಅಧಿಕಾರ. ಒಟ್ಟು ತಾತ್ಪರ್ಯವೇನೆಂದರೆ, ಯಾವ ವ್ಯವಹಾರದಲ್ಲಿ ಔಚಿತ್ಯವನ್ನನುಸರಿಸಿ ಯಾರು ಆತ್ಮನಾಗುವನೋ ಆತನಲ್ಲಿ ಅತ್ಯಂತಪ್ರೀತಿಯು ಕರ್ತೃವಿಗಿರುತ್ತದೆ. ಆತ್ಮನಿಗೆ ಉಪಕಾರಿಯಾಗಿ ಶೇಷನಾದವನಲ್ಲಿ ಪ್ರೀತಿ ಮಾತ್ರ ಇರುತ್ತದೆ, ಅತ್ಯಂತ ಪ್ರೀತಿಯಲ್ಲ. ಇನ್ನು ಆತ್ಮನೂ ಆಗದೆ ಆತ್ಮನಿಗೆ ಉಪಕಾರಿಯೂ ಆಗದೆ ಇರುವ

ವಸ್ತುವಿನಲ್ಲಿ ಉಭಯವಿಧವಾದ ಪ್ರೀತಿಯೂ ಇರುವುದಿಲ್ಲ (೪೯-೫೦). ಹೀಗೆ ಆತ್ಮನೂ ಅವನಿಗೆ ಉಪಕಾರಿಯಾದ ಶೇಷನೂ ಆಗದ ಮೂರನೆಯ ಪದಾರ್ಥವು ಉಪೇಕ್ಷ್ಯ, ದ್ವೇಷ್ಯ - ಎಂದು ಎರಡು ವಿಧ. ದಾರಿಯಲ್ಲಿ ಬಿದ್ದಿರುವ ಹುಲ್ಲುಕಡ್ಡಿ, ಮಣ್ಣುಹೆಂಟೆ ಮೊದಲಾದದ್ದು ಉಪೇಕ್ಷ್ಯ. ತನಗೆ ತೊಂದರೆಯನ್ನು ಉಂಟುಮಾಡುವ ಹಾವು, ಹುಲಿ - ಮೊದಲಾದದ್ದು ದ್ವೇಷ್ಯ - ಹೀಗೆ ಆತ್ಮ, ಶೇಷ (ಆತ್ಮನಿಗೆ ಉಪಕಾರಿ) ಉಪೇಕ್ಷ್ಯ, ದ್ವೇಷ್ಯ ಎಂದು ವ್ಯವಹಾರದಲ್ಲಿ ನಾಲ್ಕು ಪ್ರಕಾರಗಳಾಗುತ್ತವೆ. ಅವುಗಳಲ್ಲಿ ಇದೇ ಆತ್ಮ, ಇದೇ ಶೇಷ - ಇತ್ಯಾದಿ ವ್ಯಕ್ತಿ ನಿಯಮವೇನೂ ಇಲ್ಲ. ಅವುಗಳಿಂದಾಗುವ ಕಾರ್ಯವನ್ನನುಸರಿಸಿ ಇದು ಪ್ರಿಯತಮ, ಇದು ಪ್ರಿಯ, ಇದು ಉಪೇಕ್ಷ್ಯ, ಇದು ದ್ವೇಷ್ಯ - ಎಂದು ತಿಳಿಯಬೇಕು (೫೧-೫೨). ಉದಾಹರಣೆಗೆ - ಹುಲಿಯು ಆಕ್ರಮಿಸುವುದಕ್ಕಾಗಿ ನುಗ್ಗಿಬರುತ್ತಿದ್ದರೆ ದ್ವೇಷ್ಯವಾಗುತ್ತದೆ. ಅದು ತನ್ನ ಪಾಡಿಗೆ ಎಲ್ಲಿಗೋ ಹೋಗುತ್ತಿದ್ದರೆ ಉಪೇಕ್ಷ್ಯವಾಗುತ್ತದೆ. ಸಾಕಿದ ಹುಲಿಯನ್ನು ಲಾಲಿಸಿದಾಗ ಹರ್ಷವಿನೋದಗಳಾಗುವುದರಿಂದ ಆ ಹುಲಿಯು ಉಪಕಾರಿಯಾದ ಶೇಷವೆನಿಸುತ್ತದೆ. ಹೀಗೆ ವ್ಯಕ್ತಿನಿಯಮವಿಲ್ಲದಿದ್ದರೂ ಲಕ್ಷಣದಿಂದ ಆತ್ಮತ್ವಾದಿ ವ್ಯವಸ್ಥೆಯನ್ನು ಮಾಡಿಕೊಳ್ಳಬಹುದು. ಅನುಕೂಲತ್ವವು ಪ್ರಿಯವಸ್ತುವಿನ ಲಕ್ಷಣ. ಪ್ರತಿಕೂಲತ್ವವು ದ್ವೇಷ್ಯದ ಲಕ್ಷಣ. ಈ ಎರಡು ಲಕ್ಷಣಗಳೂ ಇಲ್ಲದೆ ತಟಸ್ಥವಾಗಿರುವುದು ಉಪೇಕ್ಷ್ಯದ ಲಕ್ಷಣ (೫೩-೫೪). ಏವಂಚ ಆತ್ಮನು ಪ್ರಿಯತರ. ಆತ್ಮೋಪಕಾರಿಯಾದವನು ಪ್ರಿಯ. ಇವೆರಡು ಅಲ್ಲದವರಲ್ಲಿ ಕೆಲವರು ದ್ವೇಷ್ಯರು, ಕೆಲವರು ಉಪೇಕ್ಷಣೀಯರು. ಹೀಗೆ ನಾಲ್ಕು ಪ್ರಕಾರವಾಗಿ ಲೋಕವ್ಯವಹಾರವು ವ್ಯವಸ್ಥಿತವಾಗಿದೆ. ಇದು ಉಪನಿಷತ್ತಿನಲ್ಲಿದ್ದು ಯಾಜ್ಞವಲ್ಕ್ಯ ಮುನಿಗಳಿಗೆ ಸಂಮತವಾದ ವಿಭಾಗವಾಗಿದೆ.(೫೫) ಇದು ಮೈತ್ರೇಯೀ ಬ್ರಾಹ್ಮಣದಲ್ಲಿ ಮಾತ್ರವಲ್ಲ, ಪುರುಷವಿಧ ಬ್ರಾಹ್ಮಣದಲ್ಲಿಯೂ **"ತದೇತತ್ಪ್ರೇಯಃ ಪುತ್ರಾತ್ಪ್ರೇಯೋ ವಿತ್ತಾತ್ಪ್ರೇಯೋಽನ್ಯಸ್ಮಾತ್ ಸರ್ವಸ್ಮಾದಾಂತರಂ ಯದಯಮಾತ್ಮಾ"** (ಬೃ.ಉ.೧-೪-೮) ಎಂದು ಉಕ್ತವಾಗಿದೆ. ಆತ್ಮನು ಪುತ್ರ, ಧನಾದಿಗಳೆಲ್ಲಕ್ಕಿಂತ ಆಂತರವಾದ ತತ್ತ್ವವೆಂದು ಉಕ್ತವಾಗಿದೆ. ಆದ್ದರಿಂದ ಆತ್ಮನು ನಿರತಿಶಯಪ್ರೇಮಾಸ್ಪದನೆಂದು ಸಿದ್ಧವಾಗುತ್ತದೆ (೫೬). ಶ್ರುತ್ಯುಕ್ತವಾದ ವಿಚಾರದೃಷ್ಟಿಯಿಂದ ಪರಿಶೀಲಿಸಿದರೂ ಸಾಕ್ಷಿಯೇ ಆತ್ಮನೆಂದು ಸಿದ್ಧವಾಗುತ್ತದೆ. ಅನ್ನಮಯಾದಿ ಪಂಚಕೋಶಗಳನ್ನು ವಿವೇಚಿಸಿ, ಅವನ್ನು ಪೃಥಕ್ಕರಿಸಿ ಅಂತರ್ಗತನಾದ ಆತ್ಮನ ಸಾಕ್ಷಾದನುಭವವೇ ವಿಚಾರಣೆ

(೫೭). ಜಾಗರ, ಸ್ವಪ್ನ, ಸುಷುಪ್ತಿಗಳು ಒಂದಾದಮೇಲೊಂದರಂತೆ ಬಂದು ಹೋಗುತ್ತವೆಯಷ್ಟೆ. ಇವುಗಳ ಆಗಮನ ನಿರ್ಗಮನಗಳು ನಿತ್ಯಚೈತನ್ಯವಾದ ಯಾವ ಸಾಕ್ಷಿಯಿಂದ ಪ್ರತೀತವಾಗುತ್ತವೆಯೋ ಆ ಸ್ವಪ್ರಕಾಶನೂ ಚಿದ್ರೂಪನೂ ಆದವನೇ ಆತ್ಮನಾಗಿದ್ದಾನೆ. ಪ್ರಾಣದಿಂದ ಹಿಡಿದು ಧನಪರ್ಯಂತವಸ್ತುಗಳು ಈ ಆತ್ಮನಿಗೆ ತರತಮಭಾವದಿಂದ ಸಮೀಪವರ್ತಿಗಳಾಗಿವೆ. ಆದ್ದರಿಂದಲೇ ಇವುಗಳಲ್ಲಿ ಪ್ರೀತಿಯು ತಾರತಮ್ಯದಿಂದ ಕಂಡುಬರುತ್ತದೆ (೫೮-೫೯). ಹೇಗೆಂದರೆ, ಧನಕ್ಕಿಂತ ಪುತ್ರನು ಅಧಿಕಪ್ರಿಯನು. ಪುತ್ರನಿಗಿಂತ ತನ್ನದೇಹವೂ, ದೇಹಕ್ಕಿಂತ ಇಂದ್ರಿಯವೂ, ಇಂದ್ರಿಯಕ್ಕಿಂತ ಪ್ರಾಣವೂ ಅಧಿಕಪ್ರಿಯವಾಗಿರುತ್ತವೆ. ಪ್ರಾಣಕ್ಕಿಂತ ಆತ್ಮನು ಪರಮಪ್ರಿಯ (೬೦).

ಈ ವಿಷಯವು ಹೀಗೆ ಲೋಕಸಿದ್ಧವಾಗಿದ್ದರೂ ಸಂದೇಹವನ್ನು ನಿವಾರಿಸುವುದಕ್ಕಾಗಿ ಶ್ರುತಿಯು ಜ್ಞಾನಿಗೂ - ಅಜ್ಞಾನಿಗೂ ನಡೆದ ಒಂದು ವಿವಾದವನ್ನು ಉದಾಹರಿಸಿದೆ. ಅಲ್ಲಿ ಆತ್ಮನೇ ಪರಮಪ್ರಿಯನೆಂದು ನಿರ್ಣಯಿಸಲಾಗಿದೆ. ದೃಶ್ಯವಾದ ಸಕಲಪದಾರ್ಥಗಳಿಗಿಂತಲೂ ಸಾಕ್ಷಿಯೇ ಪರಮಪ್ರಿಯನೆಂದು ತತ್ತ್ವಜ್ಞನ ಹೇಳಿಕೆ. ಮೂಢನಾದರೋ 'ಪುತ್ರಾದಿಗಳೇ ಹೆಚ್ಚು ಪ್ರಿಯರು. ಇವರನ್ನು ಪ್ರೀತಿಸಿ ಭೋಗಿಸುವುದಕ್ಕಾಗಿಯೇ ಸಾಕ್ಷಿ ಇದ್ದಾನೆ' ಎನ್ನುತ್ತಾನೆ ! (೬೧-೬೨). ಎಲ್ಲರಿಗಿಂತಲೂ ಆತ್ಮನೇ ಪ್ರಿಯತಮನೆಂದು ಆಚಾರ್ಯನು ಹೇಳಿದಾಗ, ಅದನ್ನೊಪ್ಪದೆ ಆತ್ಮನಿಗಿಂತ ಪುತ್ರಾದಿಗಳು ಪ್ರಿಯತಮರೆಂದು ಇಬ್ಬರು ಹೇಳುತ್ತಾರೆ. ಒಬ್ಬನು ಆಚಾರ್ಯನ ಶಿಷ್ಯ, ಇನ್ನೊಬ್ಬನು ಪ್ರತಿವಾದಿ. ಅವರಿಬ್ಬರಿಗೂ ತತ್ತ್ವಜ್ಞನಾದ ಆಚಾರ್ಯನು ''ನಿನಗೆ ಪ್ರಿಯವಾದ ವಸ್ತು ನಿನ್ನನ್ನೇ ಅಳುವಂತೆ ಮಾಡುತ್ತದೆ'' ಎಂದು ಉತ್ತರಕೊಡುತ್ತಾನೆ. ಅವರಿಬ್ಬರಲ್ಲಿ ಶಿಷ್ಯನಿಗೆ ಆ ಮಾತು ಈ ಪ್ರಕಾರವಾಗಿ ಉತ್ತರವಾಗುತ್ತದೆ. ಹೇಗೆಂದರೆ, ಶಿಷ್ಯನು ತನ್ನ ಮನಸ್ಸಿನಲ್ಲಿಯೇ ವಿಚಾರಮಾಡಿ ನಾನು ಪ್ರಿಯತಮನೆಂದು ಭಾವಿಸಿದ ಪುತ್ರನು ಪ್ರಿಯತಮನಲ್ಲ, ನಾನು ಹೇಳಿದುದು ತಪ್ಪು. ಮಕ್ಕಳಿಲ್ಲದವರಿಗೆ ಮುಂದೆ ಹುಟ್ಟಬೇಕಾದ ಪುತ್ರನು ನಾನಾಪ್ರಕಾರವಾದ ಚಿಂತೆಯನ್ನೂ ಕ್ಲೇಶವನ್ನೂ ಉಂಟುಮಾಡುತ್ತಾನೆ. ತಾಯಿಯ ಗರ್ಭವನ್ನು ಸೇರಿದರೂ ಗರ್ಭಪಾತವಾಗಿ ಪೀಡಿಸಬಹುದು. ಜನನಕಾಲದಲ್ಲಿಯೂ ತಾಯಿಗೆ ಯಾತನೆಯನ್ನೀಯುತ್ತಾನೆ (೬೩-೬೪). ಹುಟ್ಟಿದಮೇಲೂ ಬಾಲಕನಿಗೆ ಗ್ರಹಪೀಡೆ, ರೋಗ, ಮೂರ್ಖತೆಗಳಿದ್ದು ತಂದೆತಾಯಿಗಳನ್ನು ಗೋಳಾಡಿಸುವನು. ಉಪನಯನವಾದ ಮೇಲೆ ಮಗನು

ವಿದ್ಯೆಯನ್ನು ಕಲಿಯದೆ ಮೂಢನಾಗಿರಬಹುದು. ಪಂಡಿತನಾದರೂ ವಿವಾಹವಿಲ್ಲದಿರಬಹುದು. ಯುವಕನಾದಾಗ ಮಗನು ಪರಸ್ತ್ರೀವ್ಯಾಮೋಹದಲ್ಲಿ ತೊಡಗಬಹುದು. ಗೃಹಸ್ಥನಾದರೂ ಹೊಟ್ಟೆ ಬಟ್ಟೆಗಿಲ್ಲದ ದರಿದ್ರನಾಗಬಹುದು. ಇವುಗಳಿಂದ ತಂದೆತಾಯಿಗಳ ದುಃಖಕ್ಕೆ ಪಾರವಿಲ್ಲದೆ ಹೋಗುತ್ತದೆ. ಹಣವಂತನಾದರೂ ಅಲ್ಪಾಯುವಾಗಿ ಮಗನು ಸತ್ತು ಹೋಗಬಹುದು. ಈ ಪ್ರಕಾರವಾಗಿ ಶಿಷ್ಯನು ವಿವೇಚಿಸಿ ಪುತ್ರಾದಿಗಳಲ್ಲಿ ಅತಿಶಯಪ್ರೀತಿಯು ಯೋಗ್ಯವಲ್ಲವೆಂದು ನಿಶ್ಚಯಿಸಿ, ತನ್ನ ಪ್ರತ್ಯಗಾತ್ಮನಲ್ಲಿ ಪರಮಪ್ರೀತಿಯನ್ನು ತಳೆದು ಹಗಲುರಾತ್ರಿಗಳಲ್ಲಿಯೂ ಆತ್ಮಾನುಸಂಧಾನದಲ್ಲಿ ತೊಡಗುವನು. ಇದು ಶಿಷ್ಯನಿಗೆ ಹೇಳಿದ ಉತ್ತರದ ಫಲ. ಇದು ಶಿಷ್ಯನಿಗೆ ವರವಾಗಿಬಿಡುತ್ತದೆ (೬೬-೬೮). ಹಠವಾದಿಯಾದ ಪ್ರತಿವಾದಿಗೆ ಈ ಉತ್ತರವೇ ಶಾಪವಾಗಿ ಪರಿಣಮಿಸುತ್ತದೆ. ಹೇಗೆಂದರೆ, ಆಚಾರ್ಯನ ಉತ್ತರವನ್ನು ಲಕ್ಷಿಸದೆ ಆಗ್ರಹಯುಕ್ತನಾದ ಪ್ರತಿವಾದಿಯು ಆತ್ಮನಿಗಿಂತ ಪುತ್ರಧನಾದಿಗಳೇ ಪ್ರೀತಿಪಾತ್ರರು ಎನ್ನುತ್ತಾನೆ. ದುರಭಿಮಾನದಿಂದಲೋ ಬ್ರಹ್ಮದ್ವೇಷದಿಂದಲೋ ತನ್ನ ಪಕ್ಷವನ್ನು ಬಿಡದೆ ವಾದಕ್ಕಿಳಿಯುವ ಪ್ರತಿವಾದಿಗೆ ನರಕವಾಗುವುದೆಂದು ಶಾಸ್ತ್ರವಚನವಿದೆ. ಆತನಿಗೆ ಮುಂದೆ ಪ್ರಾಪ್ತವಾಗುವ ನಾನಾಜನ್ಮಗಳಲ್ಲಿ ಪುತ್ರಭಾರ್ಯಾದಿಗಳ ವಿಯೋಗವೂ ಅವರಿಂದ ಹಲವು ಪೀಡೆಗಳೂ ಉಂಟಾಗಿ ಆತನು ಅಳಬೇಕಾಗುತ್ತದೆ. ಆಚಾರ್ಯನ ಉತ್ತರವು ಪ್ರತಿವಾದಿಗೆ ಶಾಪವಾಗಿ ಬಿಡುತ್ತದೆ. ಹೇಗೆಂದರೆ, ಬ್ರಹ್ಮಜ್ಞಾನಿಯಾದವನು ಬ್ರಹ್ಮಸ್ವರೂಪನೇ ಆಗಿರುತ್ತಾನೆ. ಆತನೇ ಪರಮಾತ್ಮನಾಗಿರುತ್ತಾನೆ. ಆದ್ದರಿಂದ ಆತನು ಹೇಳಿದ ಮಾತು ಈಶ್ವರಾಜ್ಞೆಯಾದ್ದರಿಂದ ಸತ್ಯವಾಗಿಯೇ ತೀರುತ್ತದೆ. ಶಿಷ್ಯನಿಗೊಂದು ಬಗೆಯಲ್ಲಿ ಪ್ರತಿವಾದಿಗೆ ಇನ್ನೊಂದು ಬಗೆಯಲ್ಲಿ ಸತ್ಯವಾಗಿ ಪರಿಣಮಿಸುತ್ತದೆ (೬೯-೭೦). ಯಾವಾತನು ಸಾಕ್ಷಿಯಾದ ಆತ್ಮನನ್ನು ಅತ್ಯಂತಪ್ರಿಯನೆಂದು ತಿಳಿದು ಆತ್ಮನನ್ನು ಸೇವಿಸುತ್ತಾನೋ - ಎಂದರೆ - ಧ್ಯಾನಿಸುತ್ತಿರುವನೋ ಆತನಿಗೆ ಪ್ರಿಯತಮನಾದ ಆತ್ಮನು, ಪ್ರತಿವಾದಿಗೆ ಪ್ರಿಯನಾದ ಪುತ್ರಾದ್ಯಾತ್ಮನಂತೆ ಎಂದಿಗೂ ನಶಿಸುವುದಿಲ್ಲ. ಪ್ರತಿವಾದಿಯು ಪುತ್ರಧನಾದಿಗಳನ್ನು ಅತಿಯಾಗಿ ಪ್ರೀತಿಸುವುದು ಭ್ರಾಂತಿಯಿಂದ. ಆ ಪ್ರೀತಿಯು ನಿತ್ಯವಾದದ್ದಲ್ಲ. ನಿಮಿತ್ತಭೇದದಿಂದ ವ್ಯಭಿಚರಿತವಾದದ್ದು. ಶಿಷ್ಯನ ಆತ್ಮಪ್ರೀತಿಯು ಗುರೂಪದೇಶದಿಂದಲೂ ಶಾಸ್ತ್ರಪರ್ಯಾಲೋಚನೆ ಯಿಂದಲೂ ಬಂದದ್ದು. ಅದು ವಾಸ್ತವಿಕವಾದ್ದರಿಂದ ನಷ್ಟವಾಗತಕ್ಕದ್ದಲ್ಲ (೭೧). ಮುಖ್ಯಾತ್ಮನು

ನಿರತಿಶಯಪ್ರೇಮಾಸ್ಪದನಾದ್ದರಿಂದ ಪರಮಾನಂದ ರೂಪನಾಗಿದ್ದಾನೆ. ಎಲ್ಲೆಲ್ಲಿ ಪ್ರೀತಿಯು ವರ್ಧಿಸುತ್ತ ಹೋಗುವುದೋ ಅಲ್ಲಲ್ಲಿ ಆನಂದವೂ ವರ್ಧಿಸುತ್ತದೆ. ತೈತ್ತಿರೀಯಶ್ರುತಿಯು ಸಾರ್ವಭೌಮನಿಂದ ಹಿಡಿದು ಹಿರಣ್ಯಗರ್ಭನವರೆಗೆ ಈ ಪ್ರಕಾರವಾಗಿ ಆನಂದವು ವರ್ಧಿಸುವುದನ್ನು ತಿಳಿಸಿದೆ. ಬೃಹದಾರಣ್ಯಕ-ದಲ್ಲಿಯೂ ಈ ವಿಚಾರವು ಬಂದಿದೆ. ಇಲ್ಲೊಂದು ಶಂಕೆ ಹುಟ್ಟಬಹುದು. ಚೈತನ್ಯದಂತೆ ಆನಂದವೂ ಚಿದಾತ್ಮನ ಸ್ವಭಾವವಾದರೆ, ಸಕಲಧೀವೃತ್ತಿಗಳಲ್ಲಿಯೂ ಚೈತನ್ಯವು ಹರಿದುಬರುವಂತೆ ಆನಂದವೂ ಹರಿದು ಬರಲಿ. ಆನಂದವೇಕೆ ಹರಿದುಬರುವುದಿಲ್ಲ? (೭೨-೭೩) ಹಾಗಲ್ಲ; ದೀಪವು ಉಷ್ಣವೂ ಪ್ರಕಾಶಾತ್ಮಕವೂ ಆಗಿದೆ. ದೀಪದ ಪ್ರಕಾಶವು ಮಾತ್ರ ಮನೆಯಲ್ಲಿ ಹರಡುತ್ತದೆ. ಉಷ್ಣತೆ ಹರಡುವುದಿಲ್ಲ. ಹಾಗೆಯೇ ಆತ್ಮನ ಚೈತನ್ಯವು ಧೀವೃತ್ತಿಯಲ್ಲಿ ಬರುತ್ತದೆ. ಆನಂದವು ಹರಿದು ಬರುವುದಿಲ್ಲ.

ಶಂಕೆ - ಚಿದಾನಂದಗಳು ಆತ್ಮಸ್ವರೂಪಗಳೇ ಸರಿಯಷ್ಟೆ, ಅವೆರಡೂ ಅಭಿನ್ನಗಳೇ ಆಗಿವೆ. ಹೀಗಿರುವಾಗ ಧೀವೃತ್ತಿಯು ಚಿತ್ತನ್ನು ಮಾತ್ರ ಅಭಿವ್ಯಂಜಿಸುವುದು ಹೇಗೆ? ಆನಂದವನ್ನೇಕೆ ಅಭಿವ್ಯಂಜಿಸುವುದಿಲ್ಲ?

ಸಮಾಧಾನ - ಹಾಗಲ್ಲ; ಶ್ರೀಗಂಧವೃಕ್ಷದ ಕೊರಡಿನಲ್ಲಿ ಗಂಧ, ರೂಪ, ರಸ, ಸ್ಪರ್ಶ - ಇವು ನಾಲ್ಕೂ ಇವೆ. ಘ್ರಾಣಾದಿಇಂದ್ರಿಯಗಳಲ್ಲಿ ಒಂದು ಇಂದ್ರಿಯದಿಂದ ಕೊರಡಿನ ಒಂದೇ ಗುಣವು ಗೃಹೀತವಾಗುತ್ತದೆ. ಆ ಇಂದ್ರಿಯವು ಇನ್ನೊಂದು ಗುಣವನ್ನು ಗ್ರಹಿಸುವುದಿಲ್ಲ. ಘ್ರಾಣೇಂದ್ರಿಯವು ಗಂಧವನ್ನು ಮಾತ್ರ ಗ್ರಹಿಸುತ್ತದೆ. ರೂಪಾದಿಗಳಲ್ಲೊಂದನ್ನೂ ಗ್ರಹಿಸುವುದಿಲ್ಲ. ನೇತ್ರವು ರೂಪವನ್ನು ಮಾತ್ರ ಗ್ರಹಿಸುತ್ತದೆ. ಗಂಧವನ್ನು ಗ್ರಹಿಸುವುದಿಲ್ಲ. ಹಾಗೆಯೇ ಚಿದಾನಂದಗಳಲ್ಲಿ ಚಿತ್ತಿಗೆ ಮಾತ್ರ ಧೀವೃತ್ತಿಯಲ್ಲಿ ಅಭಿವ್ಯಕ್ತಿ ಇರುತ್ತದೆ. ಆನಂದಕ್ಕೆ ಅಭಿವ್ಯಕ್ತಿ ಇರುವುದಿಲ್ಲ(೭೪-೭೫).

ಶಂಕೆ - ಈ ದೃಷ್ಟಾಂತವು ಸರಿಯಾದ್ದಲ್ಲ. ಚಿದಾನಂದಗಳು ಎಂದೂ ಬೇರೆ ಬೇರೆಯಾಗಿರುವುದಿಲ್ಲ, ಗಂಧ, ಸ್ಪರ್ಶಾದಿಗಳು ಒಂದನ್ನೊಂದು ಅಗಲಿ ಬೇರೆ ಬೇರೆಯಾಗಿರುತ್ತವೆ. ಆದ್ದರಿಂದ ಧೀವೃತ್ತಿಗಳಲ್ಲಿ ಚೈತನ್ಯದೊಡನೆ ಆನಂದವೂ ಇರಲೇಬೇಕಾಗುವುದು.

ಸಮಾಧಾನ - ಒಳ್ಳೆಯದು; ಚಿದಾನಂದಗಳು ಬೇರೆ ಬೇರೆಯಾಗಿಲ್ಲ - ಎಂದೆಯಲ್ಲ, ನೀನು ಹೇಳುವ ಅಭೇದವು ಸಾಕ್ಷಿಯಾದ ಆತ್ಮನಲ್ಲಿ

ಇರುವುದೋ? ಅಥವಾ ಉಪಾಧಿಯಾದ ಧೀವೃತ್ತಿಯಲ್ಲಿಯೋ? ಹೇಳು (೭೬). ಮೊದಲನೆಯ ಪಕ್ಷವಾದರೆ, ಅಂತೆಯೇ ಗಂಧ, ರೂಪಾದಿಗಳೂ ಹೂವಿನಲ್ಲಿ ಅಭಿನ್ನವಾಗಿಯೇ ಒಂದೆಡೆಯಲ್ಲಿರುತ್ತವೆ. ಅವನ್ನು ಗ್ರಹಿಸುವ ಇಂದ್ರಿಯಗಳು ಬೇರೆ ಬೇರೆಯಾದ್ದರಿಂದ ಗಂಧ, ರೂಪಾದಿಗಳೂ ಭಿನ್ನವಾದವು - ಎಂದು ಹೇಳುವೆಯಾದರೆ ನಾನೂ ಹಾಗೆಯೇ ಉತ್ತರಹೇಳಬಹುದು. ಚೈತನ್ಯವನ್ನು ಗ್ರಹಿಸುವ ಧೀವೃತ್ತಿಯು ರಾಜಸವಾದದ್ದು. ಆನಂದವನ್ನು ಗ್ರಹಿಸುವ ಧೀವೃತ್ತಿಯು ಸಾತ್ತ್ವಿಕವಾದದ್ದು. ಧೀವೃತ್ತಿಗಳು ಬೇರೆ ಬೇರೆಯಾದ್ದರಿಂದ ಒಂದೇ ರಾಜಸವೃತ್ತಿಯು ಎರಡನ್ನೂ ಗ್ರಹಿಸುವುದಿಲ್ಲ (೭೭). ಆದರೆ ಬುದ್ಧಿಯ ಸಾತ್ತ್ವಿಕವೃತ್ತಿಯು ಚಿದಾನಂದಗಳೆರಡನ್ನೂ ಗ್ರಹಿಸುತ್ತದೆ. ಏಕೆಂದರೆ, ಅದು ಅತ್ಯಂತ ನಿರ್ಮಲವಾದದ್ದು. ಬುದ್ಧಿಯ ರಾಜಸವೃತ್ತಿಯಾದರೋ ಮಲಿನವಾದ್ದರಿಂದ ಚೈತನ್ಯವನ್ನು ಮಾತ್ರ ಗ್ರಹಿಸಬಲ್ಲದು. ಆನಂದವನ್ನು ಗ್ರಹಿಸಲು ಅದು ಶಕ್ತವಲ್ಲ. ಆನಂದಾಂಶವು ಈ ವೃತ್ತಿಯಲ್ಲಿ ತೋರುವುದಿಲ್ಲ(೭೮). ಹುಣಿಸೆಹಣ್ಣು ಬಹಳ ಹುಳಿಯಾಗಿರುತ್ತದೆ. ಅದಕ್ಕೆ ಸ್ವಲ್ಪ ಉಪ್ಪನ್ನು ಸೇರಿಸಿದರೆ ಹುಳಿಯ ಅಂಶ ಕುಗ್ಗಿ ಅತ್ಯಲ್ಪವಾಗುವುದು. ಹಾಗೆಯೇ ರಾಜಸವೃತ್ತಿಯಲ್ಲಿ ಆನಂದಾಂಶವು ಅತ್ಯಲ್ಪವಾಗಿಬಿಡುತ್ತದೆ. ಆತ್ಮನು ಪರಮಪ್ರಿಯನಾದ್ದರಿಂದ ಆನಂದದ ಸಾಮಾನ್ಯ ಪ್ರತೀತಿಯು ಸದಾ ಇರುತ್ತದೆ. ಬುದ್ಧಿವೃತ್ತಿಯಲ್ಲಿ ಅದು ವಿಶೇಷವಾಗಿ ಪ್ರತೀತವಾಗುವುದು. ಬುದ್ಧಿವೃತ್ತಿಯು ಸತ್ತ್ವಗುಣದಿಂದ ನಿರ್ಮಲವಾದಾಗ ಯೋಗಿಗಳಿಗೆ ಸಮಾಧಿಯಲ್ಲಿ ತೋರುವಂತೆ ಆತ್ಮಾನಂದವು ವಿಶೇಷವಾಗಿ ಪ್ರತೀತವಾಗುವುದು. ರಜೋಗುಣವು ಚಂಚಲಸ್ವಭಾವವುಳ್ಳದ್ದು. ಅದು ಧೀವೃತ್ತಿಯಲ್ಲಿ ಸೇರಿದರೆ, ಉಪ್ಪು ಹುಳಿಯಲ್ಲಿ ಸೇರಿದಂತಾಗಿ ಆನಂದಾಂಶವನ್ನು ಕಡಿಮೆಮಾಡುತ್ತದೆ. ತಮೋಗುಣವು ಸೇರಿದರೆ ಆನಂದಾಂಶವು ಇನ್ನೂ ಅಲ್ಪವಾಗುವುದು. ಇನ್ನೊಂದು ಉದಾಹರಣೆ ಕೊಡಬಹುದು. ಕನ್ನಡಿಯನ್ನು ಮುಖಕ್ಕೆ ನೇರವಾಗಿ ಹಿಡಿದರೆ, ಮುಖದ ಆಕಾರವೂ ಸೌಂದರ್ಯವೂ ಸ್ಫುಟವಾಗಿ ತೋರುತ್ತವೆ. ಕನ್ನಡಿಯನ್ನು ಅತ್ತಿಂದಿತ್ತ ಅಲ್ಲಾಡಿಸುತ್ತಿದ್ದರೆ ಸೌಂದರ್ಯವು ಅತ್ಯಲ್ಪ ಪ್ರಮಾಣದಲ್ಲಿ ತೋರುತ್ತದೆ. ಹಾಗೆ ಚಂಚಲಸ್ವಭಾವದ ರಜೋಗುಣವು ಸೇರಿದಾಗ ಧೀವೃತ್ತಿಯು ಆತ್ಮಾನಂದವನ್ನು ಅತ್ಯಲ್ಪ ಪ್ರಮಾಣದಲ್ಲಿ ಗ್ರಹಿಸುತ್ತದೆ (೭೯).

ಶಂಕೆ - ಆಗಲಿ; ಒಳ್ಳೆಯದು. ಆತ್ಮನು ಪರಮಪ್ರೇಮಾಸ್ಪದನಾದ್ದರಿಂದ

ಪರಮಾನಂದರೂಪನಾಗಿದ್ದಾನೆಂದು ವಿವೇಚಿಸಲು ಶಕ್ಯವಾಗುತ್ತದೆ ಎಂದು ತಿಳಿಯೋಣ. ಗೌಣಾತ್ಮ, ಮಿಥ್ಯಾತ್ಮರಿಗಿಂತ ಮುಖ್ಯಾತ್ಮನು ಪ್ರಿಯತಮನೆಂದೂ ತಿಳಿದದ್ದಾಯಿತು. ಆದರೆ ಈ ವಿವೇಚನೆಯಿಂದ ಉಪಯೋಗವೇನು? ಈ ವಿವೇಚನೆಯಿಂದ ಮುಕ್ತಿಯೇನೂ ಲಭಿಸದು. ಅಪರೋಕ್ಷಜ್ಞಾನವಾಗತಕ್ಕದ್ದು ಯೋಗದಿಂದ.

ಸಮಾಧಾನ - ನಿಜ; ಯಾವುದು ಯೋಗದಿಂದ ಸಾಧ್ಯವೋ ಅದು ವಿವೇಚನೆಯಿಂದಲೂ ಸಾಧ್ಯವೆಂದು ಹೇಳುತ್ತೇವೆ. ಈ ಬಗೆಯ ವಿವೇಚನೆಯಿಂದಲೂ ಅಪರೋಕ್ಷಜ್ಞಾನವಾಗುತ್ತದೆ. ಹಿಂದಿನ ಅಧ್ಯಾಯದಲ್ಲಿ ಯೋಗದಿಂದ ಅಪರೋಕ್ಷ ಜ್ಞಾನವಾಗುವ ಬಗೆಯನ್ನು ನಾವು ಹೇಳಿದ್ದೇವೆ. ಹಾಗೆಯೇ ಈ ಅಧ್ಯಾಯದಲ್ಲಿ ಹೇಳಿದಂತೆ ಗೌಣಾತ್ಮಾದಿಗಳನ್ನು ವಿವೇಚಿಸಿ ಕೋಶಪಂಚಕಗಳನ್ನು ಪೃಥಕ್ಕರಿಸಿದಾಗಲೂ ಅಪರೋಕ್ಷಜ್ಞಾನ ಉದಯಿಸುವುದು (೮೦-೮೧). ಭಗವದ್ಗೀತೆಯಲ್ಲಿ ''**ಯತ್ ಸಾಂಖ್ಯೈಃ ಪ್ರಾಪ್ಯತೇ ಸ್ಥಾನಂ ತದ್ಯೋಗೈರಪಿ ಗಮ್ಯತೇ**'' (ಭ.ಗೀ.೫-೫) ಎಂದು ಸ್ಮೃತವಾಗಿದೆ. ಆತ್ಮಾನಾತ್ಮವಿವೇಕದಿಂದ ಪ್ರಾಪ್ತವಾಗುವ ಸ್ಥಾನವೇ ಯೋಗಾಭ್ಯಾಸದಿಂದಲೂ ಪ್ರಾಪ್ತವಾಗುವುದೆಂದು ಅದರ ಅಭಿಪ್ರಾಯ. ಜ್ಞಾನಮಾರ್ಗದಿಂದಲೂ ಯೋಗಮಾರ್ಗದಿಂದಲೂ ಆತ್ಮಜ್ಞಾನವಾಗಿ ಮೋಕ್ಷಪ್ರಾಪ್ತಿಯಾಗುತ್ತದೆ(೮೨).

ಕೆಲವರಿಗೆ ಯೋಗಸಾಧನೆ ಅಸಾಧ್ಯ. ಇನ್ನು ಕೆಲವರಿಗೆ ಜ್ಞಾನಮಾರ್ಗವು ಕಷ್ಟ. ಇದನ್ನು ಸಮೀಕ್ಷಿಸಿ ಕರುಣಾಳುವಾದ ಪರಮೇಶ್ವರನು ಎರಡು ಮಾರ್ಗಗಳನ್ನು ಉಪದೇಶಿಸಿದ್ದಾನೆ. ವಾಸ್ತವವಾಗಿ ಯೋಗಾಭ್ಯಾಸವು ಬಹಳ ಆಯಾಸಕರವಾದದ್ದು. ಆತ್ಮಾನಾತ್ಮವಿವೇಚನೆಯು ಅಷ್ಟು ಆಯಾಸಕರವಲ್ಲ. ನಿನ್ನ ಯೋಗದಲ್ಲಿ ಅತಿಶಯವಾದರೂ ಏನು? ಯೋಗ, ಸಾಂಖ್ಯ-ಗಳೆರಡರಿಂದಾಗುವ ಪ್ರಯೋಜನವೂ ಒಂದೇ. ರಾಗದ್ವೇಷಾದಿಗಳ ನಿವೃತ್ತಿಯು ಉಭಯಪಕ್ಷಗಳಲ್ಲಿಯೂ ಇದ್ದೇ ಇದೆ(೮೩-೮೪). ಆತ್ಮನು ಪ್ರಿಯತಮನೆಂದು ಮನವರಿಕೆಯಾದವನಿಗೆ ವಿಷಯಭೋಗದಲ್ಲಿ ಪ್ರೀತಿಯು ತಾನಾಗಿ ತಪ್ಪಿ ಹೋಗುತ್ತದೆ. ಅದು ಪ್ರತಿಕೂಲವೆಂಬ ಭಾವನೆಯೂ ಇಲ್ಲದ್ದರಿಂದ ದ್ವೇಷವೂ ಇರುವುದಿಲ್ಲ. ವ್ಯವಹಾರದಶೆಯಲ್ಲಿ ತನ್ನ ದೇಹ, ಮಡದಿ, ಮಕ್ಕಳಿಗೆ ಕೇಡನ್ನು ಮಾಡತಕ್ಕವರಲ್ಲಿ ದ್ವೇಷವು ಇರುತ್ತದೆ ಎನ್ನುವುದಾದರೆ ಯೋಗಾಭ್ಯಾಸಿಗೂ

ಈ ದ್ವೇಷವು ತಪ್ಪಿದ್ದಲ್ಲ. ದ್ವೇಷಿಸತಕ್ಕವನು ಯೋಗಿಯೇ ಅಲ್ಲವೆನ್ನುವುದಾದರೆ, ದ್ವೇಷಿಸತಕ್ಕ ಜ್ಞಾನಮಾರ್ಗದವನು ವಿವೇಕಿಯೇ ಅಲ್ಲ ಎನ್ನಬಹುದು (೮೫-೮೬). ಇನ್ನು ವ್ಯವಹಾರಕಾಲದಲ್ಲಿ ದ್ವೈತದ ಭಾನವು ಉಭಯರಿಗೂ ಸಮಾನವಾಗಿರುತ್ತದೆ. ಸಮಾಧಿಕಾಲದಲ್ಲಿ ಯೋಗಿಗೆ ದ್ವೈತಭಾನ-ವಿರುವುದಿಲ್ಲವಾದರೆ, ಶ್ರುತಿಯುಕ್ತಿಗಳಿಂದ ಅದ್ವೈತವನ್ನು ವಿವೇಚಿಸತಕ್ಕವನಿಗೆ ಆ ಸಮಯದಲ್ಲಿ ದ್ವೈತಭಾನವಿರುವುದಿಲ್ಲ. ಈ ವಿಷಯವನ್ನು ಅದ್ವೈತಾನಂದವೆಂಬ ಮುಂದಿನ ಮೂರನೆಯ ಅಧ್ಯಾಯದಲ್ಲಿ ನಾವು ವಿವರಿಸುವೆವು. ಸರ್ವಮಂಗಳಮಸ್ತು(೮೭-೮೮). ಸದಾ ಆತ್ಮಾನಂದವನ್ನು ಅನುಭವಿಸುತ್ತಾ ಸಮಸ್ತ ಜಗತ್ತನ್ನೂ ಕಾಣದೆ ಹೋದವನು ಒಂದು ವಿಧದಲ್ಲಿ ಯೋಗಿಯೇ - ಎಂದು ಹೇಳುವೆಯಾದರೆ, ಅಯ್ಯಾ, ನಿನಗೆ ಶುಭಮಸ್ತು. ಸಂತುಷ್ಟನಾಗಿ ವರ್ಧಿಸು ! ಬ್ರಹ್ಮಾನಂದವೆಂಬ ಗ್ರಂಥದ ಈ ದ್ವಿತೀಯಾಧ್ಯಾಯದಲ್ಲಿ ಮಂದಬುದ್ಧಿಯವರಿಗೆ ಉಪಯೋಗವಾಗಲೆಂದು ಆತ್ಮಾನಂದವನ್ನು ವಿವೇಚಿಸಲಾಯಿತು.

ಇಲ್ಲಿಗೆ ಆತ್ಮಾನಂದ ಪ್ರಕರಣವು ಸಮಾಪ್ತವಾಯಿತು

---

# ೧೩. ಅದ್ವೈತಾನಂದಪ್ರಕರಣ

ಹಿಂದೆ ಯೋಗಾನಂದವೆಂದು ಯಾವುದನ್ನು ಹೇಳಿದೆವೋ ಅದನ್ನೇ ಆತ್ಮಾನಂದವೆಂದೂ ತಿಳಿಯಬೇಕು. ಇದು ಹೇಗೆ? ಯೋಗಾನಂದವು ಅದ್ವಿತೀಯವಾದದ್ದು. ಆತ್ಮಾನಂದವಾದರೋ ಗೌಣಾತ್ಮ, ಮಿಥ್ಯಾತ್ಮಗಳಿಗಿಂತ ಭಿನ್ನವಾದ್ದರಿಂದ ಸದ್ವಿತೀಯವಾಗಿದೆ. ಆದ್ದರಿಂದ ಇವೆರಡೂ ಒಂದೇ ಆಗಲಾರವು - ಎಂಬ ಶಂಕೆ ಇಲ್ಲಿ ಹುಟ್ಟುತ್ತದೆ. ಇದಕ್ಕೆ ಉತ್ತರವನ್ನು ಹೇಳುತ್ತೇವೆ, ಕೇಳು (೧).

ಈ ಬ್ರಹ್ಮಾನಂದಪ್ರಕರಣದಲ್ಲಿ ಅನೇಕಬಗೆಯ ಆನಂದಗಳನ್ನು ಹೆಸರಿಸಿರುವುದರಿಂದ ಗೊಂದಲವಾಗುವ ಸಂಭವ ಇದೆ. ಇದನ್ನು ಯೋಗಾನಂದ ಪ್ರಕರಣದಲ್ಲಿ ಸ್ವಲ್ಪ ವಿವರಿಸಲಾಗಿದೆ. ಇನ್ನೂ ಸ್ವಲ್ಪ ವಿವರಣೆ ಆವಶ್ಯಕವಾಗಿ ಕಂಡುಬರುತ್ತಿದೆ. ಈ ಪ್ರಕರಣದಲ್ಲಿ ಆನಂದಕ್ಕೆ ಬೇರೆ ಬೇರೆ ಹೆಸರುಗಳನ್ನು ಕೊಡಲಾಗಿದೆ. ಮುಖ್ಯವಾಗಿ ಆನಂದದ ಭೇದಗಳು ಬ್ರಹ್ಮಾನಂದ, ವಿದ್ಯಾನಂದ, ವಿಷಯಾನಂದ - ಎಂದು ಮೂರು. ಇವುಗಳಲ್ಲಿ ಬ್ರಹ್ಮಾನಂದವು ಮಹಾಸಾಗರವಿದ್ದಂತೆ. ವಿದ್ಯಾನಂದ ವಿಷಯಾನಂದಗಳು ಮಹಾಸಾಗರದ ಜಲದಿಂದ ತೆಗೆದ ಒಂದು ಬೊಗಸೆ ಅಥವಾ ಒಂದು ಕಣ ಜಲವಿದ್ದಂತೆ. ಈ ಅಲ್ಪಪ್ರಮಾಣದ ಜಲವೂ ಮಹಾಸಾಗರದಿಂದಲೇ ಬಂದಿದೆಯಾದ್ದರಿಂದ ಈ ಎರಡು ಆನಂದಗಳನ್ನು ಬ್ರಹ್ಮಾನಂದಪ್ರಕರಣದಲ್ಲಿ ಸೇರಿಸಿದ್ದಾರೆ.

ಇನ್ನು ಉಳಿದವು ಯೋಗಾನಂದ, ಆತ್ಮಾನಂದ ಮತ್ತು ಅದ್ವೈತಾನಂದ. ಇವು ಮೂರೂ ಬ್ರಹ್ಮಾನಂದಗಳೇ. ನಿಮಿತ್ತಭೇದದಿಂದ ಮೂರು ಹೆಸರುಗಳನ್ನಿಟ್ಟು ಅವುಗಳಿಗೆ ಸಂಬಂಧಿಸಿದ ಹಲವಾರು ವಿಷಯಗಳನ್ನು ಸುಂದರವಾಗಿಯೂ ವಿಸ್ತಾರವಾಗಿಯೂ ನಿರೂಪಿಸಿದ್ದಾರೆ. ಯೋಗಾಭ್ಯಾಸದಿಂದ ಬ್ರಹ್ಮಸಾಕ್ಷಾತ್ಕಾರವಾದಾಗ ಆಗುವ ಬ್ರಹ್ಮಾನಂದವೇ ಯೋಗಾನಂದ. ಅದು ನಿರುಪಾಧಿಕವಾದ್ದರಿಂದ ನಿಜಾನಂದವೂ ಹೌದು. ತತ್ತ್ವವಿವೇಚನೆಯಿಂದ ಮುಖ್ಯಾತ್ಮನ ಸಾಕ್ಷಾತ್ಕಾರವಾದಾಗ ಬ್ರಹ್ಮಾನಂದವೆನಿಸುತ್ತದೆ. ಅದ್ವೈತಾನಂದದ ಸ್ವರೂಪವನ್ನು ಈ ಪ್ರಕರಣದಲ್ಲಿ ಈಗ ನಿರೂಪಿಸಲಾಗುವುದು.

ಗೌಣಾತ್ಮಮಿಥ್ಯಾತ್ಮರಿಂದಲೂ ಆಕಾಶಾದಿಪಂಚಭೂತಗಳಿಂದಲೂ ಭಿನ್ನನೂ ಅವುಗಳಿಂದ ಸದ್ವಯನೂ ಆದ ಮುಖ್ಯಾತ್ಮನ ಸಾಕ್ಷಾತ್ಕಾರದಿಂದಾಗುವ

ಆತ್ಮಾನಂದವು ಅದ್ವೈತವಾದ ಯೋಗಾನಂದವಾಗುವುದು ಹೇಗೆ ಎಂಬ ಪ್ರಶ್ನೆಗೆ ಉತ್ತರವಿದು - ತೈತ್ತಿರೀಯದಲ್ಲಿ "**ಆತ್ಮನ ಆಕಾಶಃ ಸಂಭೂತಃ**" (ತೈ.ಉ.೧-೨)-ಎಂದು ಆರಂಭಿಸಿ "**ಅನ್ನಾತ್ ಪುರುಷಃ**" (ತೈ.ಉ.೨-೧-೧) ಎಂದು ಮುಗಿಸಲಾಗಿದೆ. ಇದರಲ್ಲಿ ಸಮಸ್ತ ಜಗತ್ತು ಅಡಕವಾಗಿದೆ. ಇವೆಲ್ಲವೂ ಆತ್ಮನಿಂದಲೇ ಹುಟ್ಟಿವೆ ಎಂದರೆ ಆತ್ಮನ ವಿವರ್ತಗಳು. ಆನಂದ ಸ್ವರೂಪನಾದ ಆತ್ಮನಿಗಿಂತ ಪ್ರತ್ಯೇಕವಾಗಿಲ್ಲ. ಮಣ್ಣಿನ ಕಾರ್ಯವಾದ ಗಡಿಗೆಯು ಮಣ್ಣಿಗಿಂತ ಭಿನ್ನವಲ್ಲ. ಹಗ್ಗದ ವಿವರ್ತವಾದ ಹಾವು ಹಗ್ಗಕ್ಕಿಂತ ಭಿನ್ನವಲ್ಲ. ಆತ್ಮಾತಿರಿಕ್ತ ವಸ್ತುವೇ ಇಲ್ಲವಾದ್ದರಿಂದ ಆತ್ಮಾನಂದವು ಅದ್ವಿತೀಯಾನಂದವೆಂದು ಹೇಳಲು ಯಾವ ಬಾಧೆಯೂ ಇಲ್ಲ(೨). ಈ ಜಗತ್ತು ಆನಂದದಿಂದಲೇ ಹುಟ್ಟಿದೆ, ಆನಂದದಲ್ಲಿ ನಿಂತಿದೆ, ಆನಂದದಲ್ಲಿ ಲೀನವಾಗುತ್ತದೆ - ಎಂದು '**ಆನಂದಾದ್ಧ್ಯೇವ ಖಲ್ವಿಮಾನಿಭೂತಾನಿ ಜಾಯಂತೇ**' (ತೈ.ಉ.೩-೬) ಮುಂತಾದ ಶ್ರುತಿವಾಕ್ಯಗಳು ಘೋಷಿಸುತ್ತವೆ. ಹೀಗಿರುವಾಗ ಜಗತ್ತು ಆನಂದಕ್ಕಿಂತ ಅತಿರಿಕ್ತವಾಗಿ ಹೇಗೆ ಇದ್ದೀತು? ಜಗತ್ತು ಪೃಥಕ್ ಎನ್ನುವುದಕ್ಕೆ ಯಾವ ಆಧಾರವೂ ಇಲ್ಲ(೩). ಕುಂಬಾರನಿಂದ ಗಡಿಗೆ ಹುಟ್ಟುತ್ತದೆ. ಅದು ಕುಂಬಾರನಿಗಿಂತ ಬೇರೆಯಾದದ್ದೇ ಹೊರತು ಕುಂಬಾರನೇ ಆಗಿಬಿಡುವುದಿಲ್ಲ - ಎಂಬ ಶಂಕೆಗೆ ಇಲ್ಲಿ ಅವಕಾಶವಿಲ್ಲ. ಏಕೆಂದರೆ, ಉಪಾದಾನಕಾರಣ ನಿಮಿತ್ತ ಕಾರಣ- ಎಂದು ಕಾರಣಗಳು ಎರಡು ಬಗೆಯಾಗಿರುತ್ತವೆ. ನಿಮಿತ್ತಕಾರಣಕ್ಕಿಂತ ಕಾರ್ಯವು ಬೇರೆಯಾಗುತ್ತದೆ. ಕುಂಬಾರನು ಗಡಿಗೆಗೆ ನಿಮಿತ್ತ ಕಾರಣ. ಮಣ್ಣು ಗಡಿಗೆಗೆ ಉಪಾದಾನಕಾರಣ. ಮಣ್ಣಿಗಿಂತ ಗಡಿಗೆ ಬೇರೆಯಲ್ಲ. ಪ್ರಕೃತದಲ್ಲಿ ಆನಂದವು ಜಗತ್ತಿಗೆ ಉಪಾದಾನ ಕಾರಣ. ಜಗತ್ತಿಗೆ ಉಪಾದಾನವಾದ ಇನ್ನಾವ ವಸ್ತುವೂ ಇಲ್ಲ(೪). ಕುಂಬಾರನು ಗಡಿಗೆಗೆ ಉಪಾದಾನಕಾರಣವಲ್ಲ. ಗಡಿಗೆಯ ಸ್ಥಿತಿ, ಲಯಗಳು ಕುಂಬಾರನನ್ನವಲಂಬಿಸಿಕೊಂಡು ಕುಂಬಾರನಲ್ಲಿ ಎಂದೂ ಇರುವುದಿಲ್ಲ. ಸ್ಥಿತಿ, ಲಯಗಳು ಯಾವ ಕಾರಣವನ್ನವಲಂಬಿಸಿರುತ್ತವೋ ಅದು ಉಪಾದಾನ ಕಾರಣ. ಗಡಿಗೆಯ ಸ್ಥಿತಿ, ಲಯಗಳು ಮಣ್ಣನ್ನು ಅವಲಂಬಿಸಿರುವುದರಿಂದ ಮಣ್ಣು ಉಪಾದಾನಕಾರಣವಾಗುತ್ತದೆ. ಜಗತ್ತಿನ ಸ್ಥಿತಿಲಯಗಳು ಆನಂದವನ್ನೇ ಅವಲಂಬಿಸಿಕೊಂಡು ಆನಂದದಲ್ಲಿವೆಯೆಂದು ಶ್ರುತಿಯು ಸ್ಪಷ್ಟವಾಗಿ ತಿಳಿಸಿದೆ(೫). ಈ ಉಪಾದಾನ ಕಾರಣವು ವಿವರ್ತಿ, ಪರಿಣಾಮಿ, ಆರಂಭಕ ಎಂದು ಮೂರು ಪ್ರಕಾರವಾಗಿದೆ. ಇವುಗಳಲ್ಲಿ ಅವಯವರಹಿತವಾದ ವಸ್ತು ಎಂದಿಗೂ ಪರಿಣಾಮಿಯಾಗಲಿ ಆರಂಭಕವಾಗಲಿ

ಆಗುವುದಿಲ್ಲ. (ಕಾರ್ಯದೊಡನೆ ಸೇರಿಕೊಂಡಿರುವ ಕಾರಣವನ್ನು ಉಪಾದಾನ ಕಾರಣವೆನ್ನುತ್ತಾರೆ) (೬). ಉಪಾದಾನಕಾರಣದಿಂದ ಕಾರ್ಯವು ಉತ್ಪನ್ನವಾಗುವ ವಿಷಯದಲ್ಲಿ ಆರಂಭವಾದ, ಪರಿಣಾಮವಾದ, ವಿವರ್ತವಾದ ಎಂಬ ಮೂರು ಪಕ್ಷಗಳಿವೆ. ಆರಂಭವೆಂದರೆ ನೂತನವಾಗಿ ಹುಟ್ಟುವುದು ಎಂದರ್ಥ. ಅನ್ಯವಸ್ತುವಿನಿಂದ ಬೇರೊಂದು ವಸ್ತು ಹುಟ್ಟುತ್ತದೆ. ಆಗ ಉಪಾದಾನ ಕಾರಣಗಳು ಒಂದನ್ನೊಂದು ಸಂಯೋಗಸಂಬಂಧದಿಂದ ಕೂಡಿ ಕೊಂಡಿರುತ್ತವೆ. ಅನೇಕ ತಂತುಗಳು (ನೂಲುಗಳು) ಸೇರಿ ವಸ್ತ್ರ ಹುಟ್ಟುತ್ತದೆ. ಕಾರಣವಾದ ತಂತುಗಳು ಬೇರೆ. ಕಾರ್ಯವಾದ ವಸ್ತ್ರವು ಬೇರೆ. ಏಕೆಂದರೆ, ಕಾರ್ಯಕಾರಣಗಳ ಆಕೃತಿ, ಹೆಸರು, ಉಪಯೋಗ - ಎಲ್ಲವೂ ಬೇರೆಯಾದ್ದರಿಂದ ನೂಲು ಬೇರೆ ವಸ್ತ್ರ ಬೇರೆ ಎನ್ನುವುದು ಉಚಿತ. ಪೃಥ್ವೀ ಪರಮಾಣುಗಳು ಸೇರಿ ಗಡಿಗೆ ಹುಟ್ಟುತ್ತದೆ. ಹೀಗೆ ಸರ್ವತ್ರ ಊಹಿಸಿ ಕೊಳ್ಳಬೇಕು. ಎಲ್ಲ ಕಡೆಗಳಲ್ಲಿಯೂ ಕಾರಣವು ಕಾರ್ಯದೊಡನೆ ಸೇರಿಕೊಂಡಿರುವುದನ್ನು ಕಾಣಬಹುದು. ಇದು ಆರಂಭವಾದ. ತಾರ್ಕಿಕರ ಪಕ್ಷ (೭). ಉಪಾದಾನ ಕಾರಣವು ತನ್ನ ಪೂರ್ವಾವಸ್ಥೆಯನ್ನು ತ್ಯಜಿಸಿ ಇನ್ನೊಂದು ಅವಸ್ಥೆಯನ್ನು ಪಡೆಯುವುದು ಪರಿಣಾಮವೆನಿಸುತ್ತದೆ. ಇಲ್ಲಿ ಅವಸ್ಥಾಂತರ ಪ್ರಾಪ್ತಿಯಾಗುವುದೇ ಹೊರತು ಹೊಸವಸ್ತು ಹುಟ್ಟುವುದಿಲ್ಲ. ಹಾಲು ಮೊಸರಾಗುತ್ತದೆ. ಹಾಲಿನ ಸೂಕ್ಷ್ಮಾವಯವಗಳು ರೂಪಾಂತರ ಗುಣಾಂತರಗಳನ್ನು ಪಡೆದು ಮೊಸರು ಎನಿಸಿಕೊಳ್ಳುತ್ತವೆ. ಹೀಗೆಯೇ ಮಣ್ಣು ಗಡಿಗೆಯಾಗಿ ಪರಿಣಮಿಸುತ್ತದೆ. ಚಿನ್ನ ಒಡವೆಯಾಗುತ್ತದೆ. ಇದು ಪರಿಣಾಮವಾದ. ಸಾಂಖ್ಯರು ಪರಿಣಾಮವಾದಿಗಳು (೮). ಒಂದು ವಸ್ತು ಪೂರ್ವಾವಸ್ಥೆಯನ್ನು ತ್ಯಜಿಸಿ ಇನ್ನೊಂದು ಅವಸ್ಥೆಯನ್ನು ಪಡೆಯುವುದು ಪರಿಣಾಮವಷ್ಟೆ, ಹಾಗೆ ಅವಸ್ಥಾಂತರವನ್ನು ವಾಸ್ತವವಾಗಿ ಪಡೆಯದೆಯೇ ಅವಸ್ಥಾಂತರದ ತೋರುವಿಕೆಯು ವಿವರ್ತವೆನಿಸುತ್ತದೆ. ಸ್ವಸ್ವರೂಪವನ್ನು ತ್ಯಜಿಸದೆಯೇ ರೂಪಾಂತರವನ್ನು ಪಡೆಯುವುದು (ಪಡೆದಂತೆ ತೋರುವುದು) ವಿವರ್ತ. ಹಗ್ಗವನ್ನು ಹಾವೆಂದು ತಿಳಿಯುವುದು ವಿವರ್ತ. ಹಗ್ಗವು ಹಾವಾಗಿ ತೋರುವುದು ಅಥವಾ ಹಗ್ಗವು ಹಾವಾಗುವುದು ವಿವರ್ತ. ಅವಯವರಹಿತವಾದ ಆಕಾಶವು ಕಪ್ಪಾಗಿ ಕಾಣುವುದೂ ವಿವರ್ತವೇ. ಇದು ವೇದಾಂತಿಗಳ ಪಕ್ಷ. ಇನ್ನೊಂದು ವಿಷಯವನ್ನು ತಿಳಿದಿರಬೇಕು. ವೇದಾಂತಿಗಳ ಈ ವಿವರ್ತವಾದವು ಪ್ರಾಥಮಿಕ ಜಗತ್ತಿನ ಸೃಷ್ಟಿಗೆ ಸಂಬಂಧಿಸಿರುತ್ತದೆ. "ಆಕಾಶಾದ್ವಾಯುಃ, ವಾಯೋರಗ್ನಿಃ ..." ಇತ್ಯಾದಿ ಶ್ರುತಿಗಳನ್ನು ವಿವರ್ತ

ವಾದದಂತೆ ಅರ್ಥಮಾಡಿಕೊಳ್ಳಬೇಕಾಗುತ್ತದೆ. ಆತ್ಮನೇ ಆಕಾಶಾದಿ ಪಂಚಮಹಾಭೂತಗಳಾಗಿ ತೋರುತ್ತಾನೆ ಎಂದರ್ಥ. ಜಗತ್ತು ಮಿಥ್ಯೆ ಎನ್ನುವುದು ಈ ಕಾರಣದಿಂದ. ಜಗತ್ತು ವ್ಯಾವಹಾರಿಕ ಸತ್ಯವಾದ್ದರಿಂದ ಜಗತ್ತಿನ ನಿರ್ಮಾಣವಾದ ಮೇಲೆ ಆರಂಭವಾದ, ಪರಿಣಾಮವಾದಗಳೂ ವೇದಾಂತಿಗಳಿಗೆ ಸಂಮತವಾಗಿರುತ್ತವೆ (೯).

ಈ ಪ್ರಕಾರವಾಗಿ ನಿರಂಶವಾದ ಆನಂದದಲ್ಲಿ ವಿವರ್ತವಾದ ಈ ಜಗತ್ತು ಇದೆಯೆಂದು ತಿಳಿಯತಕ್ಕದ್ದು. ಐಂದ್ರಜಾಲಿಕನ ಮಂತ್ರಶಕ್ತಿಯು ವಿಚಿತ್ರವಸ್ತುಗಳನ್ನು ಕಲ್ಪಿಸುವಂತೆ, ಬ್ರಹ್ಮದಲ್ಲಿರುವ ಮಾಯಾಶಕ್ತಿಯು ಈ ಜಗತ್ತನ್ನು ನಿರ್ಮಿಸುತ್ತದೆ(೧೦). ಅಗ್ನಿ ಮುಂತಾದವುಗಳಲ್ಲಿರುವ ಶಕ್ತಿಯು ಅಗ್ನಿ ಮುಂತಾದ ವಸ್ತುಗಳಿಗಿಂತ ಪ್ರತ್ಯೇಕವಾದ್ದಲ್ಲ. ಪ್ರತ್ಯೇಕವಾಗಿ ಇಲ್ಲದಿರುವುದೇ ಕಂಡುಬರುತ್ತದೆ. ಹಾಗಾದರೆ ಅಗ್ನಿಗಿಂತ ಪ್ರತ್ಯೇಕವಾಗಿ ಶಕ್ತಿಯೇ ಇಲ್ಲವೆಂದೂ ಹೇಳಲಾಗದು. ಮಣಿಮಂತ್ರಾದಿಗಳ ಬಲದಿಂದ ಅಗ್ನಿಶಕ್ತಿಯು ಸುಡದಿರುವಂತೆ ಮಾಡಬಹುದಾಗಿದೆ. ಅಗ್ನಿ ಇರುತ್ತದೆ, ಸುಡುವುದಿಲ್ಲ. ಮಣಿಮಂತ್ರಾದಿಗಳು ಸುಡುವ ಶಕ್ತಿಯನ್ನು ಪ್ರತಿಬಂಧಿಸುತ್ತವೆ ಎಂದು ಒಪ್ಪಬೇಕು. ಆದ್ದರಿಂದ ಅಗ್ನಿಯೇ ಸುಡುವ ಶಕ್ತಿ ಎನ್ನಲಾಗದು. ಶಕ್ತಿ ಇಲ್ಲದಿದ್ದರೆ ಯಾವುದಕ್ಕೆ ಮಂತ್ರವು ಪ್ರತಿಬಂಧಕವಾದೀತು?(೧೧). ಅತೀಂದ್ರಿಯವಾದ ಶಕ್ತಿಗೆ ಪ್ರತಿಬಂಧವಾಯಿತು - ಎಂದು ಗೊತ್ತು ಮಾಡುವುದು ಹೇಗೆ? ಬೆಂಕಿಯು ಬಟ್ಟೆಯನ್ನು ಸುಡುವುದರಿಂದ ಬೆಂಕಿಯಲ್ಲಿ ಸುಡುವ ಶಕ್ತಿ ಇದೆಯೆಂದು ಅನುಮಾನ ಪ್ರಮಾಣದಿಂದ ನಿಶ್ಚಯಿಸುತ್ತೇವೆ. ಬಟ್ಟೆಯನ್ನು ಸುಡದಿದ್ದರೆ ಆಗ ಶಕ್ತಿಗೆ ಪ್ರತಿಬಂಧವಾಯಿತೆಂದು ಊಹಿಸುತ್ತೇವೆ. ಬೆಂಕಿಯು ಜ್ವಲಿಸುತ್ತಿದ್ದರೂ ಸುಡದಿರುವುದು ಮಣಿಮಂತ್ರಗಳ ಪ್ರಭಾವದಿಂದ ಎಂದು ಗೊತ್ತಾಗುತ್ತದೆ (೧೨). **''ತೇ ಧ್ಯಾನಯೋಗಾನುಗತಾ ಅಪಶ್ಯನ್ ದೇವಾತ್ಮ ಶಕ್ತಿಂ ಸ್ವಗುಣೈರ್ನಿಗೂಢಾಂ''** (ಶ್ವೇ.ಉ. ೧-೩) ಎಂಬ ಶ್ವೇತಾಶ್ವತರೋಪನಿಷತ್ತಿನ ಮಂತ್ರದ ಅಭಿಪ್ರಾಯವೇನೆಂದರೆ: ಈ ಜಗತ್ತಿನ ನಿರ್ಮಾಣವು ಹೇಗಾಯಿತೆಂಬ ವಿಷಯದಲ್ಲಿ ಅನೇಕ ವಾದಗಳಿದ್ದವು. ಈ ಜಗತ್ತು ಅನಾದಿ. ಇದಕ್ಕೆ ಯಾವ ಕಾರಣವೂ ಇಲ್ಲ- ಎಂದು ಹೇಳುವ ಅಸದ್ವಾದಿಗಳೂ ಇದ್ದರು. ಅಭಾವ, ಶೂನ್ಯ, ಪರಮಾಣು, ಕಾಲ, ಸ್ವಭಾವ, ಅದೃಷ್ಟ ಪಂಚಭೂತ, ಪ್ರಕೃತಿ - ಇತ್ಯಾದಿಗಳು ಜಗತ್ತಿನ ಮೂಲಕಾರಣಗಳೆಂದು ಹೇಳತಕ್ಕವರೂ ಇದ್ದರು. ಈ

ವಾದದಲ್ಲಿ ಹುರುಳಿಲ್ಲವೆಂದು ಭಾವಿಸಿದ ಮುನಿಗಳು ಧ್ಯಾನಯೋಗವನ್ನು ಅವಲಂಬಿಸಿ ಜಗತ್ಕಾರಣವನ್ನು ಅನ್ವೇಷಿಸುತ್ತ ಪ್ರತ್ಯಗಭಿನ್ನವಾದ ಪರಬ್ರಹ್ಮದ ಮಾಯಾಶಕ್ತಿಯು ಜಗತ್ಕಾರಣವೆಂಬುದನ್ನು ಕಂಡುಹಿಡಿದರು. ಅದು ತನ್ನ ಕಾರ್ಯಗಳಾದ ಸ್ಥೂಲ ಸೂಕ್ಷ್ಮಶರೀರಗಳಿಂದ ದಟ್ಟವಾಗಿ ಮುಚ್ಚಿಹೋಗಿತ್ತು! ಆ ಪರಬ್ರಹ್ಮದ ಮಾಯಾಶಕ್ತಿಯು ಸರ್ವೋತ್ತಮವೂ ಸ್ವಾಭಾವಿಕವೂ ಆಗಿದ್ದು ಜ್ಞಾನಶಕ್ತಿ, ಇಚ್ಛಾಶಕ್ತಿ, ಕ್ರಿಯಾಶಕ್ತಿರೂಪಗಳಿಂದ ವಿಭಿನ್ನವಾಗಿರುತ್ತದೆ ಯೆಂಬುದನ್ನು ಮುನಿಗಳು ಧ್ಯಾನಯೋಗದಿಂದ ಸಾಕ್ಷಾತ್ಕರಿಸಿದರು (೧೩). ಈ ಪ್ರಕಾರವಾಗಿ ವೇದವು ಹೇಳಿದೆ. ಯೋಗವಾಸಿಷ್ಠವೆಂಬ ಗ್ರಂಥದಲ್ಲಿ ವಸಿಷ್ಠ ಮುನಿಗಳೂ ಹೀಗೆಯೇ ಶ್ರೀರಾಮನಿಗೆ ಉಪದೇಶಿಸಿದ್ದಾರೆ.* ಆ ಪರಬ್ರಹ್ಮವು ಸರ್ವಶಕ್ತಿಯುಕ್ತವೂ ನಿತ್ಯವೂ ಪೂರ್ಣವೂ ಅದ್ವಿತೀಯವೂ ಆಗಿದೆ. ಆ ಪರಬ್ರಹ್ಮವು ಯಾವಾಗ ಮಾಯಾಶಕ್ತಿಯಿಂದ ವಿವರ್ತಗೊಳ್ಳುವುದೋ ಆಗ ಅಭಿವ್ಯಕ್ತವಾಗುತ್ತದೆ. ದೇವಮನುಷ್ಯಾದಿಸರ್ವಜೀವಿಗಳಲ್ಲಿಯೂ ಆ ಚಿಚ್ಛಕ್ತಿಯು ಚೇತನ ವ್ಯವಹಾರಕ್ಕೆ ಕಾರಣವಾಗಿ ಉಪಲಬ್ಧವಾಗುತ್ತದೆ (೧೪-೧೫). ರಾಮ, ಆ ಮಾಯಾಶಕ್ತಿಯೇ ಗಾಳಿಯಲ್ಲಿ ಸ್ಪಂದಶಕ್ತಿಯಾಗಿ ಕಲ್ಲಿನಲ್ಲಿ ದೃಢತೆಗೆ ಕಾರಣವಾದ ದಾರ್ಢ್ಯಶಕ್ತಿಯಾಗಿ, ನೀರಿನಲ್ಲಿ ದ್ರವಶಕ್ತಿಯಾಗಿ, ಬೆಂಕಿಯಲ್ಲಿ ದಹನಶಕ್ತಿಯಾಗಿ ಕಾಣಿಸಿಕೊಳ್ಳುತ್ತದೆ. ಆ ಮಾಯಾಶಕ್ತಿಯೇ ಆಕಾಶದಲ್ಲಿ ಶೂನ್ಯಶಕ್ತಿಯಾಗಿದೆ. ನಾಶವಾಗುವ ವಸ್ತುವಿನಲ್ಲಿ ನಾಶಶಕ್ತಿಯಾಗಿದೆ. ಈ ಮಾಯಾಶಕ್ತಿಯಿಂದ ಅಭಿವ್ಯಕ್ತವಾಗುವುದಕ್ಕೆ ಮೊದಲು ಈ ಜಗತ್ತು, ಹಾವಿನ ಮೊಟ್ಟೆಯಲ್ಲಿ ಮಹಾಸರ್ಪದಂತೆ, ಪರಬ್ರಹ್ಮದಲ್ಲಿ ಅಡಗಿರುತ್ತದೆ (೧೬-೧೭). ಹಣ್ಣು, ಎಲೆ, ಬಳ್ಳಿ, ಕೊಂಬೆ, ರೆಂಬೆ, ಬೇರು- ಇವುಗಳಿಂದ ಸಹಿತವಾದ ವೃಕ್ಷವು ಬೀಜದಲ್ಲಿ ಅಡಗಿರುವಂತೆ ಈ ಜಗತ್ತು ಬ್ರಹ್ಮದಲ್ಲಿ ಅಡಗಿರುತ್ತದೆ. ಬ್ರಹ್ಮದಲ್ಲಿರುವ ಶಕ್ತಿಗಳು ದೇಶ ಕಾಲ ವೈಚಿತ್ರ್ಯಗಳಿಂದ ಯಾವುದೋ ಸ್ಥಳದಲ್ಲಿ, ಯಾವುದೋ ಕಾಲದಲ್ಲಿ, ಕೆಲವು ಮಾತ್ರ, ನೆಲದಿಂದ ಬತ್ತದ ಸಸಿಗಳು ಎದ್ದು ಕಾಣುವಂತೆ ಹೊರಬಂದು ಕಾಣಿಸಿಕೊಳ್ಳುತ್ತವೆ (೧೮-೧೯). ರಾಮ, ಸದಾ ಪ್ರಕಾಶಮಾನವೂ ದೇಶಕಾಲಾದಿಪರಿಚ್ಛೇದ ರಹಿತವೂ ಸರ್ವತ್ರಸ್ಥಿತವೂ ಆದ ಪರಬ್ರಹ್ಮವಸ್ತುವು ಯಾವಾಗ ಕಿಂಚಿತ್ ಮನನ ರೂಪಶಕ್ತಿಯನ್ನು ಮಾಯೆಯಿಂದ ಪಡೆಯುತ್ತದೆಯೋ ಆಗ ಮನಸ್ಸು ಎನಿಸಿಕೊಳ್ಳುತ್ತದೆ (೨೦). ಮಾಯೆಯ ಮನನಶಕ್ತಿಯ ಉಲ್ಲಾಸದಿಂದ

* ಇಲ್ಲಿಂದ ಮುಂದೆ ೨೮ನೆಯ ಶ್ಲೋಕದ ವರೆಗೆ ಇರುವ ಶ್ಲೋಕಗಳು ಯೋಗವಾಸಿಷ್ಠದವು.

ಮನಸ್ಸಾಗುತ್ತದೆ. ಅನಂತರ ಬಂಧವಿಮೋಕ್ಷಗಳ ಕಲ್ಪನೆ ಹುಟ್ಟುತ್ತದೆ. ಅನಂತರ ಬಂಧನದೃಷ್ಟಿಯಲ್ಲಿಯೇ ಪ್ರಪಂಚದ ರಚನೆಯಾಗುತ್ತದೆ. ಈ ಪ್ರಪಂಚದಲ್ಲಿ ಗಿರಿ ನಗರ ಸರಿತ್ಸಮುದ್ರಗಳು ಹುಟ್ಟಿಕೊಳ್ಳುತ್ತವೆ. ರಾಮ, ಈ ಪ್ರಕಾರವಾಗಿ ನಾನಾರೀತಿಯ ಪ್ರಪಂಚರಚನೆಯಾಗಿ ಪ್ರತಿಷ್ಠಿತವಾಗಿ ಬಿಟ್ಟಿರುತ್ತದೆ. ಮಕ್ಕಳಿಗೆ ಹೇಳುವ ಕಥೆಯಂತೆ ಈ ಜಗತ್ತು ಸಂಸಾರ ಎಲ್ಲವೂ ಬುಡವಿಲ್ಲದ ಕಲ್ಪನೆಯಾಗಿದೆ (೨೧). ಮಹಾಬಾಹು - ರಾಮ, ಆ ಕಥೆ ಹೀಗಿದೆ. ಒಬ್ಬ ದಾದಿಯು ಒಬ್ಬ ಹುಡುಗನಿಗೆ ವಿನೋದಾರ್ಥವಾಗಿ ಹೇಳುತ್ತಾಳೆ - ಮಗು, ಒಂದೂರಿನಲ್ಲಿ ಮೂವರು ರಾಜಪುತ್ರರಿದ್ದರು. ಅವರಲ್ಲಿ ಇಬ್ಬರು ಹುಟ್ಟಲೇ ಇಲ್ಲ! ಒಬ್ಬನು ತಾಯಿಯ ಗರ್ಭದಲ್ಲಿ ಇರಲೇ ಇಲ್ಲ! ಆ ಮೂವರೂ ಧರ್ಮನಿಷ್ಠರು. ಜಗತ್ತಿನಲ್ಲಿಲ್ಲದ ಒಂದು ಪಟ್ಟಣದಲ್ಲಿ ವಾಸವಾಗಿದ್ದರು (೨೨-೨೩). ಜನರಿಲ್ಲದ ಆ ಪಟ್ಟಣದಿಂದ ಆ ರಾಜಪುತ್ರರು ಹೊರಟು ಎಲ್ಲಿಗೋ ಹೋಗುತ್ತಿದ್ದರು. ಹೋಗುತ್ತಿರುವಾಗ ಅವರಿಗೆ ಹಣ್ಣುಬಿಟ್ಟಿದ್ದ ಕೆಲವು ಮರಗಳು ಆಕಾಶದಲ್ಲಿ ಕಾಣಿಸಿದವು ! ಅನಂತರ, ಮಗು, ಮುಂದೆ ನಿರ್ಮಾಣವಾಗುವ ಒಂದು ನಗರಕ್ಕೆ ಆ ಮೂವರೂ ಹೋದರು. ಅಲ್ಲಿ ಬೇಟೆಯಾಡುತ್ತ ಈಗಲೂ ಸುಖವಾಗಿ ವಾಸಮಾಡುತ್ತಿದ್ದಾರೆ''. ರಾಮ, ಈ ಕಥೆಯನ್ನು ದಾದಿಯು ಹೇಳಿದಾಗ ಆ ಹುಡುಗನು ಕಥೆಯನ್ನು ಪೂರ್ತಿಯಾಗಿ ನಂಬಿದನಂತೆ. ಅವನು ಈ ಕಥೆ ಸತ್ಯವೆ? ಎಂಬುದನ್ನು ವಿಚಾರಮಾಡಲೇ ಇಲ್ಲ(೨೪-೨೬). ಈ ಸಂಸಾರದ ರಚನೆ ಬಾಲಕನಿಗೆ ದಾದಿ ಹೇಳಿದ ಕಥೆಯಂತಿದೆ. ವಿಚಾರ ಶೂನ್ಯರಾದ ಜನರಿಗೆ ಈ ಜಗತ್ತು, ಸಂಸಾರ- ಎಲ್ಲವೂ ಸತ್ಯವೆಂಬ ಭ್ರಾಂತಿಯುಂಟಾಗಿದೆ (೨೭). ಇವೇ ಮೊದಲಾದ ಉಪಾಖ್ಯಾನಗಳಿಂದ ಮಾಯಾಶಕ್ತಿಯ ವಿಸ್ತೃತವಿಲಾಸವನ್ನು ವಸಿಷ್ಠಮುನಿಗಳು ಶ್ರೀರಾಮನಿಗೆ ಹೇಳಿದ್ದಾರೆ. ಆ ಶಕ್ತಿಯ ಸ್ವರೂಪವನ್ನಿಲ್ಲಿ ನಿರೂಪಿಸುತ್ತೇವೆ (೨೮). ಈ ಮಾಯಾಶಕ್ತಿಯು ತನ್ನ ಕಾರ್ಯವಾದ ಜಗತ್ತಿಗಿಂತಲೂ ಆಶ್ರಯವಾದ ಬ್ರಹ್ಮಕ್ಕಿಂತಲೂ ವಿಪರೀತ ಸ್ವಭಾವವುಳ್ಳದ್ದು. ಹೇಗೆಂದರೆ, ಅಗ್ನಿಗತಶಕ್ತಿಯ ಕಾರ್ಯವು ಸುಟ್ಟಗುಳ್ಳೆ. ಆಶ್ರಯವು ಅಂಗಾರ (ಕೆಂಡ). ಇವೆರಡು ಪ್ರತ್ಯಕ್ಷವಾಗಿದ್ದರೂ ಶಕ್ತಿಯು ಪ್ರತ್ಯಕ್ಷವಲ್ಲ. ಅನುಮಾನಪ್ರಮಾಣದಿಂದ ಶಕ್ತಿ ಇದೆಯೆಂದು ನಿರ್ಣಯಿಸಬೇಕಾಗುತ್ತದೆ. ಅಂತೆಯೇ ಮೃತ್ತಿಕೆಯಲ್ಲಿ ಘಟವನ್ನುಂಟುಮಾಡುವ ಶಕ್ತಿ ಇದೆ. ಶಕ್ತಿಯ ಕಾರ್ಯವು, ದೊಡ್ಡದೂ ವರ್ತುಲಾ ಕಾರದ ಉದರ ಉಳ್ಳದ್ದೂ ಆದ ಘಟ. ಶಕ್ತಿಗೆ ಆಶ್ರಯವಾದದ್ದು ಮೃತ್ತಿಕೆ.

ಇದು ಶಬ್ದಾದಿಪಂಚಗುಣಗಳುಳ್ಳದ್ದು. ಶಕ್ತಿಯಲ್ಲಿ ಕಾರ್ಯದ ಅಥವಾ ಆಶ್ರಯದ ಯಾವ ಧರ್ಮವೂ ಇಲ್ಲ. ಅವುಗಳಿಗಿಂತ ವಿಲಕ್ಷಣವಾದದ್ದು ಶಕ್ತಿ(೨೯-೩೦). ಹೀಗೆ ಶಕ್ತಿಯಲ್ಲಿ ಕಾರ್ಯದ ಧರ್ಮವಾಗಲಿ ಆಶ್ರಯದ ಧರ್ಮವಾಗಲಿ ಇಲ್ಲದೆ ಹೋಗಿದೆ. ಘಟದ ಪೃಥುತ್ವವೂ ಇಲ್ಲ, ಶಬ್ದಾದಿಆಶ್ರಯಧರ್ಮವೂ ಇಲ್ಲದೆ ವಿಲಕ್ಷಣವಾದ್ದರಿಂದ ಶಕ್ತಿಯ ನಿರ್ವಚನವು ಶಕ್ಯವಲ್ಲ. ಆಶ್ರಯ, ಕಾರ್ಯಗಳಿಗಿಂತ ಭಿನ್ನವೆ, ಅಭಿನ್ನವೆ - ಎಂದು ಹೇಳಲಾಗುವುದಿಲ್ಲ. ಶಕ್ತಿಯು ಅಚಿಂತ್ಯವೆಂದರೆ ನಿರ್ವಚನವಾಗದು (೩೧). ಘಟವೆಂಬ ಕಾರ್ಯದ ಉತ್ಪತ್ತಿಗೆ ಮೊದಲು ಇದು ಉಪಾದಾನಕಾರಣವಾದ ಮಣ್ಣಿನಲ್ಲಿತ್ತು. ಕುಂಬಾರ ಮುಂತಾದವರ ನೆರವಿನಿಂದ ಈ ಶಕ್ತಿಯು ಘಟವೆಂಬ ವಿಕಾರದ ಆಕಾರದಲ್ಲಿ ಅಭಿವ್ಯಕ್ತವಾಯಿತು.

ಶಂಕೆ - ಕಾರ್ಯಕಾರಣಗಳನ್ನು ಅಭೇದದಿಂದ ಲೋಕದಲ್ಲಿ ವ್ಯವಹರಿಸುತ್ತಾರೆ. ಗಡಿಗೆಯನ್ನು ಉಪಾದಾನಕಾರಣವಾದ ಮಣ್ಣು ಎನ್ನುತ್ತಾರೆ. ಉಂಗುರವನ್ನು ಚಿನ್ನ ಎನ್ನುತ್ತಾರೆ. ಆದ್ದರಿಂದ ಶಕ್ತಿಯು ಉಪಾದಾನಕಾರಣರೂಪವೇ ಸರಿ ಎಂದು ಹೇಳಬಹುದಲ್ಲವೆ?

ಸಮಾಧಾನ - ಇಲ್ಲ; ಹೇಳಲಾಗದು. ಘಟವು ಮಣ್ಣುಮುದ್ದೆಗಿಂತ ದೊಡ್ಡದಾಗಿರುತ್ತದೆ. ಅದರಲ್ಲಿ ವರ್ತುಲಾಕಾರವಾದ ಉದರ ಪ್ರದೇಶವಿರುತ್ತದೆ. ಮಣ್ಣಿನಲ್ಲಿ ಆಕಾರಾದಿಗಳು ಬೇರೆಯಾಗಿರುತ್ತವೆ. ಶಬ್ದಸ್ಪರ್ಶಾದಿಗುಣಗಳು ಮಾತ್ರ ಇರುತ್ತವೆ. ಈ ಭೇದವನ್ನು ಪರಿಶೀಲಿಸದೆ ವಿಚಾರಶೂನ್ಯರಾದ ಅವಿವೇಕಿಗಳು ಗಡಿಗೆಯನ್ನು ಮಣ್ಣು ಎಂದು ಅಭೇದದಿಂದ ಹೇಳಿಬಿಡುತ್ತಾರೆ. ಉಂಗುರ ಮುಂತಾದ ಒಡವೆಗಳನ್ನು ಚಿನ್ನ ಎಂದು ಬಿಡುತ್ತಾರೆ. ಆದ್ದರಿಂದ ಶಕ್ತಿಯು ಉಪಾದಾನಕಾರಣರೂಪವಲ್ಲ(೩೨-೩೩). ಕುಂಬಾರನು ತನ್ನ ಕೆಲಸವನ್ನಾರಂಭಿಸುವುದಕ್ಕೆ ಮೊದಲು ಇದ್ದ ಮಣ್ಣು ಗಡಿಗೆಯಲ್ಲ. ಅನಂತರ ಅದು ದೊಡ್ಡದಾಗಿ ವರ್ತುಲೋದರಾದಿವಿಕಾರವನ್ನು ಪಡೆದ ಮೇಲೆ ಗಡಿಗೆಯೆನ್ನುವುದು ಯುಕ್ತವಾಗಿದೆ. ಹೀಗಿರುವಾಗ ಗಡಿಗೆಯನ್ನೇ ಮಣ್ಣು ಎನ್ನುವುದು ಹೇಗೆ? (೩೪). ಗಡಿಗೆಯು ಮಣ್ಣಿಗಿಂತ ಭಿನ್ನವಾದ ವಸ್ತುವಲ್ಲ. ಗಡಿಗೆಯಿಂದ ಮಣ್ಣಿನ ಅಂಶವನ್ನು ತೆಗೆದುಹಾಕಿದರೆ ಗಡಿಗೆಯೇ ಇರುವುದಿಲ್ಲ! ಹಾಗಾದರೆ ಅಭಿನ್ನವೆನ್ನಬಹುದೋ? ಹಾಗೂ ಹೇಳಲಾಗದು. ಕುಂಬಾರನು ಕೆಲಸಮಾಡುವುದಕ್ಕೆ ಮೊದಲು ಮಣ್ಣುಮುದ್ದೆಯಲ್ಲಿ ಗಡಿಗೆಯು ಕಂಡಿರಲಿಲ್ಲ! ಆದ್ದರಿಂದ ಶಕ್ತಿಯ ಹಾಗೆಯೇ ಶಕ್ತಿಜನ್ಯವಾದ ಗಡಿಗೆಯೂ ಅನಿರ್ವಚನೀಯವಾಗುತ್ತದೆ. ಉಭಯವೂ ಅನಿರ್ವಚನೀಯವಾದರೂ

ಅವ್ಯಕ್ತವಾದಾಗ ಶಕ್ತಿಯೆಂದೂ ವ್ಯಕ್ತವಾದಾಗ ಘಟವೆಂದು ವ್ಯವಹಾರವಿರುತ್ತದೆ. ಶಕ್ತಿಯೇ ಘಟವೆಂಬ ಹೆಸರನ್ನು ಧರಿಸುತ್ತದೆ (೩೫-೩೬). ಐಂದ್ರಜಾಲಿಕನಲ್ಲಿರುವ ಮಣಿಮಂತ್ರಾದಿಶಕ್ತಿಯೂ ಮೊದಲು ಅವ್ಯಕ್ತವಾಗಿದ್ದು ಅನಂತರ ಗಂಧರ್ವನಗರವಾಗಿಯೋ ಮಾವಿನಹಣ್ಣಾಗಿಯೋ ವ್ಯಕ್ತವಾಗುತ್ತದೆ. ಹೀಗೆ ವಿಕಾರವು ಮಾಯಾಮಯವಾದ್ದರಿಂದ ಅನೃತವೆಂದೂ ಘಟಾದಿವಿಕಾರಕ್ಕೆ ಆಧಾರವಾದ ಮೃತ್ತಿಕೆ ಮೊದಲಾದದ್ದು ಮಾತ್ರ ಸತ್ಯವೆಂದು ಶ್ರುತಿಯು ಹೇಳಿದೆ- '**ವಾಚಾರಂಭಣಂ ವಿಕಾರೋ ನಾಮಧೇಯಂ ಮೃತ್ತಿಕೇತ್ಯೇವ ಸತ್ಯಮ್**' (ಛಾಂ. ಉ. ೬-೪-೧). ಈ ಶ್ರುತಿಯ ಅರ್ಥ ಹೀಗೆ - ವಾಚೈವ ಕೇವಲಮಾರಭ್ಯತೇ ಇತಿ = ವಾಚಾರಂಭಣಮ್. ಘಟವಾಗಿ ತೋರುವ ಈ ಮಣ್ಣಿನ ವಿಕಾರವು ವಾಗಿಂದ್ರಿಯದಿಂದ ಹುಟ್ಟಿದ ನಾಮಮಾತ್ರವಾಗಿದೆ. ಮೃತ್ತಿಕೆ ಎನ್ನುವುದೇ ಸತ್ಯ (೩೭-೩೯). ಇಲ್ಲೊಂದು ವಿಚಾರ ಉಂಟು. ವ್ಯಕ್ತವಾದ ಘಟ, ಅವ್ಯಕ್ತವಾದ ಶಕ್ತಿ ಇವುಗಳಿಗೆ ಆಧಾರವಾದ ಮೃತ್ತಿಕೆ - ಎಂಬ ಮೂರು ಪದಾರ್ಥಗಳಿವೆ. ಇವುಗಳಲ್ಲಿ ವ್ಯಕ್ತಾವ್ಯಕ್ತಗಳು ಅನೃತವೆಂದೂ ಆಧಾರವಾದ ಮೃತ್ತಿಕೆಯು ಮಾತ್ರ ಸತ್ಯವೆಂದೂ ಹೇಳಲು ಕಾರಣವೇನು? ಈ ಪ್ರಶ್ನೆಗೆ ಸಮಾಧಾನ ಹೀಗೆ. ಕಾರ್ಯವಾದ ಘಟ ಮತ್ತು ಶಕ್ತಿಗಳು ಕಾಲಭೇದದಿಂದ ಪರ್ಯಾಯವಾಗಿ ಬರುತ್ತವೆ. ಘಟವು ಹುಟ್ಟಲೇಬೇಕೆಂಬ ನಿಯಮವಿಲ್ಲದ್ದರಿಂದ ಕದಾಚಿತ್ ಅವು ಕಾಣಿಸಿಕೊಳ್ಳತಕ್ಕವು. ಆದ್ದರಿಂದ ಅವು (ಘಟ ಮತ್ತು ಶಕ್ತಿ) ಅನೃತವಾದವು. ಆಧಾರವಾದ ಮೃತ್ತಿಕೆಯು ಸದಾ ಕಾಲತ್ರಯದಲ್ಲಿಯೂ ಇರುವುದರಿಂದ ಸತ್ಯವಾದದ್ದು (೪೦). ವ್ಯಕ್ತವೆನಿಸುವ ಘಟಾದಿಕಾರ್ಯವು ನಿಸ್ತತ್ತ್ವವಾದರೂ ಎಂದರೆ ಸ್ವರೂಪದಿಂದ ಇಲ್ಲವಾದರೂ ತೋರಿಕೊಳ್ಳುತ್ತದೆ. ಉತ್ಪತ್ತಿನಾಶಗಳನ್ನೂ ಪಡೆಯುತ್ತದೆ. ಉತ್ಪನ್ನವಾದಾಗ ಘಟ, ಪಟ - ಇತ್ಯಾದಿ ನಾಮವನ್ನಿಟ್ಟು ಜನರು ವ್ಯವಹರಿಸುತ್ತಾರೆ. ಆದ್ದರಿಂದ ಈ ವಿಕಾರವು ಪರಮಾರ್ಥವಲ್ಲ, ಇದು ಅಸತ್ಯ (೪೧). ಮತ್ತು ವ್ಯಕ್ತವಾದ ಘಟವು ನಾಶವಾದರೂ ಜನರ ಬಾಯಿಯಲ್ಲಿ ಘಟ ಎಂಬ ನಾಮವು ಅನುವೃತ್ತವಾಗುತ್ತದೆ! ಆದ್ದರಿಂದ ಅದು ನಾಮಮಾತ್ರ ಗೋಚರವಾಗಿ ಶಬ್ದಾತ್ಮಕವಾಗುತ್ತದೆ. ಈ ವಿಕಾರವನ್ನು ಶ್ರುತಿಯು 'ನಾಮಧೇಯಂ' ಎಂದು ಹೇಳಿದೆ. ಘಟಾದಿ ವಿಕಾರವು ನಾಮಮಾತ್ರ. ಘಟವೆಂಬ ಪದಾರ್ಥವು ಅಸತ್ಯ(೪೨). ಏವಂಚ ಘಟಾದಿವಿಕಾರವು ನಿಸ್ತತ್ತ್ವವಾದ್ದರಿಂದಲೂ (ವಾಸ್ತವ ರೂಪವಿಲ್ಲದ್ದರಿಂದಲೂ) ವಿನಾಶಿಯಾದ್ದರಿಂದಲೂ ವಾಚಾರಂಭಣವಾಗಿ

ನಾಮಧೇಯ ಮಾತ್ರವಾದ್ದರಿಂದಲೂ ಸತ್ಯವಲ್ಲ. ಮೂಲಕಾರಣವಾದ ಮಣ್ಣು ಪ್ರಕೃತೋದಾಹರಣೆಯಲ್ಲಿ ಸತ್ಯ. ಇಲ್ಲಿ ಮೂರು ಬಗೆಯಲ್ಲಿ ಅನುಮಾನವಿಧಾನವನ್ನು ಹೇಳಬಹುದು.

೧. ಘಟಾದಿರೂಪ ಕಾರ್ಯವು ಅಸತ್ಯ. ನಿಸ್ತತ್ತ್ವವಾದ್ದರಿಂದ. ಯಾವುದು ಅಸತ್ಯವಲ್ಲವೋ ಅದು ನಿಸ್ತತ್ತ್ವವಾಗಿರುವುದಿಲ್ಲ. ಘಟಾದಿಗಳಿಗೆ ಉಪಾದಾನವಾದ ಮಣ್ಣಿನಂತೆ.

೨. ಘಟಾದಿರೂಪ ಕಾರ್ಯವು ಅಸತ್ಯ. ವಿನಾಶಿಯಾದ್ದರಿಂದ. ಯಾವುದು ಅಸತ್ಯವಲ್ಲವೋ ಅದು ವಿನಾಶಿಯಲ್ಲ. ಮಣ್ಣಿನಂತೆ.

೩. ಘಟಾದಿಕಾರ್ಯವು ಅಸತ್ಯವಾಗಿದೆ. ವಾಗಿಂದ್ರಿಯಜನ್ಯವಾದ ಶಬ್ದಮಾತ್ರ ಸ್ವರೂಪವಾದ್ದರಿಂದ. ಯಾವುದು ಅಸತ್ಯವಲ್ಲವೋ ಅದು ವಾಗಿಂದ್ರಿಯಜನ್ಯ ಶಬ್ದಮಾತ್ರಸ್ವರೂಪವಾಗಿರುವುದಿಲ್ಲ. ಆತ್ಮನಂತೆ (೪೩).

ಈಗ ವಿಕಾರವು ಅಸತ್ಯವೆಂದು ಸಿದ್ಧವಾಯಿತು. ಇನ್ನು ಪ್ರಕೃತಿಯು ಸತ್ಯವೆಂಬುದನ್ನು ಪ್ರತಿಪಾದಿಸಬೇಕಾಗಿದೆ. ಯಾವುದು ಕಾಲತ್ರಯದಲ್ಲಿಯೂ ತನ್ನ ಸ್ವರೂಪದಲ್ಲಿಯೇ ಇರುತ್ತದೆಯೋ ಅದು ಸತ್ಯ. ಘಟದ ಪ್ರಕೃತಿಯಾದ ಮೃತ್ತಿಕೆಯು ಘಟವಿದ್ದಾಗಲೂ ಇರುತ್ತದೆ. ಘಟವು ಹುಟ್ಟುವುದಕ್ಕೆ ಮೊದಲೂ ಇತ್ತು. ಘಟವು ನಾಶವಾದಮೇಲೂ ಮೃತ್ತಿಕೆಯು ಇದ್ದೇ ಇರುತ್ತದೆ. ಹೀಗೆ ಕಾಲತ್ರಯದಲ್ಲಿಯೂ ಪ್ರಕೃತಿಯು ಏಕಾಕಾರವಾಗಿರುವುದರಿಂದ ಸತ್ಯವೆನಿಸುತ್ತದೆ(೪೪).

ಶಂಕೆ - ವ್ಯಕ್ತ, ವಿಕಾರ, ಘಟ ಇತ್ಯಾದಿ ಶಬ್ದಗಳಿಂದ ಉಕ್ತವಾಗುವ ಕಾರ್ಯವು ಮಿಥ್ಯೆಯಾದರೆ, ಅದರ ಪ್ರಕೃತಿಯ ಜ್ಞಾನವಾದೊಡನೆ ಘಟ ಇತ್ಯಾದಿ ಬುದ್ಧಿಯೂ ನಿವೃತ್ತವಾಗಬೇಕು. ಶುಕ್ತಿಯು ರಜತವೆಂದು ಭ್ರಮಿಸಿದಾಗ ಇದು ಶುಕ್ತಿ ಎಂಬ ಜ್ಞಾನವಾದೊಡನೆ ರಜತವೆಂಬ ಬುದ್ಧಿಯೂ ಹೊರಟು ಹೋಗುತ್ತದೆ. ಹಾಗೆಯೇ ಘಟ ಎಂಬಲ್ಲಿ ಇದು ಮಣ್ಣು ಎಂಬ ಜ್ಞಾನವಾದೊಡನೆ ಘಟಬುದ್ಧಿಯು ಮಾತ್ರ ಹೋಗುವುದೇ ಇಲ್ಲ. ಅದು ಒಡೆದು ಪುಡಿಯಾಗುವವರೆಗೂ ಘಟಬುದ್ಧಿ ಇದ್ದೇ ಇರುತ್ತದೆ. ಇದಕ್ಕೆ ಕಾರಣವೇನು? (೪೫)

ಸಮಾಧಾನ - ಘಟವೆಂಬ ವಿಕಾರವು ಸತ್ಯವಲ್ಲ- ಎಂಬ ಜ್ಞಾನ ಹುಟ್ಟಿದೊಡನೆ ಘಟದ ವಿಷಯದಲ್ಲಿ ಸತ್ಯತ್ವಬುದ್ಧಿಯು ಹೊರಟುಹೋಗುತ್ತದೆ. ಜಗತ್ತು

ಮಿಥ್ಯೆ. ಎಂದು ಗುರುವು ಬೋಧಿಸಿದಾಗ ಶಿಷ್ಯನಿಗೆ ಜಗತ್ತು ಸತ್ಯವೆಂಬ ಬುದ್ಧಿ ನಿವೃತ್ತವಾಗುತ್ತದೆ. ವ್ಯಕ್ತವಾದ ಈ ವಿಕಾರವೆಲ್ಲವೂ ಮಿಥ್ಯೆ, ಘಟ ಜಗತ್ತು - ಇವು ಸತ್ಯವಲ್ಲ ಎಂಬ ದೃಢವಾದ ನಂಬಿಕೆ ಹುಟ್ಟಿದರೆ ಸಾಕು. ಅಷ್ಟೇ ಇಲ್ಲಿ ಅಪೇಕ್ಷಿತ. ವ್ಯವಹಾರದಲ್ಲಿ ಘಟಾಕಾರವು ತೋರಿಕೊಳ್ಳುತ್ತದೆ. ಜಗತ್ತೂ ತೋರುತ್ತದೆ. ಅದರಿಂದ ಬಾಧೆ ಏನೂ ಇಲ್ಲ. ವಿಕಾರದಲ್ಲಿ ಸತ್ಯತ್ವ ಬುದ್ಧಿ ನಿವೃತ್ತವಾಗಬೇಕು (೪೬). ನೀರಿನ ಕೊಳದ ಬಳಿ ನಿಂತಿರುವ ಮನುಷ್ಯನು ನೀರಿನಲ್ಲಿ ತಲೆಕೆಳಗಾಗಿ ನಿಂತಿರುವಂತೆ ಕಾಣುತ್ತದೆ. ಅಷ್ಟು ಮಾತ್ರದಿಂದ ಆ ಮನುಷ್ಯನು ತೀರದಲ್ಲಿ ತಲೆಕೆಳಗಾಗಿ ನಿಂತಿದ್ದಾನೆಂದು ಯಾರೂ ಭಾವಿಸುವುದಿಲ್ಲ. ಹಾಗೆಯೇ ಜಗತ್ಕಾರಣವಾದ ಆತ್ಮತತ್ತ್ವದ ಜ್ಞಾನವಾದ ಮೇಲೆ ವಿವೇಕಿಯಾದ ಮನುಷ್ಯನು ಜಗತ್ತನ್ನು ಮಿಥ್ಯೆಯೆಂದು ನಿರ್ಧರಿಸುತ್ತಾನೆ. ಜಗತ್ ಎಂಬ ಜ್ಞಾನವು ಭ್ರಮೆಯೆಂದು ಅವನಿಗೆ ಗೊತ್ತಾಗುತ್ತದೆ. ಅದು ಇಂದ್ರಿಯಗಳೆಂಬ ಉಪಾಧಿಯಿಂದಾದ ಭ್ರಮೆ. ಸೋಪಾಧಿಕಭ್ರಮೆಯಾದ್ದರಿಂದ ಜಗತ್ತೆಂಬ ಜ್ಞಾನವೂ ಕೆಲವು ಕಾಲ ಇರುತ್ತದೆ. ಪಾರಮಾರ್ಥಿಕ ವಿಚಾರಗಳಲ್ಲಿ ಇಂದ್ರಿಯಗಳಿಗೆ ಪ್ರತೀತವಾದದ್ದೇ ಸತ್ಯವೆಂದು ತಿಳಿಯಬಾರದು. ಇಷ್ಟೇ ಇಲ್ಲಿ ಅಪೇಕ್ಷಿತವಾದದ್ದು. ಈ ಬಗೆಯಲ್ಲಿ ಜಗತ್ತು ಮಿಥ್ಯೆಯೆಂಬ ಅರಿವಿನಿಂದ ಪುರುಷಾರ್ಥವು ಸಿದ್ಧಿಸುವುದೆಂದು ಅದ್ವೈತಿಗಳ ಸಿದ್ಧಾಂತವಾಗಿದೆ. ಅದ್ವೈತಾನಂದಕ್ಕಿಂತ ಹೊರಗಾದ ಸಮಸ್ತವೂ ಮಿಥ್ಯೆಯೆಂಬ ನಿಶ್ಚಯ ಬರಬೇಕು. ಘಟದಲ್ಲಿ ಮಣ್ಣು ಎಂಬ ಬುದ್ಧಿ ಇದ್ದೇ ಇರುವುದರಿಂದ ಘಟವು ಮಣ್ಣಿನ ವಿವರ್ತ (೪೭-೪೮). ಪರಿಣಾಮ, ವಿವರ್ತಗಳಿಗೆ ಭೇದವೇನೆಂದರೆ, ತನ್ನ ಸ್ವರೂಪವನ್ನು ತ್ಯಜಿಸಿ ರೂಪಾಂತರವನ್ನು ಹೊಂದುವುದು ಪರಿಣಾಮ. ಹಾಲು ಮೊಸರಾಗುವುದು, ಮೊಸರು ಬೆಣ್ಣೆಯಾಗುವುದು, ಬೆಣ್ಣೆ ತುಪ್ಪವಾಗುವುದು ಪರಿಣಾಮ. ಇಲ್ಲಿ ಹಾಲು ಮೊದಲಾದುದಕ್ಕೆ ಸ್ವಸ್ವರೂಪವು ಹೋಗಿ ರೂಪಾಂತರ ಬಂದಿದೆ. ಸ್ವಸ್ವರೂಪವನ್ನು ತ್ಯಜಿಸದೆಯೇ ರೂಪಾಂತರವನ್ನು ಹೊಂದುವುದು ವಿವರ್ತ. ಮಣ್ಣು ಘಟವಾಗುವುದು, ಚಿನ್ನ ಕುಂಡಲವಾಗುವುದು ವಿವರ್ತ. ಇಲ್ಲಿ ಮಣ್ಣಿನ ಸ್ವರೂಪವು ಘಟದಲ್ಲಿಯೂ ಚಿನ್ನದ ಸ್ವರೂಪವು ಕುಂಡಲದಲ್ಲಿಯೂ ಇದ್ದೇ ಇದೆ. ಮಣ್ಣಾಗಲಿ ಚಿನ್ನವಾಗಲಿ ತನ್ನ ಸ್ವರೂಪವನ್ನು ಕಳೆದುಕೊಂಡಿಲ್ಲ. ಅವುಗಳ ಸ್ವರೂಪವು ಇದ್ದೇ ಇರುತ್ತದೆ (೪೯). ಹಾಗಾದರೆ ಘಟವನ್ನು ಒಡೆದರೆ ಅದು ಏಕೆ ಮಣ್ಣಾಗುವುದಿಲ್ಲ? ಎರಡು ಮೂರು ಕಪಾಲಗಳು (ಹೋಳುಗಳು)

ಮಾತ್ರ ಆಗುತ್ತವೆಯಲ್ಲ? ಹಾಗಲ್ಲ; ಕಪಾಲಗಳನು ಇನ್ನೂ ಪುಡಿಮಾಡಿದರೆ ಮಣ್ಣಾಗುತ್ತದೆ. ಕುಂಡಲವು ತುಂಡಾದರೂ ಅದಕ್ಕೆ ಚಿನ್ನದ ಸ್ವರೂಪ ಹೋಗುವುದಿಲ್ಲ. ಇದು ಸ್ಫುಟವಾಗಿದೆ (೫೦). ಹಾಲು, ಮೊಸರು, ಬೆಣ್ಣೆ-ಮುಂತಾದ್ದರಲ್ಲಿ ಪರಿಣಾಮವಾಗಿ ರೂಪಾಂತರವನ್ನು ಅವು ಹೊಂದುತ್ತವೆ. ಪುನಃ ಅವುಗಳಿಗೆ ಸ್ವಸ್ವರೂಪವು ಬರುವುದಿಲ್ಲ. ಆದರೆ ಮಣ್ಣು ಚಿನ್ನ-ಇವುಗಳಲ್ಲಿ ವಿವರ್ತದಿಂದಲೇ ರೂಪಾಂತರವು ತೋರುತ್ತದೆ. ಏಕೆಂದರೆ ಅವು ಪೂರ್ವರೂಪವನ್ನು ತ್ಯಜಿಸಿರುವುದಿಲ್ಲ. ಮತ್ತೆ ಸ್ವಸ್ವರೂಪವು ಅವುಗಳಲ್ಲಿ ಕಾಣಿಸುತ್ತದೆ. ಆದ್ದರಿಂದ ವಿವರ್ತಕ್ಕೆ ಇವನ್ನು ದೃಷ್ಟಾಂತವಾಗಿ ಉದಾಹರಿಸಿದ್ದು ಸರಿಯಾಗಿಯೇ ಇದೆ(೫೧). ಪರಿಣಾಮ ವಿವರ್ತವಾದಗಳಲ್ಲಿ ಭೇದವಿದ್ದರೂ ಮಣ್ಣು ಚಿನ್ನಗಳ ಕಾರ್ಯದಲ್ಲಿ ಇವೆರಡನ್ನೂ ಹೊಂದಿಸಿ ಹೇಳಲು ಶಕ್ಯವಿದೆ. ಆದರೆ ತಾರ್ಕಿಕರ ಆರಂಭವಾದವು ಮಾತ್ರ ಯುಕ್ತವಲ್ಲ. ಅವರ ಮತದಲ್ಲಿ ಕಾರಣಕ್ಕಿಂತ ಕಾರ್ಯವು ಪೂರ್ಣವಾಗಿ ಬೇರೆಯದು. ಆ ಪಕ್ಷದಲ್ಲಿ ಕಾರಣದ ಮಣ್ಣು ಬೇರೆ, ಕಾರ್ಯವಾದ ಘಟದ ಮಣ್ಣು ಬೇರೆ. ಆಗ ಕಾರ್ಯವಾದ ಘಟದಲ್ಲಿ ಎರಡರಷ್ಟು ಮಣ್ಣು ಇರಬೇಕಾದೀತು. ಕಾರಣದ ರೂಪಸ್ಪರ್ಶಾದಿಗಳೂ ಕಾರ್ಯದ ರೂಪಸ್ಪರ್ಶಾದಿಗುಣಗಳು ಆರಂಭವಾದದಲ್ಲಿ ಭಿನ್ನವಾದ್ದೆಂದು ಅವರೇ ಹೇಳಿರುವುದರಿಂದ ಘಟವೆಂಬ ಕಾರ್ಯದಲ್ಲಿ ರೂಪಸ್ಪರ್ಶಾದಿಗುಣಗಳೂ ಎರಡರಷ್ಟು ಇರಬೇಕಾಗುವುದು - ಇತ್ಯಾದಿ ಕಾರಣಗಳಿಂದ ಆರಂಭವಾದವು ಅಸಂಗತ (೫೨). ಛಾಂದೋಗ್ಯೋಪನಿಷತ್ತಿನಲ್ಲಿ ಅರುಣಪುತ್ರನಾದ ಆರುಣಿಯು (ಉದ್ದಾಲಕನು) **'ಯಥಾ ಸೋಮ್ಯ ಏಕೇನ ಮೃತ್ಪಿಂಡೇನ ....'** (ಛಾಂ.ಉ.೬-೧-೪) ಇತ್ಯಾದಿ ವಾಕ್ಯಗಳಿಂದ ಮಣ್ಣು, ಚಿನ್ನ, ಕಬ್ಬಿಣ - ಈ ಮೂರನ್ನು ದೃಷ್ಟಾಂತವಾಗಿ ಕೊಟ್ಟು ಕಾರ್ಯವು ಅನೃತವೆಂದು ತೋರಿಸಿದ್ದಾನೆ. ಮೂರು ಉದಾಹರಣೆಗಳು ಸರ್ವತ್ರ ಕಾರ್ಯಕಾರಣಗಳಿಗೆ ಸಂಬಂಧಿಸುತ್ತವೆ. ಹೀಗೆಯೇ ಎಲ್ಲೆಡೆಯಲ್ಲಿಯೂ ಕಾರ್ಯವು ಅನೃತ - ಮಿಥ್ಯೆ ಎಂಬುದನ್ನು ಅನುಭವಕ್ಕೆ ತಂದುಕೊಳ್ಳಬೇಕು (೫೩). ಮತ್ತು ಕಾರಣದ ಜ್ಞಾನದಿಂದ ಅದರ ಎಲ್ಲ ಕಾರ್ಯಗಳ ಜ್ಞಾನವೂ ಆಗಿಬಿಡುತ್ತದೆಯೆಂದು **'ಯಥಾ ಸೋಮ್ಯ ಏಕೇನ ಮೃತ್ಪಿಂಡೇನ ಸರ್ವಂ ಮೃನ್ಮಯಂ ವಿಜ್ಞಾತಂ ಸ್ಯಾತ್'** (ಛಾಂ.ಉ.೬-೧-೪) ಇತ್ಯಾದಿ ವಚನಗಳಿಂದ ಆರುಣಿಯೇ ಹೇಳಿದ್ದಾನೆ. ಇಲ್ಲೊಂದು ಪ್ರಶ್ನೆ ಹುಟ್ಟುತ್ತದೆ. ಕಾರಣವು ಸತ್ಯ. ಕಾರ್ಯವು ಅನೃತವೆಂದು ನೀವೇ ಹೇಳಿದ್ದೀರಿ. ಸತ್ಯದ ಜ್ಞಾನದಿಂದ ಅನೃತದ ಜ್ಞಾನವು

ಹೇಗಾಗುತ್ತದೆ? (೫೪). ಅಧಿಷ್ಠಾನವಾದ ಮಣ್ಣಿನಿಂದ ಸಹಿತವಾದ ವಿಕಾರವನ್ನು (ಆರೋಪಿತ ಘಟವನ್ನು) ಕಾರ್ಯವೆಂದು ಲೋಕದಲ್ಲಿ ಎಲ್ಲರೂ ಹೇಳುತ್ತಾರೆ. ಇದರಲ್ಲಿ ಮಣ್ಣು ಎಂಬ ಅಂಶವು ಸತ್ಯವಾದದ್ದು. (ವಿಕಾರವು ಅನೃತ) ಕಾರಣದ ಜ್ಞಾನದಿಂದ ಸತ್ಯವಾದ ಈ ಅಂಶದ ಜ್ಞಾನವು ಆಗಿಯೇ ಆಗುತ್ತದೆ (೫೫). ಇನ್ನೊಂದು ಅಂಶವಾದ ವಿಕಾರವು ಅನೃತ. ಪ್ರಯೋಜನವಿಲ್ಲದ್ದರಿಂದ ಅದನ್ನು ತಿಳಿಯಬೇಕಾಗಿಲ್ಲ. ಅಬಾಧ್ಯವಾದ ಸತ್ಯದ ಜ್ಞಾನದಿಂದ ಪುರುಷನಿಗೆ ಉಪಯೋಗವಿದೆ. ಮಿಥ್ಯೆಯಾದ ವಿಕಾರದ ಜ್ಞಾನದಿಂದ ಆಗಬೇಕಾದ್ದೇನು? ಕಾರಣವನ್ನು ತಿಳಿದರೆ ಪುರುಷೋಪಯೋಗಿಯಾದ ಸರ್ವಕಾರ್ಯಾಂಶವನ್ನು ತಿಳಿದಂತಾಗುತ್ತದೆ ಎಂದು ಆರುಣಿಯ ಆಶಯವಾಗಿರುತ್ತದೆ (೫೬). ಹಾಗಾದರೆ ಇದೊಂದು ಚಮತ್ಕಾರಜನಕವಾದ ನುಡಿಯೇ ಸರಿ! ಕಾರಣ ವಿಜ್ಞಾನದಿಂದ ಕಾರ್ಯದ ವಿಜ್ಞಾನವಾಗುತ್ತದೆ ಎಂದರೆ - ಮಣ್ಣನ್ನು ತಿಳಿದದ್ದರಿಂದ ಎಲ್ಲ ಮೃತ್ತಿಕೆಯೂ ತಿಳಿಯಿತು - ಎಂದಂತಾಯಿತು! ಇದರಲ್ಲಿ ಅಚ್ಚರಿ ಏನು? ನಿಜ, ಯಾವ ಅಚ್ಚರಿಯೂ ಇಲ್ಲ. ಕಾರ್ಯದಲ್ಲಿರುವ ಸತ್ಯಾಂಶವು ಕಾರಣವೇ ಸರಿ, ಉಳಿದದ್ದು ಮಿಥ್ಯೆ - ಎಂದು ತಿಳಿದವರಿಗೆ ಆ ಹೇಳಿಕೆಯಿಂದ ಅಚ್ಚರಿ ಏನೂ ಆಗದು! ಹಾಗೆ ತಿಳಿಯದಿರುವ ಅಜ್ಞರಿಗೆ ಮಾತ್ರ ಅಚ್ಚರಿಯಾಗುತ್ತದೆ. ಅದನ್ನು ಯಾರು ತಡೆದಾರು? (೫೭-೫೮). ಆರಂಭವಾದಿ, ಪರಿಣಾಮವಾದಿ ಮತ್ತು ಶಾಸ್ತ್ರಜ್ಞಾನವಿಲ್ಲದ ಲೌಕಿಕ - ಈ ಮೂವರು ಒಂದು ಕಾರಣವನ್ನು ತಿಳಿದರೆ ಅದರ ಕಾರ್ಯವಾದ ವಸ್ತುವೆಲ್ಲವೂ ತಿಳಿದು ಹೋಗುತ್ತದೆ ಎಂಬುದನ್ನು ಕೇಳಿದಾಗ ಅವರಿಗೆ ಆಶ್ಚರ್ಯವಾಗಿಯೇ ತೀರುತ್ತದೆ. ಆರಂಭವಾದಿ = ಸಮವಾಯಿ, ಅಸಮವಾಯಿ ಮತ್ತು ನಿಮಿತ್ತ ಕಾರಣಗಳಿಗಿಂತ ಭಿನ್ನವಾದ ಕಾರ್ಯವು ಹುಟ್ಟುತ್ತದೆಯೆಂದು ವಾದಿಸುವ ತಾರ್ಕಿಕ. ಪರಿಣಾಮವಾದಿ = ಕಾರಣವು ರೂಪಾಂತರವನ್ನು ಹೊಂದಿ ಪರಿಣಮಿಸಿ ಕಾರ್ಯದ ರೂಪವನ್ನು ಪಡೆಯುತ್ತದೆ ಎನ್ನುವ ಸಾಂಖ್ಯಮತದವನು (೫೯). ಕಾರಣವನ್ನು ತಿಳಿದು ಎಲ್ಲವಸ್ತುಗಳ ಜ್ಞಾನವನ್ನೂ ಪಡೆಯಲಿ - ಎಂಬುದು ಛಾಂದೋಗ್ಯಶ್ರುತಿಯ ಅಭಿಪ್ರಾಯವಲ್ಲ, ಮತ್ತೇನೆಂದರೆ, ಸಮಸ್ತವಸ್ತುಗಳಿಗೂ ಕಾರಣವಾದದ್ದು ಒಂದೇ ಒಂದು ಬ್ರಹ್ಮ - ಎಂದು ತಿಳಿಸಿ ಮುಮುಕ್ಷುವನ್ನು ಅದ್ವೈತದ ಕಡೆಗೆ ಅಭಿಮುಖನನ್ನಾಗಿ ಮಾಡುವುದು ಶ್ರುತಿಯ ಉದ್ದೇಶವಾಗಿದೆ (೬೦). ಗಡಿಗೆ, ಹರವಿ, ಹಣತೆ ಮೊದಲಾದವುಗಳಿಗೆ ಉಪಾದಾನಕಾರಣವಾದ ಒಂದು ಮೃತ್ಪಿಂಡವನ್ನರಿತು ಕೊಂಡರೆ ಮೃತ್ತಿನಿಂದಾದ ಸಕಲವಸ್ತುಗಳ

ಸಾಮಾನ್ಯಜ್ಞಾನವಾಗುತ್ತದೆ. ಹಾಗೆಯೇ ಸರ್ವೋಪಾದಾನವಾದ ಬ್ರಹ್ಮವನ್ನರಿತುಕೊಂಡರೆ ಅದರಿಂದಾದ ಸಕಲವಸ್ತುಗಳ ಸಾಮಾನ್ಯಜ್ಞಾನ-ವಾಗುವುದೆಂದು ತಿಳಿಯಬೇಕು. ಈ ಅಭಿಪ್ರಾಯದಿಂದಲೇ ಶ್ರುತಿಯು **''ಯಥಾ ಸೋಮ್ಯ ಏಕೇನ ಮೃತ್ಪಿಂಡೇನ ಸರ್ವಂ ಮೃನ್ಮಯಂ ವಿಜ್ಞಾತಂ ಸ್ಯಾತ್''** (ಛಾಂ.ಉ.೬-೧-೪) ಇತ್ಯಾದಿ ದೃಷ್ಟಾಂತಗಳನ್ನು ಕೊಟ್ಟಿದೆ (೬೧).

ಈಗ ಬ್ರಹ್ಮ ಮತ್ತು ಜಗತ್ತಿನ ಸಾಮಾನ್ಯಸ್ವರೂಪವನ್ನು ಹೇಳಲಾಗುವುದು. ಬ್ರಹ್ಮವು ಸಚ್ಚಿದಾನಂದಸ್ವರೂಪವಾಗಿದೆ. ಜಗತ್ತು ನಾಮ ರೂಪಾತ್ಮಕವಾದದ್ದು. ನೃಸಿಂಹೋತ್ತರತಾಪನೀಯೋಪನಿಷತ್ತಿನಲ್ಲಿ **'ಬ್ರಹ್ಮೈವೇದಂ ಸರ್ವಂ ಸಚ್ಚಿದಾನಂದಲಕ್ಷಣಮ್'** (ನೃ.ಉ.ತಾ.ಉ.೭) ಎಂದು ಹೇಳಿದೆ. ಛಾಂದೋಗ್ಯದಲ್ಲಿ ಆರುಣಿಯು **'ಸದೇವ ಸೋಮ್ಯೇದಮಗ್ರ ಆಸೀತ್'** (ಛಾಂ.ಉ.೬-೧-೪) ಎಂದು ಹೇಳಿದ್ದಾನೆ. ಋಗ್ವೇದಕ್ಕೆ ಸೇರಿದ ಐತರೇಯವು **'ಪ್ರಜ್ಞಾ ಪ್ರತಿಷ್ಠಾ ಪ್ರಜ್ಞಾನಂ ಬ್ರಹ್ಮ'** (ಐ.ಉ.೫-೩) ಎಂದೂ ಹೇಳಿದೆ. ಪ್ರಜ್ಞಾ, ಪ್ರಜ್ಞಾನ - ಎಂದರೆ ಚಿದ್ರೂಪವೆಂದರ್ಥ. ಛಾಂದೋಗ್ಯದಲ್ಲಿ ಸನತ್ಕುಮಾರನು **'ಯೋ ವೈ ಭೂಮಾ ತತ್ ಸುಖಮ್'** (ಛಾಂ.ಉ. ೧-೨೩-೧) ಎಂದು ನುಡಿದು ಬ್ರಹ್ಮವು ಆನಂದರೂಪವೆಂದು ತಿಳಿಸಿದ್ದಾನೆ. ಹೀಗೆಯೇ ಬೇರೆ ಬೇರೆ ಉಪನಿಷತ್ತುಗಳಲ್ಲಿ ಬ್ರಹ್ಮವು ಸಚ್ಚಿದಾನಂದ ಸ್ವರೂಪವೆಂದು ವರ್ಣಿತವಾಗಿದೆ **'ಆನಂದೋ ಬ್ರಹ್ಮೇತಿ ವ್ಯಜಾನಾತ್'** (ತೈ.ಉ.೬೨-೬೩). ಜಗತ್ತು ನಾಮರೂಪಾತ್ಮಕವೆಂದು ಶ್ರುತಿಯು ತಿಳಿಸುತ್ತದೆ- **'ಸರ್ವಾಣಿ ರೂಪಾಣಿ ವಿಚಿತ್ಯ ಧೀರೋ ನಾಮಾನಿ ಕೃತ್ವಾಭಿವದನ್ ಯದಾಸ್ತೇ'** ಎಂದು ಪುರುಷಸೂಕ್ತವೂ **'ಅನೇನ ಜೀವೇನಾತ್ಮನಾ ಅನುಪ್ರವಿಶ್ಯ ನಾಮರೂಪೇ ವ್ಯಾಕರವಾಣಿ'** (ಛಾಂ.ಉ.೬-೩-೨) ಎಂದು ಛಾಂದೋಗ್ಯವೂ ಹೇಳಿವೆ. ಈ ವಾಕ್ಯಗಳಿಂದ ಜಗತ್ತು ನಾಮರೂಪಾತ್ಮಕವೆಂದು ಗೊತ್ತಾಗುತ್ತದೆ (೬೪). ಸೃಷ್ಟಿಯಾಗುವುದಕ್ಕೆ ಮೊದಲು ಈ ಜಗತ್ತು ಅವ್ಯಾಕೃತವಾಗಿತ್ತು ಎಂದರೆ ಅದರ ನಾಮರೂಪಗಳು ಅವ್ಯಕ್ತವಾಗಿದ್ದವು. ಆಮೇಲೆ ನಾಮರೂಪಗಳಿಂದ ಎರಡು ವಿಧವಾಗಿ ವ್ಯಕ್ತವಾಯಿತು. ಶಬ್ದಾರ್ಥಗಳ ರೂಪದಲ್ಲಿ ಕಾಣಿಸಿಕೊಂಡಿತು ಎಂದರ್ಥ. ಶಬ್ದವು ವಾಚಕ. ರೂಪವು ವಾಚ್ಯವಾದ ಅರ್ಥ. ಬ್ರಹ್ಮದಲ್ಲಿರುವ ಊಹಾತೀತಶಕ್ತಿಯಾದ

ಮಾಯೆಗೆ ಅವ್ಯಾಕೃತವೆಂದು ಹೆಸರು (೬೫). ಅವಿಕಾರಿಯಾದ ಬ್ರಹ್ಮದಲ್ಲಿರುವ ಈ ಮಾಯಾಶಕ್ತಿಯು ನಾನಾವಿಕಾರಗಳನ್ನು ಪಡೆದು ಜಗತ್ತಾಗಿ ಬಿಡುತ್ತದೆ. ನಾಮರೂಪಗಳೆರಡೂ ಈ ಮಾಯೆಯ ವಿಕಾರಗಳೇ. **'ಮಾಯಾಂ ತು ಪ್ರಕೃತಿಂ ವಿದ್ಯಾನ್ಮಾಯಿನಂ ತು ಮಹೇಶ್ವರಮ್'** (ಶ್ವೇ.ಉ.೪-೧೦) ಎಂದು ಶ್ರುತಿವಚನವಿದೆ. ಮಾಯೆಯನ್ನು ಪ್ರಕೃತಿಯೆಂದು ಅಥವಾ ಉಪಾದಾನ-ಕಾರಣವೆಂದು ತಿಳಿಯಬೇಕು. ಮಾಯೆಯುಳ್ಳವನು ಈಶ್ವರನೆಂದು ತಿಳಿಯಬೇಕು. (ಮಾಯಾಶಕ್ತಿಯನ್ನು ಪ್ರಕಟಿಸುವ ಬ್ರಹ್ಮವೇ ಈಶ್ವರ) (೬೬). ಮಾಯೋಪಹಿತನಾದ ಈಶ್ವರನ ಪ್ರಥಮಕಾರ್ಯವು (ವಿಕಾರವು) ಆಕಾಶವಾಗಿದೆ. ಅದು ಅಸ್ತಿ ಭಾತಿ ಪ್ರಿಯವಾಗಿದೆ. ಈ ಮೂರು ಸ್ವಭಾವಗಳು ಮೂಲಕಾರಣವಾದ ಸಚ್ಚಿದಾನಂದದಿಂದ ಬಂದವು (ಸತ್ = ಅಸ್ತಿ ಚಿತ್ = ಭಾತಿ, ಆನಂದ = ಪ್ರಿಯ). ಆಕಾಶದ ಸ್ವರೂಪವು ಅವಕಾಶವಾಗಿದೆ. ಈ ಅವಕಾಶವು ಮಿಥ್ಯೆ, ಸತ್ಯವಲ್ಲ. ಆದರೆ ಇದರಲ್ಲಿರುವ ಅಸ್ತಿ ಭಾತಿ, ಪ್ರಿಯ ಎಂಬ ಅಂಶಗಳು ಮಾತ್ರ ಸತ್ಯವಾದವು (೬೭). ಆಕಾಶದ ಗುಣವಾದ ಅವಕಾಶವು ಏಕೆ ಮಿಥ್ಯೆಯೆಂದರೆ ಆಕಾಶವು ವ್ಯಕ್ತವಾಗುವುದಕ್ಕೆ ಮೊದಲು ಇದು ಇರಲಿಲ್ಲ, ಆಕಾಶವು ನಾಶವಾದಾಗ ಇದು ಇರುವುದೂ ಇಲ್ಲ, ಹೀಗೆ ಅದ್ಯಂತಗಳಲ್ಲಿ ಯಾವುದಿಲ್ಲವೋ ಅದು ಮಧ್ಯದಲ್ಲಿಯೂ ಇಲ್ಲವೆಂದೇ ತಿಳಿಯಬೇಕು. **''ಆದಾವಂತೇ ಚ ಯನ್ನಾಸ್ತಿ ವರ್ತಮಾನೇಽಪಿ ತತ್ತಥಾ'** ಆದ್ದರಿಂದ ಅವಕಾಶಗುಣವೆಂಬುವುದು ಮಿಥ್ಯೆ (೬೮). ಆದ್ದರಿಂದಲೇ ಭಗವದ್ಗೀತೆಯಲ್ಲಿ ಶ್ರೀಕೃಷ್ಣನು -

**ಅವ್ಯಕ್ತಾದೀನಿ ಭೂತಾನಿ ವ್ಯಕ್ತಮಧ್ಯಾನಿ ಭಾರತ ।**
**ಅವ್ಯಕ್ತನಿಧನಾನ್ಯೇವ ತತ್ರ ಕಾ ಪರಿದೇವನಾ ॥**

(ಭ.ಗೀ.೨-೧೮)

ಎಂದು ಹೇಳಿದ್ದಾನೆ (೨-೨೮). ನಾವು ಕಾಣುವ ಪದಾರ್ಥಗಳೆಲ್ಲವೂ ಮೊದಲು ಅವ್ಯಕ್ತವಾಗಿದ್ದವು. ಆಮೇಲೆ ವ್ಯಕ್ತವಾಗಿವೆ. ಇವು ಕಡೆಗೆ ಅವ್ಯಕ್ತದಲ್ಲಿ ಲೀನವಾಗಿ ಬಿಡುತ್ತವೆ. ಅರ್ಜುನ, ಇದಕ್ಕಾಗಿ ವ್ಯಥೆಪಡುವುದೇಕೆ? - ಎಂದು ಅಭಿಪ್ರಾಯ (೬೯). ಮಣ್ಣು ಹೇಗೆ ಅದರ ವಿಕಾರವಾದ ಘಟದಲ್ಲಿ ಅನುವೃತ್ತವಾಗುವುದೋ ಹಾಗೆಯೇ ಸಚ್ಚಿದಾನಂದಗಳು ಆತ್ಮನ ವಿಕಾರ (ವಿವೃತ್ತ)ವಾದ ಆಕಾಶದಲ್ಲಿ ಅನುವೃತ್ತವಾಗುತ್ತವೆ. ಆಕಾಶವು ಇಲ್ಲವಾದಾಗ

ಸತ್ - ಮೊದಲಾದವು ತನ್ನ ಆತ್ಮನಲ್ಲಿಯೇ ಪ್ರತೀತವಾಗುತ್ತವೆ. ಆಕಾಶವಿಲ್ಲದನ್ನು ನಾವು ಕಾಣದಿದ್ದರೂ ಆಕಾಶಸ್ವರೂಪವಾದ ಅವಕಾಶವನ್ನು ಮರೆತರೆ - ಎಂದರೆ - ಅವಕಾಶವಿಲ್ಲವೆಂದು ಮನಸ್ಸಿನಲ್ಲಿ ಕಲ್ಪಿಸಿಕೊಂಡರೆ ಆಗ ಯಾವುದು ಪ್ರತೀತವಾಗುವುದು, ಹೇಳು. ಆಗ ತೋರುವುದು ಶೂನ್ಯ ಎಂದು ಹೇಳುತ್ತೀಯೆ. ಹೆಸರು ಯಾವುದಾದರೂ ಆಗಲಿ. ಅಂತಹದೊಂದು ಅವಕಾಶಾಭಾವ - ಎಂಬುದು ಪ್ರತೀತವಾಗುತ್ತದೆಯಲ್ಲವೆ? (೭೦-೭೧). ಅದೇ ಸತ್. ಪ್ರತೀತವಾಗುವುದರಿಂದ ಚಿತ್. ಉದಾಸೀನಸ್ವಭಾವವಾದ್ದರಿಂದ ಆನಂದ. ಹೀಗೆ ಸಚ್ಚಿದಾನಂದಗಳು ಇದ್ದೇ ಇರುತ್ತವೆ. ಒಂದು ಪದಾರ್ಥವು ಅನುಕೂಲವಾಗಿದ್ದರೆ ಹರ್ಷವಾಗುತ್ತದೆ. ಪ್ರತಿಕೂಲವಾಗಿದ್ದರೆ ದುಃಖವಾಗುತ್ತದೆ. ಅವೆರಡೂ ಇಲ್ಲವಾದಾಗ ಉದಾಸೀನಸ್ಥಿತಿಯಲ್ಲಿ ನಿಜಾನಂದವು ಹೊಮ್ಮುತ್ತದೆ. ಆದರೆ ನಿಜದುಃಖ ಎಂಬುದು ಮಾತ್ರ ಇಲ್ಲ (೭೨-೭೩). ನಿಜಾನಂದವು ಸ್ಥಿರವಾದ್ದರಿಂದ ಸದಾ ಆನಂದವೇ ಇರಬೇಕು. ಆದರೆ ನಮಗೆ ಹರ್ಷದೊಡನೆ ಶೋಕವೂ ಆಗುವುದು. ಅದಕ್ಕೆ ಕಾರಣವೇನು? ನಿಜಾನಂದವನ್ನು ಗ್ರಹಿಸತಕ್ಕ ಮನಸ್ಸು ಕ್ಷಣಿಕವಾದ್ದರಿಂದ ಹರ್ಷವನ್ನು ತ್ಯಜಿಸಿ ಮನೋವ್ಯಾಪಾರವು ಶೋಕವನ್ನೂ ಗ್ರಹಿಸಿಬಿಡುತ್ತದೆ. ಹರ್ಷಶೋಕಗಳೆರಡೂ ಮನೋಗ್ರಾಹ್ಯಗಳಾದ್ದರಿಂದ ಮಾನಸಗಳು (೭೪). ಹೀಗೆ ನಿಜಾತ್ಮನಲ್ಲಿರುವಂತೆ ಆನಂದವು ಆಕಾಶದಲ್ಲಿಯೂ ಇದೆ ಎಂದು ತಿಳಿಯಬೇಕು. ಆಕಾಶದಲ್ಲಿ ಸತ್ತಾ (ಸತ್), ಭಾನ (ಪ್ರಕಾಶ-ಚಿತ್) - ಇವು ಉಂಟೆಂಬುದು ಸರ್ವಸಂಮತ. ಹೀಗೆಯೇ ವಾಯು ಅಗ್ನಿಜಲ - ಮುಂತಾದವುಗಳಲ್ಲಿ ಈ ದೇಹಪರ್ಯಂತವಾಗಿ ಸತ್ ಚಿತ್ ಆನಂದಗಳು ಅನುವೃತ್ತವಾಗಿವೆಯೆಂದು ತಿಳಿಯತಕ್ಕದ್ದು(೭೫). ಇವುಗಳಿಗಿಂತ ಅತಿರಿಕ್ತವಾಗಿ ಗತಿಸ್ಪರ್ಶಗಳು ವಾಯುವಿನ ಗುಣಗಳೆಂದೂ ಅಗ್ನಿಗೆ ಸುಡುವುದು, ಪ್ರಕಾಶಿಸುವುದು ಗುಣಗಳೆಂದೂ ನೀರಿಗೆ ದ್ರವತ್ವವೂ ಭೂಮಿಗೆ ಕಾಠಿಣ್ಯವೂ ಗುಣಗಳೆಂದು ನಿರ್ಣಯ. ಇವು ಅವುಗಳಲ್ಲಿರುವ ಅಸಾಧಾರಣಗುಣಗಳು (೭೬). ಹೀಗೆಯೇ ಓಷಧಿ, ಅನ್ನ, ದೇಹ - ಮುಂತಾದವುಗಳಿಗೆ ವಿಶಿಷ್ಟವಾದ ಆಕೃತಿ ಇರುತ್ತದೆ. ಇದೆಲ್ಲವನ್ನೂ ಯಥೋಚಿತವಾಗಿ ಊಹಿಸಿಕೊಳ್ಳಬೇಕು. ನಾಮರೂಪಗಳು ಈ ಪದಾರ್ಥಗಳಲ್ಲಿ ಅನೇಕ ಪ್ರಕಾರವಿದ್ದರೂ ಸಚ್ಚಿದಾನಂದಗಳು ಏಕಪ್ರಕಾರವಾಗಿ ಇದ್ದೇ ಇರುತ್ತವೆ ಎಂಬುದರಲ್ಲಿ ಯಾರಿಗೂ ವಿವಾದವಿಲ್ಲ(೭೭-೭೮). ಈ ನಾಮರೂಪಗಳೆರಡು ಮಾತ್ರ ಸತ್ಯವಾಗದೆ

ಕಲ್ಪಿತವಾಗಿವೆ. ಏಕೆಂದರೆ ಇವುಗಳಿಗೆ ಉತ್ಪತ್ತಿಲಯಗಳು ಆಗುತ್ತಲೇ ಇರುತ್ತವೆ. ಸಮುದ್ರದಲ್ಲಿ ಗುಳ್ಳೆ, ನೊರೆ, ಅಲೆಗಳು ಕಲ್ಪಿತವಾಗಿರುವಂತೆ ಈ ನಾಮರೂಪಗಳು ಮಿಥ್ಯೆಯಾದವು. ಬ್ರಹ್ಮದಲ್ಲಿ ಕಲ್ಪಿತವಾದವುಗಳು (೭೯). ಸಚ್ಚಿದಾನಂದ ರೂಪವಾದ ಪೂರ್ಣ ಬ್ರಹ್ಮವನ್ನು ಬುದ್ಧಿಯಿಂದ ವಿವೇಚಿಸಿ ನೋಡಿದಾಗ ಮೆಲ್ಲಮೆಲ್ಲಗೆ ವಿವೇಕಿಯು ಈ ನಾಮರೂಪಗಳನ್ನು ಉಪೇಕ್ಷಿಸತೊಡಗುತ್ತಾನೆ. ಈ ನಾಮರೂಪಗಳಲ್ಲಿ ಉಪೇಕ್ಷೆಯು ಹೆಚ್ಚಿದಂತೆ ಆತ್ಮತತ್ತ್ವದ ದರ್ಶನವು ಅಧಿಕವಾಗುತ್ತಾ ಹೋಗುವುದು. ಆತ್ಮತತ್ತ್ವವು ಅಧಿಕವಾಗಿ ತೋರಿದಂತೆ ಈತನು ನಾಮರೂಪಗಳೆರಡನ್ನೂ ತ್ಯಜಿಸಿಬಿಡುವನು. ಅವುಗಳಲ್ಲಿ ಆಸಕ್ತಿಯು ತೊರೆದುಹೋಗುವುದು (೮೦-೮೧). ನಾಮರೂಪಗಳೆಂಬ ದ್ವೈತದಲ್ಲಿ ಉಪೇಕ್ಷೆಯೂ ಬ್ರಹ್ಮತತ್ತ್ವದರ್ಶನದಲ್ಲಿ ಇಚ್ಛೆಯೂ ಅಭ್ಯಾಸದಿಂದ ಅಧಿಕವಾಗಿ, ಬ್ರಹ್ಮಜ್ಞಾನವು ಸ್ಥಿರವಾದಾಗ ಆ ಮನುಷ್ಯನು ಜೀವನ್ಮುಕ್ತನಾಗಿಬಿಡುತ್ತಾನೆ. ಶರೀರವು ಹೇಗೋ ಇದ್ದುಕೊಂಡಿರುತ್ತದೆ (೮೨). ಬ್ರಹ್ಮವನ್ನೇ ಚಿಂತಿಸುವುದು, ಬ್ರಹ್ಮದ ವಿಷಯವನ್ನೇ ಮಾತಾಡುವುದು, ಅನ್ಯೋನ್ಯವಾಗಿ ಅದರ ತತ್ತ್ವವನ್ನೇ ತಿಳಿಸುವುದು ಸದಾ ಬ್ರಹ್ಮಧ್ಯಾನದಲ್ಲಿ ಮುಳುಗಿಹೋಗುವುದು - ಇದನ್ನು ಬ್ರಹ್ಮಾಭ್ಯಾಸವೆಂದು ಜ್ಞಾನಿಗಳು ಹೇಳುತ್ತಾರೆ. ಹೀಗೆ ದೀರ್ಘಕಾಲದವರೆಗೆ ನಿರಂತರವಾಗಿ ಆದರದಿಂದ ಬ್ರಹ್ಮಾಭ್ಯಾಸವನ್ನು ಮಾಡುತ್ತಿದ್ದರೆ, ನಾನಾಜನ್ಮಗಳಿಂದ ಬಂದ ದ್ವೈತವಾಸನೆಯು ನಿಶ್ಚಯವಾಗಿ ಹೊರಟು ಹೋಗುತ್ತದೆ (೮೩-೮೪). ಮಣ್ಣಿನಲ್ಲಿರುವ ಶಕ್ತಿಯು ಘಟ, ಹರವಿ ಮುಂತಾದ ನಾನಾವಿಧವಸ್ತುಗಳನ್ನು ಹೇಗೆ ನಿರ್ಮಿಸುವುದೋ ಹಾಗೆ ಒಂದೇ ಒಂದು ಬ್ರಹ್ಮದಲ್ಲಿರುವ ಮೂರೂ ಶಕ್ತಿಯು ಲೆಕ್ಕವಿಲ್ಲದಷ್ಟು ಸುಳ್ಳು ಸೃಷ್ಟಿಗಳನ್ನು ನಿರ್ಮಿಸುವುದು. ಅಥವಾ ಜೀವನಲ್ಲಿರುವ ನಿದ್ರಾ ಸ್ವಪ್ನಗಳನ್ನು ವಿವಿಧ ಮಿಥ್ಯಾಸೃಷ್ಟಿಗೆ ನಿದರ್ಶನವಾಗಿ ಕೊಡಬಹುದು. ಮಣ್ಣಿನಲ್ಲಿರುವ ಶಕ್ತಿಯು ಸತ್ಯವಾದರೂ ಜೀವನ ನಿದ್ರಾಶಕ್ತಿಯು ಬ್ರಹ್ಮದ ಮಾಯಾಶಕ್ತಿಯಂತೆ ಮಿಥ್ಯೆಯಾದದ್ದು (೮೫). ಜೀವಾತ್ಮನ ನಿದ್ರಾಶಕ್ತಿಯು ಅದ್ಭುತವಾದ ಸ್ವಪ್ನವನ್ನುಂಟುಮಾಡುವುದೋ ಹಾಗೆ ಬ್ರಹ್ಮದಲ್ಲಿರುವ ಈ ಮಾಯಾಶಕ್ತಿಯು ಜಗತ್ತಿನ ಸೃಷ್ಟಿಸ್ಥಿತಿಲಯಗಳನ್ನು ನಡೆಸಿಬಿಡುತ್ತದೆ. ಸ್ವಪ್ನದಲ್ಲಿ ತಾನು ಆಕಾಶದಲ್ಲಿ ಹಾರಾಡುವುದನ್ನೂ ತನ್ನ ತಲೆಯನ್ನು ಕತ್ತರಿಸುತ್ತಿರುವುದನ್ನೂ ಕಾಣಬಹುದು! ಒಂದು ಮುಹೂರ್ತದಲ್ಲಿ ಎಷ್ಟೋ ಸಂವತ್ಸರಗಳು ಕಳೆದು ಹೋದದ್ದನ್ನೂ ಮೃತರಾದ ಪುತ್ರನೇ ಮೊದಲಾದವರನ್ನೂ ನೋಡಬಹುದು! (೮೬-೮೭).

ಇದು ಯುಕ್ತ - ನಡೆಯತಕ್ಕದ್ದು. ಇದು ಅಯುಕ್ತ- ನಡೆಯತಕ್ಕದ್ದಲ್ಲ ಎಂಬ ವ್ಯವಸ್ಥೆಯೇ ಸ್ವಪ್ನದಲ್ಲಿ ದುರ್ಲಭ. ಯಾವ ಯಾವುದು ಹೇಗೆ ಹೇಗೆ ಕಾಣುತ್ತದೆಯೋ ಅದು ಅದು ಯುಕ್ತವೆಂದುಕೊಳ್ಳಬೇಕಾಗಿರುತ್ತದೆ. ಮನುಷ್ಯನ ನಿದ್ರಾಶಕ್ತಿಗೇ ಇಷ್ಟು ದೊಡ್ಡ ಮಹಿಮೆ ಕಂಡುಬರುತ್ತಿರುವಾಗ, ಬ್ರಹ್ಮದ ಮಾಯಾಶಕ್ತಿಯ ಮಹಿಮೆಯು ಊಹೆಗೂ ನಿಲುಕತಕ್ಕದ್ದಲ್ಲವೆಂಬುದರಲ್ಲಿ ಆಶ್ಚರ್ಯವೇನು? (೮೮-೮೯). ಮನುಷ್ಯನು ತನ್ನ ಪಾಡಿಗೆ ಮಲಗಿರುವಾಗ ನಿದ್ರೆಯು ನಾನಾ ಸ್ವರೂಪದ ಸ್ವಪ್ನವನ್ನು ಸೃಷ್ಟಿಸುತ್ತ ಹೋಗುವುದು! ಅಂತೆಯೇ ಬ್ರಹ್ಮವು ನಿರ್ವಿಕಾರವಾಗಿ ತನ್ನ ಪಾಡಿಗೆ ಇದ್ದಾಗ ಅದರಲ್ಲಿ ಮಾಯೆಯು ವಿಚಿತ್ರಪ್ರಪಂಚವನ್ನು ಕಲ್ಪಿಸುತ್ತ ಹೋಗುವುದು ! ಆಕಾಶ, ವಾಯು, ಅಗ್ನಿ, ಜಲ, ಪೃಥ್ವಿ, ಬ್ರಹ್ಮಾಂಡ, ನಾನಾಲೋಕಗಳು, ಪ್ರಾಣಿಗಳು, ಶಿಲೆ - ಮುಂತಾದವು ಮಾಯಕಲ್ಪಿತ ವಿಕಾರಗಳು. ಅವುಗಳೆಲ್ಲ ಪ್ರಾಣಿಗಳ ಅಂತಃಕರಣಗಳಲ್ಲಿ ಚೈತನ್ಯವು ಪ್ರತಿಬಿಂಬಿಸುವುದರಿಂದ ಚೇತನಗಳಾಗುತ್ತವೆ. ಇಲ್ಲದಿದ್ದರೆ ಜಡವಸ್ತುಗಳೆನಿಸುತ್ತವೆ. ಎಲ್ಲವೂ ಪಾಂಚಭೌತಿಕಗಳೇ(೯೦-೯೧). ಈ ಚೇತನಾ ಚೇತನವಸ್ತುಗಳಲ್ಲಿ ಸಚ್ಚಿದಾನಂದ ಸ್ವರೂಪವಾದ ಬ್ರಹ್ಮವು ಸಮಾನವಾಗಿರುತ್ತದೆ. ನಾಮರೂಪಗಳು ಮಾತ್ರ ಬೇರೆಯಾಗಿ ನಾನಾಪ್ರಕಾರಗಳಾಗುತ್ತವೆ. ಆಧಾರವಾದ ಶುಭ್ರವಸ್ತ್ರದಲ್ಲಿ ನಾನಾ ಬಗೆಯ ಚಿತ್ರವನ್ನು ಬರೆದಿರುವಂತೆ, ಸರ್ವತ್ರ ಇರುವ ಬ್ರಹ್ಮತತ್ತ್ವದಲ್ಲಿ ಈ ನಾಮರೂಪಗಳನ್ನು ಮಾಯೆಯು ಚಿತ್ರಿಸಿದೆ. ಈ ನಾಮರೂಪಗಳೆರಡನ್ನೂ ಹಿಂದೆ ಹೇಳಿದ ಪ್ರಕಾರದಲ್ಲಿ ಉಪೇಕ್ಷಿಸಿದರೆ, ನಾಮರೂಪಗಳಿಗೆ ಆಧಾರವಾದ ಸಚ್ಚಿದಾನಂದದ ಬುದ್ಧಿಯು ನಿಲ್ಲುತ್ತದೆ. ಕೊಳದ ತೀರದಲ್ಲಿ ನಿಂತಿರುವಾಗ ನೀರಿನಲ್ಲಿ ತನ್ನ ದೇಹವು ತಲೆಕೆಳಗಾಗಿರುವಂತೆ ಕಂಡರೂ, ಅದನ್ನು ಉಪೇಕ್ಷಿಸಿ ತೀರದಲ್ಲಿ ಊರ್ಧ್ವಮುಖವಾಗಿ ನಿಂತ ದೇಹವೇ ತನ್ನದೆಂಬ ಬುದ್ಧಿ ಇರುತ್ತದೆ. ಹಾಗೆ ವಿಪರೀತವಾಗಿ ಕಾಣುವ ನಾಮರೂಪಗಳನ್ನು ಉಪೇಕ್ಷಿಸಿ ತಳ್ಳಿದಾಗ ಸಚ್ಚಿದಾನಂದಬ್ರಹ್ಮದಲ್ಲಿ 'ನಾನು' ಎಂಬ ಬುದ್ಧಿ ಹುಟ್ಟುತ್ತದೆ(೯೨-೯೪). ಜನರ ಮನಸ್ಸಿನಲ್ಲಿ ಸಾವಿರಾರು ಮನೋರಾಜ್ಯಗಳು ಹುಟ್ಟುತ್ತಲೇ ಇರುತ್ತವೆ. ಆದರೆ ಅವೆಲ್ಲವನ್ನೂ ಉಪೇಕ್ಷಿಸಿ ಜನರು ತಮ್ಮ ನಿಜವಾದ ವ್ಯವಹಾರದಲ್ಲಿ ತೊಡಗುತ್ತಾರೆ. ಹಾಗೆಯೇ ವಿವೇಕಿಗಳು ದೃಶ್ಯಮಾನವಾದ ಸಾವಿರಾರು ನಾಮರೂಪಗಳನ್ನು ಉಪೇಕ್ಷಿಸಿ ಸ್ವಸ್ವರೂಪಚಿಂತನೆಯಲ್ಲಿ ತೊಡಗುತ್ತಾರೆ (೯೫). ಪ್ರತಿಯೊಂದು ಕ್ಷಣದಲ್ಲಿಯೂ ಮನೋರಾಜ್ಯವು ಬದಲಾಯಿಸಿ ಬೇರೆ ಬೇರೆ

ರೂಪವನ್ನು ತಳೆಯುತ್ತಲೆ ಇರುವುದು. ಬದಲಾಯಿಸಿದ್ದು ಹಾಗೆಯೇ ಮುಂದೆ ಹೋಗುತ್ತಿರುವುದೇ ಹೊರತು ಹಿಂದಿರುಗದು. ನಮ್ಮ ಬಾಹ್ಯ ವ್ಯವಹಾರವೂ ಹೀಗೆ ಬದಲಿಸುತ್ತಲೇ ಹೋಗುವುದು. ಕಳೆದುಹೋದ ಬಾಲ್ಯವು ಯೌವನದಲ್ಲಿ ಮತ್ತೆ ದೊರಕದು. ಮುಪ್ಪು ಬಂದಮೇಲೆ ಮತ್ತೆ ಯೌವನ ಬರುವುದಿಲ್ಲ. ತಂದೆ ಸತ್ತಮೇಲೆ ಮತ್ತೆ ದೊರೆಯುವುದಿಲ್ಲ. ಕಳೆದ ದಿನವು ಮತ್ತೆ ಎಂದಿಗೂ ಬರದು (೯೬-೯೭). ಈ ಬಗೆಯ ಮನೋರಾಜ್ಯಕ್ಕೂ ಕ್ಷಣಧ್ವಂಸಿಯಾದ ಲೌಕಿಕವ್ಯವಹಾರಕ್ಕೂ ಯಾವ ವ್ಯತ್ಯಾಸವಿದೆ? ಕ್ಷಣಿಕವಾದ್ದರಿಂದ ಈ ಲೌಕಿಕಪದಾರ್ಥಗಳು ಎದುರಿಗೆ ತೋರುತ್ತಿದ್ದರೂ ಅವು ಸತ್ಯವೆಂಬ ಬುದ್ಧಿಯನ್ನು ತೊರೆದುಬಿಡಬೇಕು. ಲೌಕಿಕ ವಸ್ತುಗಳಲ್ಲಿ ಆಸ್ಥೆಯನ್ನು ತೊರೆದರೆ ಬ್ರಹ್ಮತತ್ತ್ವದಲ್ಲಿ ಬುದ್ಧಿಯು ಸ್ಥಿರವಾಗಿ ನಿಲ್ಲುವುದು. ಅದಕ್ಕೆ ಈ ಲೌಕಿಕವ್ಯವಹಾರದಿಂದ ವಿಘ್ನವಾಗುವುದಿಲ್ಲ. ಹಾಗಾದರೆ ಜ್ಞಾನಿಯು ವ್ಯವಹಾರವನ್ನು ನಡೆಸುವುದು ಹೇಗೆ? ಎಂದು ಕೇಳಬಹುದು. ವ್ಯವಹಾರಕ್ಕೆ ಬಾಧೆಯಿಲ್ಲ. ನಾಟಕದಲ್ಲಿ ನಟನು ತನ್ನ ಪಾತ್ರದಲ್ಲಿ ಕೃತ್ರಿಮವಾದ ಆಸ್ಥೆಯನ್ನು ವಹಿಸಿ ಉತ್ತಮವಾಗಿಯೇ ನಟಿಸುವಂತೆ ಜ್ಞಾನಿಯು ಕೃತಕವಾದ ಆಸ್ಥೆಯಿಂದ ಉತ್ತಮವಾಗಿಯೇ ವ್ಯವಹಾರವನ್ನು ನಡೆಸಿಯೇ ನಡೆಸುವನು (೯೮-೯೯). ಜ್ಞಾನಿಯು ವ್ಯವಹಾರವನ್ನು ನಡೆಸಿದ ಮಾತ್ರದಿಂದ ಅವನ ಸ್ಥಿತಿಯು ವಿಕಾರಗೊಳ್ಳುವುದಿಲ್ಲ. ನೀರು ಮೇಲೆ ಹರಿಯುತ್ತಿದ್ದರೂ ನೀರಿನೊಳಗಿರುವ ಭಾರಿ ಬಂಡೆಯು ಹೇಗೆ ಅಲ್ಲಾಡದೆ ಸ್ಥಿರವಾಗಿರುವುದೋ ಹಾಗೆ, ನಾಮರೂಪಗಳು ಪರಿವರ್ತನ ಹೊಂದುತ್ತಿದ್ದರೂ, ಬುದ್ಧಿಯು ಸಂಸಾರದಲ್ಲಿ ತೊಡಗಿದ್ದರೂ ಕೂಟಸ್ಥವಾದ ಬ್ರಹ್ಮವು ಅಲ್ಲಾಡದೆ ಸ್ಥಿರವಾಗಿರುವುದು (೧೦೦). ಛಿದ್ರವಿಲ್ಲದ ಅಖಂಡವಾದ ಕನ್ನಡಿಯಲ್ಲಿ ನಾನಾವಸ್ತುಗಳಿಂದ ತುಂಬಿದ ವಿಶಾಲವಾದ ಆಕಾಶವು ಪ್ರತಿಬಿಂಬಿತವಾಗಿ ಕಾಣಿಸುವಂತೆ, ಸಚ್ಚಿದ್‌ಘನವಾದ ಬ್ರಹ್ಮವಸ್ತುವಿನಲ್ಲಿ ಜಗತ್ತು ಸಹಿತವಾಗಿ ವಿಶಾಲವಾದ ಆಕಾಶವು ತೋರುತ್ತದೆ (೧೦೧). ಕನ್ನಡಿಯನ್ನು ನೋಡದೇ ಅದರೊಳಗಿನ ವಸ್ತುವನ್ನು ನೋಡಲಾಗುವುದಿಲ್ಲ. ಹಾಗೆಯೇ ಸಚ್ಚಿದಾನಂದ ಸ್ವರೂಪವಾದ ಆತ್ಮತತ್ತ್ವದ ದರ್ಶನವಾಗದೆ ಅದರಲ್ಲಿರುವ ನಾಮರೂಪಗಳ ದರ್ಶನವು ಹೇಗಾದೀತು? **''ಕಸ್ಮಿನ್ನು ಭಗವೋ ವಿಜ್ಞಾತೇ ಸರ್ವಮಿದಂ ವಿಜ್ಞಾತಂ ಭವತಿ'' ''ಏಕವಿಜ್ಞಾನಾತ್ ಸರ್ವ ವಿಜ್ಞಾನಂ''** (ಮುಂ.ಉ.೧-೩) ಎಂದು ಹಿಂದೆ

ನಿರ್ಧರಿಸಿದ್ದನ್ನಿಲ್ಲಿ ಸ್ಮರಿಸಿಕೊಳ್ಳಬೇಕು (೧೦೨). ಸಚ್ಚಿದಾನಂದ ರೂಪವಾದ ಬ್ರಹ್ಮದಲ್ಲಿ ಕಲ್ಪಿತನಾಮರೂಪಾತ್ಮಕ ಪ್ರಪಂಚವು ತೋರುತ್ತದೆಯಷ್ಟೆ ಮೊದಲು ಬ್ರಹ್ಮವನ್ನರಿತು ಅನಂತರ ನಾಮರೂಪಗಳ ಬುದ್ಧಿಯನ್ನು ತೊರೆದುಬಿಡಬೇಕು. ಅದನ್ನು ಗಣಿಸಲೂ ಬಾರದು. ಹೀಗಾದರೆ ಬ್ರಹ್ಮವು ಸಚ್ಚಿದಾನಂದ ಸ್ವರೂಪವೆಂದು, ಅದರಲ್ಲಿ ಜಗತ್ತು ಇಲ್ಲವೆಂದೂ ನಿರ್ಣೀತವಾಗುವುದು. ಜನರು ಈ ಅದ್ವೈತಾನಂದದಲ್ಲಿ ಚಿರಕಾಲದವರೆಗೆ ವಿಶ್ರಮಿಸಲಿ. ಬ್ರಹ್ಮಾನಂದವೆಂಬ ಈ ಗ್ರಂಥದಲ್ಲಿ ಮೂರನೆಯ ಅಧ್ಯಾಯವು ಉಕ್ತವಾಯಿತು. ಜಗತ್ತು ಮಿಥ್ಯೆಯೆಂದು ಚಿಂತಿಸುವುದರಿಂದ ಮನಸ್ಸಿನ ಸ್ಥಿತಿಯು ಅದ್ವೈತಾನಂದವೇ ಆಗಿಬಿಡುತ್ತದೆ (೧೦೩-೧೦೫).

ಇಲ್ಲಿಗೆ ಅದ್ವೈತಾನಂದಪ್ರಕರಣವು ಸಮಾಪ್ತವಾಯಿತು

---

# ೧೪. ವಿದ್ಯಾನಂದಪ್ರಕರಣ

ಯೋಗಾಭ್ಯಾಸ, ಆತ್ಮತತ್ತ್ವವಿವೇಚನೆ, ದ್ವೈತವು ಮಿಥ್ಯೆ ಎಂಬ ಚಿಂತನೆ - ಇವುಗಳಿಂದ ಬ್ರಹ್ಮಾನಂದವನ್ನು ಸಾಕ್ಷಾತ್ಕರಿಸಿಕೊಂಡ ಜ್ಞಾನಯೋಗಿಯ ಉಪಯೋಗಕ್ಕಾಗಿ ವಿದ್ಯಾನಂದವನ್ನು ನಿರೂಪಿಸುತ್ತೇವೆ. ವಿದ್ಯಾನಂದವು ವಿಷಯಾನಂದದಂತೆ ಬುದ್ಧಿಯ ವೃತ್ತಿರೂಪವಾಗಿದೆ. ಇದು ದುಃಖಾಭಾವ ಇತ್ಯಾದಿಯಾಗಿ ನಾಲ್ಕು ಪ್ರಕಾರವಾಗಿದೆ. ಹಿಂದಿನ ಪ್ರಕರಣಗಳಲ್ಲಿ ಹೇಳಿದ ಯೋಗಾನಂದ, ಅದ್ವೈತಾನಂದ, ಆತ್ಮಾನಂದಗಳು ವೃತ್ತಿರೂಪಗಳಲ್ಲ. ಅವು ಆನಂದರೂಪನಾದ ಆತ್ಮನ ಸ್ವರೂಪಾನಂದಗಳು (೧-೨). ದುಃಖಾಭಾವ, ಕಾಮಾಪ್ತಿ, ಕೃತಕೃತ್ಯಭಾವ, ಪ್ರಾಪ್ತಪ್ರಾಪ್ಯಭಾವ - ಎಂದು ವಿದ್ಯಾನಂದದಲ್ಲಿ ನಾಲ್ಕು ಭೇದಗಳುಂಟು. ಕಾಮಾಪ್ತಿ = ನನ್ನ ಇಷ್ಟಗಳೆಲ್ಲವೂ ಸಿದ್ಧಿಸಿದವೆಂಬ ಭಾವನೆ. ಕೃತಕೃತ್ಯಭಾವ = ನನ್ನ ಕರ್ತವ್ಯಗಳೆಲ್ಲವನ್ನೂ ಪೂರೈಸಿ ಧನ್ಯನಾದೆನು ಎಂಬ ಭಾವನೆ. ಪ್ರಾಪ್ತಪ್ರಾಪ್ಯಭಾವ = ನಾನು ಯಾವುದನ್ನು ಪಡೆಯಬೇಕೆಂದಿದ್ದೆನೋ ಅದನ್ನು ಪಡೆದಿದ್ದೇನೆ. ಇನ್ನು ಪಡೆಯಬೇಕಾದ್ದಿಲ್ಲ ಎಂಬ ಭಾವನೆ (೩). ಐಹಿಕ, ಆಮುಷ್ಮಿಕ ಎಂದು ದುಃಖವು ಎರಡು ವಿಧ. ಐಹಿಕ = ಈ ಲೋಕಕ್ಕೆ ಸಂಬಂಧಿಸಿದ್ದು. ಆಮುಷ್ಮಿಕ = ಪರಲೋಕಕ್ಕೆ ಸಂಬಂಧಿಸಿದ್ದು. ಈ ದುಃಖಗಳ ಅಭಾವವು ಆನಂದರೂಪವಾದದ್ದು. ಬೃಹದಾರಣ್ಯಕದಲ್ಲಿ ಐಹಿಕ ದುಃಖದ ನಿವೃತ್ತಿವಿಚಾರವನ್ನು ಹೇಳಿದೆ. **'ಆತ್ಮಾನಂ ಚೇದ್ವಿಜಾನೀಯಾತ್ ...'** (ಬೃ.ಉ.೪-೪-೧೨) ಇತ್ಯಾದಿ 'ಇವನು ನಾನು!' ಎಂದು ಮನುಷ್ಯನು ತನ್ನ ಸ್ವರೂಪವನ್ನರಿತು ತಾನು ಯಾರೆಂದು ತಿಳಿದುಕೊಂಡಮೇಲೆ, ಯಾವ ವಸ್ತುವನ್ನು ಪಡೆಯುವುದಕ್ಕಾಗಿ ಯಾವ ಭೋಕ್ತನ ಭೋಗಕ್ಕಾಗಿ ಈ ಶರೀರವನ್ನು ಕಟ್ಟಿಕೊಂಡು ದುಃಖಿಯಾಗಿ ಅಲೆಯಬೇಕು?'' ಎಂದು ಆ ಉಪನಿಷದ್ವಾಕ್ಯದ ಅರ್ಥ (೪-೫).

ಆತ್ಮನು ಜೀವಾತ್ಮ, ಪರಮಾತ್ಮ ಎಂದು ಎರಡು ವಿಧ. ಆತ್ಮಚೈತನ್ಯವು ಸ್ಥೂಲ, ಸೂಕ್ಷ್ಮ, ಕಾರಣ - ಎಂಬ ಮೂರು ಶರೀರಗಳೊಡನೆ ತಾದಾತ್ಮ್ಯಭ್ರಮವನ್ನು ಹೊಂದುತ್ತದೆ. ಚಿತ್‌ಸ್ವರೂಪನಾದ ಆತ್ಮನು ಈ ಶರೀರತ್ರಯದೊಡನೆ ಭ್ರಮೆಯಿಂದ ತಾದಾತ್ಮ್ಯವನ್ನು ತಳೆದು ಸುಖದುಃಖಗಳ ಭೋಕ್ತೃವಾಗಿ ಜೀವಾತ್ಮನೆನಿಸುತ್ತಾನೆ. ಸಚ್ಚಿದಾನಂದ ಸ್ವರೂಪನಾದವನು ಪರಮಾತ್ಮ. ಅವನೇ ನಾಮರೂಪಗಳೊಡನೆ ತಾದಾತ್ಮ್ಯಹೊಂದಿ

ಭೋಗ್ಯನಾಗುತ್ತಾನೆ. ಇದೆಲ್ಲವನ್ನೂ ವಿವೇಕದಿಂದ ಪೃಥಕ್ಕರಿಸಿ ಶರೀರತ್ರಯವನ್ನೂ ನಾಮರೂಪಾತ್ಮಕ ಜಗತ್ತನ್ನೂ ವಿಂಗಡಿಸಿದಾಗ, ಭೋಕ್ತನೂ ಇರುವುದಿಲ್ಲ, ಭೋಗ್ಯವೂ ಇರುವುದಿಲ್ಲ! (೬-೭). ಮನುಷ್ಯನು ಭೋಕ್ತೃವಿಗಾಗಿ ಭೋಗ್ಯವನ್ನು ಹುಡುಕುತ್ತ ಈ ಶರೀರದೊಡನೆ ದುಃಖವನ್ನನುಭವಿಸುತ್ತ ಅಲೆಯುತ್ತಿದ್ದಾನೆ. ದುಃಖರೂಪವಾದ ಜ್ವರಗಳಿರುವುದು ಹಿಂದೆ ಹೇಳಿದ ಮೂರು ಶರೀರಗಳಲ್ಲಿ, ಆತ್ಮನಿಗೆ ಯಾವ ಜ್ವರವೂ ಇಲ್ಲ. ಸ್ಥೂಲಶರೀರದಲ್ಲಿ ಧಾತುವೈಷಮ್ಯವಾದಾಗ ನಾನಾ ವ್ಯಾಧಿಗಳು ಹುಟ್ಟುತ್ತವೆ. ಇವು ಸ್ಥೂಲಶರೀರದ ಜ್ವರಗಳು. ಧಾತುವೈಷಮ್ಯವೆಂದರೆ ವಾತ, ಪಿತ್ತ, ಕಫ - ಎಂಬ ಧಾತುಗಳ ವಿಷಮಸ್ಥಿತಿ. ಕಾಮ, ಕ್ರೋಧ, ದ್ವೇಷ ಮುಂತಾದವು ಸೂಕ್ಷ್ಮಶರೀರದ ಜ್ವರಗಳು. ಈ ಎರಡುಬಗೆಯ ಜ್ವರಗಳಿಗೆ ನಿಮಿತ್ತವಾದ ಜನ್ಮಾಂತರೀಯ ಸಂಸ್ಕಾರವು ಕಾರಣ ಶರೀರದಲ್ಲಿರುತ್ತದೆ (೮-೯). ಹಿಂದೆ ಆತ್ಮಾನಂದ ಪ್ರಕರಣದಲ್ಲಿ ಹೇಳಿದಂತೆ ಸಚ್ಚಿದಾನಂದನಾದ ಪರಮಾತ್ಮನು ಮಾಯಾಕಾರ್ಯಗಳಾದ ನಾಮರೂಪಗಳಿಂದ ಭಿನ್ನನೆಂದು ತಿಳಿದ ಮೇಲೆ, ಕಾಣುತ್ತಿರುವ ಈ ಪ್ರಪಂಚವು ಮಿಥ್ಯೆಯೆಂದು ಗೊತ್ತಾಗುವುದು. ಆ ತತ್ತ್ವಜ್ಞನು ಯಾವ ಭೋಗ್ಯವು ವಾಸ್ತವವೆಂದು ಬಯಸಿಯಾನು? ಭೋಗ್ಯವೆನಿಸಿದ ನಾಮರೂಪಗಳೆಲ್ಲವೂ ಅನೃತವೆಂದು ನಿಶ್ಚಯವಾದಾಗ ಆತನು ಅವನ್ನೆಂದಿಗೂ ಬಯಸುವುದಿಲ್ಲ(೧೦). ಅಲ್ಲದೆ ಆತ್ಮಾನಂದ ಪ್ರಕರಣದಲ್ಲಿ ಹೇಳಿದಂತೆ ಈ ಜೀವಾತ್ಮನು ವಾಸ್ತವವಾಗಿ ಅಸಂಗಕೂಟಸ್ಥ ಚೈತನ್ಯಸ್ವರೂಪನೆಂದು ನಿಶ್ಚಿತವಾದ ಮೇಲೆ, ನಿಜವಾದ ಭೋಕ್ತೃವೇ ಇರುವುದಿಲ್ಲ, ಭೋಗ್ಯವನ್ನು ಬಯಸತಕ್ಕವನೇ ಇಲ್ಲದಾಗ ಈ ಶರೀರದಲ್ಲಿ ಜ್ವರ ಸಂಬಂಧವೇ ಇರುವುದಿಲ್ಲ! (೧೧). ಪುಣ್ಯಾಪಾಪಗಳೆರಡರ ಚಿಂತೆಯು ಆಮುಷ್ಮಿಕಜ್ವರವೆನಿಸುವುದು. ಬ್ರಹ್ಮಾನಂದದ ಪ್ರಥಮ ಪ್ರಕರಣದಲ್ಲಿಯೇ ಜ್ಞಾನಿಗೆ ಪುಣ್ಯಾಪಾಪಗಳ ಸಂಬಂಧವೇ ಇರುವುದಿಲ್ಲವೆಂದು ಹೇಳಿದ್ದಾಗಿದೆ. ಪ್ರಾರಬ್ಧಕರ್ಮದ ಚಿಂತೆ ಮಾತ್ರವಲ್ಲ, ಆಗಾಮಿ ಕರ್ಮಗಳ ಚಿಂತೆಯೂ ತತ್ತ್ವಜ್ಞನಿಗೆ ಇರುವುದಿಲ್ಲ. ನೀರಿನಲ್ಲಿರುವ ತಾವರೆ ಎಲೆಗೆ ನೀರಿನ ಸೋಂಕು ಹೇಗೆ ಇರುವುದಿಲ್ಲವೋ ಹಾಗೆ ಬ್ರಹ್ಮಜ್ಞಾನವಾದಮೇಲೆ ಆ ತತ್ತ್ವಜ್ಞನಿಗೆ ಆಗಾಮಿಕರ್ಮಗಳ ಸೋಂಕು ಇರುವುದಿಲ್ಲ. ಛಾಂದೋಗ್ಯದಲ್ಲಿರುವ **'ತದ್ಯಥಾ ಪುಷ್ಕರಪರ್ಣೇ ... '** (ಛಾಂ.ಉ.೪-೧೪-೩)ಇತ್ಯಾದಿ ವಚನಗಳನ್ನು ನೋಡಬಹುದು (೧೨-೧೩).

ಸಂಚಿತಕರ್ಮದ ಬಾಧೆಯೂ ಜ್ಞಾನಿಗಿಲ್ಲ. ಇಷೀಕಾ ಎಂಬ ಹುಲ್ಲಿನ ಹತ್ತಿಯು ಬೆಂಕಿಯಲ್ಲಿ ಬಿದ್ದೊಡನೆ ಹೇಗೆ ಸುಟ್ಟು ನಾಶವಾಗುವುದೋ ಹಾಗೆ ಆತ್ಮಜ್ಞಾನವಾದೊಡನೆ ಆತನ ಸಂಚಿತ ಕರ್ಮವು ಸುಟ್ಟು ಬೂದಿಯಾಗುವುದು. ಛಾಂದೋಗ್ಯದಲ್ಲಿಯೇ "ತದ್ಯಥಾ ಇಷೀಕಾತೂಲಮಗ್ನೌ ಪ್ರೋತಂ ಪ್ರದೂಯೇತ, ಏವಂ ಹಾಸ್ಯ ಸರ್ವೇ ಪಾಪ್ಮಾನಃ ಪ್ರದೂಯಂತೇ" (ಛಾಂ.ಉ.೫-೨೪-೩) ಎಂದು ಹೇಳಿದೆ (೧೪).

ಭಗವದ್ಗೀತೆಯಲ್ಲಿ ಶ್ರೀಕೃಷ್ಣನೂ ಹೀಗೆ ಹೇಳಿದ್ದಾನೆ -

> ಯಥೈಧಾಂಸಿ ಸಮಿದ್ಧೋಽಗ್ನಿರ್ಭಸ್ಮಸಾತ್ ಕುರುತೇಽರ್ಜುನ ।
> ಜ್ಞಾನಾಗ್ನಿಃ ಸರ್ವಕರ್ಮಾಣಿ ಭಸ್ಮಸಾತ್ ಕುರುತೇ ತಥಾ ॥
> (ಭ.ಗೀ.೪-೩೭)

> ಯಸ್ಯ ನಾಹಂಕೃತೋಭಾವೋ ಬುದ್ಧಿರ್ಯಸ್ಯ ನ ಲಿಪ್ಯತೇ ।
> ಹತ್ವಾಪಿ ಸ ಇಮಾನ್ ಲೋಕಾನ್ ನ ಹಂತಿ ನ ನಿಬಧ್ಯತೇ ॥
> (ಭ.ಗೀ.೧೮-೧೭)

"ಅರ್ಜುನ, ಜ್ವಲಿಸುತ್ತಿರುವ ಅಗ್ನಿಯು ಸೌದೆಗಳನ್ನು ಹೇಗೆ ಬೂದಿ ಮಾಡಿಬಿಡುತ್ತದೆಯೋ ಹಾಗೆ ಬ್ರಹ್ಮಜ್ಞಾನವೆಂಬ ಅಗ್ನಿಯು ಬ್ರಹ್ಮವಿದನ ಸಕಲಕರ್ಮಗಳನ್ನೂ ಸುಟ್ಟು ಬೂದಿಮಾಡಿಬಿಡುತ್ತದೆ. ಯಾವ ಜ್ಞಾನಿಯ ಭಾವನೆಯು ಅಹಂಕಾರಯುಕ್ತವಾಗಿಲ್ಲವೋ, ಬುದ್ಧಿಯು ಸಂಸಾರ ಚಿಂತೆಯಿಂದ ಲಿಪ್ತವಾಗಿಲ್ಲವೋ ಅವನು ಸಕಲಲೋಕಗಳನ್ನು ಕೊಂದು ಹಾಕಿದರೂ ಕೊಂದವನಾಗುವುದಿಲ್ಲ, ಯಾವ ಪಾಪಕರ್ಮವೂ ಅವನಿಗೆ ಸಂಬಂಧಿಸುವುದಿಲ್ಲ" ಇದು ಗೀತಾಶ್ಲೋಕಗಳ ತಾತ್ಪರ್ಯ (೧೫-೧೬).

ಕೌಷೀತಕೀ (೩-೧) ಶ್ರುತಿಯಲ್ಲಿ "ನ ಮಾತೃವಧೇನ ನ ಪಿತೃವಧೇನ.." ಇತ್ಯಾದಿ ವಾಕ್ಯವಿದೆ. ಅದರ ತಾತ್ಪರ್ಯವೇನೆಂದರೆ - ತಾಯಿ ತಂದೆಗಳ ವಧೆ, ಕಳ್ಳತನ, ಭ್ರೂಣಹತ್ಯೆ, ಇಂತಹ ಇನ್ನಿತರ ಪಾಪಕೃತ್ಯ - ಇದಾವುದೂ ತತ್ತ್ವಜ್ಞಾನಿಗೆ ಪ್ರಾಪ್ತವಾಗುವ ಮುಕ್ತಿಗೆ ಅಡ್ಡಿಯನ್ನು ಮಾಡುವುದಿಲ್ಲ. ಅವನ ಮುಖಕಾಂತಿಯೂ ಮಲಿನವಾಗುವುದಿಲ್ಲ (೧೭). ಜ್ಞಾನಿಗೆ ಪಾಪಕಾರ್ಯದಿಂದ ಕೇಡಾಗುವುದಿಲ್ಲವೆಂಬಂತೆಯೇ ಆತನ ಸರ್ವಕಾಮನೆಗಳೂ ಸಿದ್ಧಿಸುತ್ತವೆ ಎಂದೂ ಉಪನಿಷತ್ತು ಹೇಳಿದೆ. ಐತರೇಯದಲ್ಲಿ "ಆತನು ಸರ್ವಕಾಮಗಳನ್ನೂ ಪಡೆದುಕೊಂಡು ಅಮೃತನಾದನು" ಎಂದು ಉಕ್ತವಾಗಿದೆ

(೧೮). ಜ್ಞಾನಿಯಾದವನು ತಿನ್ನುತ್ತಿರಲಿ, ಕ್ರೀಡಿಸುತ್ತಿರಲಿ, ಸ್ತ್ರೀಯರೊಡನೆ ಭೋಗಿಸುತ್ತಿರಲಿ, ವಾಹನಗಳಲ್ಲಿ ಹೋಗುತ್ತಿರಲಿ ಅಥವಾ ಇನ್ನಾವ ಕರ್ಮವನ್ನಾಗಲಿ ಮಾಡುತ್ತಿರಲಿ ಅವನಿಗೆ ಶರೀರದ ಸ್ಮರಣೆ ಇರುವುದಿಲ್ಲ. ಆ ಸಮಯದಲ್ಲಿ ಅವನ ಪ್ರಾಣವು ಪ್ರಾರಬ್ಧಕರ್ಮದ ಸಹಾಯದಿಂದ ಆತನ ಶರೀರವನ್ನು ಧರಿಸಿ ಬದುಕಿಸಿರುತ್ತದೆ- ಈ ಮಾತನ್ನು ಛಾಂದೋಗ್ಯವು ಹೇಳಿದೆ (ಛಾಂ.೮-೧೨-೩). ತೈತ್ತಿರೀಯದಲ್ಲಿ ಹೀಗೆ ಹೇಳಿದೆ : ಆತ್ಮಜ್ಞಾನಿಯು ಸಂಸಾರದ ಸಕಲಕಾಮನೆಗಳನ್ನೂ ಏಕಕಾಲದಲ್ಲಿ ಪಡೆದುಕೊಳ್ಳುತ್ತಾನೆ. ಅಜ್ಞಾನಿಗೆ ಪ್ರಾಪ್ತವಾಗುವಂತೆ ಅದು ಕರ್ಮಫಲವಲ್ಲ, ಜ್ಞಾನದಿಂದ ಸಂಚಿತಕರ್ಮವು ದಗ್ಧವಾಗಿರುವುದರಿಂದ ಆತನಿಗೆ ಪುನರ್ಜನ್ಮವಿಲ್ಲ. ಶ್ರೋತ್ರಿಯನಾದ ತತ್ತ್ವಜ್ಞಾನಿಯಲ್ಲಿ ಸಮಗ್ರಭೋಗಗಳೂ ಕ್ರಮವಿಲ್ಲದೆ ಏಕಕಾಲದಲ್ಲಿ ಒದಗುತ್ತವೆ. ಆತನು ಎಣೆಯಿಲ್ಲದ ಆನಂದದಲ್ಲಿ ಮುಳುಗಿರುತ್ತಾನೆಂದು ತಾತ್ಪರ್ಯ (೧೯-೨೦). ಯುವಕನೂ ಸುಂದರನೂ ವಿದ್ವಾಂಸನೂ ಆರೋಗ್ಯಶಾಲಿಯೂ ಸ್ಥಿರಚಿತ್ತನೂ ಸೇನಾಸಮೇತನೂ ಧನಧಾನ್ಯಸಮೃದ್ಧವಾದ ಪೃಥ್ವಿಯನ್ನು ಆಳತಕ್ಕ ಸಾರ್ವಭೌಮನಾದ ರಾಜನೂ, ಹೆಚ್ಚೇನು - ಮನುಷ್ಯರಿಗೆ ದೊರೆಯಬಹುದಾದ ಸಕಲ ಮಾನವ ಭೋಗಗಳಿಂದ ಯುಕ್ತನಾದವನು ಎಷ್ಟು ಪ್ರಮಾಣದ ಆನಂದವನ್ನು ಅನುಭವಿಸುವನೋ ಅಷ್ಟನ್ನೂ ಒಬ್ಬ ಬ್ರಹ್ಮಜ್ಞಾನಿಯು ಪಡೆಯುತ್ತಾನೆ (೨೧-೨೨). ಈಗೊಂದು ಶಂಕೆ ಬರಬಹುದು ಸಾರ್ವಭೌಮನಿಗೆ ಬೇಕಾದಷ್ಟು ಭೋಗಸಾಮಗ್ರಿಗಳಿರುತ್ತವೆ. ಶ್ರೋತ್ರಿಯನಾದ ಬ್ರಹ್ಮಜ್ಞಾನಿಗೆ ಯಾವ ಭೋಗಸಾಮಗ್ರಿಯೂ ಇರುವುದಿಲ್ಲ. ಇದ್ದರೂ ಅತ್ಯಲ್ಪವಾಗಿರುತ್ತದೆ. ಹೀಗಿರುವಾಗ ಸಾರ್ವಭೌಮನ ಆನಂದವು ಶ್ರೋತ್ರಿಯನಿಗೆ ಆಗುವುದು ಹೇಗೆ? ನಿಜ; ಸಾರ್ವಭೌಮನಿಗೆ ಇನ್ನು ಯಾವ ಬಯಕೆಯೂ ಇರುವುದಿಲ್ಲ, ಎಲ್ಲ ಸಾಮಗ್ರಿಗಳೂ ದೊರಕಿರುವುದರಿಂದ ಆತನು ನಿಷ್ಕಾಮನಾಗಿರುತ್ತಾನೆ. ತತ್ತ್ವವಿದನಾದ ಶ್ರೋತ್ರಿಯನು ಸ್ವತಃ ನಿಷ್ಕಾಮನಾಗಿರುತ್ತಾನೆ. ಉಭಯರಿಗೂ ಕಾಮನೆಯಿಲ್ಲದ್ದರಿಂದ ತೃಪ್ತಿಆನಂದಗಳೂ ಉಭಯರಿಗೂ ಸಮಾನ ವಾಗಿರುತ್ತವೆ. ರಾಜನು ಸಮಸ್ತ ಭೋಗಗಳನ್ನೂ ಅನುಭವಿಸುವುದರಿಂದ ಕಾಮನಾರಹಿತನಾಗಿರುತ್ತಾನೆ. ಈ ಶ್ರೋತ್ರಿಯನು ವಿವೇಕದ ಮಹಿಮೆಯಿಂದ ನಿಷ್ಕಾಮನಾಗಿರುತ್ತಾನೆ (೨೩). ಶ್ರೋತ್ರಿಯನು ವೇದಶಾಸ್ತ್ರಗಳನ್ನು ಬಲ್ಲವನಾದ್ದರಿಂದ ಅವುಗಳ ಮೂಲಕ ಸುಖಭೋಗಗಳಲ್ಲಿರುವ ದೋಷಗಳನ್ನು

ಗೊತ್ತು ಮಾಡುತ್ತಾನೆ. ಬೃಹದ್ರಥರಾಜನು ಮೈತ್ರಾಯಣೀಯ ಶಾಖೆಯಲ್ಲಿ ಗಾಥೆಗಳ ದ್ವಾರಾ ವಿಷಯಭೋಗದಲ್ಲಿರುವ ದೋಷಗಳನ್ನು ಹೇಳುತ್ತಿರುತ್ತಾನೆ. ಅವನು ದೇಹದೋಷ, ಚಿತ್ತದೋಷ, ಭೋಗ್ಯದೋಷಗಳನ್ನು ಅನೇಕ ವಿಧದಲ್ಲಿತೋರಿಸಿಕೊಟ್ಟಿದ್ದಾನೆ. ನಾಯಿಯು ವಾಂತಿ ಮಾಡಿದ ಪಾಯಸವನ್ನು ತಿನ್ನಲು ಯಾರಿಗೂ ಹೇಗೆ ಇಚ್ಛೆಯಾಗುವುದಿಲ್ಲವೋ ಹಾಗೆ ವಿವೇಕಿಪುರುಷನಿಗೆ ವಿಷಯಭೋಗದಲ್ಲಿ ಇಚ್ಛೆಯಾಗುವುದಿಲ್ಲ! (೨೪-೨೫). ಹಿಂದೆ ಹೇಳಿದಂತೆ ರಾಜನಿಗೂ ವಿವೇಕಿಗೂ ಕಾಮನೆ ಇಲ್ಲದಿರುವುದು ಸಮಾನವಾಗಿದ್ದರೂ ಒಂದು ವಿಶೇಷ ಉಂಟು. ರಾಜನಿಗೆ ಭೋಗಸಾಮಗ್ರಿಗಳನ್ನು ದೊರಕಿಸಿಕೊಳ್ಳುವ ಕಷ್ಟವಿದೆ. ಅಲ್ಲದೆ ದೊರಕಿಸಿಕೊಂಡ ಭೋಗಸಾಮಗ್ರಿಯು ನಾಶವಾದೀತೆಂಬ ಭಯವೂ ಇದ್ದೇ ಇರುತ್ತದೆ. ವಿವೇಕಿಗೆ ಇವೆರಡೂ ಇರುವುದಿಲ್ಲ! ಆದ್ದರಿಂದ ವಿಚಾರ ಮಾಡಿದಲ್ಲಿ ವಿವೇಕಿಯ ಆನಂದವೇ ರಾಜನ ಆನಂದಕ್ಕಿಂತ ಅಧಿಕವೆನ್ನಬಹುದು. ಮತ್ತು ರಾಜನಿಗೆ ತನ್ನ ಆನಂದಕ್ಕಿಂತ ಮೇಲ್ಪಟ್ಟ ಗಂಧರ್ವಾನಂದವನ್ನು ಗಳಿಸಬೇಕೆಂಬ ಆಸೆ ಇರುತ್ತದೆ. ವಿವೇಕಿಗೆ ಅದೂ ಇರುವುದಿಲ್ಲ! (೨೬-೨೭). ಗಂಧರ್ವಾನಂದದಲ್ಲಿ ಎರಡು ವಿಧ ಉಂಟು. ಮನುಷ್ಯನಾದವನು ಈ ಕಲ್ಪದಲ್ಲಿ ಮಾಡಿದ ವಿಶಿಷ್ಟಪರಿಪಾಕದಿಂದ ಈ ಕಲ್ಪದಲ್ಲಿಯೇ ಗಂಧರ್ವತ್ವವನ್ನು ಗಳಿಸಿದ್ದರೆ, ಅವನು ಮನುಷ್ಯಗಂಧರ್ವ ನೆನಿಸುತ್ತಾನೆ. ಪೂರ್ವಕಲ್ಪದಲ್ಲಿ ಗಳಿಸಿದ ಪುಣ್ಯಪರಿಪಾಕದಿಂದ ಈ ಕಲ್ಪದ ಆದಿಯಲ್ಲಿಯೇ ಗಂಧರ್ವನಾಗಿದ್ದರೆ ಅವನು ದೇವಗಂಧರ್ವನೆನಿಸುತ್ತಾನೆ (೨೮-೨೯). ಪಿತೃಲೋಕದಲ್ಲಿ ಚಿರಕಾಲದಿಂದ ವಾಸವಾಗಿರುವ ಅಗ್ನಿಷ್ವಾತ್ತಾದಿ ಪಿತೃಗಳು ಕಲ್ಪಾದಿಯಲ್ಲಿಯೇ ದೇವತ್ವವನ್ನು ಪಡೆದಿದ್ದರೆ ಆಜಾನದೇವತೆ ಗಳೆನಿಸುತ್ತಾರೆ. ಈ ಕಲ್ಪದಲ್ಲಿಯೇ ಅಶ್ವಮೇಧಾದಿ ಪುಣ್ಯಕರ್ಮಗಳನ್ನಾಚರಿಸಿ ಮಹತ್ತರವಾದ ಸ್ಥಾನವನ್ನೇರಿ, ಆಜಾನದೇವತೆಗಳಿಗೂ ಪೂಜ್ಯರಾದವರು ಕರ್ಮದೇವತೆಗಳು. ಯಮ, ಅಗ್ನಿ- ಮೊದಲಾದವರು ದೇವತೆಗಳು. ಅವರಲ್ಲಿ ಇಂದ್ರ, ಬೃಹಸ್ಪತಿಗಳಿಬ್ಬರು ಪ್ರಸಿದ್ಧರು. ವಿರಾಟ್ ದೇವತೆ ಪ್ರಜಾಪತಿ. ಸೂತ್ರಾತ್ಮನೇ (ಹಿರಣ್ಯಗರ್ಭನೇ) ಬ್ರಹ್ಮ. ಮನುಷ್ಯನಾದ ಸಾರ್ವಭೌಮನಿಂದ ಹಿಡಿದು ಸೂತ್ರಾತ್ಮಪರ್ಯಂತವಾಗಿರುವವರು ತಮಗಿಂತ ಮೇಲ್ಮಟ್ಟದವರ ಆನಂದವನ್ನು ಕ್ರಮವಾಗಿ ಬಯಸತಕ್ಕವರಾಗಿದ್ದಾರೆ. ಇವರೆಲ್ಲರ ಆನಂದಕ್ಕಿಂತಲೂ ಅಧಿಕವಾದ ಆತ್ಮಾನಂದವು ವಾಙ್ಮಾನಸಗಳಿಗೆ ಅಗೋಚರವಾದದ್ದು (೩೦-೩೩). ಸೂತ್ರಾತ್ಮನವರೆಗಿರತಕ್ಕವರು ಬಯಸುವ

ಸುಖಗಳಲ್ಲಿ ಶ್ರೋತ್ರಿಯನು ನಿಃಸ್ಪೃಹನಾದ್ದರಿಂದ ಅವರೆಲ್ಲರ ಸುಖಗಳು ಶ್ರೋತ್ರಿಯನಿಗೆ ಇದ್ದೇ ಇರುತ್ತವೆ. ಹೀಗೆ ಶ್ರೋತ್ರಿಯನಿಗೆ ಸೂತ್ರಾತ್ಮನವರೆಗಿರುವ ಸರ್ವರ ಆನಂದಗಳೂ ಇರುತ್ತವೆಯೆಂದು ಹೇಳಿದ್ದಾಯಿತು. ಇನ್ನೊಂದು ಪ್ರಕಾರದಲ್ಲಿಯೂ ಇದನ್ನು ಪ್ರತಿಪಾದಿಸಬಹುದು. ಅಲ್ಲಿರುವ ಸಾರ್ವಭೌಮನಿಂದ ಹಿಡಿದು ಸೂತ್ರಾತ್ಮನವರೆಗಿರುವ ಆನಂದಾನುಭವಿಗಳಲ್ಲಿರುವ ಆತ್ಮನು ತಾನೇ ಆದ್ದರಿಂದ ಅವರೆಲ್ಲರ ಆನಂದವು ಶ್ರೋತ್ರಿಯನಿಗಿರುತ್ತದೆ (೩೪-೩೫). ಅಜ್ಞಾನಿಯೂ ಸರ್ವದೇಹಗಳಲ್ಲಿ ಸಾಕ್ಷಿಯಾಗಿರುವುದರಿಂದ ಸರ್ವಕಾಮಾಪ್ತಿಯು ಅವನಿಗೆ ಇದ್ದೇ ಇದೆಯಾದರೂ ತಾನು ಸರ್ವತ್ರ ಸಾಕ್ಷಿಯಾಗಿದ್ದೇನೆಂಬುದನ್ನು ಅವನು ತಿಳಿದಿರುವುದಿಲ್ಲ. ಆದ್ದರಿಂದ ಅವನಿಗೆ ತೃಪ್ತಿಯಾಗುವುದಿಲ್ಲ. ಯಾರಿಗೆ ತಿಳಿದಿರುತ್ತದೆಯೋ ಆತನಿಗೆ ಸರ್ವಕಾಮಗಳು ಸಿದ್ಧಿಸಿದವೆಂಬ ತೃಪ್ತಿಯಾಗುತ್ತದೆ. ತೈತ್ತಿರೀಯ ಶ್ರುತಿಯೇ '**ಯೋ ವೇದ ನಿಹಿತಂ ಗುಹಾಯಾಂ**' (ತೈ.ಉ.೨-೧-೧) ಎಂದು ಹೇಳಿದೆ (೩೬). 'ಸರ್ವಕಾಮಾಪ್ತಿ' ಯ ಮೂರನೆಯ ಪ್ರಕಾರವನ್ನೂ ಶ್ರುತಿಯು ಹೇಳಿದೆ. ಜ್ಞಾನಿಯಾದ ಶ್ರೋತ್ರಿಯನು ಸರ್ವಭೋಕ್ತನೂ ಸರ್ವಭೋಗ್ಯನೂ ಆದ ಸರ್ವರೂಪನಾಗಿರುತ್ತಾನೆ. '**ಅಹಮನ್ನಂ, ಅಹಮನ್ನಾದಃ**' (ತೈ.ಉ. ೩-೧೦-೫) ಇತ್ಯಾದಿ ಸಾಮವನ್ನು ಗಾನಮಾಡುತ್ತಿರುವನು (೩೭). ಹೀಗೆ ದುಃಖಾಭಾವ, ಸರ್ವಕಾಮಾಪ್ತಿಗಳನ್ನು ತಿಳಿಸಿದ್ದಾಯಿತು. ಇನ್ನು ಕೃತಕೃತ್ಯತ್ವ, ಪ್ರಾಪ್ತಪ್ರಾಪ್ಯತ್ವಗಳೆರಡನ್ನು ತಿಳಿದುಕೊಳ್ಳಬೇಕು. ಇವೆರಡನ್ನೂ ನಾವು ತೃಪ್ತಿದೀಪದಲ್ಲಿ ಸ್ಫುಟವಾಗಿ ನಿರೂಪಿಸಿದ್ದೇವೆ. ಬುದ್ಧಿವಿಶುದ್ಧಿಗಾಗಿ ಆ ಶ್ಲೋಕಗಳನ್ನು ಇಲ್ಲಿ ಮನನ ಮಾಡಬೇಕು (೩೮-೩೯). " ಈ ಆತ್ಮಜ್ಞಾನಿಗೆ ತತ್ತ್ವಜ್ಞಾನವಾಗುವುದಕ್ಕೆ ಮೊದಲು ಬಹಳ ಕರ್ತವ್ಯವಿತ್ತು. ಐಹಿಕವಾದ ಕೃಷಿ ವಾಣಿಜ್ಯಾದಿಗಳೂ ಸ್ವರ್ಗಾದಿಗಳ ಸಿದ್ಧಿಗಾಗಿ ಯೋಗಾಭ್ಯಾಸ, ದೇವತೋಪಾಸನೆ ಮುಂತಾದವೂ ಕರ್ತವ್ಯಗಳಾಗಿದ್ದವು. ಮೋಕ್ಷಸಿದ್ಧಿಗಾಗಿ ಶ್ರವಣಮನನಾದಿಗಳನ್ನು ಮಾಡಬೇಕಾಗಿತ್ತು. ಈಗ ಆತ್ಮಜ್ಞಾನವಾದ ಮೇಲೆ ಇಹಪರಲೋಕಗಳ ಸುಖದ ಅಪೇಕ್ಷೆ ಇಲ್ಲ, ಬ್ರಹ್ಮಾನಂದ ಸಾಕ್ಷಾತ್ಕಾರವಾಯಿತು. ಇನ್ನು ಆಗಬೇಕಾದ್ದೇನಿದೆ? - ಎಂದು ಈ ಆತ್ಮಜ್ಞಾನಕ್ಕೆ ಪ್ರತಿಯೋಗಿಯಾದ ವಿರುದ್ಧಾಂಶಗಳನ್ನು ಅನುಸಂಧಾನಮಾಡಿ ಪ್ರಕೃತವಾದ ತನ್ನ ಕೃತಕೃತ್ಯತೆಯನ್ನು ಎಣಿಸುತ್ತ ಜ್ಞಾನಿಯು ನಿತ್ಯತೃಪ್ತನಾಗಿರುತ್ತಾನೆ (೪೦-೪೧).

ಹೇಗೆಂದರೆ, ''ಅಜ್ಞಾನಿಗಳು ಪುತ್ರಾದಿಕಾಮನೆಗಳನ್ನು ಇಟ್ಟುಕೊಂಡು ಸಂಸಾರದಲ್ಲಿ ತೊಡಗಿರಲಿ. ಸಂಸಾರ ಶೋಕವನ್ನು ಅನುಭವಿಸುತ್ತಿರಲಿ. ಪರಮಾನಂದಪೂರ್ಣನಾದ ನಾನು ಯಾವ ಬಯಕೆಯಿಂದ ಸಂಸಾರ ಮಾಡಬೇಕಾಗಿದೆ? (೪೨). ಸ್ವರ್ಗಾದಿ ಲೋಕವನ್ನು ಬಯಸತಕ್ಕವರು ಶಾಸ್ತ್ರೋಕ್ತಕರ್ಮಗಳನ್ನು ಯಥೇಷ್ಟವಾಗಿ ಅನುಷ್ಠಾನಮಾಡಲಿ. ಸರ್ವಲೋಕಾತ್ಮಕನಾದ ನಾನು ಯಾವುದನ್ನು ಏತಕ್ಕಾಗಿ ಯಾವ ರೀತಿ ಅನುಷ್ಠಾನ ಮಾಡಲಿ? ಅಧಿಕಾರಿಗಳಾದವರು ಶಾಸ್ತ್ರಗಳಿಗೆ ವ್ಯಾಖ್ಯಾನಗಳನ್ನು ರಚಿಸಲಿ. ಶಿಷ್ಯರಿಗೆ ಅಧ್ಯಾಪನವನ್ನು ಮಾಡಲಿ. ವೇದಗಳನ್ನಾದರೂ ಕಲಿಸಲಿ. ಕ್ರಿಯಾರಹಿತನಾದ್ದರಿಂದ ನನಗೆ ಕರ್ಮಾಧಿಕಾರವಿಲ್ಲ(೪೩-೪೪). ನಾನು ನಿದ್ರಿಸುವುದೂ ಇಲ್ಲ, ಭಿಕ್ಷೆ ಬೇಡುವುದೂ ಇಲ್ಲ, ಸ್ನಾನವನ್ನೂ ಮಾಡುವುದಿಲ್ಲ, ಶೌಚವನ್ನೂ ಆಚರಿಸುವುದಿಲ್ಲ. ಅವುಗಳ ಇಚ್ಛೆಯೂ ಇಲ್ಲ, ಆಚರಣೆಯೂ ಇಲ್ಲ. ನೋಡತಕ್ಕ ಜನರು ಇವೆಲ್ಲವನ್ನು ಈತನು ಮಾಡುತ್ತಾನೆ ಎಂದು ಕಲ್ಪಿಸಿ ಹೇಳಬಹುದು. ಅವರ ಕಲ್ಪನೆಗಳಿಂದ ನನಗಾಗುವುದೇನು? (೪೫). ಗುಲಗುಂಜಿಬೀಜಗಳು ಕೆಂಪಾಗಿರುವುದನ್ನು ನೋಡಿ ಈ ಗಿಡಕ್ಕೆ ಬೆಂಕಿ ಹತ್ತಿದೆ-ಎಂದು ಹೇಳಬಹುದು. ಅವರು ಕಲ್ಪಿಸಿಕೊಂಡ ಬೆಂಕಿಯಿಂದ ಆ ಗಿಡವೇನೂ ಸುಟ್ಟುಹೋಗುವುದಿಲ್ಲ! ಹಾಗೆಯೇ ಅನ್ಯರಲ್ಲಿರುವ ಸಂಸಾರಧರ್ಮಗಳನ್ನು ನನ್ನಲ್ಲಿ ಆರೋಪಿಸಬಹುದು. ಆದರೆ ಯಾವ ಸಂಸಾರಧರ್ಮವೂ ನನ್ನಲ್ಲಿಲ್ಲ (೪೬). ಯಾರಿಗೆ ತತ್ತ್ವಸಾಕ್ಷಾತ್ಕಾರವಾಗಿಲ್ಲವೋ ಅವರು ವೇದಾಂತ ಶ್ರವಣವನ್ನು ಮಾಡಲಿ. ತತ್ತ್ವಜ್ಞನಾದ ನಾನು ವೇದಾಂತಶ್ರವಣವನ್ನೇಕೆ ಮಾಡಬೇಕು? ಆತ್ಮತತ್ತ್ವವನ್ನು ಚೆನ್ನಾಗಿ ಅರಿಯದೆ ಸಂಶಯಪಡತಕ್ಕವರು ಮನನಮಾಡಲಿ, ಸಂಶಯವೇ ಇಲ್ಲದ ನನಗೆ ಮನನವೇಕೆ? (೪೭). ದೇಹಾದಿಗಳು ಆತ್ಮವೆಂಬ ವಿಪರ್ಯಯ ಬುದ್ಧಿ ನನಗಿಲ್ಲ. ಯಾರಿಗೆ ಅಂತಹ ವಿಪರ್ಯಯಬುದ್ಧಿ ಇದೆಯೋ ಆತನು ನಿದಿಧ್ಯಾಸನವನ್ನು ಮಾಡಿಕೊಳ್ಳಲಿ. ನನಗೇಕೆ? ದೇಹವು ಆತ್ಮವೆಂಬ ವಿಪರೀತಬುದ್ಧಿ ನನಗಿಲ್ಲ(೪೮). 'ನಾನು ಮನುಷ್ಯ' ಎಂಬ ವ್ಯವಹಾರವೇನೋ ನನಗಿದೆ! ಆದರೆ ಇದು ದೇಹಾತ್ಮಬುದ್ಧಿಯೆಂಬ ವಿಪರ್ಯಯದಿಂದ ಬಂದದ್ದಲ್ಲ. ಬಹಳ ಕಾಲದಿಂದ ಅಭ್ಯಸ್ತವಾದ ಸಂಸ್ಕಾರಬಲದಿಂದ ಹೀಗಾಗುತ್ತದೆ. ಪ್ರಾರಬ್ಧಕರ್ಮವು ಸವೆದುಹೋದಮೇಲೆ ಈ ವ್ಯವಹಾರವು ನಿವೃತ್ತವಾಗುತ್ತದೆ. ಕರ್ಮವು ಇನ್ನೂ ಸವೆಯದಿದ್ದಾಗ ಸಾವಿರ ಸಲ ಧ್ಯಾನಮಾಡಿದರೂ ವ್ಯವಹಾರವು ಹೋಗುವುದಿಲ್ಲ

(೪೯-೫೦). ಇಂತಹ ವ್ಯವಹಾರವು ವಿರಳವಾಗಲೆಂದಾದರೂ ಧ್ಯಾನಮಾಡು- ಎಂದು ನೀವು ಹೇಳಿದರೆ ಪ್ರಯೋಜನವೇನು? ಬರಿಯ ವ್ಯವಹಾರದಿಂದ ಬಾಧೆಯೇನೂ ಇಲ್ಲವೆಂದು ತಿಳಿದಿರುವ ನಾನು ಧ್ಯಾನವನ್ನೇಕೆ ಮಾಡಬೇಕು?(೫೧). ವಿಕ್ಷೇಪದ ಪರಿಹಾರಕ್ಕಾದರೂ ನಾನು ಸಮಾಧಿಯನ್ನು ಮಾಡಬೇಕಾಗಿಲ್ಲ. ವಿಕ್ಷೇಪವಾಗಲಿ ಸಮಾಧಿಯಾಗಲಿ ವಿಕಾರಿಯಾದ ಮನಸ್ಸಿಗೇ ಹೊರತು ನನಗಲ್ಲ. ಸಮಾಧಿಫಲವಾದ ನಿತ್ಯಾನುಭವಸ್ವರೂಪನೇ ನಾನಾಗಿರುವಾಗ, ಬೇರೆ ಅನುಭವವಾದರೂ ನನಗೆ ಯಾವುದು? ಕರ್ತವ್ಯವನ್ನು ಮಾಡಿ ಮುಗಿಸಿದ್ದಾಯಿತು. ಪ್ರಾಪ್ಯವಾದದ್ದು ಪ್ರಾಪ್ತವಾಯಿತು - ಎಂಬುದೇ ನನ್ನ ನಿಶ್ಚಯ. ಹಾಗಾದರೆ ನಿಯಮಬಾಹಿರವಾದ ಯಥೇಷ್ಟಾಚರಣೆ ಪ್ರಾಪ್ತವಾಗುವುದಿಲ್ಲವೆ? - ಎಂದರೆ ನನ್ನ ಉತ್ತರ ಇದು. ಲೌಕಿಕವೋ ಶಾಸ್ತ್ರೀಯವೋ ನಿಯಮಬಾಹಿರವೋ ಯಾವ ಆಚರಣೆಯಾಗಲಿ ಪ್ರಾರಬ್ಧಕರ್ಮಕ್ಕೆ ಅನುಗುಣವಾಗಿ ನಡೆದುಕೊಳ್ಳಲಿ. ಅಕರ್ತೃವೂ ಅಸಂಗನೂ ಆದ ನನಗೆ ಅದರಿಂದ ಏನಾದೀತು? (೫೨-೫೪). ಅಥವಾ ನಾನು ಕೃತಕೃತ್ಯನಾದರೂ ಲೋಕಾನುಗ್ರಹಕ್ಕಾಗಿ ಶಾಸ್ತ್ರೀಯವಾದ ಮಾರ್ಗದಿಂದಲೇ ನಡೆಯಬಹುದು. ಅದರಿಂದ ನನಗೆ ಹಾನಿಯಾದರೂ ಯಾವುದು? ದೇವರ ಪೂಜೆ, ಸ್ನಾನ, ಭಿಕ್ಷಾದಿಕಾರ್ಯಗಳಲ್ಲಿ ಈ ದೇಹವು ತೊಡಗುವುದಾದರೆ ಹಾಗೆಯೂ ಆಗಲಿ. ವಾಣಿಯು ಗಟ್ಟಿಯಾಗಿ ಜಪಮಾಡಲಿ. ಉಪನಿಷತ್ತನ್ನಾದರೂ ಪಠಿಸಲಿ, ಬುದ್ಧಿಯು ವಿಷ್ಣುವನ್ನಾದರೂ ಧ್ಯಾನಿಸುತ್ತಿರಲಿ. ಅಥವಾ ಬ್ರಹ್ಮಾನಂದದಲ್ಲಿ ಮುಳುಗಿಹೋಗಲಿ. ನಾನು ಸಾಕ್ಷಿಯಾಗಿರತಕ್ಕವನು. ಯಾವುದನ್ನು ಮಾಡುವುದೂ ಇಲ್ಲ, ಮಾಡಿಸುವುದೂ ಇಲ್ಲ.'' ಈ ಪ್ರಕಾರವಾಗಿ ತತ್ತ್ವಜ್ಞಾನಿಯು ತನ್ನ ಕರ್ತವ್ಯವನ್ನು ನೆರವೇರಿಸಿ ತೃಪ್ತನಾದೆನೆಂದೂ ಪ್ರಾಪ್ಯವಾದದ್ದು ದೊರಕಿತೆಂದೂ ಸಂತೃಪ್ತನಾಗಿರುವನು. ಅವನು ತನ್ನ ಮನಸ್ಸಿನಲ್ಲಿ ನಿರಂತರವೂ ಹೀಗೆಂದುಕೊಳ್ಳುತ್ತಾನೆ (೫೫-೫೮). ''ಧನ್ಯ ನಾನು! ಧನ್ಯ ನಾನು! ನನ್ನ ನಿಜಸ್ವರೂಪವನ್ನೀಗ ಚೆನ್ನಾಗಿ ಅರಿತುಕೊಂಡಿದ್ದೇನೆ. ಧನ್ಯ ನಾನು! ಧನ್ಯ ನಾನು! ಬ್ರಹ್ಮಾನಂದವು ಸ್ಪಷ್ಟವಾಗಿ ಅನುಭವಕ್ಕೆ ಬಂದಿದೆ (೫೯). ಧನ್ಯನಾದೆನು! ಧನ್ಯನಾದೆನು! ಸಾಂಸಾರಿಕ ದುಃಖವು ಎಲ್ಲಿಗೋ ತೊಲಗಿಹೋಯಿತು. ಧನ್ಯನಾದೆನು! ಧನ್ಯನಾದೆನು ! ನನ್ನ ಅಜ್ಞಾನವು ಎಲ್ಲಿಗೋ ಓಡಿಹೋಯಿತು ! (೬೦). ನಾನು ಧನ್ಯ ! ನಾನು ಧನ್ಯ ! ನಾನು ಮಾಡಬೇಕಾದದ್ದು ಯಾವುದೂ ಇಲ್ಲ, ನಾನು ಧನ್ಯ! ನಾನು ಧನ್ಯ! ನಾನು

ಪಡೆಯಬೇಕಾದ್ದೆಲ್ಲವನ್ನೂ ಪಡೆದುಕೊಂಡೆನು (೬೧). ಆಹಾ ! ನಾನು ಧನ್ಯ ಧನ್ಯ ! ನನ್ನ ತೃಪ್ತಿಗೆ ಈ ಜಗತ್ತಿನಲ್ಲಿ ಯಾವ ಹೋಲಿಕೆ ಇದೆ? ನಾನು ಧನ್ಯ ! ನಾನು ಧನ್ಯ ! ಧನ್ಯ ನಾನು ! ನಾನು ಧನ್ಯ! ಮತ್ತೆ ಮತ್ತೆ ನಾನು ಧನ್ಯ! (೬೨). ಆಹಾ ! ನನ್ನ ಪುಣ್ಯವೆ ! ಆಹಾ ! ಪುಣ್ಯವೆಲ್ಲವೂ ಫಲಿಸಿತು ! ಪುಣ್ಯ ಫಲವು ದೊರೆಯಿತು ! ಆಹಾ ನಾವು ! ಆಹಾ ನಾವು ! ಅಹೋ ಶಾಸ್ತ್ರ! ಅಹೋ ಶಾಸ್ತ್ರವೆ ! ಆಹಾ ಗುರುವೆ ! ಆಹಾ ಗುರುವೆ ! ಅಬ್ಬಾ ಜ್ಞಾನವೆ! ಅಬ್ಬಾ ಜ್ಞಾನವೆ ! ಆಹಾ ಎಷ್ಟು ಸುಖ ! ಆಹಾ ! ಎಷ್ಟು ಸುಖ'' ಎಂದುಕೊಳ್ಳುತ್ತಾನೆ. ಬ್ರಹ್ಮಾನಂದವೆಂಬ ಗ್ರಂಥದ ಈ ನಾಲ್ಕನೆಯ ಅಧ್ಯಾಯದಲ್ಲಿ ವಿದ್ಯಾನಂದವನ್ನು ವರ್ಣಿಸಿದ್ದಾಯಿತು. ವಿದ್ಯಾನಂದವು ಹುಟ್ಟುವವರೆಗೆ ಅಭ್ಯಾಸ ಮಾಡಬೇಕು (೬೩-೬೫) .

ಇಲ್ಲಿಗೆ ವಿದ್ಯಾನಂದಪ್ರಕರಣವು ಸಮಾಪ್ತವಾಯಿತು

———

## ೧೫. ವಿಷಯಾನಂದಪ್ರಕರಣ

ಇನ್ನು ಬ್ರಹ್ಮಾನಂದದ ಅಂಶರೂಪವಾದ ವಿಷಯಾನಂದವನ್ನು ನಿರೂಪಿಸಲಾಗುವುದು. ವಿಷಯಾನಂದವು ಲೌಕಿಕವಾಗಿದ್ದರೂ ಬ್ರಹ್ಮಾನಂದದ ಅಂಶವಾದ್ದರಿಂದ ಅದನ್ನು ಪಡೆಯಲು ಒಂದು ಸಾಧನವಾಗಿದೆ. ವಿಷಯಾನಂದವು ಬ್ರಹ್ಮಾನಂದದ ಅಂಶವೆಂಬುದನ್ನು ಶ್ರುತಿಯೇ ಹೇಳಿದೆ (೧). ಅಖಂಡೈಕರಸಾತ್ಮಕವಾದ ಪರಮಾನಂದವು ಬ್ರಹ್ಮದ ಸ್ವರೂಪವಾಗಿದೆ. ಈ ಪ್ರಾಣಿಗಳೆಲ್ಲವೂ ಈ ಬ್ರಹ್ಮಾನಂದದ ಒಂದು ಚಿಕ್ಕ ಅಂಶವನ್ನು ಮಾತ್ರ ಪಡೆಯುತ್ತಾರೆ - ಎಂದು ಶ್ರುತಿಯು ಹೇಳಿದೆ. ಈ ವಿಷಯಾನಂದಕ್ಕೆ ಉಪಾಧಿಯಾದ ಅಂತಃಕರಣದ ವೃತ್ತಿಗಳನ್ನು ಮೊದಲು ಪರಿಶೀಲಿಸೋಣ. ಶಾಂತ, ಘೋರ, ಮೂಢ - ಎಂದು ಈ ವೃತ್ತಿಗಳು ಮೂರು ವಿಧ. ವೈರಾಗ್ಯ, ಕ್ಷಮೆ, ಔದಾರ್ಯ - ಮುಂತಾದವು ಶಾಂತವೃತ್ತಿಗಳು (೨-೩). ಆಸೆ, ಸ್ನೇಹ, ಅನುರಾಗ, ಲೋಭ ಮುಂತಾದವು ಘೋರವೃತ್ತಿಗಳು. ಅಜ್ಞಾನ, ಹೆದರಿಕೆ ಮೊದಲಾದವು ಮೂಢವೃತ್ತಿಗಳು. ಶಾಂತವೃತ್ತಿಯು ಸಾತ್ತ್ವಿಕ. ಘೋರವೃತ್ತಿಯು ರಾಜಸ. ಮೂಢವೃತ್ತಿಯು ತಾಮಸ. ಈ ಎಲ್ಲ ವೃತ್ತಿಗಳಲ್ಲಿಯೂ ಬ್ರಹ್ಮದ ಚಿತ್‌ಸ್ವಭಾವವು ಪ್ರತಿಬಿಂಬಿಸುತ್ತದೆ. ಶಾಂತವೃತ್ತಿಯಲ್ಲಿ ಆನಂದವು ಪ್ರತಿಬಿಂಬಿಸುತ್ತದೆ (೪-೫). **'ರೂಪಂ ರೂಪಂ ಪ್ರತಿರೂಪೋ ಬಭೂವ'** (ಬೃ.ಉ.೨-೫-೧೯) ಎಂದು ಉಪನಿಷತ್ತಿನಲ್ಲಿದೆ. ಬ್ರಹ್ಮಸೂತ್ರಕಾರರು **''ಅತ ಏವ ಚೋಪಮಾ ಸೂರ್ಯಕಾದಿವತ್''** (ಬ್ರ.ಸೂ.೩-೨-೧೮) ಎಂದು ಸೂತ್ರಿಸಿದ್ದಾರೆ. ಆತ್ಮನು ಉಪಾಧಿಗಳಲ್ಲಿ ಪ್ರತಿಬಿಂಬಿಸಿ ಅನೇಕವಾಗಿದ್ದಾನೆ ಎಂಬುದಕ್ಕೆ ಇವು ಪ್ರಮಾಣಗಳು. ಆದ್ದರಿಂದ ಶ್ರುತಿಯು ಮತ್ತೆ ''ಒಬ್ಬನೇ ಪರಮಾತ್ಮನು ಪ್ರತಿಯೊಂದು ದೇಹದಲ್ಲಿಯೂ ಪ್ರತಿಬಿಂಬಿಸಿ ಹಲವು ರೂಪಗಳನ್ನು ತಳೆದಿದ್ದಾನೆಂದೂ ಕೆರೆ ಮುಂತಾದ ಜಲಪಾತ್ರಗಳಲ್ಲಿ ಪ್ರತಿಬಿಂಬಿಸಿದ ಚಂದ್ರನಂತೆ ನಾನಾರೂಪನಾಗಿದ್ದಾನೆಂದೂ'' ಹೇಳಿದೆ (೬-೭). ಜಲದಲ್ಲಿ ಕಾಣುವ ಚಂದ್ರನ ಪ್ರತಿಬಿಂಬವು ಸರ್ವತ್ರ ಒಂದೇ ರೀತಿ ಇರುವುದಿಲ್ಲ. ನೀರು ಕೊಳೆಯಾಗಿದ್ದರೆ ಅಸ್ಪಷ್ಟವಾಗಿಯೂ ತಿಳಿನೀರಿನಲ್ಲಿ ಸ್ಪಷ್ಟವಾಗಿಯೂ ಚಂದ್ರನು ಪ್ರತಿಬಿಂಬಿಸುತ್ತಾನೆ. ಹಾಗೆ ಬ್ರಹ್ಮವೂ ಸಹ. ಕೆಲವು ವೃತ್ತಿಗಳಲ್ಲಿ ಚಿತ್‌ಸ್ವಭಾವವು ಮಾತ್ರ ತೋರುತ್ತದೆ. ಕೆಲವು ವೃತ್ತಿಗಳಲ್ಲಿ ಚಿದಾನಂದಗಳೆರಡೂ ತೋರುತ್ತವೆ (೮). ಹಿಂದೆ ಹೇಳಿದ ಘೋರ ಮೂಢವೃತ್ತಿಗಳಲ್ಲಿ ಮಾಲಿನ್ಯವಿರುವುದರಿಂದ ಆನಂದಾಂಶವು

ಮರೆಯಾಗುತ್ತದೆ. ಸ್ವಚ್ಛತೆ ಸ್ವಲ್ಪ ಇರುವುದರಿಂದ ಚಿದಂಶವು ಪ್ರತಿಬಿಂಬಿಸುತ್ತದೆ. ಅಥವಾ ಇನ್ನೊಂದು ದೃಷ್ಟಾಂತವನ್ನು ಕೊಡಬಹುದು. ತಿಳಿನೀರಿನಲ್ಲಿ ಬೆಂಕಿಯ ಉಷ್ಣತೆಯು ಸಂಕ್ರಮಿಸುತ್ತದೆ. ನೀರು ಬಿಸಿಯಾಗುತ್ತದೆ. ಬೆಂಕಿಯ ಬೆಳಕು ಮಾತ್ರ ಸಂಕ್ರಮಿಸುವುದಿಲ್ಲ. ಬಿಸಿ ನೀರು ದೀಪದಂತೆ ಬೆಳಗುವುದಿಲ್ಲ! (೯-೧೦). ಕಟ್ಟಿಗೆಯಲ್ಲಿ ಮಾತ್ರ ಉಷ್ಣತೆ, ಪ್ರಕಾಶಗಳೆರಡೂ ಸೇರಿಕೊಳ್ಳುತ್ತವೆ. ಹಾಗೆಯೇ ಶಾಂತವೃತ್ತಿಗಳಲ್ಲಿ ಆನಂದಚೈತನ್ಯಗಳೆರಡೂ ಪ್ರತಿಬಿಂಬಿಸುತ್ತವೆ. ವಸ್ತುಸ್ವಭಾವವನ್ನನುಸರಿಸಿ ಈ ಬಗೆಯ ವ್ಯವಸ್ಥೆಯನ್ನು ಹೇಳಬೇಕಾಗಿದೆ. ಅದಕ್ಕೆ ಅನುಭವವೇ ಪ್ರಮಾಣ. ಈ ವೃತ್ತಿಯಲ್ಲಿ ಸುಖಾನುಭವವಿದೆಯೇ ಇಲ್ಲವೆ - ಎಂಬುದು ನಮ್ಮ ಅನುಭವಕ್ಕೆ ಬರುತ್ತದೆ(೧೧-೧೨). ಘೋರವೃತ್ತಿಗಳಲ್ಲಾಗಲಿ, ಮೂಢವೃತ್ತಿಗಳಲ್ಲಾಗಲಿ ಆನಂದದ ಅನುಭವ ಕಂಡುಬರುವುದಿಲ್ಲ. ಶಾಂತವೃತ್ತಿಗಳಲ್ಲಿಯೂ ಸಹ ಆನಂದಾಂಶವು ಕೆಲವರಿಗೆ ಅಧಿಕವಾಗಿಯೂ ಕೆಲವರಿಗೆ ಕಡಿಮೆಯಾಗಿಯೂ ಆಗಬಹುದು. ಮನೆ, ಹೊಲ ಮುಂತಾದವುಗಳಲ್ಲಿ ಆಸಕ್ತಿಯುಂಟಾದಾಗ ಆ ಮನೋವೃತ್ತಿಯು ರಾಜಸವೂ ಘೋರವೂ ಆದ್ದರಿಂದ ಸುಖದ ಅಭಿವ್ಯಕ್ತಿ ಇರುವುದಿಲ್ಲ. ಚಿಂತೆಯೇ ಇರುತ್ತದೆ (೧೩-೧೪). ನಮ್ಮ ಆಸೆ ಪೂರೈಸುತ್ತದೆಯೋ ಇಲ್ಲವೋ ಎಂಬ ದುಃಖವು ಆರಂಭದಲ್ಲಿರುತ್ತದೆ. ಪೂರೈಸದೆ ಹೋದರೆ ಆ ದುಃಖವು ವರ್ಧಿಸುತ್ತದೆ. ಆಸೆಗೆ ಯಾರಾದರೂ ಅಡ್ಡಬಂದರೆ ಸಿಟ್ಟು ಬರುತ್ತದೆ. ಅಡ್ಡಿಪಡಿಸಿದವರ ಮೇಲೆ ದ್ವೇಷವಾದರೂ ಬೆಳೆಯುತ್ತದೆ (೧೫). ತನಗಾದ ಅಡ್ಡಿಯನ್ನು ಪರಿಹರಿಸಿಕೊಳ್ಳಲಾಗದಿದ್ದರೆ ಮನಸ್ಸಿಗೆ ತುಂಬ ವ್ಯಸನವಾಗುತ್ತದೆ. ವ್ಯಸನವು ತಾಮಸವಾದದ್ದು. ಕ್ರೋಧ, ದ್ವೇಷ ಮೊದಲಾದ್ದರಲ್ಲಿ ದುಃಖವೇ ಅಧಿಕವಾಗುತ್ತದೆ. ಆ ವೃತ್ತಿಗಳಲ್ಲಿ ಸುಖದ ಶಂಕೆಯೂ ಬರುವುದಿಲ್ಲ. ಇಷ್ಟಾರ್ಥವು ಸಿದ್ಧಿಸಿದಾಗ ಹರ್ಷವಾಗುತ್ತದೆ. ಅದು ಶಾಂತವೃತ್ತಿ. ಅದರಲ್ಲಿ ಮಹತ್ತರವಾದ ಆನಂದ ಉಂಟು. ವಿರಕ್ತನಿಗೆ ಆಗುವ ಆನಂದವಂತೂ ಮಹತ್ತಮವಾದದ್ದು. ಇದನ್ನು ವಿದ್ಯಾನಂದಪ್ರಕರಣದಲ್ಲಿ ಹೇಳಿದ್ದೇವೆ. ಹೀಗೆಯೇ ಕ್ಷಮೆ, ಔದಾರ್ಯಗಳಲ್ಲಿ ಕ್ರೋಧಲೋಭಗಳೂ ಹೋಗಿ ಬಿಡುವುದರಿಂದ ಸುಖಾಂಶವು ಅಧಿಕವಾಗುತ್ತದೆ (೧೬-೧೮). ಹೀಗೆ ಮನೋವೃತ್ತಿಯಲ್ಲಿ ಯಾವ ಯಾವ ಬಗೆಯ ಆನಂದವಾಗುವುದೋ ಅದೆಲ್ಲವೂ ವೃತ್ತಿಯಲ್ಲಿ ಪ್ರತಿಬಿಂಬಿಸಿದ ಬ್ರಹ್ಮವೆಂದೇ ತಿಳಿಯಬೇಕು. ಈ

ವೃತ್ತಿಗಳು ಬಾಹ್ಯವಿಚಾರಗಳನ್ನು ತೊರೆದು ಅಂತರ್ಮುಖವಾದರೆ ಆನಂದವು ನಿರ್ವಿಘ್ನವಾಗಿ ಪ್ರಕಾಶಿಸುತ್ತದೆ. ಸತ್ತಾ, ಚಿತಿ (ಚೈತನ್ಯ), ಸುಖ (ಆನಂದ) - ಎಂಬಿವು ಮೂರು ಬ್ರಹ್ಮದ ಸ್ವಭಾವಗಳು. ಮಣ್ಣು, ಕಲ್ಲು - ಮುಂತಾದ ಜಡಪದಾರ್ಥಗಳಲ್ಲಿ ಸತ್ತಾ ಒಂದೇ ಅಭಿವ್ಯಕ್ತವಾಗುತ್ತದೆ. ಚಿತಿ, ಸುಖಗಳೆಂಬ ಎರಡು ಸ್ವಭಾವಗಳು ಅವುಗಳಲ್ಲಿ ತೋರುವುದಿಲ್ಲ. ಶಾಂತವೃತ್ತಿಯಲ್ಲಿ ಸತ್, ಚಿತ್, ಸುಖ - ಈ ಮೂರೂ ಅಭಿವ್ಯಕ್ತವಾಗುತ್ತವೆ. ಈ ಪ್ರಕಾರವಾಗಿ ವೃತ್ತಿಮುಂತಾದವುಗಳೊಡನೆ ಮಿಶ್ರವಾದ ಬ್ರಹ್ಮದ ವಿಷಯವನ್ನು ಹೇಳಿದ್ದಾಯಿತು (೧೯-೨೧). ಅಮಿಶ್ರವಾದ ಶುದ್ಧಬ್ರಹ್ಮವನ್ನು ಜ್ಞಾನಯೋಗಗಳಿಂದ ತಿಳಿಯಬೇಕು. ಆ ವಿಚಾರವನ್ನು ಹಿಂದೆ ವಿವರಿಸಿದ್ದಾಗಿದೆ. ಯೋಗಾನಂದವನ್ನು ಈ ಬಹ್ಮಾನಂದ ಪ್ರಕರಣದ ಪ್ರಥಮಾಧ್ಯಾಯದಲ್ಲಿ (ಪಂಚದಶಿಯ ೧೧ನೇ ಪ್ರಕರಣದಲ್ಲಿ) ವರ್ಣಿಸಿದ್ದೇವೆ. ಅದರ ಮುಂದಿನ ಎರಡು ಅಧ್ಯಾಯಗಳಲ್ಲಿ (ಆತ್ಮಾನಂದ ಮತ್ತು ಅದ್ವೈತಾನಂದ ಎಂಬ ಪ್ರಕರಣಗಳಲ್ಲಿ) ಶುದ್ಧಜ್ಞಾನ ಸ್ವರೂಪವನ್ನು ವಿವರಿಸಿದ್ದೇವೆ (೨೨).

ಈಗ ಮಾಯಾಸ್ವರೂಪವನ್ನು ನೋಡೋಣ. ಅಸತ್ತಾ ಮತ್ತು ಜಾಡ್ಯ, ದುಃಖ ಎಂಬ ಎರಡು - ಹೀಗೆ ಒಟ್ಟು ಮೂರು ಮಾಯಾಸ್ವರೂಪಗಳು. ಇವು ಮೂರು ಬ್ರಹ್ಮಸ್ವರೂಪಕ್ಕೆ ವಿರೋಧಿಯಾದವು. ಇವುಗಳಲ್ಲಿ ಅಸತ್ತಾ ಎಲ್ಲಿರುತ್ತದೆ? ನರಶೃಂಗದಲ್ಲಿರುತ್ತದೆ! ಮೊಲದ ಕೊಂಬು, ಗಗನಕುಸುಮ - ಮುಂತಾದದ್ದು ಇದಕ್ಕೆ ಉದಾಹರಣೆ - ಕಟ್ಟಿಗೆ, ಕಲ್ಲು ಮೊದಲಾದವುಗಳಲ್ಲಿ ಜಾಡ್ಯವಿರುತ್ತದೆ (೨೩). ಘೋರ, ಮೂಢ ಧೀವೃತ್ತಿಗಳಲ್ಲಿ ದುಃಖವಿರುತ್ತದೆ. ಹೀಗೆ ಮಾಯೆಯು ಅತಿಯಾಗಿ ವಿಜೃಂಭಿಸುತ್ತದೆ. ಹಿಂದೆ 'ಮಿಶ್ರಬ್ರಹ್ಮ' ಎಂಬ ಶಬ್ದವನ್ನು ನಾವು ಬಳಸಿದ್ದೇಕೆಂದರೆ, ಶಾಂತಾದಿಬುದ್ಧಿವೃತ್ತಿಗಳಲ್ಲಿ ಅಭೇದದಿಂದ ಬ್ರಹ್ಮಸ್ವಭಾವವು ಕೂಡಿ ಮಿಶ್ರವಾಗಿ ತೋರುತ್ತದೆಯಾದ್ದರಿಂದ (೨೪). ಹೀಗೆ ವ್ಯವಸ್ಥಿತವಾಗಿರುವುದರಿಂದ ಯಾವ ಮನುಷ್ಯನು ಬ್ರಹ್ಮಧ್ಯಾನದಲ್ಲಿ ತೊಡಗಲು ಬಯಸುತ್ತಾನೋ ಅವನು ನರಶೃಂಗ ಮುಂತಾದ ಮಾಯಾಸ್ಥಳಗಳನ್ನು ಉಪೇಕ್ಷಿಸಿ, ಯಥೋಚಿತವಾಗಿ ಬ್ರಹ್ಮತತ್ತ್ವವನ್ನು ಧ್ಯಾನಿಸಬೇಕು (೨೫). ಹೇಗೆಂದರೆ, ಕಲ್ಲು ಮೊದಲಾದವುಗಳಲ್ಲಿ ನಾಮರೂಪಗಳೆರಡನ್ನು ತ್ಯಜಿಸಿ ಸತ್ತೆಯೊಂದನ್ನೇ ಚಿಂತಿಸಬೇಕು. ಘೋರಮೂಢಧೀವೃತ್ತಿಗಳಲ್ಲಿ ದುಃಖಾಂಶವನ್ನು ತ್ಯಜಿಸಿ ಸತ್ ಚಿತ್ ಇವೆರಡು ಅಂಶಗಳನ್ನು ಮಾತ್ರ ಚಿಂತಿಸಬೇಕು (೨೬).

ಶಾಂತಧೀವೃತ್ತಿಯಲ್ಲಿ ಸಚ್ಚಿದಾನಂದಗಳೆಂಬ ಮೂರನ್ನೂ ಧ್ಯಾನಿಸತಕ್ಕದ್ದು. ಈ ಮೂರು ಧ್ಯಾನಕ್ರಮಗಳಲ್ಲಿ - ಎಂದರೆ - ಸನ್ಮಾತ್ರಚಿಂತನೆ, ಸಚ್ಚಿತ್ತುಗಳ ಚಿಂತನೆ, ಸಚ್ಚಿದಾನಂದಗಳ ಚಿಂತನೆ ಇವು ಕ್ರಮವಾಗಿ ಕನಿಷ್ಠ ಮಧ್ಯಮ, ಉತ್ತಮಗಳೆಂದು ತಿಳಿಯಬೇಕು (೨೭). ನಾವು ವಿಷಯಾನಂದವನ್ನು ಇಲ್ಲಿ ಹೇಳಿದ್ದೇಕೆಂದರೆ, ಎಲ್ಲರೂ ಉತ್ತಮಾಧಿಕಾರಿಗಳಾಗಿರುವುದಿಲ್ಲ. ನಿರ್ಗುಣಬ್ರಹ್ಮವನ್ನು ಧ್ಯಾನಿಸಲು ಎಲ್ಲರೂ ಶಕ್ತರಲ್ಲ. ಅಂತಹ ಮಂದಾಧಿಕಾರಿಗಳು ನಿತ್ಯವ್ಯವಹಾರದಲ್ಲಿ ತೊಡಗಿದ್ದರೂ ಈ ಮಿಶ್ರಬ್ರಹ್ಮವನ್ನು ಧ್ಯಾನಮಾಡಲು ಸಾಧ್ಯವಾದ್ದರಿಂದ ಇದೇ ಅವರಿಗೆ ಹಿತವೆಂದು ಭಾವಿಸಿ ಮಿಶ್ರಬ್ರಹ್ಮದ ವಿಚಾರವನ್ನು ಹೇಳಬೇಕಾಯಿತು (೨೮). ಇದು ಸವೃತ್ತಿಕವಾದ ಧ್ಯಾನಕ್ರಮು. ಬುದ್ಧಿಯ ವ್ಯಾಪಾರ ಈ ಧ್ಯಾನದಲ್ಲುಂಟು. ಯಾವ ಚಿಂತನೆಯನ್ನೂ ಮಾಡದೆ ಉದಾಸೀನ ಸ್ಥಿತಿಯಲ್ಲಿದ್ದಾಗ ಬುದ್ಧಿವೃತ್ತಿಯು ತುಂಬ ಶಿಥಿಲವಾಗಿಬಿಡುವುದರಿಂದ, ಅದು ಸರ್ವೋತ್ತಮವಾದ ಧ್ಯಾನವಾಗುತ್ತದೆ. ಎಂದರೆ ಈಗ ಹೇಳಿದ ಮೂರು ಬಗೆಯ ಧ್ಯಾನಗಳಿಗಿಂತ ಉತ್ತಮ. ಈ ಉದಾಸೀನ ಸ್ಥಿತಿಯನ್ನು ಹಿಂದೆ ವಾಸನಾನಂದದಲ್ಲಿ ತಿಳಿಸಿದ್ದೇವೆ. ಹೀಗೆ ನಾಲ್ಕು ಬಗೆಯ ಧ್ಯಾನಗಳಾದವು (೨೯). ಹಿಂದೆ ಜ್ಞಾನಯೋಗಗಳ ದ್ವಾರಾ ಬ್ರಹ್ಮಧ್ಯಾನವನ್ನು ಹೇಳಿದೆಯಷ್ಟೆ ವಸ್ತುತಃ ಅದು ಧ್ಯಾನವಲ್ಲ, ಬ್ರಹ್ಮವಿದ್ಯೆಯೇ ಅದು. ಧ್ಯಾನದಿಂದ ಮನಸ್ಸು ಏಕಾಗ್ರವಾದಾಗ ಈ ಬ್ರಹ್ಮವಿದ್ಯೆಯು ಸ್ಥಿರವಾಗಿ ನಿಲ್ಲುತ್ತದೆ. ಆದ್ದರಿಂದ ಆ ಪ್ರಕರಣಗಳಲ್ಲಿ ಧ್ಯಾನವನ್ನು ಸೇರಿಸಲಾಗಿದೆ (೩೦). ಈ ಬ್ರಹ್ಮವಿದ್ಯೆಯಲ್ಲಿ ಸಚ್ಚಿದಾನಂದಗಳು ಅಖಂಡ ಏಕರಸವಾಗಿ ಸೇರಿಕೊಂಡು ಪ್ರಕಾಶಿಸುತ್ತವೆ. ಪರಸ್ಪರ ಭಿನ್ನವಾಗಿ ತೋರುವುದಿಲ್ಲ, ಏಕೆಂದರೆ, ಭೇದವನ್ನುಂಟುಮಾಡುವ ಉಪಾಧಿಗಳು ತೊಲಗಿ ಹೋಗಿರುತ್ತವೆ. ಆದ್ದರಿಂದ ಇದು ಬ್ರಹ್ಮವಿದ್ಯೆಯೇ, ಧ್ಯಾನವಲ್ಲ(೩೧). ಶಾಂತ, ಘೋರವೆಂಬ ಮನೋವೃತ್ತಿಗಳೂ ಕಲ್ಲುಮುಂತಾದ ಪೂರ್ವೋಕ್ತವಸ್ತುಗಳೂ ಇಲ್ಲಿ ಭೇದಕೋಪಾಧಿಗಳು. ಹಿಂದೆ ತತ್ತ್ವವಿವೇಕಪ್ರಕರಣದಲ್ಲಿ ತೋರಿಸಿದ ವಿವೇಚನಾವಿಧಾನದಿಂದಾಗಲಿ, ಯೋಗಾನಂದಪ್ರಕರಣದಲ್ಲಿ ಪ್ರತಿಪಾದಿಸಿದ ಯೋಗವಿಧಾನದಿಂದಾಗಲಿ ಈ ಉಪಾಧಿಗಳನ್ನು ದೂರಮಾಡಿ ಶುದ್ಧಬ್ರಹ್ಮದ ಚಿಂತನೆಯನ್ನು ಮಾಡಲು ಯತ್ನಿಸಬಹುದು. ಹೀಗೆ ಉಪಾಧಿರಹಿತವಾದ ಬ್ರಹ್ಮತತ್ತ್ವವು ಸ್ವಯಂಪ್ರಕಾಶವಾಗಿ ಬೆಳಗುತ್ತಿರುವಾಗ, ಆ ಪ್ರಕಾರವಾದ ಅದ್ವೈತಸ್ಥಿತಿಯಲ್ಲಿ

ತ್ರಿಪುಟಿ ಇರುವುದಿಲ್ಲ. ಧ್ಯಾತೃಜ್ಞಾತೃಗಳೂ ಇಲ್ಲ. ಧ್ಯಾನಜ್ಞಾನಗಳೂ ಇಲ್ಲ, ಧ್ಯೇಯಜ್ಞೇಯಗಳೂ ಇಲ್ಲ.ಅದು ಪರಮಾನಂದ ಸ್ವರೂಪವಾದದ್ದು. ಅದು ಭೂಮಾನಂದವೆಂದು ಶಾಸ್ತ್ರದಲ್ಲಿ ಕೀರ್ತಿತವಾಗಿದೆ (೩೨-೩೩). ಬ್ರಹ್ಮಾನಂದವೆಂಬ ಗ್ರಂಥದ ಈ ಪಂಚಮಾಧ್ಯಾಯದಲ್ಲಿ ವಿಷಯಾನಂದ ವೆಂಬುದನ್ನು ವಿವರಿಸಿದ್ದಾಯಿತು. ಈ ಮಾರ್ಗದಿಂದ ಸತ್ಯಸೌಧದ ಒಳಗೆ ಪ್ರವೇಶಿಸಬಹುದು. ಹರಿಸ್ವರೂಪನಾದ ಹರನು ಈ ಬ್ರಹ್ಮಾನಂದದಿಂದ ಸದಾ ಪ್ರಸನ್ನನಾಗಿರಲಿ. ತನ್ನನ್ನು ನಂಬಿದ ಶುದ್ಧಮನಸ್ಕರಾದ ಸರ್ವಜೀವಿಗಳನ್ನೂ ಸಂರಕ್ಷಿಸಲಿ (೩೪-೩೫).

ಇಲ್ಲಿಗೆ ವಿಷಯಾನಂದಪ್ರಕರಣವು ಸಮಾಪ್ತವಾಯಿತು

ಪಂಚದಶೀ ಗ್ರಂಥವೂ ಸಂಪೂರ್ಣವಾಯಿತು

---

ಶ್ರೀಃ ಶ್ರೀಃ ಶ್ರೀಃ

# ಪಂಚದಶೀ

## ೧. ತತ್ತ್ವವಿವೇಕ ಪ್ರಕರಣಮ್

ನಮಃ ಶ್ರೀಶಂಕರಾನಂದಗುರುಪಾದಾಂಬುಜನ್ಮನೇ ।
ಸವಿಲಾಸಮಹಾಮೋಹಗ್ರಾಹಗ್ರಾಸೈಕರ್ಮಣೇ ॥ ೧

ತತ್ಪಾದಾಂಬುರುಹದ್ವಂದ್ವಸೇವಾನಿರ್ಮಲಚೇತಸಾಮ್ ।
ಸುಖಬೋಧಾಯ ತತ್ತ್ವಸ್ಯ ವಿವೇಕೋಽಯಂ ವಿಧೀಯತೇ ॥ ೨

ಶಬ್ದಸ್ಪರ್ಶಾದಯೋ ವೇದ್ಯಾ ವೈಚಿತ್ರ್ಯಾಜ್ಜಾಗರೇ ಪೃಥಕ್ ।
ತತೋ ವಿಭಕ್ತಾ ತತ್ಸಂವಿದೈಕರೂಪ್ಯಾನ್ನ ಭಿದ್ಯತೇ ॥ ೩

ತಥಾ ಸ್ವಪ್ನೇಽತ್ರ ವೇದ್ಯಂ ತು ನ ಸ್ಥಿರಂ ಜಾಗರೇ ಸ್ಥಿರಮ್ ।
ತದ್ಭೇದೋಽತಸ್ತಯೋಃ ಸಂವಿದೇಕರೂಪಾ ನ ಭಿದ್ಯತೇ ॥ ೪

ಸುಪ್ತೋತ್ಥಿತಸ್ಯ ಸೌಷುಪ್ತತಮೋಬೋಧೋ ಭವೇತ್ ಸ್ಮೃತಿಃ ।
ಸಾ ಚಾವಬುದ್ಧವಿಷಯಾಽವಬುದ್ಧಂ ತತ್ತದಾ ತಮಃ ॥ ೫

ಸ ಬೋಧೋ ವಿಷಯಾದ್ಭಿನ್ನೋ ನ ಬೋಧಾತ್ ಸ್ವಪ್ನಬೋಧವತ್ ।
ಏವಂ ಸ್ಥಾನತ್ರಯೇಽಪ್ಯೇಕಾ ಸಂವಿತ್ ತದ್ವದ್ದಿನಾಂತರೇ ॥ ೬

ಮಾಸಾಬ್ದಯುಗಕಲ್ಪೇಷು ಗತಾಗಮ್ಯೇಷ್ವನೇಕಧಾ ।
ನೋದೇತಿ ನಾಸ್ತಮೇತ್ಯೇಕಾ ಸಂವಿದೇಷಾ ಸ್ವಯಂಪ್ರಭಾ ॥ ೭

ಇಯಮಾತ್ಮಾ ಪರಾನಂದಃ ಪರಪ್ರೇಮಾಸ್ಪದಂ ಯತಃ ।
ಮಾ ನ ಭೂವಂ ಹಿ ಭೂಯಾಸಮಿತಿ ಪ್ರೇಮಾತ್ಮನೀಕ್ಷ್ಯತೇ ॥ ೮

ತತ್ಪ್ರೇಮಾತ್ಮಾರ್ಥಮನ್ಯತ್ರ ನೈವಮನ್ಯಾರ್ಥಮಾತ್ಮನಿ ।
ಅತಸ್ತತ್ಪರಮಂ ತೇನ ಪರಮಾನಂದತಾಽಽತ್ಮನಃ ॥ ೯

ಇತ್ಥಂ ಸಚ್ಚಿತ್ಪರಾನಂದ ಆತ್ಮಾ ಯುಕ್ತ್ಯಾ ತಥಾವಿಧಮ್ ।
ಪರಂ ಬ್ರಹ್ಮ ತಯೋಶ್ಚೈಕ್ಯಂ ಶ್ರುತ್ಯಂತೇಷೂಪದಿಶ್ಯತೇ ॥ ೧೦

ಅಭಾನೇ ನ ಪರಂ ಪ್ರೇಮ ಭಾನೇ ನ ವಿಷಯೇ ಸ್ಪೃಹಾ ।
ಅತೋ ಭಾನೇಽಪ್ಯಭಾತಾಽಸೌ ಪರಮಾನಂದತಾಽಽತ್ಮನಃ ॥ ೧೧

ಅಧ್ಯೇತೃವರ್ಗಮಧ್ಯಸ್ಥಪುತ್ರಾಧ್ಯಯನಶಬ್ದವತ್ ।
ಭಾನೇಽಪ್ಯಭಾನಂ ಭಾನಸ್ಯ ಪ್ರತಿಬಂಧೇನ ಯುಜ್ಯತೇ ॥ ೧೨

ಪ್ರತಿಬಂಧೋಽಸ್ತಿಭಾತೀತಿವ್ಯವಹಾರಾರ್ಹವಸ್ತುನಿ ।
ತಂ ನಿರಸ್ಯ ವಿರುದ್ಧಸ್ಯ ತಸ್ಯೋತ್ಪಾದನಮುಚ್ಯತೇ ॥ ೧೩

ತಸ್ಯ ಹೇತುಃ ಸಮಾನಾಭಿಹಾರಃ ಪುತ್ರಧ್ವನಿಶ್ರುತೌ ।
ಇಹಾನಾದಿರವಿದ್ಯೈವ ವ್ಯಾಮೋಹೈಕನಿಬಂಧನಮ್ ॥ ೧೪

ಚಿದಾನಂದಮಯಬ್ರಹ್ಮಪ್ರತಿಬಿಂಬಸಮನ್ವಿತಾ ।
ತಮೋರಜಃಸತ್ತ್ವಗುಣಾ ಪ್ರಕೃತಿರ್ದ್ವಿವಿಧಾ ಚ ಸಾ ॥ ೧೫

ಸತ್ತ್ವಶುದ್ಧ್ಯವಿಶುದ್ಧಿಭ್ಯಾಂ ಮಾಯಾಽವಿದ್ಯೇ ಚ ತೇ ಮತೇ ।
ಮಾಯಾಬಿಂಬೋ ವಶೀಕೃತ್ಯ ತಾಂ ಸ್ಯಾತ್ ಸರ್ವಜ್ಞ ಈಶ್ವರಃ ॥ ೧೬

ಅವಿದ್ಯಾವಶಗಸ್ತ್ವನ್ಯಸ್ತದ್ವೈಚಿತ್ರ್ಯಾದನೇಕಧಾ ।
ಸಾ ಕಾರಣಶರೀರಂ ಸ್ಯಾತ್ ಪ್ರಾಜ್ಞಸ್ತತ್ರಾಭಿಮಾನವಾನ್ ॥ ೧೭

ತಮಃಪ್ರಧಾನಪ್ರಕೃತೇಸ್ತದ್ಭೋಗಾಯೇಶ್ವರಾಜ್ಞಯಾ ।
ವಿಯತ್ಪವನತೇಜೋಽಂಬುಭುವೋ ಭೂತಾನಿ ಜಜ್ಞಿರೇ ॥ ೧೮

ಸತ್ತ್ವಾಂಶೈಃ ಪಂಚಭಿಸ್ತೇಷಾಂ ಕ್ರಮಾದ್ಧೀಂದ್ರಿಯಪಂಚಕಮ್ ।
ಶ್ರೋತ್ರತ್ವಗಕ್ಷಿರಸನಘ್ರಾಣಾಖ್ಯಮುಪಜಾಯತೇ ॥ ೧೯

ತೈರಂತಃಕರಣಂ ಸರ್ವೈರ್ವೃತ್ತಿಭೇದೇನ ತದ್ದ್ವಿಧಾ।
ಮನೋ ವಿಮರ್ಶರೂಪಂ ಸ್ಯಾದ್ಬುದ್ಧಿಃ ಸ್ಯಾನ್ನಿಶ್ಚಯಾತ್ಮಿಕಾ ॥ ೨೦

ರಜೋಽಂಶೈಃ ಪಂಚಭಿಸ್ತೇಷಾಂ ಕ್ರಮಾತ್ ಕರ್ಮೇಂದ್ರಿಯಾಣಿ ತು।
ವಾಕ್ಪಾಣಿಪಾದಪಾಯೂಪಸ್ಥಾಭಿಧಾನಾನಿ ಜಜ್ಞಿರೇ ॥ ೨೧

ತೈಃ ಸರ್ವೈಃ ಸಹಿತೈಃ ಪ್ರಾಣೋ ವೃತ್ತಿಭೇದಾತ್ ಸ ಪಂಚಧಾ।
ಪ್ರಾಣೋಽಪಾನಃ ಸಮಾನಶ್ಚೋದಾನವ್ಯಾನೌ ಚ ತೇ ಪುನಃ ॥ ೨೨

ಬುದ್ಧಿ ಕರ್ಮೇಂದ್ರಿಯಪ್ರಾಣಪಂಚಕೈರ್ಮನಸಾ ಧಿಯಾ।
ಶರೀರಂ ಸಪ್ತದಶಭಿಃ ಸೂಕ್ಷ್ಮಂ ತಲ್ಲಿಂಗಮುಚ್ಯತೇ ॥ ೨೩

ಪ್ರಾಜ್ಞಸ್ತತ್ರಾಭಿಮಾನೇನ ತೈಜಸತ್ವಂ ಪ್ರಪದ್ಯತೇ।
ಹಿರಣ್ಯಗರ್ಭತಾಮೀಶಸ್ತಯೋರ್ವ್ಯಷ್ಟಿಸಮಷ್ಟಿತಾ ॥ ೨೪

ಸಮಷ್ಟಿರೀಶಃ ಸರ್ವೇಷಾಂ ಸ್ವಾತ್ಮ ತಾದಾತ್ಮ್ಯ ವೇದನಾತ್।
ತದಭಾವಾತ್ ತತೋಽನ್ಯೇ ತು ಕಥ್ಯಂತೇ ವ್ಯಷ್ಟಿಸಂಜ್ಞಯಾ ॥ ೨೫

ತದ್ಭೋಗಾಯ ಪುನರ್ಭೋಗ್ಯಭೋಗಾಯತನಜನ್ಮನೇ।
ಪಂಚೀಕರೋತಿ ಭಗವಾನ್ ಪ್ರತ್ಯೇಕಂ ವಿಯದಾದಿಕಮ್ ॥ ೨೬

ದ್ವಿಧಾ ವಿಧಾಯ ಚೈಕೈಕಂ ಚತುರ್ಧಾ ಪ್ರಥಮಂ ಪುನಃ।
ಸ್ವಸ್ವೇತರದ್ವಿತೀಯಾಂಶೈರ್ಯೋಜನಾತ್ ಪಂಚ ಪಂಚ ತೇ ॥ ೨೭

ತೈರಂಡಸ್ತತ್ರ ಭುವನಂ ಭೋಗ್ಯಭೋಗಾಶ್ರಯೋದ್ಭವಃ।
ಹಿರಣ್ಯಗರ್ಭಃ ಸ್ಥೂಲೇಽಸ್ಮಿನ್ ದೇಹೇ ವೈಶ್ವಾನರೋ ಭವೇತ್ ॥ ೨೮

ತೈಜಸಾ ವಿಶ್ವತಾಂ ಯಾತಾ ದೇವತಿರ್ಯಙ್ನರಾದಯಃ।
ತೇ ಪರಾಗ್ದರ್ಶಿನಃ ಪ್ರತ್ಯಕ್ತತ್ತ್ವಬೋಧವಿವರ್ಜಿತಾಃ ॥ ೨೯

